# ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ

ಸಂಶೋಧಕ

ಬಂಡಯ್ಯ ಸ್ವಾಮಿ

ಮಾರ್ಗದರ್ಶಕರು

ಡಾ. ಕೆ.ಎಂ. ಮೈತ್ರಿ

ಪ್ರವಾಚಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



೨೦೦೨

06

# ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
**ಬಂಡಯ್ಯ ಸ್ವಾಮಿ**

ಮಾರ್ಗದರ್ಶಕರು
**ಡಾ. ಕೆ.ಎಂ. ಮೈತ್ರಿ**
ಪ್ರವಾಚಕರು







ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೨

# ಪ್ರಮಾಣ ಪತ್ರ

**ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ಡಾ.ಕೆ. ಎಂ.ಮೈತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಬಂಡಯ್ಯ ಸ್ವಾಮಿ)**
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ದಿನಾಂಕ : ೨೮-೨-೨೦೦೨
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪತ್ರ

ಶ್ರೀ ಬಂಡಯ್ಯಸ್ವಾಮಿ ಇವರು **ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಪಿಎಚ್.ಡಿ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೧-೨-೨೦೦೨
ಸ್ಥಳ : ವಿದ್ಯಾರಣ್ಯ

**(ಡಾ. ಕೆ. ಎಂ. ಮೈತ್ರಿ)**
ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಅರಿಕೆ

೧೯೯೮-೯೯ ರ ಜನವರಿ ೨ರಂದು ಪಿಎಚ್.ಡಿ ಪದವಿಗಾಗಿ ಅಧ್ಯಯನ ಮಾಡಲು ಕನ್ನಡ ವಿಶ್ವವಿದ್ಯಾಲಯದಲ್ಲಿ ಹೆಸರು ನೋಂದಾಯಿಸಿದೆ. **ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ** ಎಂಬ ವಿಷಯದ ಮೇಲೆ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಎಂ. ಎಂ.ಕಲಬುರ್ಗಿ, ಕುಲಸಚಿವರಾದ ಪ್ರೊ.ಮಲ್ಲೇಪುರಂ, ಜಿ.ವೆಂಕಟೇಶ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಶ್ರೀ ಬಾಲಸುಬ್ರಹ್ಮಣ್ಯ ಅವರನ್ನು ಸ್ಮರಿಸುತ್ತೇನೆ.

ಪಿಎಚ್.ಡಿ ಅಧ್ಯಯನವನ್ನು ಮುಗಿಸಿ ಪದವಿಗಾಗಿ ಪ್ರಬಂಧವನ್ನು ಸಲ್ಲಿಸುವ ಹೊತ್ತಿನಲ್ಲಿ ಇಂದಿನ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡರು, ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೂ, ಬೀದರ ಜಿಲ್ಲೆಯ ಜಂಗಮರು : ಒಂದು ಅಧ್ಯಯನ ಈ ವಿಷಯದ ಮೇಲೆ ಸಂಶೋಧನೆ ಕೈಗೊಳ್ಳಲು ಅವಕಾಶ ಕಲ್ಪಿಸಿದ ಡಾ.ಕೆ.ಎಂ.ಮೈತ್ರಿ ಅವರಿಗೆ ಹೃದಯ ಪೂರ್ವಕ ಪ್ರಣಾಮಗಳು. ಜಿಲ್ಲೆಯ ತುಂಬ ಕ್ಷೇತ್ರ ಕಾರ್ಯ ಕೈಗೊಂಡು ವಿಷಯ ಸಂಗ್ರಹಣೆ ಮಾಡಿ ಬೀದರ ಜಿಲ್ಲೆಯ ಜಂಗಮ ಸಮುದಾಯದ ಬಗ್ಗೆ ಬೆಳಕು ಬೀರಲು ಯತ್ನಿಸಲಾಗಿದೆ. ಕ್ಷೇತ್ರಕಾರ್ಯವನ್ನು ತುಂಬ ಸಹನೆಯಿಂದ ಮಾಡಿ ಎಲ್ಲಾ ಅಧ್ಯಯನವನ್ನು ಓದಿ ಬರೆಯಲು ಎಲ್ಲಾ ರೀತಿಯಿಂದ ಸಲಹೆ ಸೂಚನೆಗಳನ್ನು ನೀಡಿ ಚರ್ಚಿಸಿ, ಪ್ರೀತಿಯಿಂದ, ಆತ್ಮೀಯವಾಗಿ ಸಹಕರಿಸಿದ ಮಾರ್ಗದರ್ಶಕರಿಗೆ, ಪ್ರತಿಯೊಂದಕ್ಕೂ ಸಹಕಾರವನ್ನು ನೀಡಿ ನನ್ನ ಅಧ್ಯಯನ ಯಶಸ್ವಿಯಾಗುವಲ್ಲಿ ಸ್ಫೂರ್ತಿ ನೀಡಿದ ಗುರುಗಳ ಧರ್ಮ ಪತ್ನಿಯವರಾದ ಶ್ರೀಮತಿ ದ್ರಾಕ್ಷಾಯಿಣಿ ಮೈತ್ರಿಯವರಿಗೆ ವಂದನೆಗಳು. ಪುಟ್ಟ ಪುಟ್ಟ ಮಾತಗಳನ್ನಾಡಿ ನಕ್ಕು ನಗಿಸುವ ಅವರ ಮಗಳಾದ ಸಹನ ಮೈತ್ರಿ ಅವರಿಗೂ ಆಶೀರ್ವಾದಗಳು.

ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಹಿ.ಚಿ.ಬೋರಲಿಂಗಯ್ಯ ಅವರಿಗೂ ಮತ್ತು ಪ್ರವಚಕರಾದ ಡಾ. ಕೇಶವನ್ ಪ್ರಸಾದ್ ಕೆ. ಅವರಿಗೂ ಅಧ್ಯಾಪಕರಾದ ಶ್ರೀ ಚೆಲುವರಾಜು, ಶ್ರೀ ಗಂಗಾಧರ ದೈವಜ್ಞ ಮತ್ತು ಶ್ರೀ ಎ. ಎಸ್.ಪ್ರಭಾಕರ ಅವರುಗಳಿಗೆ

ಮತ್ತು ಕನ್ನಡ ವಿಶ್ವವಿದ್ಯಾಲಯದ ಎಲ್ಲಾ ಅಧ್ಯಪಕರಿಗೆ ವಂದನೆ ಸಲ್ಲಿಸು ತ್ತೇನೆ. ಗ್ರಂಥಾಲಯ ಮುಖ್ಯಸ್ಥರಿಗೂ ಮತ್ತು ಅವರ ಸಿಬ್ಬಂದಿ ವರ್ಗಕ್ಕೂ ವಿಶ್ವವಿದ್ಯಾಲಯದ ಎಲ್ಲಾ ಸಿಬ್ಬಂದಿ ವರ್ಗಕ್ಕೆ, ಗುಲ್ಬರ್ಗಾ ವಿಶ್ವವಿದ್ಯಾಲಯದ ಗ್ರಂಥಾಲಯದ ಹಾಗೂ ಬೀದರ ಜಿಲ್ಲೆಯ ಕೇಂದ್ರ ಗ್ರಂಥಾಲಯದ ಮುಖ್ಯಸ್ಥರಿಗೂ, ಸಿಬ್ಬಂದಿವರ್ಗಕ್ಕೆ ನನ್ನ ಅನಂತ ವಂದನೆಗಳು.

ಸಂಶೋಧನ ಅಧ್ಯಯನ ಕ್ಷೇತ್ರಕಾರ್ಯ ಕೈಗೊಂಡಾಗ ನನಗೆ ಸಲಹೆ ಸೂಚನೆ, ಸಹಕಾರಗಳನ್ನು ನೀಡಿದ ಭಾಲ್ಕಿ ಹಿರೇಮಠದ ಪೂಜ್ಯ ಶ್ರೀ.ಮ.ಘ.ಚ.ಬಸವಲಿಂಗ ಪಟ್ಟದ್ದೇವರಿಗೂ, ಹಾರಕೂಡ ಶ್ರೀ.ಫ.ಬ್ರ.ಚನ್ನವೀರ ಶಿವಾಚಾರ್ಯರಿಗೂ, ಭಾತಂಬ್ರಾ ಶ್ರೀ ಶಿವಯೋಗೇಶ್ವರ ಸ್ವಾಮಿಗಳಿಗೂ, ಹುಲಸೂರ ಶ್ರೀ ಶಿವಾನಂದ ಸ್ವಾಮಿಗಳಿಗೂ, ಬೀದರ ಸಿದ್ಧಾರೂಢ ಮಠದ ಶ್ರೀ ಶಿವಕುಮಾರ ಸ್ವಾಮಿಗಳಿಗೂ, ನಿಡುವಂಚ ಮಡಿವಾಳೇಶ್ವರ ಶರಣೆ ಮೈತ್ರಾದೇವಿಯವರಿಗೂ, ಚಾಂಬೋಳದ ಪೂಜ್ಯ ಶ್ರೀರುದ್ರಮುನಿ ಪಟ್ಟದೇವರಿಗೂ, ಗಾದಗಿ ಗವಿಮಠದ ದೇಶಿಕರಾದ ಶ್ರೀ ವೈಜಿನಾಥ ಸ್ವಾಮಿ ಮತ್ತು ದಶಮುಖ ಸ್ವಾಮಿ ಇವರೆಲ್ಲರ ಅಡಿದಾವರೆಗಳಿಗೆ ಪ್ರಣಾಮಗಳು.

ನನ್ನ ಉನ್ನತ ಅಧ್ಯಯನಕ್ಕೆ ಸೂಕ್ತ ಸಲಹೆ-ಸೂಚನೆಗಳನ್ನಿತ್ತು ಪ್ರೋತ್ಸಾಹಿಸಿದಲ್ಲದೆ ಸದಾ ನನ್ನ ಆಭಿವೃದ್ಧಿ ಬಯಸುತ್ತಾ ಒಳ್ಳೆಯ ಮನುಷ್ಯನಾಗಲು ದಾರಿ ತೋರಿಸಿಕೊಟ್ಟ ಕರ್ನಾಟಕ ಕಾಲೇಜಿನ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನಾ ವಿಭಾಗದ ಮುಖ್ಯಸ್ಥರಾದ ಡಾ.ಜಗನ್ನಾಥ ಹೆಬ್ಬಾಳೆ ಅವರಿಗೂ, ಅಧ್ಯಯನಕ್ಕೆ ಸಲಹೆ-ಸೂಚನೆಗಳೊಂದಿಗೆ ದೃಢ ವಿಶ್ವಾಸವನ್ನು ತುಂಬುತ್ತಿದ್ದ ಪ್ರೊ.ಸೂಗಯ್ಯ ಹಿರೇಮಠ, ಪ್ರೊ. ಎಸ್.ಬಿ.ಬಿರಾದಾರ, ದೇಶಾಂಶ ಹುಡುಗಿ, ಪ್ರೊ.ವೀರೇಂದ್ರ ಸಿಂಪಿ, ಪಂಚಾಕ್ಷರಿ ಪುಣ್ಯಶೆಟ್ಟಿ, ಪ್ರೊ.ಶಿವಕುಮಾರ ನಾಗವಾರ, ನಿಜಲಿಂಗಪ್ಪ ತಗಾರೆ, ನಾಗಶೆಟ್ಟಿ ಜ್ಯೋತೆಪ್ಪನೋರ, ಶ್ರೀಕಾಂತ ಪಾಟೀಲ ಎಲ್ಲರಿಗೂ ಅನಂತ ಕೃತಜ್ಞತೆಗಳು.

ಸಂಶೋಧನಾ ಬರಹವನ್ನು ಸದಾ ವಿಚಾರಿಸಿ ಆತ್ಮೀಯ ಸಲಹೆಗಳನ್ನಿತ್ತ ರಾಜಶೇಖರ ಸ್ವಾಮಿ ಗೋರ್ಚಾ, ಬಸವರಾಜ ಹಳ್ಳೆ, ರಾಜಕುಮಾರ ಅಲ್ಲೂರ, ಬಸವರಾಜ ಬಲ್ಲೂರ, ಇವರಿಗೂ ಅನಂತ ನಮನಗಳು.

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಜೊತೆಯಲ್ಲಿ ಸುತ್ತಾಡಿ ಮಾಹಿತಿ ಸಂಗ್ರಹಕ್ಕೆ ನೆರವಾದ ರವಿಕಾಂತ ಬಿರಾದಾರ, ಅಶೋಕ ಭೋಗಾಲೆ, ಮಹೇಶ ದೂಪೆ, ಸುಧಾಕರ ಹೆಬ್ಬಾಳೆ, ಬಸಯ್ಯ

ಸ್ವಾಮಿ, ಸಿದ್ಧಯ್ಯ ಸ್ವಾಮಿ, ಮಲ್ಲಿಕಾರ್ಜುನ ಹಲಬರ್ಗಾ, ಭೀಮಶೆಟ್ಟಿ ಗಾರಂಪಳ್ಳಿ, ಸೋಪಾನ ಅಲ್ಲಾಪೂರ ಎಲ್ಲಾರಿಗೂ ಕೃತಜ್ಞತೆಗಳು.

ಸದಾ ನನ್ನ ಶ್ರೇಯಸ್ಸನ್ನೇ ಬಯಸಿ ಇಡೀ ಬಾಳನ್ನೇ ಮೀಸಲಿಟ್ಟು ಓದಿಸಿದ ಪೂಜ್ಯ ಮಾತೆ ಶ್ರೀಮತಿ ಪಾರ್ವತಿ, ಅಣ್ಣ ಕಲ್ಲಯ್ಯ ಸ್ವಾಮಿ, ಅತ್ತಿಗೆ ಸಂಗಮ್ಮ, ಶ್ರೀಮತಿ ಪುಷ್ಪಾ ಹಾಗೂ ಓದಿನಲ್ಲಿ ನನಗೆ ಯಾವುದೇ ಸಮಸ್ಯೆಗಳು ಬಾರದಂತೆ ಸಹಕಾರ ನೀಡಿ ನನ್ನ ಅಭಿವೃದ್ಧಿಯನ್ನು ಬಯಸುವ ಅಕ್ಕ, ಭಾವಜಿ ಅವರಿಗೂ ನನ್ನ ಅನಂತ ಪ್ರಣಾಮಗಳು.

ಅಕ್ಷರ ಜೋಡಣೆ ಮಾಡಿಕೊಟ್ಟ ಎ. ಎಂ.ಕೃಪಾಶಂಕರ್ ಮತ್ತು ಶ್ರೀನಿವಾಸ ಕೆ. ಕಲಾಲ್ ಕನ್ನಡ ವಿಶ್ವವಿದ್ಯಾಲಯ ಅವರಿಗೂ, ಬೀದರಿನ ಸೀಮಾ ಝುರಾಕ್ಸ್‌ಸಿನ ಮಾಲೀಕರಾದ ಕಾಶಿನಾಥ ಹೆಬ್ಬಾಳೆ ಮತ್ತು ಸಿಬ್ಬಂದಿ ವರ್ಗಕ್ಕೆ ಹಾಗೂ ಅಧ್ಯಯನದುದ್ದಕ್ಕೂ ಸಲಹೆ ಸೂಚನೆಗಳನ್ನಿತ್ತ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಬಂಧು ಮಿತ್ರರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

(ಬಂಡಯ್ಯ ಸ್ವಾಮಿ)

# ಪರಿವಿಡಿ

# ಪರಿಶಿಷ್ಟಗಳು

**ಪರಿಶಿಷ್ಟ I. ಭೂಪಟ**



**ಪರಿಶಿಷ್ಟ II. ಕೋಷ್ಟಕಗಳು**



**ಪರಿಶಿಷ್ಟ III. ವೃತ್ತ ಚಿತ್ರಗಳು**

ಭೂಪಟ ೧ : ಬೀದರ ಜಿಲ್ಲೆ



ಒಂದು ಸಂಸ್ಕೃತಿಯನ್ನು ಸರ್ವತೋಮುಖವಾಗಿ ಅಭ್ಯಾಸ ಮಾಡುವಾಗ ಯಾವುದೇ ಸಮುದಾಯದ ಜೀವನ ವಿಧಾನ ಪದ್ಧತಿಗಳನ್ನು ನಿರ್ಲಕ್ಷಿಸಲಾಗದು. ಜಗತ್ತಿನಲ್ಲಿ ವಿವಿಧ ಸಮುದಾಯಗಳು, ಜಾತಿಗಳು ಮತ್ತು ಜನಾಂಗಗಳು ಉಗಮಗೊಂಡು ತಲೆಯೆತ್ತಿದುದರಿಂದ ಇಂದಿನವರೆಗೆ ಎಲ್ಲಾ ದೇಶಗಳಲ್ಲಿಯೂ ಕಾಲಕಾಲಕ್ಕೆ ಸಮುದಾಯಗಳಲ್ಲಿ ಪರಿವರ್ತನೆಗಳು ಉಂಟಾಗಿವೆ. ಹೊಸ ಹೊಸ ರೀತಿ ನೀತಿಗಳನ್ನು ರೂಪಿಸಿ ಅದಕ್ಕೆತಕ್ಕಂತೆ ಮಾನವ ಸಮುದಾಯ ತನ್ನದೇ ಆದ ವೈಶಿಷ್ಟ್ಯತೆಗಳೊಂದಿಗೆ ತನ್ನ ದಿಕ್ಕು ದಿಸೆಗಳನ್ನು ಕಂಡುಕೊಳ್ಳುತ್ತಾ ಮುಂದು ವರಿದಿದೆ.

ಆಧುನಿಕ ಜೀವನದ ವೈಜ್ಞಾನಿಕ ಮತ್ತು ವೈಚಾರಿಕ ಯುಗಗಳಲ್ಲಿ ಕೂಡ ಈ ಸಮುದಾಯಗಳು ತಮ್ಮ ಮೂಲ ಸಂಸ್ಕೃತಿಯ ಬೇರುಗಳನ್ನು ಬೆಳೆಸಿಕೊಂಡಿರುತ್ತವೆ. ಇಂತಹ ಬಹುಪಾಲು ಸಮುದಾಯಗಳಲ್ಲೂ ಭಿನ್ನ ಭಿನ್ನವಾದ ಆಚಾರ ವಿಚಾರ, ನಡೆನುಡಿ ಮತ್ತು ಆಳವಾಗಿ ಹುದುಗಿರುವ ಸಾಂಸ್ಕೃತಿಕ ಮೌಲ್ಯಗಳನ್ನು ಗುರುತಿಸುವ ಮತ್ತು ಪ್ರಚಾರಪಡಿಸುವ ಕೆಲಸಗಳು ಇಂದು ನಡೆಯಬೇಕಾಗಿದೆ. ಭಾರತ ದೇಶದ ಬಹುತೇಕ ಸಮುದಾಯಗಳ ಸೂಕ್ಷ್ಮವಾದ ಅಧ್ಯಯನಗಳು ನಡೆಯಬೇಕಾಗಿದೆ.

ಭಾರತದ ವಿವಿಧ ರಾಜ್ಯಗಳಲ್ಲಿ ಅನೇಕ ಸಮುದಾಯಗಳು ವಾಸಿಸುತ್ತಿರುವಂತೆ ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಅನೇಕ ಸಮುದಾಯಗಳು ನೆಲೆಸಿವೆ. ಅದೇ ರೀತಿ, 'ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೆ ಏಕರಾತ್ರಿ' ಎಂಬ ಗಾದೆಯಂತೆ ಸಂಚರಿಸಿ ಜನರಿಗೆ ಜ್ಞಾನ ದಾಸೋಹವನ್ನು ನೀಡಿ ತಮ್ಮ ಪ್ರತಿಫಲವೆಂಬಂತೆ ಧನಧಾನ್ಯಗಳನ್ನು ಸಂಗ್ರಹಿಸಿ ಜೀವಿಸುತ್ತಿರುವ ಜಂಗಮ ಸಮುದಾಯವು ಒಂದು. ಈ ಸಮುದಾಯದ ಅಧ್ಯಯನಗಳು ಇದುವರೆಗೂ ನಡೆದಿರುವುದಿಲ್ಲ. ಈ ಸಂಬಂಧ ಅಧ್ಯಯನ ನಡೆಸುವುದು ಅಗತ್ಯವಾಗಿದೆ. ಪ್ರಸ್ತುತ ಬೀದರ ಜಿಲ್ಲೆಯ ಜಂಗಮರು: ಒಂದು ಅಧ್ಯಯನ ಎಂಬೀ ಪಿಎಚ್.ಡಿ. ವಿಷಯದಡಿಯಲ್ಲಿ ಜಂಗಮರನ್ನು ಸ್ಥೂಲಾಗಿ ಶೋಧಿಸಲು ಪ್ರಯತ್ನಿಸಲಾಗಿದೆ.

ಜಂಗಮ ಎಂಬ ಪದಕ್ಕೆ ಚಲಿಸು, ಸಂಚರಿಸು, ತಿರುಗಾಡು ಎಂಬ ಅರ್ಥಗಳಿವೆ. ಇವರಿಗೆ ಸ್ಥಿರವಾದ ನೆಲೆ ಇರದೆ ಯಾವ ಪ್ರದೇಶದಲ್ಲಿ ಧರ್ಮಕ್ಕೆ ಚ್ಯುತಿ ಒದಗುವುದೋ ಅಲ್ಲಿಗೆ ಹೋಗಿ ಧರ್ಮ ಪಾಲಿಸುವಂತೆ ಜನರಿಗೆ ಬೋಧಿಸುವವರಾದವರು. ಇವರಿಗೆ ಜಂಗಮರು, ಜಂಗಮ, ಸ್ವಾಮಿ, ಅಯ್ಯನೂರು, ಗುರುಗಳು, ಮುತ್ಯೆ, ಅಪ್ಪ ಇತ್ಯಾದಿ ಹೆಸರುಗಳಿಂದಲೂ ಕರೆಯುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ ಇವರನ್ನು ಜಂಗಮರು ಎಂದು ಕರೆಯಲಾಗಿದೆ. ಇವರು ವೀರಶೈವ ಧರ್ಮದ ಅನೇಕ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡವರು. ಇಂದು ಬದಲಾಗುತ್ತಿರುವ ಸಮಾಜದೊಂದಿಗೆ ಪರಿವರ್ತನೆಯತ್ತ ಸಾಗುತ್ತಿರುವುದು ಗೋಚರವಾಗುವುದು.

## ಅಧ್ಯಯನದ ಉದ್ದೇಶ

ಕರ್ನಾಟಕದಲ್ಲಿ ಮತ್ತು ಬೀದರ ಜಿಲ್ಲೆಯ ಜಂಗಮರನ್ನು ಕುರಿತು ಬಿಡಿ ಬಿಡಿ ಲೇಖನಗಳು ಮಾತ್ರ ಹೊರಬಂದಿವೆ. ಸಮಗ್ರವಾಗಿ ಸಂಶೋಧನಾತ್ಮಕವಾಗಿ ಅಧ್ಯಯನ ನಡೆದಿಲ್ಲವೆಂದು ಹೇಳಬಹುದು. ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿರುವುದು.

೧. ಜಂಗಮರ ಪ್ರಾಚೀನತೆ ನಡೆದು ಬಂದ ದಾರಿ, ಪದ ನಿಷ್ಪತ್ತಿ ಮತ್ತು ಅರ್ಥ ಹುಡುಕುವುದು.

೨. ಜಂಗಮರ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಅಂಶಗಳನ್ನು ಅಧ್ಯಯನಿಸುವುದು.

೩. ಜಂಗಮರ ಅಂದಿನ ಇಂದಿನ ಆಚಾರ ವಿಚಾರ, ನಡಾವಳಿಗಳು ಜನನದಿಂದ ಮರಣದ ವರೆಗಿನ ಸಂಪ್ರದಾಯಗಳು ಒಟ್ಟಿನಲ್ಲಿ ಬದುಕಿನ ರೀತಿ ನೀತಿಗಳನ್ನು ಅರಿಯುವುದು.

೪. ಜಂಗಮರ ಸಾಮಾಜಿಕ ರಚನೆಯನ್ನು ಅಧ್ಯಯನಿಸುವುದು.

೫. ಮಠ, ಪೀಠ ಹಾಗೂ ಜಂಗಮರ ಕಾರ್ಯಚಟುವಟಿಕೆಗಳಲ್ಲಿಯ ಪರಿವರ್ತನೆಗಳನ್ನು ಪರಿಚಯಿಸುವುದು.

೬. ಜಂಗಮರ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಸ್ಥಾನಮಾನಗಳನ್ನು ಶೋಧಿಸುವುದು. ಮತ್ತು ಜಂಗಮರ ಸಾಮಾಜಿಕ ಸಮಸ್ಯೆಗಳನ್ನು ಅಧ್ಯಯನಿಸುವುದು.

೭. ಜಂಗಮರ ಸಾಮಾಜಿಕ ಸಂಘಟನೆಗಳಿಂದ ಕಂಡುಕೊಂಡ ಪರಿಹಾರಗಳನ್ನು ಶೋಧಿಸುವುದು.

## ಅಧ್ಯಯನದ ವ್ಯಾಪ್ತಿ

ಬೀದರ ಜಿಲ್ಲೆಯು ಕರ್ನಾಟಕದ ಏಕೀಕರಣ ಪೂರ್ವದಲ್ಲಿ ಒಂಬತ್ತು ತಾಲ್ಲೂಕುಗಳನ್ನು ಹೊಂದಿತ್ತು. ಈ ಜಿಲ್ಲೆಯು ಹೈದ್ರಾಬಾದ ನಿಜಾಮನನ ಅಧೀನದಲ್ಲಿತ್ತು. ೧೯೫೬ರಲ್ಲಿ ಇದು ಕರ್ನಾಟಕ ರಾಜ್ಯದಲ್ಲಿ ವಿಲೀನಗೊಂಡಾಗ ಕೇವಲ ನಾಲ್ಕು ತಾಲೂಕುಗಳನ್ನು ಮಾತ್ರ

ಹೊಂದಿತ್ತು. ೧೯೬೫ರಲ್ಲಿ ಬಸವಕಲ್ಯಾಣ ತಾಲ್ಲೂಕದೊಂದಿಗೆ ಪ್ರಸ್ತುತ ಐದು ತಾಲೂಕುಗಳನ್ನೊಳಗೊಂಡ ಜಿಲ್ಲೆಯಾಗಿ ರೂಪಗೊಂಡಿದೆ. ಈ ಜಿಲ್ಲೆಯ ಜಂಗಮರ ಸಮಗ್ರ ಅಧ್ಯಯನವು ಪ್ರಸ್ತುತ ಅಧ್ಯಯನದ ವ್ಯಾಪ್ತಿಯಾಗಿರುತ್ತದೆ.

## ಅಧ್ಯಯನದ ಅವಶ್ಯಕತೆ

ಆಧುನಿಕ ಜೀವನದ ವೈಜ್ಞಾನಿಕ ಮತ್ತು ವೈಚಾರಿಕ ಬೆಳವಣಿಗೆಯಲ್ಲಿ ಸಮುದಾಯಗಳ ಅಧ್ಯಯನವಾಗುವುದು ಅಗತ್ಯವಾಗಿದೆ. ಹಾಗೆಯೇ ಜಂಗಮ ಸಮುದಾಯ ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯ ನಡೆ ನುಡಿ, ಆಚರಣೆ, ಭಕ್ತಿ, ಗೌರವ ಮೊದಲಾದವು ಆಧುನೀಕರಣಕ್ಕೆ ಒಳಗಾಗಿವೆ. ಆಧುನಿಕ ತಲೆಮಾರಿನವರೆಗೆ ಬೇಡವಾಗುತ್ತಲಿವೆ. ಅವುಗಳನ್ನು ಮುಂದೆ ಕಣ್ಮರೆಯಾಗಬಹುದೆಂಬ ಉದ್ದೇಶದಿಂದ ಅಧ್ಯಯನಿಸುವುದು ಅವಶ್ಯವಾಗಿದೆ. ದೇಶದ ಧಾರ್ಮಿಕ ಜೀವನದಲ್ಲಿ ಜಂಗಮ ಸಮುದಾಯಕ್ಕಿರುವ ಸ್ಥಾನಮಾನ, ಧಾರ್ಮಿಕ ಕ್ಷೇತ್ರಕ್ಕೆ ಇವರು ಸಲ್ಲಿಸಿದ ಕೊಡುಗೆ, ದೇಶೀಯ ಸಂಸ್ಕೃತಿಯನ್ನು ಧಾರ್ಮಿಕತೆಯಲ್ಲಿ ಇವರು ಉಳಿಸಿ ಪೋಷಿಸಿಕೊಂಡು ಬಂದಿರುವರು. ದೇಶದ ಸಮುದಾಯಗಳ ಬದುಕಿಗೆ ನೀಡಿದ ಸೇವೆ, ಕೋಮು ಸೌಹಾರ್ದತೆ ಮತ್ತು ಸಾಮರಸ್ಯ ಬದುಕಿಗೆ ಕೊಟ್ಟ ಕೊಡುಗೆ, ಇವರ ಬಲಿದಾನ, ತ್ಯಾಗ, ಕೂಡಿ ಬದುಕುವ ಜಂಗಮ ಸಮುದಾಯದ ಸಂಸ್ಕೃತಿ ಆಧುನಿಕತೆಯಲ್ಲಿ ಮೂಲ ಸಂಸ್ಕೃತಿಗೆ ಧಕ್ಕೆ ತರುತ್ತಿರುವ ಸ್ಥಿತಿನಿರ್ಮಾಣವಾಗುತ್ತಲಿದೆ. ಇಂತಹ ಪರಿಸ್ಥಿತಿಯಲ್ಲಿ ಜಂಗಮ ಸಮುದಾಯ ಕುರಿತು ಅಧ್ಯಯನ ನಡೆಯುತ್ತಿರುವುದು ಅವಶ್ಯಕವಾಗಿದೆ.

### ಊಹೆಗಳು

೧. ಜಂಗಮ ಸಮುದಾಯವು ಬದಲಾವಣೆಯನ್ನು ಬಯಸುತ್ತಿದೆ. ಜೊತೆಗೆ ತನ್ನ ಮೂಲ ಅಸ್ತಿತ್ವವನ್ನು ಉಳಿಸಿಕೊಳ್ಳುಪ್ರಯತ್ನಿಸುತ್ತದೆ.

೨. ಜಂಗಮ ತತ್ತ್ವದ ಮೌಲ್ಯಗಳನ್ನು ಉಳಿಸಿಕೊಳ್ಳಲು ಅದಕ್ಕೆ ಕಷ್ಟವಾಗುತ್ತಿದೆ.

## ಅಧ್ಯಯನದ ವಿಧಾನಗಳು

ಬೀದರ ಜಿಲ್ಲೆಯ ಜಂಗಮ ಸಮುದಾಯವನ್ನು ಅಧ್ಯಯನಿಸಲು ಈ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

**೧. ಪ್ರಶ್ನಾವಳಿ :** ವಿಧಾನ ಪ್ರಸ್ತುತ ಅಧ್ಯಯನದ ಉದ್ದೇಶಗಳನ್ನು ಅರಿಯಲು ಉದ್ದೇಶಕ್ಕೆ ಪೂರಕವಾದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ, ಪರೀಕ್ಷೆಗೊಳಪಡಿಸಿ, ಪರೀಕ್ಷೆಗೊಳಗೊಂಡ

ಮೇಲೆ ಸೂಕ್ತ ಪ್ರಶ್ನೆಗಳನ್ನು ಮುದ್ರಿಸಿ ಜಿಲ್ಲಾದ್ಯಂತ ನೆಲೆಸಿರುವ ಜಂಗಮರ ೫೦೩ ಗ್ರಾಮಗಳಲ್ಲಿ ೧೭೫ ಗ್ರಾಮಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ.

**೨. ಸಂದರ್ಶನ :** ಜಂಗಮರ ಚಾರಿತ್ರಿಕ, ಸಾಮಾಜಿಕ ನೆಲೆಯನ್ನು ಅರಿಯಲು ಕೆಲವು ಪ್ರಶ್ನಾವಳಿಗಳನ್ನು ಮಾಡಿಕೊಂಡು, ಸಂದರ್ಶನದ ಮೂಲಕ ಧ್ವನಿಸುರುಳಿಯನ್ನು ಮಾಡಿಕೊಂಡು, ಸಮುದಾಯದ ಹಿರಿಯರನ್ನು ಸಮಾಜವನ್ನು ಬಲ್ಲ ಸ್ತ್ರೀಯರನ್ನು, ಸಮಾಜದಲ್ಲಿ ಕೈಗೊಂಡ ಭಿನ್ನ ಭಿನ್ನವೃತ್ತಿಯನ್ನು ಹೊಂದಿರುವ ಜಂಗಮರಿಗೆ ಮಠಾಧೀಶರಿಗೆ ಸಂದರ್ಶನ ಮಾಡಿ ಸಮುದಾಯದ ಭಿನ್ನ ಭಿನ್ನ ಅಂಶಗಳನ್ನು ಅರಿಯಲಿಕ್ಕೆ ಸಂದರ್ಶನ ವಿಧಾನ ಬಳಸಲಾಗಿದೆ.

**೩. ಅವಲೋಕನ ವಿಧಾನ :** ಕ್ಷೇತ್ರಕಾರ್ಯದಲ್ಲಿ ಮಾಹಿತಿಯನ್ನು ಸಂಗ್ರಹಿಸುವಲ್ಲಿ ಅವಲೋಕನ ಮತ್ತು ಸಹಭಾಗಿ ವಿಧಾನವನ್ನು ಬಳಸಲಾಗಿದೆ. ಸಂಬಂಧಿಸಿದ ಧ್ವನಿ ಮುದ್ರಣ ಮತ್ತು ಛಾಯಾ ಚಿತ್ರಗಳನ್ನು ಸೆರೆ ಹಿಡಿಯಲಾಯಿತು.

**೪. ಐತಿಹಾಸಿಕ ವಿಧಾನ :** ಜಂಗಮ ಸಮುದಾಯಕ್ಕೆ ಸಂಬಂಧಿಸಿದಂತಹ ಶಾಸನಗಳು, ಮಠ, ಶಿಲ್ಪ ಕಲೆಗಳನ್ನು, ಹಸ್ತಪ್ರತಿಗಳು ಮತ್ತು ಪುಸ್ತಕಗಳನ್ನು ಐತಿಹಾಸಿಕ ವಿಧಾನದ ಮೂಲಕ ಸಂಗ್ರಹಿಸಿ ಅವಲೋಕಿಸಲಾಗಿದೆ.

**೫. ಅಂಕಿಸಂಖ್ಯಾಶಾಸ್ತ್ರೀಯ ವಿಧಾನ :** ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅಂಕಿ ಸಂಖ್ಯೆಗಳನ್ನು ವಿಷಯಕ್ಕೆ ಸಂಬಂಧಿಸಿದಂತೆ ವರ್ಗೀಕರಣ ಮಾಡಿ ಅನೇಕ ಕೋಷ್ಠಕಗಳನ್ನು ಗಣಕಯಂತ್ರದ ನೆರವಿನಿಂದ ಸಿದ್ಧಪಡಿಸಿಕೊಳ್ಳಲಾಗಿದೆ. ಅವಶ್ಯಕತೆಗೆ ತಕ್ಕಂತೆ ರೇಖಾಚಿತ್ರಗಳನ್ನು ಹಾಗೂ ಚಾರ್ಟುಗಳನ್ನು ರಚಿಸಿಕೊಳ್ಳಲಾಗಿದೆ.

**೬. ತೌಲನಿಕ ವಿಧಾನ :** ಅಧ್ಯಯನ ವಿಧಾನದಲ್ಲಿ ತೌಲನಿಕ ವಿಧಾನ ತುಂಬ ಅವಶ್ಯಕವಾದದ್ದು, ಜಂಗಮರಿಗೆ ಸಂಬಂಧಿಸಿದಂತೆ ತಾಲೂಕಿನ ಹಲವಾರು ವಿಚಾರಗಳು ಇನ್ನೊಂದು ತಾಲೂಕಿನ ಮತ್ತು ಇತರ ವಿಷಯಗಳನ್ನು ತೌಲನಿಕವಾಗಿ ಹೇಳುವಲ್ಲಿ ಈ ವಿಧಾನವನ್ನು ಬಳಸಲಾಗಿದೆ.

## ಅಧ್ಯಯನದ ಸ್ವರೂಪ

ಬೀದರ ಜಿಲ್ಲೆಯು ಭೌಗೋಳಿಕ ಮತ್ತು ಪ್ರಾದೇಶಿಕತೆಯಿಂದ ಮಹತ್ವದಾಗಿದೆ. ಉತ್ತರ ಕರ್ನಾಟಕದ ತುತ್ತ ತುದಿಗಿರುವ ಏಕೈಕ ಪುಟ್ಟ ಜಿಲ್ಲೆ ಇದು. ಆರ್ಥಿಕ ಪ್ರಗತಿಯಲ್ಲಿ ಹಿಂದುಳಿದರೂ ಸಾಂಸ್ಕೃತಿಕ, ಸಾಹಿತ್ಯಿಕ ರಂಗಗಳಲ್ಲಿ ತನ್ನದೇ ಆದ ಸ್ಥಾನವನ್ನು

ಇದು ಪಡೆದುಕೊಂಡಿದೆ. ಇದು ೫ ತಾಲೂಕುಗಳನ್ನು ಹೊಂದಿದೆ. ಪ್ರಸ್ತುತ ಬೀದರ ಜಿಲ್ಲೆಯು ೧೭°೩೫ ಹಾಗೂ ೧೮°೩೫ ಉತ್ತರ ಅಕ್ಷಾಂಶ ೭೬°೪೨ ಹಾಗೂ ೭೭°೩೯ ಪೂರ್ವ ರೇಖಾಂಶಗಳ ಮಧ್ಯೆ ತನ್ನ ಸ್ಥಾನ ಹೊಂದಿದೆ. ಜಿಲ್ಲೆಯ ವಿಸ್ತೀರ್ಣ ೫.೪೪೮ ಚ.ಕಿ.ಮೀ ಇದೆ. ಬೀದರ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶ ಉತ್ತರ ಮತ್ತು ಪಶ್ಚಿಮಕ್ಕೆ ಮಹಾರಾಷ್ಟ್ರ ಮತ್ತು ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆ ಹೊಂದಿಕೊಂಡಿದೆ. ಇಲ್ಲಿನ ಜನಸಂಖ್ಯೆ ೧೯೯೧ನೇ ಜನಗಣತಿಯ ಪ್ರಕಾರ ೧೨,೫೫೭೯. ಜಿಲ್ಲೆಯಲ್ಲಿ ೬೨೩ ಹಳ್ಳಿಗಳಿವೆ. ಸಮುದ್ರ ಪಾತಾಳಿಯಿಂದ ೨೨೦೬ ರಿಂದ ೬೧೦ ಮೀಟರ್ ಎತ್ತರದಲ್ಲಿದೆ. ಐತಿಹಾಸಿಕವಾಗಿ, ರಾಜಕೀಯವಾಗಿ ಬೀದರ ಜಿಲ್ಲೆ ವೈಶಿಷ್ಟ್ಯದಿಂದ ಕೂಡಿದೆ. ೧೨ನೇ ಶತಮಾನದಲ್ಲಿ ಬಸವಾದಿ ಶರಣರು ನಡೆಸಿದ ವಚನ ಚಳುವಳಿ. ಈ ನೆಲಕ್ಕೆ ಸಂಬಂಧಿಸಿರುವುದು ಈ ಚಳವಳಿ ವೀರಶೈವ ಧರ್ಮದ ಬೆಳವಣಿಗೆಗೆ ಕಾರಣವಾಯಿತು. ಜಾತಿ, ಮತ, ಪಂಥ, ಕುಲದಂತಹ ಭೇದಭಾವಗಳನ್ನು ಹೋಗಲಾಡಿಸಲು ಪ್ರಯತ್ನಿಸಲಾಯಿತು. ಶರಣರು ಕೊಟ್ಟ ವೀರಶೈವ ಧರ್ಮವನ್ನು ಜಂಗಮರು, ಪ್ರಚಾರ ಪಡಿಸಿ ಅದನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಜಿಲ್ಲೆಯ ಅನೇಕ ಸಮುದಾಯಗಳಲ್ಲಿ ಜಂಗಮ ಸಮುದಾಯವು ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ.

ಬೀದರ ಜಿಲ್ಲೆಯಲ್ಲಿ ಸುಮಾರು ೩೦,೦೦೦ ಜನಸಂಖ್ಯೆ ಜಂಗಮರಿರಬಹುದು. ಅದರಲ್ಲಿ ಸುಮಾರು ೩೫ ಪ್ರತಿಶತ ಕುಟುಂಬಗಳನ್ನು ವೈಜ್ಞಾನಿಕವಾಗಿ ಸಮೀಕ್ಷೆಗೊಳಪಡಿಸಲಾಗಿದೆ. ಅಂದರೆ ಬೀದರ ಜಿಲ್ಲೆಯ ೧೭೫ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಒಟ್ಟು ೧೪೮೩ ಕುಟುಂಬಗಳ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ಮಾಹಿತಿಯು ಜಂಗಮ ಸಮುದಾಯದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳ ಮೇಲೆ ವಸ್ತುನಿಷ್ಠವಾದ ಬೆಳಕನ್ನು ಚೆಲ್ಲುತ್ತದೆ

ಪ್ರಸ್ತುತ ಜಂಗಮ ಎಂಬ ಸಮುದಾಯದ ಬಗ್ಗೆ ಅಧ್ಯಯನ ಕೈಗೊಳ್ಳುವಾಗ ಆ ಪಂಗಡ ವಿಶೇಷತೆಯನ್ನು ಕುರಿತು, ಪ್ರಾಚೀನತೆ, ಪದನಿಷ್ಪತ್ತಿ, ವಿಧಿವಿಧಾನಗಳು, ಆಚರಣೆ-ಸಂಪ್ರದಾಯಗಳು ಹಾಗೂ ಆರ್ಥಿಕ ವಸ್ತು ಸ್ಥಿತಿ ಶೈಕ್ಷಣಿಕ ಮಟ್ಟಗಳನ್ನು ಕುರಿತಾದ ವಿಶಿಷ್ಟ್ಯತೆಯನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ. ಮೂಲತಃ ವೀರಶೈವ ಎಂಬ ಸಮಸ್ತ ಪದದಡಿಯಲ್ಲಿ ಬರುವ ಜಂಗಮರು ಇಂದು ಸಾಮಾಜಿಕವಾಗಿ ಪೂಜ್ಯನೀಯ ಸ್ಥಾನದಲ್ಲಿ ಇದ್ದರೂ ಆರ್ಥಿಕವಾಗಿ ಶೈಕ್ಷಣಿಕವಾಗಿ ಬದಲಾವಣೆ ಪಡುವ ಸ್ಥಿತಿಯಲ್ಲಿದ್ದಾರೆ. ಇದಕ್ಕೆ ಕಾರಣ ಸಮಾಜ ಕಟ್ಟುಪಾಡುಗಳಿಗೆ ಒಳಗಾಗಿರುವುದು. ಶೈಕ್ಷಣಿಕೃತ ವ್ಯವಸ್ಥೆಯಲ್ಲಿ ಉನ್ನತ ಮಟ್ಟದಲ್ಲಿರಲು ಇವರ ಜೀವನ ವೃತ್ತಿ, ಪೂಜಾ, ಹೋಮ, ಪೀಠಾಧಿಕಾರ, ಶಿಕ್ಷಣ, ಪ್ರಸಾರ

ಮುಂತಾದ ಸಾಮಾಜಿಕ ಕಾರಣಗಳಿವೆ. ಹೀಗಾಗಿ ಹೊಟ್ಟೆಗಿಲ್ಲದಿದ್ದರೂ ಜುಟ್ಟಿಗೆ ಮಾತ್ರ ಮಲ್ಲಿಗೆಯಂತೆ ಸೀಮಿತವಾದ ಕಾಯಕದ ಕಟ್ಟುಪಾಡುಗಳಿಗೆ ಒಳಗಾಗಿ ಬೇರೆ ವೃತ್ತಿಯನ್ನು ಕೈಗೊಳ್ಳದೇ, ಇಂದು ಸಮಾಜವು ಕೂಡ ಅವರನ್ನು ಸಂಪ್ರದಾಯಿಕ ವಿಧಿವಿಧಾನಗಳು ನೆರವೇರಿಸುವುದಕಷ್ಟೇ ಬಳಸಿಕೊಂಡು ನಿರ್ಲಕ್ಷಿಸುತ್ತಿದೆ. ಹೀಗಾಗಿ ಅರೆ ಉದ್ಯೋಗಿಗಳಾದ ಇವರು ತಮ್ಮ ಕುಟುಂಬ ಬೆಳೆದಂತೆಲ್ಲಾ ಅದರ ನಿರ್ವಹಣೆ ಮಾಡಲು ಇತರೆ ಕೆಲಸಗಳಲ್ಲಿ ತೊಡಗಿಕೊಂಡು ಬದುಕುತ್ತಿದ್ದಾರೆ. ಇಂತಹವರ ಜೀವನ ಹಾಗೂ ಬದುಕನ್ನು ಕುರಿತು ಸಮಗ್ರವಾದ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ಅಧ್ಯಾಯ ೨

# ಬೀದರ ಜಿಲ್ಲೆಯ ಪರಿಚಯ

೧. ಬೀದರಿನ ಹೆಸರು

೨. ಭೌಗೋಳಿಕ ಸ್ಥಾನಮಾನ

೩. ಐತಿಹಾಸಿಕ ಮತ್ತು ರಾಜಕೀಯ ಹಿನ್ನೆಲೆ

೪. ಧಾರ್ಮಿಕ ಪರಂಪರೆ

೪.೧. ಬೌದ್ಧ ಧರ್ಮ ಮತ್ತು ಜೈನಧರ್ಮ

೪.೨. ಶೈವ ಮತ

೪.೩. ವೀರಶೈವ ಧರ್ಮ

೪.೪. ವೈಷ್ಣವ ಧರ್ಮ

೪.೫. ಇಸ್ಲಾಂ ಧರ್ಮ

೪.೬. ಸಿಖ್ಖ್ ಧರ್ಮ

೪.೭. ಆರ್ಯ ಸಮಾಜ

೪.೮. ಬ್ರಹ್ಮಕುಮಾರಿ ಸಮಾಜ

೫. ಸಮುದಾಯಗಳು

೫.೧. ಸವರ್ಣೀಯ ಸಮುದಾಯಗಳು

೫.೨. ಹಿಂದುಳಿದ ಸಮುದಾಯ

೫.೩. ಪರಿಶಿಷ್ಟಜಾತಿ ಸಮುದಾಯ

೫.೪. ಪರಿಶಿಷ್ಟ ಪಂಗಡ ಸಮುದಾಯ

೫.೫. ಅಲ್ಪಸಂಖ್ಯಾತ ಸಮುದಾಯ

೫.೬. ಅಲೆಮಾರಿ ಸಮುದಾಯ

೬. ಜನ ಜೀವನ

೭. ಮಳೆ ಮತ್ತು ಮಣ್ಣು

೮. ಭಾಷೆ

೯. ವಾಸ್ತು ಶಿಲ್ಪ

೯.೧. ಬೀದರ ಕೋಟೆ

೯.೨. ರಂಗೀನ ಮಹಲ್

೯.೩. ಮದರಸ (ಮಹಮದ್ ಗವಾನ್)

ಭಾರತವು ಏಷ್ಯಾ ಖಂಡದ ದಕ್ಷಿಣದಲ್ಲಿರುವ ನಾಲ್ಕು ಪರ್ಯಾಯ ದ್ವೀಪಗಳಲ್ಲಿ ಒಂದು. ಈ ದೇಶದ ವಾಯುವ್ಯ, ಉತ್ತರ, ಈಶಾನ್ಯ ದಿಕ್ಕುಗಳಲ್ಲಿ ಅತೀ ಎತ್ತರವಾದ ಹಿಮಾಲಯ ಪರ್ವತವು ಹಬ್ಬಿದೆ. ದಕ್ಷಿಣದಲ್ಲಿ ಹಿಂದೂ ಸಾಗರ, ಶ್ರೀಲಂಕಾಗಳಿವೆ. ಪೂರ್ವದಲ್ಲಿ ಬಂಗಾಳ ಕೊಲ್ಲಿ, ಚೈನಾ, ಬರ್ಮಾ ಹಾಗೂ ಬಾಂಗ್ಲಾ ದೇಶಗಳಿವೆ.

ಭಾರತವು ಭೌಗೋಳಿಕವಾಗಿ ತನ್ನ ಗಾತ್ರ ಇತರ ರಾಷ್ಟ್ರಗಳಿಗಿಂತಲೂ ಹೆಚ್ಚು ಸಂತೃಪ್ತಿಯನ್ನು ಹೊಂದಿರುವ ರಾಷ್ಟ್ರ. ಭಾರತೀಯರ ಅವಿಭಾಜ್ಯ ಅಂಗವಾಗಿ ಇಲ್ಲಿನ ನಿಸರ್ಗಗೋಚರಿಸುತ್ತದೆ. ನದಿಗಳು ಮಳೆಗಾಲದಲ್ಲಿ ವಿಶೇಷ ಶಕ್ತಿಶಾಲಿಯಾಗಿ ಹರಿಯುತ್ತವೆ. ಇಲ್ಲಿನ ವಾಯುಗುಣ ವೈವಿಧ್ಯತೆ, ಭೌಗೋಳಿಕ ಪರಿಸರ, ಅರಣ್ಯ ಸಂಪತ್ತು, ಫಲವತ್ತಾದ ಸಮತಲ ಪ್ರದೇಶ, ಬರಡಾದ ಪರ್ವತ ಪ್ರದೇಶ, ಹಿಮಚಾಚಿದ ಪರ್ವತಗಳು ಮತ್ತು ಮರಳುಗಾಡು ಮೊದಲಾದವುಗಳು ವಿಸ್ಮಯಕಾರಿಗಳಾಗಿವೆ. ಇಲ್ಲಿನ ನ್ಯಾಯ ಮತ್ತು ಮತ್ತು ಸಾಮಾಜಿಕ ಪದ್ಧತಿ ರೋಮ ದೇಶದ ಅಸ್ತಿತ್ವಕ್ಕಿಂತ ಮೊದಲಿನದು. ಅಂತೆಯೇ "ಭೂಮಂಡಲದಲ್ಲಿ ಯಾವುದಾದರೂ ಒಂದು ದೇಶ ಮಾನವ ಸಮಾಜದ ತೊಟ್ಟಿಲು ಎಂದು ಕರೆಯಿಸಿಕೊಳ್ಳುವ ಘನತೆಯನ್ನು ಹೊಂದಿದ್ದರೆ, ಅಥವಾ ಪ್ರಾಚೀನ ಸಂಸ್ಕೃತಿಯ ಪ್ರತೀಕವಾಗಿ ವಿಶ್ವದಲ್ಲೆಡೆ ಜ್ಞಾನ ಪ್ರಸಾರವನ್ನು ಕೈಗೊಂಡ ದೇಶವೊಂದಿದ್ದರೆ ಅದು ಭಾರತ" (ಡಾ. ಡಿ. ವಿ. ಸುಬ್ರಹ್ಮಣ್ಯ :೧೯೫೫:೨೨)ಎಂದು ಕ್ರೊಸರ್ ಎಂಬ ಪಾಶ್ಚಾತ್ಯ ವಿದ್ವಾಂಸರು ಹೇಳಿರುವುದು ಗಮನಾರ್ಹವಾಗಿದೆ.

ಭಾರತ ವಿಶಾಲವಾಗಿರುವುದರಿಂದ ಅನೇಕ ಭಾಷೆಗಳು ಭಾರತದ ವಿವಿಧ ಭಾಗಗಳಲ್ಲಿ ಬೆಳೆದು ಬಂದ ಜನಾಂಗವನ್ನು ಅನೇಕ ಗುಂಪುಗಳಾಗಿ ಒಡೆದಿವೆ. ಆದರೂ ಭಾವ ಪ್ರಧಾನರು, ಶ್ರದ್ಧಾವಂತರು, ಹೃದಯಶಾಲಿಗಳು, ದಯಾಮಯಿಗಳು ಒಟ್ಟಿನಲ್ಲಿ ಎಲ್ಲರಲ್ಲೂ ಅನ್ಯೋನ್ಯತೆಯನ್ನು ಕಾಣಬಹುದಾಗಿದೆ. ಸಾವಿರಾರೂ ವರ್ಷಗಳಿಂದಲೂ ಭಾರತದಲ್ಲಿ ಒಂದೇ ರೀತಿಯ ಆಡಳಿತ ಇಲ್ಲದಿದ್ದರೂ ಒಂದೇ ನಾಗರೀಕತೆ, ಸಂಸ್ಕೃತಿ ವೈಶಾಲ್ಯ ಮನೋಭಾವನೆ ವಿವಿಧತೆಯಲ್ಲಿ ಏಕತೆ ಕಾಣಬರುತ್ತದೆ.

ಭಾರತ ಖಂಡವು ವಿಶಾಲವಾಗಿ ವೈಶಿಷ್ಟ್ಯ ಪೂರ್ಣವಾಗಿ ಪ್ರಮುಖ ವಂಶಗಳಿಂದ ಕೂಡಿದೆ. ಹಲವಾರು ರಾಜ್ಯಗಳ ಸರಮಾಲೆಗಳಿಂದ ಕೂಡಿ ಅಖಂಡ ಭಾರತವಾಗಿದೆ. ಇಲ್ಲಿ ಆಯಾ ಭಾಷೆಗಳನ್ನಾಡುವ ಜನರನ್ನು ವಿಭಾಗಿಸಿ, ರಾಜ್ಯಗಳನ್ನಾಗಿ ವಿಂಗಡಿಸಿ, ತನ್ನದೆ ಸತ್ವಪೂರ್ಣ ಜವಾಬ್ದಾರಿಯನ್ನು ಹೊತ್ತಿದೆ. ಅದರಲ್ಲೂ ಕರ್ನಾಟಕ ಭಾರತದಲ್ಲಿ ವಿಶಿಷ್ಟವಾಗಿ ಗೋಚರಿಸಿ ತನ್ನದೆ ಆದ ಸ್ಥಾನವನ್ನು ಪಡೆದುಕೊಂಡಿದೆ.

ಕರ್ನಾಟಕವು ವಿಸ್ತೀರ್ಣದಲ್ಲಿ ೧,೯೧,೭೯೧ ಚದರ ಕಿಲೋಮೀಟರ್‌ವುಳ್ಳ ಈ ಪ್ರದೇಶ ೫ ಕೋಟಿ ಕನ್ನಡಿಗರ ನಾಡು ಈ ಕರುನಾಡು. ಉತ್ತರದಲ್ಲಿ ಮಹಾರಾಷ್ಟ್ರ, ಗೋವಾ, ಪೂರ್ವದಲ್ಲಿ ಆಂಧ್ರಪ್ರದೇಶ, ದಕ್ಷಿಣದಲ್ಲಿ ತಮಿಳುನಾಡು, ಕೇರಳ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಇದೆ. ರಾಜ್ಯದ ಬಳ್ಳಾರಿ ಜಿಲ್ಲೆಯಲ್ಲಿರುವ ಹಂಪೆಯು ರಾಮಾಯಣ ಕಾಲದ ವಾಲಿ ಸುಗ್ರೀವರ ರಾಜಧಾನಿಯಾಗಿತ್ತು. ಬಿಜಾಪೂರ ಜಿಲ್ಲೆಯಲ್ಲಿರುವ ಬಾದಾಮಿಯು ಅಗಸ್ತ ಮಹರ್ಷಿಗಳು ಕೊಂದಾ ವಾತಾಪಿಯರು, ರಾಯಚೂರ ಜಿಲ್ಲೆಯ ಕನಕಗಿರಿಯು ಮೌರ್ಯರ ದಕ್ಷಿಣ ರಾಜಧಾನಿಯಾಗಿತ್ತು. ಚಂದ್ರಗುಪ್ತ ಮೌರ್ಯನು ತನ್ನ ಗುರು ಭದ್ರಬಾಹುವಿನೊಡನೆ ಕ್ರಿ.ಪೂ. ೨೯೮ ರಲ್ಲಿ ಹಾಸನ ಜಿಲ್ಲೆಯ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿಯೇ ಮರಣ ಹೊಂದಿದ್ದಾನೆಂದು ತಿಳಿದು ಬರುತ್ತದೆ. ಕ್ರಿ. ಶ. ೨ನೇ ಶತಮಾನದಲ್ಲಿ ದ್ರಾವಿಡ ವಂಶದ ಶಾತವಾಹನರು ಇದನ್ನೇ ಆಳಿದರು. ಕ್ರಿ. ಶ. ೫ನೇ ಶತಮಾನದಲ್ಲಿ ಸಿಕ್ಕ ಮೊಟ್ಟ ಮೊದಲ ಹಲ್ಮಿಡಿ ಶಾಸನ ಕರ್ನಾಟಕದ ಕನ್ನಡ ಶಾಸನ ಸಾಹಿತ್ಯವನ್ನು ಪ್ರಜ್ವಲಿಸುವಲ್ಲಿ ಕಳಶವಿಟ್ಟಂತಿದೆ. ಸುಮಾರು ೯ನೇ ಶತಮಾನದಲ್ಲಿ ದೊರೆತ ಕವಿರಾಜಮಾರ್ಗ ಗ್ರಂಥವು ಕನ್ನಡಿಗರ ಸಾಹಿತ್ಯ ದಾರಿಗೆ ಸುಮಾರ್ಗವಾಗಿದೆ. ೯ನೇ ಶತಮಾನದಲ್ಲಿ ಪಂಪ, ಪೊನ್ನ, ರನ್ನರಂತಹ ಕವಿಗಳು ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಆಗಿ ಹೋದ ವಚನಕಾರರು ಇಲ್ಲಿನ ಸತ್ವವನ್ನು ಹೀರಿ ಕ್ರಾಂತಿಯನ್ನು ಮಾಡಿ ವಚನ ಸಾಹಿತ್ಯವನ್ನೇ ಉತುಂಗ ಶಿಖರಕ್ಕೆ ಕೊಂಡೊಯ್ದರು. ಹರಿಹರ, ರಾಘವಾಂಕ, ಚಾಮರಸರಂತಹ ದಿಗ್ಗಜ ಕವಿಗಳು ಕನ್ನಡ ಸಾಹಿತ್ಯ ಬೆಳಗಿಸಿ ಹಸನ ಮಾಡಿದರು. ಹೀಗೆ ಬೆಳೆದು ಬಂದ ಕರ್ನಾಟಕ ಏಕೀಕರಣಗೊಂಡು ಮದ್ರಾಸ್ ಕರ್ನಾಟಕ, ಹೈದ್ರಾಬಾದ್ ಕರ್ನಾಟಕ, ಬಾಂಬೇ ಕರ್ನಾಟಕ ಎಂದು ಭಾಗವಾಯಿತು. ಈ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಶಿಖರಕ್ಕೆ ಇರುವ ಜಿಲ್ಲೆಯೇ ಬೀದರ.

ಬೀದರ ಜಿಲ್ಲೆಯು ಉತ್ತರ ಕರ್ನಾಟಕದ ತುತ್ತತುದಿಗಿರುವ ಏಕೈಕ ಪುಟ್ಟ ಜಿಲ್ಲೆ. ಅಟ್ಟಳೇನಾಡು, ಕಲ್ಯಾಣನಾಡು ಎನಿಸಿಕೊಂಡಿರುವ ಆರ್ಥಿಕ ಪ್ರಗತಿಯಲ್ಲಿ ಹಿಂದುಳಿದರೂ ಸಂಸ್ಕೃತಿ ಮತ್ತು ಸಾಹಿತ್ಯಿಕ ರಂಗಗಳಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ.

ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವಂತೆ ಇದರ ವೈಶಿಷ್ಟ್ಯ ಆಗಾಧವಾದದ್ದು. ಗಂಡು ಮೇಟ್ಟಿದ ನೆಲ, ಕೆಂಪು ಭೂಮಿಯ ಪ್ರದೇಶ, ಖಿಚಡಿ ಭಾಷೆಯ ಜನಾಂಗಗಳ ಸಂಗಮ. ಈ ಎಲ್ಲವು ಇಲ್ಲಿ ವೈವಿಧ್ಯಮಯ, ವಿಶಿಷ್ಟತೆಯನ್ನು ಕಾಣಿಸುತ್ತದೆ. ಶರಣರ ಪ್ರಭಾವದಿಂದ ಪ್ರಭಾವಿತಗೊಂಡ ಜನತೆ ತುಂಬ ವಿನಯಶೀಲರು, ಸೀದಾ-ಸಾದಾ ಸುವಿಹಾರಿಗಳಾಗಿದ್ದಾರೆ. ಅಂತೆಯೇ ಈ ಪ್ರದೇಶದ ವರ್ಣನೆ ಶರಣರ ವಚನಗಳಲ್ಲಿ ದಾಖಲಾಗಿದೆ.

"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆಱೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು
ತೊಳಗಿ ಬೆಳಗುತ್ತಿದ್ದಿತಯ್ಯಾ (ಅಸಂಖ್ಯಾತ) ಶಿವನ ಪ್ರತಾಪ
ಆ ಬೆಳಗಿನೊಳಗೆ ಬಪ್ಪುತ್ತಿರ್ದರಯ್ಯಾ ಅಸಂಖ್ಯಾತ ಭಕ್ತಗಣಂಗಳು
ಶಿವಭಕ್ತನಿರ್ದ ಕ್ಷೇತ್ರ ಅವಿಮುಕ್ತಯೆಂಬುದು ಹುಸಿಯೆ?
ಶಿವಭಕ್ತನಿರ್ದ ದೇಶ ಪಾವನವೆಂಬುದು ಹುಸಿಯೆ?
ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯರು
ಸಂಗನ ಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ"

(ಡಾ. ಬಸವರಾಜ ಸಬರದ:೧೯೮೨:೧)

ಪ್ರಭುದೇವರು ಸಿದ್ಧರಾಮನಿಗೆ ಭವ್ಯ ಕಲ್ಯಾಣ ನಾಡಿನ ಬಗ್ಗೆ ಪರಿಚಯ ಮಾಡಿಕೊಡುವ ಪ್ರಭುದೇವರ ವಚನ ಎಷ್ಟು ಒಳಹೊಕ್ಕಿ ನೋಡಿದರೇ ಅಷ್ಟು ಅರ್ಥವನ್ನು ವೈವಿಧ್ಯಮಯವಾಗಿ ಕಂಡುಬರುತ್ತದೆ. ಸಂಗನ ಬಸವನ ಮಹಿಮೆ ನಡೆದದ್ದು ೧೨ನೇ ಶತಮಾನದಲ್ಲಿ ಅದಕ್ಕೆ ಹೆಸರಾಂತ ಕ್ರಾಂತಿ ಭೂಮಿ, ಪವಿತ್ರ ಕ್ಷೇತ್ರ ಎಂದು ಹೆಸರುವಾಸಿಯಾಗಿದೆ. ಹೀಗಾಗಿ ಜಿಲ್ಲೆ ಶತಶತಮಾನಗಳ ಭವ್ಯ ಸಂಸ್ಕೃತಿಯನ್ನು ಹೊತ್ತು ನಿಂತಿದೆ.

ಕಲ್ಯಾಣ ಚಾಲುಕ್ಯರ ೬ನೇ ಅರಸನಾದ ವಿಕ್ರಮಾದಿತ್ಯನ ಘನ ಆಳ್ವಿಕೆಯಲ್ಲಿ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ತುಂಬ ವೈಭವದಿಂದ ಕೂಡಿದ ರಾಜಧಾನಿಯಾಗಿತ್ತು. ಆದಿಕಾಲದಿಂದ ಭಾರತದ ಅತ್ಯಂತ ಮಹತ್ವದ ಕೇಂದ್ರವಾಗಿ ಮೆರೆದ ನಾಡು ಕಲ್ಯಾಣ ನಾಡು. ಇವರ

ಸಾಮ್ರಾಜ್ಯದ ತುಂಬ ಶಾಂತಿ ಸಮೃದ್ಧಿ ನೆಲೆಸಿರುವುದರ ಜೊತೆಗೆ ಸುಸಂಘಟಿತ ಆಡಳಿತ ವ್ಯವಸ್ಥೆಯನ್ನು ಒದಗಿಸಿದ ಶ್ರೇಯಸ್ಸು ೬ನೇ ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. ಇವನ ಆಶ್ರಯವನ್ನು ಹೊಂದಿದ ಕವಿ ಬಿಲ್ಹಣ ಹಾಗೂ ವಿಜ್ಞಾನೇಶ್ವರು ತಮ್ಮ ಕೃತಿಯಲ್ಲಿ ಕಲ್ಯಾಣವನ್ನು ಮನಸಾರೆ ಹೊಗಳಿದ್ದಾರೆ. ಬಿಲ್ಹಣನ ಪ್ರಕಾರ "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೆ ಕಲ್ಯಾಣ ಕಲ್ಪಪುರಂ"(ಸಿಂಪಿ ವೀರೇಂದ್ರ:೧೯೯:೨) ಎಂದು ಹೊಗಳಿದ್ದಾರೆ. ಕಲ್ಯಾಣ ನಾಡಿನ ಐಸಿರಿ ಅಲ್ಲಿನ ಭವ್ಯ ಸಂಸ್ಕೃತಿ ಹಾಗೂ ಜನ ಮತ್ತು ಕಲ್ಯಾಣವನ್ನು ಸಾಕ್ಷತ್ ಕೈಲಾಸವೆಂದು, ಗುಮ್ಮಳಪೂರದ ಸಿದ್ದಲಿಂಗದೇವರು ತಮ್ಮ ಶೂನ್ಯ ಸಂಪಾದನೆಯಲ್ಲಿ ಬಣ್ಣಿಸಿದ್ದಾರೆ. ಡಾ. ಆರ್.ಸಿ. ಹಿರೇಮಠರು ಸಂಪಾದಿಸಿರುವ ಗುಮ್ಮಳಪೂರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆಯ ೧೧೬ನೆಯ ಪುಟದ ಶಾಸನದಲ್ಲಿನ ಚನ್ನಬಸವಣ್ಣನವರ ವಚನದಲ್ಲಿ ಕಲ್ಯಾಣದ ವಿಸ್ತೀರ್ಣ, ಶಿವಾಲಯಗಳು, ದಾಸೋಹದ ಮಠಗಳು ಮತ್ತು ಬಸವಣ್ಣನವರ ಮಹಿಮೆ ಉಲ್ಲೇಖಿತವಾಗಿದೆ. ಅಲ್ಲದೆ ಕಲ್ಯಾಣದನಾಡು ಮಿಡಿದು ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತು, ಲೋಕದೊಳಗೆ ಕೈಲಾಸವೆನಿಸಿತ್ತು, ಎನ್ನವುದಲ್ಲದೇ ಕಲ್ಯಾಣದ ದರ್ಶನ ಮಾಡಿದರೆ ಪಾಪ ಪರಿಹಾರವಾಗುತ್ತದೆ. ಇದರ ಮಹಿಮೆ ಕೇಳಿದರೆ ಮೋಕ್ಷ ಲಭಿಸುತ್ತದೆ.(ಸಿಂಪಿ ವೀರೇಂದ್ರ:೧೯೯:IX) ಎಂದು ವಿವರಿಸಲಾಗಿದೆ. ನಿಜವಾಗಲೂ ಜಿಲ್ಲೆ ಮೇಲಿನ ವರ್ಣನೆಗೆ ಇದು ಸಾಕ್ಷಿಯಾಗಿದೆ. ಇಷ್ಟೊಂದು ಇತಿಹಾಸವನ್ನೊಳಗೊಂಡ ಜಿಲ್ಲೆ ಕಲೆ, ಸಾಹಿತ್ಯ, ವಾಸ್ತುಶಿಲ್ಪ ಹಾಗೂ ಸಂಗೀತ ಇತ್ಯಾದಿಗಳಲ್ಲೂ ಎತ್ತಿದ ಕೈ ಎನ್ನಿಸಿಕೊಂಡಿದೆ.

## ೧. ಬೀದರಿನ ಹೆಸರು

ಬೀದರಿಗೆ ಬೀದರ ಎಂಬ ಹೆಸರು ಬಂದದ್ದು ಅಷ್ಟು ಸುಲಭವಲ್ಲ. ಹಲವಾರು ಗ್ರಂಥಗಳಲ್ಲಿ ಆಯಾ ಹೆಸರುಗಳಿಂದ ಮಾರ್ಪಾಟಾಗಿದ್ದು ಅಷ್ಟೇ ವೈಶಿಷ್ಟ್ಯಪೂರ್ಣವಾದದ್ದು. ಬೀದರ ಎಂಬ ಈ ಮೂರು ಅಕ್ಷರಗಳು ಹಲವಾರು ಅಕ್ಷರಗಳಿಂದ ಕರೆಯಿಸಿಕೊಂಡು ಪ್ರಸ್ತುತತೆಗೆ ಬೀದರ ಎಂದಾಗಿದೆ.

ಬೀದರ ಎಂಬ ಊರಿಗೆ ವಿದರ್ಭ ಎಂಬುವುದು ಹೋಲುವುದರಿಂದ ಮಹಾಭಾರತದಲ್ಲಿ ಬರುವ ವಿದುರನಗರವೇ ಬೀದರವಾಗಿರಬೇಕೆಂದು ಒಂದು ಊಹೆಯಾದರೆ, ನಂದಲಾಲ ಡೇ ಅವರ ಪ್ರಕಾರ ವಿದರ್ಭ ಅರಸನು ಪೌರಾಣಿಕ ಕಾಲದಲ್ಲಿನ ಭೀಷ್ಮಕನು ಶ್ರೀ ಕೃಷ್ಣನ ಮದುವೆಯಾದದ್ದು ಇತನ ಮಗಳಾದ ರುಕ್ಮಿಣಿಯನು ಎನ್ನುತ್ತಾರೆ(ಸಿಂಪಿ ವೀರೇಂದ್ರ:೧೯೯:೪) ಮುಂದೆ ಈ ವಿದರ್ಭ ಪದವು ಬಳಸುತ್ತಾ ಹಿಂದಿನ ನಗರ ಭೋಜಕತಪೂರ ಇವು ವಿದರ್ಭದ

ಎರಡು ರಾಜಧಾನಿಗಳು ಕುಂದಿನ ನಗರವೇ ಇಂದಿನ ಬೀದರ ಎನ್ನುವುದು ನಂದಲಾಲ ಡೇ ಅವರ ಅಭಿಪ್ರಾಯ. ವಿದರ್ಭದ ಮೂಲ ನಿವಾಸಿಗಳೆಂದು ವಿಚಾರಿಸಿದರೆ ಭೋಜರು. ಇವರನ್ನು ವಶಕ್ಕೆ ತೆಗೆದುಕೊಂಡವರು ಶಾಂತವಾಹನರು, ಅಂದರೆ ಬೀದರಕ್ಕೆ ಹಿಂದಿನ ಹೆಸರು ವಿದರ್ಭ ಎಂದು ಗುರುತಿಸಿರಬೇಕು. ಮತ್ತೇ ನಳದಮಯಂತಿರ ಕಥೆಯಲ್ಲಿ ವಿದುರ ಎಂಬ ರಾಜ ಕಾಣಿಸಿಕೊಂಡಿದ್ದರಿಂದ ಆ ರಾಜನೇ ಈ ಬೀದರ ಸ್ಥಾಪಿಸಿರಬೇಕೆಂದು ಇನ್ನೊಂದು ಊಹೆಯಾಗಿದೆ. ಅಲ್ಲದೇ ಹಿಂದೆ ಈ ಪ್ರದೇಶವು ದಟ್ಟವಾದ ಬಿದಿರುಗಳಿಂದ ಕೂಡಿತು. ಹೀಗಾಗಿ ಈ ಬಿದಿರು ಪದವೇ ಮುಂದೆ ಬೀದರ ಆಯಿತ್ತೆಂದು ವಾದಿಸಲಾಗಿದೆ. ಆದರೂ ಕೆಲಕಾಲದವರೆಗೆ ಇದರ ಹೆಸರು 'ವೇದರ್' ಎಂದಿದ್ದು ದಿನ ಬಳಕೆಯಲ್ಲಿ ಶಬ್ದರೂಪಾಂತರ ದಿಂದ ಬೀದರ್ ಆಯಿತ್ತೆಂದು ಹೇಳಿರುವುದಕ್ಕೆ ಕೆಲವು ಗ್ರಂಥಗಳನ್ನು ನೋಡಬಹುದಾಗಿದೆ. ೧೫ನೇ ಶತಮಾನದಲ್ಲಿ ರಚನೆಗೊಂಡಿರುವ ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿಯ' ೩೮ನೇ ಸಂದಿಯಲ್ಲಿ ಹಾಗೂ ೧೭ನೇ ಶತಮಾನದಲ್ಲಿ ಚನ್ನಮಲ್ಲೇಶ್ವರರಿಂದ ಬರೆಯಲ್ಪಟ್ಟ 'ವೀರಸಂಗಯ್ಯನ ಚೌಪದಿಯಲ್ಲಿ' ಬಿದಿರೂರು ಎಂಬ ಪದ ಬಳಸಲ್ಪಟ್ಟಿರುವುದರಿಂದ ಬಿದರೂರು ಶಬ್ದವೇ ಮುಂದೆ ಬೀದರ್ ಎಂದು ಶಬ್ದರೂಪಾಂತರ ಗೊಂಡಿದೆ ಎನ್ನಲಾಗಿದೆ.

ಕ್ರಿ. ಶ. ೧೫೨೫ರಲ್ಲಿ ನಂಜುಂಡ ಕವಿಯಿಂದ ರಚಿಸಲ್ಪಟ್ಟಿರುವ 'ರಾಮನಾಥ ಚರಿತ್ರೆಯಲ್ಲಿ' ಮೊದಲನೇ ಹೆಸರೇ ಬೀದಿರೆ ಎಂದು ವರ್ಣಿತವಾಗಿದೆ. (ಭಂಡೆ ವೈಜಿನಾಥ:೧೯೯೦:೯೧) ಜೈಸಿಂಹ ಸರಸ್ವತಿಯನ್ನು ಕುರಿತು ಮರಾಠಿಯಲ್ಲಿ ಗುರುಚರಿತ್ರ ಎಂಬ ಕೃತಿಯನ್ನು ರಚಿಸಿದ ಗಂಗಾಧರ ಬೀದರನ್ನು 'ವಿದುರಾನಗರ' ವೆಂದು ಕರೆದಿದ್ದಾನೆ(ಅವರೇ:೯೧). ಬಹುಮನಿ ಸುಲ್ತಾನರ ಕಾಲದಲ್ಲಿ ಇದಕ್ಕೆ 'ಮೊಹಮ್ಮದಾಬಾದ ಬೀದರ' ಎಂದು ಕರೆಯಲಾಗಿದೆ. ಆದ್ದರಿಂದ ಹೋದ ದಶಕದಲ್ಲಿ ಬೀದರಕ್ಕೆ 'ಎಮ್. ಬೀದರ' ಎಂದೇ ಕರೆಯುತ್ತಿದ್ದರು. ತದನಂತರ ಮೊಗಲರ ದೊರೆ ಔರಂಗಜೇಬನು ಇದಕ್ಕೆ ಜಫರಾಬಾದ್ ಎಂದೇ ಕರೆಯುತ್ತಿದ್ದನು. ಒಟ್ಟಿನಲ್ಲಿ ಬಿದಿರೆ - ಬಿದಿರುಪುರ - ಬಿದಿರೂರು - ಬೀದಿರೆ - ಬೀದರ ಎಂದು ಪ್ರಸ್ತುತತೆಗೆ ಬಂದಿದೆ. ಬೀದರ ಶಬ್ದದ ಸ್ಪಷ್ಟತೆಯನ್ನು ಯಾವ ಶಾಸನಗಳಲ್ಲಿ ಕಂಡು ಬರುವುದಿಲ. ಇದು ಜಿಲ್ಲೆಯ ಗಮನಾರ್ಹ ಸಂಗತಿಯಾಗಿದೆ.

## ೨. ಭೌಗೋಳಿಕ ಸ್ಥಾನಮಾನ

ಜಿಲ್ಲೆಯು ಔರಾದ, ಭಾಲ್ಕಿ, ಬಸವಕಲ್ಯಾಣ, ಹುಮನಾಬಾದ ಮತ್ತು ಬೀದರ ಎಂಬ ಐದು ತಾಲೂಕುಗಳಿವೆ. ೧೩°-೪೫ ಹಾಗೂ ೧೮°-೨೫ ಉತ್ತರ ಅಕ್ಷಾಂಶ ೭೬°-೪೨ ಹಾಗೂ

೭೭°-೩೯° ಪೂರ್ವ ರೇಖಾಂಶಗಳ ಮಧ್ಯ ತನ್ನ ಸ್ಥಾನ ಹೊಂದಿದೆ. ಜಿಲ್ಲೆಯ ವಿಸ್ತೀರ್ಣ ೫.೪೪೮ ಚದುರ ಕಿಲೋಮೀಟರ್ ಇದೆ. ಪೂರ್ವಕ್ಕೆ ಆಂಧ್ರಪ್ರದೇಶದ, ನಿಜಾಮಬಾದ ಮತ್ತು ಮೇದಕ ಜಿಲ್ಲೆ ಹೊಂದಿಕೊಂಡಿವೆ. ಉತ್ತರ ಮತ್ತು ಪಶ್ಚಿಮ ಭಾಗಗಳಿಗೆ ಕ್ರಮವಾಗಿ ಮಹಾರಾಷ್ಟ್ರದ, ನಾಂದೇಡ, ಉಸ್ಮಾನಾಬಾದ, ಸೋಲಾಪೂರ ಜಿಲ್ಲೆಗಳಿವೆ. ದಕ್ಷಿಣಕ್ಕೆ ಗುಲ್ಬರ್ಗಾ ಜಿಲ್ಲೆ ಹೊಂದಿದೆ.

ಬೀದರ್ ಜಿಲ್ಲೆಯ ಜನಸಂಖ್ಯೆ ೧೯೯೧ನೇಯ ಜನಗಣತಿಯ ಪ್ರಕಾರ ೧೨೫೫, ೭೯೯. ಜಿಲ್ಲೆಯಲ್ಲಿ ೬೨೩ ಹಳ್ಳಿಗಳಿವೆ. ಜಿಲ್ಲೆಯ ಕೆಲಭಾಗ ಕೆಂಪು ಮಣ್ಣಿನ ಭೂಮಿಯಾಗಿದ್ದರೆ ಉಳಿದರ್ಧ ಕಪ್ಪುಮಣ್ಣಿನದು. ಜಿಲ್ಲೆಯ ದಕ್ಷಿಣ ಭಾಗದಲ್ಲಿನ ಭೂಮಿಯು ಕೆಂಪು ಪ್ರದೇಶವಿರುವುದರಿಂದ ಇದಕ್ಕೆ ಜನರು ಆಡುನುಡಿಯಲ್ಲಿ 'ಧರಿಪಟ್ಟಿ' ಎನ್ನುವುರು. ಉತ್ತರ ಭಾಗಕ್ಕೆ ಬರುವ ಭೂಮಿ ಕಪ್ಪು ಇರುವುದರಿಂದ ಇದಕ್ಕೆ 'ಘಟವಾಡಿ' ಎಂದು ಕರೆಯುವುದುಂಟು. ಕಾರಂಜಾ ಮತ್ತು ಮಾಂಜ್ರಾ ನದಿಗಳ ಮಧ್ಯೆ ಬರುವ ಪ್ರದೇಶವನ್ನು 'ತೊರೆಪಟ್ಟಿ' ಯೆಂದು ಕರೆಯುತ್ತಾರೆ. ಇದು ಜಿಲ್ಲೆಯ ಮಧ್ಯಕ್ಕೆ ಪೂರ್ವ, ಪಶ್ಚಿಮವಾಗಿ ಹರಡಿಕೊಂಡಿದೆ. ಕೆಂಪು ಮಣ್ಣಿನ ಎತ್ತರದ ಧರಿ ಪಟ್ಟಿಯಲ್ಲಿ ಬಿದ್ದ ನೀರು ಉತ್ತರವಾಗಿ ಹರಿಯುವ ಗೋದಾವರಿ ನದಿಗೆ ಸೇರಿದರೆ, ದಕ್ಷಿಣದ ಕೆಳ ಪ್ರದೇಶದಲ್ಲಿ ಹರಿಯುವ ನೀರು ಕೃಷ್ಣ ನದಿಗೆ ಸೇರುತ್ತದೆ. ಈ ಪ್ರದೇಶವು ಸಮುದ್ರ ಪಾತಾಳದಿಂದ ಸುಮಾರು ೨೨೦೬ ರಿಂದ ೬೧೦ ಮೀಟರ ಎತ್ತರದಲ್ಲಿದೆ. ಕಾರಂಜಾ ಮತ್ತು ಮಾಂಜರಾಗಳು ಈ ಜಿಲ್ಲೆಯ ದೊಡ್ಡ ನದಿಗಳು. ಮಲ್ಲಾಮಾರಿ, ಚುಳಕಿ, ಮಾಣಿಕನಗರ, ಮಧುರಾ, ಮಂಗನಾಲ ಹಾಗೂ ಗಂಡೋರಿ ನಾಲೆಗಳು ಇನ್ನಿತರ ನಾಲೆಗಳು. ಈ ಪ್ರದೇಶದ ಪ್ರವಾಹಗಳಾಗಿವೆ. ಮಾಂಜ್ರಾ ನದಿಯು ಮಹಾರಾಷ್ಟ್ರದ ಅಹಮ್ಮದ್‌ನಗರ ಜಿಲ್ಲೆಯ ಗೌರವಾಡಿ ಸಮೀಪದ ಬಾಲಘಟ್ಟ ಪ್ರದೇಶದಲ್ಲಿ ಹುಟ್ಟಿ ಈ ನದಿಗೆ ಕೇಂದ್ರ ಬಿಂದುವಾದ ಬೀದರ ಜಿಲ್ಲೆಯ ಔರಾದ ಮತ್ತು ಭಾಲ್ಕಿ ತಾಲೂಕಾಗಳ ಪ್ರದೇಶದಿಂದ ಹಾಯ್ದು ಆಂಧ್ರ ಪ್ರದೇಶದಿಂದ ನಿಜಾಮಬಾದ ಜಿಲ್ಲೆಯ ಬೋಧನ್ ತಾಲೂಕಿನ ಕಾಕುರ್ತಿಯಿಂದ ಗೋದಾವರಿ ನದಿಯನ್ನು ಸೇರುತ್ತದೆ. ಇದರ ಉಪನದಿಯಾದ ಕಾರಂಜಾ ನದಿಯು ಆಂಧ್ರಪ್ರದೇಶದ ಮೇದಕ ಜಿಲ್ಲೆಯ ಜಹೀರಾಬಾದ ತಾಲೂಕಿನ ಕೋಹಿರ್ ಹಳ್ಳಿಯಲ್ಲಿ ಹುಟ್ಟಿ ದಕ್ಷಿಣ ಪೂರ್ವದಿಂದ ಉತ್ತರ ಪಶ್ಚಿಮ ಮುಖವಾಗಿ ಹರಿದು ಭಂಗೂರದ ಹತ್ತಿರದಿಂದ ಬೀದರ ಜಿಲ್ಲೆಯನ್ನು ಸೇರುವುದು. ಕೊನೆಗೆ ಔರಾದ ತಾಲೂಕಿನಿಂದ ಭಾಲ್ಕಿ ತಾಲೂಕಿನ ನಾರಂದಸಂಗಮ (ಕೂಡ್ಲಿ) ಹತ್ತಿರವಿರುವ ಮಾಂಜ್ರಾ ನದಿಗೆ ಸೇರುತ್ತದೆ. ಈ

ನದಿಯಲ್ಲಿ ಅನೇಕ ಜಂಗಮರು ಸ್ನಾನಾಧಿಗಳನ್ನು ಮುಗಿಸಿಕೊಂಡು ಜಂಗಮ ಕಾಯಕಕ್ಕೆ ಹೋಗುತ್ತಿದ್ದರು ಎನ್ನುವ ವಾಡಿಕೆಯುಂಟು.

## ೩. ಐತಿಹಾಸಿಕ ಮತ್ತು ರಾಜಕೀಯ ಹಿನ್ನೆಲೆ

ಕ್ರಿ.ಪೂ. ೩ನೇ ಶತಮಾನದಲ್ಲಿ ಇದೇ ದಕ್ಷಿಣ ಭಾಗವು ಮೌರ್ಯ ವಂಶದ ಅಶೋಕ ಸಾಮ್ರಾಟನಿಂದ ಆಕ್ರಮಿಸಲ್ಪಟ್ಟಿತ್ತು. ಕಾಲಾಂತರಕ್ಕೆ ಶಾತವಾಹನ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಾಕತೀಯರು, ಖಿಲ್ಜಿ, ಬಹಮನಿ, ಬರೀದಶಾಹಿ, ಮೊಗಲ್ ಹಾಗೂ ಹೈದ್ರಾಬಾದ್ ನಿಜಾಮ ಇವರೆಲ್ಲರ ಆಡಳಿತಕ್ಕೊಳಪಟ್ಟಿದೆ. ಹೀಗಾಗಿ ಇದರ ಇತಿಹಾಸ ಅತ್ಯಂತ ಪ್ರಸಿದ್ಧ ವಾಗಿದೆ. ೬ನೇ ಶತಮಾನದಲ್ಲಿ ಮೌರ್ಯ ಹಾಗೂ ಶಾತವಾಹನರು ಆಳುತ್ತಿದ್ದರು. ತದನಂತರ ಎಂಟನೇ ಶತಮಾನದಲ್ಲಿ ರಾಷ್ಟ್ರಕೂಟರು ತಮ್ಮ ಹತೋಟಿಯಲ್ಲಿ ತೆಗೆದುಕೊಂಡರು. ಈ ವಂಶದ ದೊರೆಗಳು ಜಿಲ್ಲೆಯನ್ನು ಸಂಪದ್ಭರಿತವನ್ನಾಗಿ ಮಾಡಿದರು. ಇವರ ಆಳ್ವಿಕೆಯಲ್ಲಿ ಕನ್ನಡ ತಲೆ ಎತ್ತಿ ನಿಲ್ಲಲು ಕಾರಣವಾಯಿತು. ರಾಷ್ಟ್ರಕೂಟರು ಮಾನ್ಯಖೇಡವನ್ನು ( ಇಂದಿನ ಮಳಖೇಡ) ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಕಡೆಗೆ ಹೆಚ್ಚಿನ ಆಸಕ್ತಿ ವಹಿಸಿದ್ದರು. ಆದ್ದರಿಂದಲೇ ಇವರು ಸ್ವತ: ಕಲಾರಸಿಕರಾಗಿದ್ದರೆಂದು ತಿಳಿದುಬರುತ್ತದೆ.

ತದನಂತರ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿತು. ಈ ದೊರೆಗಳು ಜಿಲ್ಲೆಗೆ ಇತಿಹಾಸ ಪುಟಗಳಲ್ಲಿ ವಿಶೇಷ ಅರ್ಥವನ್ನು ಕಲ್ಪಿಸಿಕೊಟ್ಟರು. ಕ್ರಿ.ಶ. ೧೦೭೭ ರಿಂದ ೧೧೨೭ರ ಅವಧಿಯಲ್ಲಿ ಕಲ್ಯಾಣ ಚಾಲುಕ್ಯರ ಚಕ್ರವರ್ತಿ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಈ ಜಿಲ್ಲೆಯು ಎಲ್ಲಾ ರೀತಿಯಿಂದಲೂ ಸಮೃದ್ಧಿ ಕಂಡಿತು. ನಾಡಿನ ಘನತೆ ಗೌರವಗಳು ಹೆಚ್ಚಾದವು. ದೊರೆ ಜನಹಿತ ಕಾರ್ಯಮಾಡುವಲ್ಲಿ ಪ್ರಸಿದ್ಧಿ ಹೊಂದಿದನು. ವ್ಯಾಪಾರ, ಉದ್ಯೋಗ ಮತ್ತು ಒಕ್ಕಲುತನಕ್ಕಾಗಿ ಕಳಕಳಿವುಳ್ಳವನಾಗಿದ್ದನು. ಅಂತೆಯೇ ಕಲ್ಯಾಣದ ಸುತ್ತ ಅನೇಕ ವ್ಯಾಪಾರದ ಕೇಂದ್ರಗಳಾಗಿದ್ದವು ಎಂಬುದನ್ನು ತಿಳಿದುಬರುತ್ತದೆ(ಆವರೇ:೮೯) ಇಷ್ಟೇ ಅಲ್ಲದೇ ಇದರ ವ್ಯಾಪ್ತಿಯು ಮಹಾರಾಷ್ಟ್ರ ಹಾಗೂ ಕರ್ನಾಟಕದ ಇನ್ನಿತರ ಭಾಗದ ಸರಕುದಾರರು ಕಲ್ಯಾಣಕ್ಕೆ ವ್ಯಾಪಾರಕ್ಕೆಂದು ಬರುತ್ತಿದ್ದರು. ಸಾಹಿತ್ಯ, ಕಲೆ, ಸಂಸ್ಕೃತಿ ಹಾಗೂ ಕವಿಗಳ ಅಭಿಮಾನಿಯಾಗಿದ್ದ ಅದಕ್ಕೆ ೬ನೇ ವಿಕ್ರಮಾದಿತ್ಯನ ಕಾಲ, ರಾಮರಾಜ ಪ್ರಜೆಗಳ ಅಭ್ಯುದಯದ ಕಾಲವೆಂದು ಗೋರಟಾದಲ್ಲಿ ಸಿಕ್ಕಿದ ಶಾಸನದಿಂದ ಕಂಡುಕೊಳ್ಳಬಹುದಾಗಿದೆ. ರಾಜ್ಯದಲ್ಲಿ ಹಲವಾರು

ಪಂಡಿತರಿಗೆ, ಕಲಾವಿದರಿಗೆ ಆಶ್ರಯದಾತನಾಗಿದ್ದನು. ಕಾಶ್ಮೀರದ ಬಿಲ್ಹಣನೆಂಬ ಪ್ರಸಿದ್ಧ ಕವಿ ಆರನೆಯ ವಿಕ್ರಮಾದಿತ್ಯನ ಕುರಿತು ಸಂಸ್ಕೃತದಲ್ಲಿ 'ವಿಕ್ರಮಾಂಕ ದೇವ ಚರಿತಂ' ಎಂಬ ಚರಿತ್ರ ಕಾವ್ಯವನ್ನು ರಚಿಸಿದ್ದಾನೆ. ಇವನ ಆಳ್ವಿಕೆ ತುಂಬ ಮಹತ್ವವನ್ನು ಪಡೆದುಕೊಂಡಿತು. ಅಂತೆಯೇ 'ಕಲ್ಯಾಣ ನಗರದಲ್ಲಿನ ಜನರು ರಾತ್ರಿಯಲ್ಲಿಯು ಮನೆಯ ಬಾಗಿಲು ತೆರೆದಿಡುತ್ತಿದ್ದರೆಂದು ತಿಳಿಯುತ್ತದೆ'(ಎಸ್. ಆಲ್.ಕುಲಕರ್ಣಿ: ೧೯೭೧:೩) ವಿಜ್ಞಾನೇಶ್ವರ ಪಂಡಿತನ 'ಮಿತಾಕ್ಷರ ಸಂಗೀತ' ದಲ್ಲಿ ಈ ಭೂತಳದಲ್ಲಿ ಕಲ್ಯಾಣಕ್ಕೆ ಸಮನಾದ ಪುರವು ಹಿಂದೆ ಇರಲೂ ಇಲ್ಲ ಮುಂದೆ ಇರಲು ಸಾಧ್ಯವಿಲ್ಲ ಎಂದು ಕಲ್ಯಾಣವು ವರ್ಣಿತವಾಗಿದೆ. ಮೇಲಿನ ಉಲ್ಲೇಖಗಳನ್ನು ಆಧರಿಸಿ ನೋಡಿದರೆ ಕಲ್ಯಾಣವು ಸುವ್ಯವಸ್ಥಿತವಾದ ಆಡಳಿತದಿಂದ ಆಲ್ಲಿಯ ಪ್ರಜೆಗಳು ಸುಗಮವಾಗಿ ಜೀವನ ನಡೆಸುತ್ತಿದ್ದರು. ಕಲ್ಯಾಣದ ಸುತ್ತಮುತ್ತ ಅನೇಕ ಕೋಟೆ, ಕೆರೆ, ಮಂದಿರಗಳು ನಿರ್ಮಾಣಗೊಂಡವು. ಏನೇ ಇರಲಿ ೬ನೇ ವಿಕ್ರಮಾದಿತ್ಯನ ಆಳ್ವಿಕೆಯು ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತದ್ದಾಗಿದೆ.

ಕ್ರಿ.ಶ. ೧೧೫೦ರ ಕಲ್ಯಾಣ ಚಾಲುಕ್ಯರ ಆಳ್ವಿಕೆ ಕೊನೆಗೊಳ್ಳುತ್ತಾ ಬಂತು. ಇವರ ರಾಜಕೀಯಕ್ಕೆ ಮೆರಗನ್ನು ನೀಡಿದ ಅರಸ ಬಿಜ್ಜಳ. ಈ ಕಲಚೂರಿಗಳು ಕೆಲವೇ ವರ್ಷಗಳು ರಾಜ್ಯವಾಳಿದರು. ನಾಡಿನಲ್ಲಿ ಶಾಂತಿಯಾಗಲಿ ಹಾಗೂ ಸ್ಥಿರತೆಯಾಗಲಿ ಇರಲಿಲ್ಲ. ಆದರೂ ಕರ್ನಾಟಕ ಚರಿತ್ರೆಯಲ್ಲಿ ಅತ್ಯಂತ ಮಹತ್ವವನ್ನು ಪಡೆದಿದೆ. ರಾಜ್ಯದಲ್ಲಿ ಭಾಗವಿಭಾಗವನ್ನು ಮಾಡಿಕೊಂಡು ಕೆಲಮಟ್ಟಿಗೆ ಆಳಿದರು. ಅನೇಕ ಬಿರುದು ಪಡೆದಿದ್ದ, ಕಲಚೂರಿ ವಂಶಕ್ಕೆ ಹಾಗೂ ಬಿಜ್ಜಳ ಅರಸನಿಗೆ ಇಡೀ ಕರ್ನಾಟಕದಲ್ಲಿ ಹೆಸರು ಬಂದದ್ದು ಇವನ ಮಂತ್ರಿ ಬಸವೇಶ್ವರರಿಂದ ಹಾಗೂ ಬಸವಾದಿ ಶರಣರಿಂದ ಬಸವಾದಿ ಶರಣರಿಂದ ಅಷ್ಟೇ ಅಲ್ಲದೇ ಇವರಿಂದ ಈ ಪ್ರದೇಶಕ್ಕೆ ಹೊಸ ಕಳೆಯನ್ನು ಬಂದಿತು. ಅವರು ಸ್ಥಾಪಿಸಿದ ಅನುಭವ ಮಂಟಪವು ಸಾಹಿತ್ಯ, ಸಾಂಸ್ಕೃತಿಕ ವೈಚಾರಿಕ ತತ್ವಗಳ ವಿಮರ್ಶೆ ಕೇಂದ್ರವಾಗಿತ್ತು. ಮಾನವನ ಧರ್ಮವನ್ನು ತಿಳಿಯುವ ಕಾಲ ಬದುಕಿನ ಮೌಲ್ಯಗಳನ್ನು ಪುನರ್‌ವಿಮರ್ಶೆಯ ಪೂರ್ವ ಕಾಲವಾಯಿತು. ಸಮಾಜ ಹಾಗೂ ಧರ್ಮಕ್ಕೆ ಹೊಸ ವ್ಯಾಖ್ಯಾನ ಬರೆದ ಆಧ್ಯಾತ್ಮಿಕ ಅನುಭವಗಳ ಸುಂದರ ಸಂಗಮ, ಇವೆಲ್ಲದಕ್ಕಿಂತ ಮಿಗಿಲಾದುದು ವಚನ ಸಾಹಿತ್ಯ ನಿರ್ಮಾಣವಾದ ಅಮೃತದ ಕಾಲ ಅದು. ಆದರೆ ದುರ್ದೈವಶಾತ್ ಜಾತಿ ವರ್ಣಶ್ರಮ ಪದ್ಧತಿಗೆ ಅಂಟಿಕೊಂಡಿದ್ದ ಬಿಜ್ಜಳ ಹಾಗೂ ಬಸವಾದಿ ಶರಣರ ಈ ಕಾರ್ಯ ವೈಖರಿಯನ್ನು ಮೆಚ್ಚದೇ ಕ್ರಾಂತಿಯನ್ನು ನಡೆದು ಇದರಲ್ಲಿ ಬಿಜ್ಜಳ ಕಾಲವಾದನೆಂದು ಬಸವಾದಿಶರಣರು ಚಿಲ್ಲಾಪಿಲ್ಲಿಯಾದರೆಂದು ತಿಳಿದು

ಬರುವುದುಂಟು. ಬಸವಾದಿಶರಣರ ಉದಯದಿಂದಲೇ ಕರ್ನಾಟಕದ ಚರಿತ್ರೆಯಲ್ಲಿ ಕಲಚೂರಿಗಳಿಗೆ ಹೆಚ್ಚಿನ ಮಹತ್ವ ಉಂಟಾಯಿತು. ಕಲಚೂರಿಗಳ ನಂತರ ಯಾದವರ ಮತ್ತು ಕಾಕತೀಯರ ಆಳ್ವಿಕೆಗೆ ಜಿಲ್ಲೆಯು ಕೆಲ ಕಾಲ ಒಳಪಟ್ಟಿತು.

ಆ ಮೇಲೆ ಕ್ರಿ.ಶ. ೧೩೨೧ ರಲ್ಲಿ ತುಘಲಕ ವಂಶಸ್ಥರು ದೆಹಲಿಯಲ್ಲಿ ಪಟ್ಟಕ್ಕೆ ಬಂದರು. ಆವಾಗ ಮಹ್ಮದ್ ಬಿನ್ ತುಘಲಕ್ ಬೀದರ ಮೇಲೆ ದಾಳಿಮಾಡಿ ತನ್ನದಾಗಿಸಿಕೊಂಡು ಆಳುತ್ತಿದ್ದನು. ಸುಮಾರು ೧೪ನೇ ಶತಮಾನದಲ್ಲಿ ಸುಲ್ತಾನ ಅಹಮ್ಮದ್ ಶಾಹಾನಿಂದ ಬಹುಮನಿ ರಾಜ್ಯ ಸ್ಥಾಪಿತವಾಯಿತು. ಈತನು ಬಹುಮನಿ ಸುಲ್ತಾನರಲ್ಲಿಯೇ ಸುಪ್ರಸಿದ್ಧ ದೊರೆ. ಈತನ ಕಾಲಕ್ಕೆ ಬೀದರಿನ ಕೋಟೆ ಕೊತ್ತಲಗಳು ನಿರ್ಮಾಣವಾದವು. ಬೀದರಿನ ವೈಶಿಷ್ಟ್ಯವನ್ನು ಈ ಕೋಟೆ ಕೊತ್ತಲಗಳಿಂದಲೇ ಎಂದರೆ ತಪ್ಪಾಗಲಿಕ್ಕಿಲ್ಲ. ಬೀದರಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ಆಯಾಮ ಪಡೆದಿದ್ದ ಇವರ ಕಾಲದಲ್ಲೇ ಎಂದು ಹೇಳಬಹುದು.

ತರುವಾಯ ಸುಲ್ತಾನ ಮೂರನೆಯ ಮಹ್ಮದ್ ಷಾ ಬಹುಮನಿ ರಾಜ್ಯದ ಬಲಾಢ್ಯ ಸುಲ್ತಾನ ಈತನ ಕಾಲದಲ್ಲಿ ಬಹುಮನಿ ರಾಜ್ಯದ ಕೀರ್ತಿ ಎಲ್ಲೆಡೆ ಹಬ್ಬಿತು. ಮಹ್ಮದ ಗವಾನ ಎಂಬುವವನು ಇತನ ಶ್ರೇಷ್ಠ ಮಂತ್ರಿಯಾದ. ಇವರ ಆಳ್ವಿಕೆಯಲ್ಲಿ ಕೋಟೆಗಳು, ಅರಮನೆಗಳು ನಿರ್ಮಾಣವಾದವು. ಮಹ್ಮದಶಾಹನ ಅರಮನೆ ಭೂಮಿಯ ಮೇಲಿನ ಸ್ವರ್ಗವೆಂದೇ ಪ್ರಸಿದ್ಧಿ ಪಡೆಯಿತು.

ಬಹಮನಿ ಸುಲ್ತಾನರ ತರುವಾಯ ಬರೀದಶಾಹಿ ಸುಲ್ತಾನರ ವಂಶಸ್ಥನಾದ ಅಲೀಬರೀದ್ ಶಾಹಿ ತನ್ನ ಆಳ್ವಿಕೆಯನ್ನಾಗಿ ಮಾಡಿಕೊಂಡು ಕೆಲಕಾಲ ರಾಜ್ಯವನ್ನಾಳಿದ ಈ ದೊರೆ ಯಾವುದೇ ಕ್ಷೇತ್ರದಲ್ಲಿ ಸುಧಾರಣೆ ತಂದಿರುವುದು ಹೊಳೆಯುವುದಿಲ್ಲ. ಆದರೆ ಬೀದರ ನಗರದ ಸುತ್ತಮುತ್ತಲೂ ಕೋಟೆ ಮತ್ತು ದ್ವಾರಗಳು ನಿರ್ಮಿಸಿದನು. ಪ್ರಸ್ತುತದಲ್ಲಿ ದ್ವಾರಗಳಿಗೆ ಅಗಸೆಗಳು ಎಂದು ಕರೆಯುವುದುವಂಟು. ಈ ಐದು ದ್ವಾರಗಳು ಇಂದಿಗೂ ಪ್ರೇಕ್ಷಕರನ್ನು ಕೈ ಮಾಡಿ ಕರೆಯುತ್ತವೆ. ಫತ್ತೆದರ್ವಾಜಾ, ದುಲಹನ್ ದರ್ವಾಜಾ, ತಾಳಘಟ್ಟ ದರ್ವಾಜಾ, ಮಂಗಲಪೇಟ್ ದರ್ವಾಜಾ ಹಾಗೂ ಶಾಹಗಂಜ ದರ್ವಾಜ್‌ಗಳು ಮುಖ್ಯವಾಗಿವೆ. ಇವುಗಳ ಹೆಸರಿಗೆ ಒಂದೊಂದು ಹಿನ್ನೆಲೆ ಇರುವುದು ತಿಳಿಯುತ್ತದೆ. ಅದಕ್ಕಾಗಿ ಇವುಗಳ ಬಗೆಗೆ ಆಳವಾಗಿ ಅಧ್ಯಯನ ಮಾಡುವುದು ಸೂಕ್ತವಾಗಿದೆ. ನಂತರ ಇವರ ಪ್ರಾಬಲ್ಯ ಕಡಿಮೆಯಾಗಿ ಬಿಜಾಪೂರ ಆದಿಲ್‌ಶಾಹಿ ಸುಲ್ತಾನರು ಬರೀದ್‌ಶಾಹಿಗಳನ್ನು ಬಿಜಾಪೂರಕ್ಕೆ ಸೇರಿಸಿದರು. ಅನಂತರ ಮೊಗಲ್ ವಂಶದ ಕಟ್ಟ ಕಡೆಯ ಕ್ರೂರಿ ಅರಸನೆನಿಸಿಕೊಂಡ ಔರಂಗಜೇಬನು

೧೬೮೬ರಲ್ಲಿ ವಶಪಡಿಸಿಕೊಂಡನು. ಆಗ ಬೀದರಕ್ಕೆ ಜಫಾರಾಬಾದ ಎಂದು ಹೆಸರಿಟ್ಟನು. ಇವರ ನಂತರ ಜಿಲ್ಲೆ ಕೆಲಕಾಲ ಮರಾಠರ ಮತ್ತು ಪೇಶ್ವೆಯವರ ಆಧೀನದಲ್ಲಿತ್ತು. ೧೯೦೫ ರಿಂದ ೧೯೪೮ ರ ವರೆಗೆ ಹೈದ್ರಾಬಾದ ನಿಜಾಮರ ಆಧೀನಕ್ಕೆ ಸೇರಿತು.

ಇವರೆಲ್ಲರ ತರುವಾಯ ಫ್ರೆಂಚರು ಹಾಗು ಇಂಗ್ಲೀಷರು ಅಲ್ಲದೆ ಹಲವಾರು ವಿದೇಶಿ ಶಕ್ತಿ ಭಾರತವನ್ನು ತನ್ನ ಹತೋಟಿಗೆ ತೆಗೆದುಕೊಂಡುರುವುದು ಸರ್ವವಿಧಿತ. ಇದೆಲ್ಲವುಕ್ಕಿಂತ ಇಂಗ್ಲೀಷರು ಬರಬರುತ್ತಾ ಪ್ರಭಾವಶಾಲಿಗಳಾಗಿ ಕ್ರೈಸ್ತ ಧರ್ಮ ಪ್ರಸಾರ ನಡೆಯಿತು. ಆಂಗ್ಲ ಮಾಧ್ಯಮ ಶಾಲೆ ತೆರೆಲ್ಪಟ್ಟವು. ಭಾರತವು ಪರಕೀಯ ದಾಸ್ಯದಿಂದ ಮುಕ್ತವಾದರೂ ಈ ಪ್ರದೇಶಕ್ಕೆ ನಿಜಾಮರಿಂದ ಬಿಡುಗಡೆಯಾಗಲಿಲ್ಲ. ಹೈದ್ರಾಬಾದ ನಿಜಾಮ ಪಣತೊಟ್ಟು ತನ್ನ ಆಧೀನದಿಂದ ಬಿಡಲಿಲ್ಲ. ಆಗ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಸ್ವಂತ ಬಲದ ಮೇಲೆ ಹೋರಾಡಲು ಮುಂದಾದರು. ಎದೆ ಗುಂದದೆ ಹೋರಾಡಿ ತಮ್ಮ ಜೀವನವೇ ಕಳೆದುಕೊಂಡರು. ಆದಾಗ್ಯೂ ಒಪ್ಪದೇ ದಿನೇ ದಿನೇ ತನ್ನ ವಕ್ರದೃಷ್ಟಿ ತೀವ್ರಗೊಳಿಸಿದ ತತ್ಪರಿಣಾಮವಾಗಿ ಅಂದಿನ ಗೃಹಮಂತ್ರಿ ಸರದಾರ ವಲ್ಲಬಭಾಯಿ ಪಟೇಲ ಸೈನ್ಯ ಸಮೇತ ಆಜ್ಞಾ ಮಾಡಿದಾಗ ಹಲವಾರು ಜೀವಗಳು ನಾಶವಾದವು, ಕುಟುಂಬಗಳು ಚಿಲ್ಲಾಪಿಲ್ಲಿಯಾದವು. ಹೀಗಾಗಿ ಇವರ ಪ್ರಯತ್ನನದ ಫಲದಿಂದ ನಿಜಾಮನ ಕಪಿಮುಷ್ಟಿಯಿಂದ ಸ್ವಾತಂತ್ರ್ಯವಾಗಿ ಅಖಂಡ ಭಾರತದಲ್ಲಿ ವಿಲೀನವಾಯಿತು. ಆದರೆ ಬಸವಕಲ್ಯಾಣ ತಾಲೂಕಿನ ಗೋರ್ಚಾ(ಬಿ) ಗ್ರಾಮದಲ್ಲಿ ರಜಾಕರರ ಹಾವಳಿಯಿಂದ ಅನೇಕ ಹಿಂದು ಜನಗಳನ್ನು ಮತ್ತು ಜಂಗಮರಿಗೆ ಕೊಲೆ ಮಾಡಿ ಅವರ ಆಸ್ತಿ -ಪಾಸ್ತಿಗಳನ್ನು ಲೂಟಿ ಮಾಡಲಾಯಿತು. ಈ ಕಹಿ ಘಟನೆಗೆ 'ರಜಾಕರ ಹಾವಳಿ' ಎಂದು ಕರೆಯುತ್ತಾರೆ. ಇದು ಈ ಭಾಗದ ಜನರಿಗೆ ಮರೆಯಲಾರದ ಘಟನೆಯಾಗಿದೆ. ಇಂತಹ ಘಟನೆಯ ಕುರಿತು ಜಾನಪದ ಹಾಡುಗಳಲ್ಲಿ, ಬುಲಾಯಿ ಹಾಡುಗಳಲ್ಲಿ ಹಿಡಿದಿಟ್ಟಿದ್ದಾರೆ. ಅದಕ್ಕೆ ಇವುಗಳನ್ನು ಸಂಪಾದಿಸುವುರ ಮೂಲಕ ಅಂದಿನ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ತುಂಬ ಅವಶ್ಯಕತೆಗಳಲ್ಲಿ ಒಂದು. ನಂತರ ೧೯೫೬ರಲ್ಲಿ ಕರ್ನಾಟಕ ರಾಜ್ಯನ ಪುನರ್ ವಿಂಗಡನೆಯ ಪ್ರಕಾರ ಬೀದರ ಜಿಲ್ಲೆಯಾಗಿ ಮೈದಾಳಿ ನಿಂತಿದೆ.

## ೪. ಧಾರ್ಮಿಕ ಪರಂಪರೆ

ಬೀದರ ಜಿಲ್ಲೆ ಸರ್ವ ಧರ್ಮಗಳ ಸಮನ್ವಯದ ಬಿಡಾಗಿದೆ. ಭಿನ್ನತೆಯಲ್ಲಿ ಏಕತೆ ಎನ್ನುವುದು ಎದ್ದು ನಿಲ್ಲುತ್ತದೆ. ಪ್ರಾಚೀನ ಕಾಲದಿಂದಲೂ ಅನೇಕ ಮತ ಪಂಥಗಳು ಜಿಲ್ಲೆಯಲ್ಲಿ ತುಂಬ ಹರಡಿಕೊಂಡಿವೆ. ವಿವಿಧ ಧರ್ಮದವರು ವಿಭಿನ್ನ ಸಂಸ್ಕೃತಿಯ ಜನರ

ಬದುಕು ಇಲ್ಲಿ ವೈಭವ ಪೂರ್ಣವಾಗಿ ಕಂಡು ಬರುತ್ತದೆ. ಹಲವಾರು ಮತಪಂಥಗಳ ಸಂಸ್ಕೃತಿಯ ಸಮ್ಮೀಲನ ಜಿಲ್ಲೆಯ ಧಾರ್ಮಿಕತೆಗೆ ಒಂದು ಹೆಗ್ಗುರುತು. ಅಂತೆಯೇ ನಾನಾ ಧರ್ಮಗಳು ಬೆಳೆಯುತ್ತಾ, ಬೆಳಗುತ್ತಾ ನಡೆದಿವೆ. ಎಲ್ಲಾವುಗಳು ಸೋದರತ್ವ ಭಾವನೆಯಿಂದ ಬಾಳುತ್ತಿವೆ. ನಡೆ - ನುಡಿ, ಉಡುಗೆ-ತೊಡಿಗೆ, ಊಟ - ಉಪಚಾರಗಳು ಬೇರೆ ಬೇರೆಯಾಗಿ ಕಂಡರೂ ಅವುಗಳ ಹಿಂದಿನ ಉದ್ದೇಶ ಮಾತ್ರ ಒಂದೆಯಾಗಿದೆ. ಅಲ್ಲದೆ ಮತ ಧರ್ಮಗಳ ಪ್ರಸಾರ ಮತ್ತು ವೈಭವ ಇದ್ದರೂ ಅವರಲ್ಲಿ ಐಕ್ಯತೆಯನ್ನು ಕಂಡು ಬರುವುದು.

**೪.೧. ಬೌದ್ಧ ಧರ್ಮ ಮತ್ತು ಜೈನ ಧರ್ಮ** : ಕ್ರಿ.ಶ. ಸುಮಾರು ಮೂರನೆ ಶತಮಾನದಿಂದ ಅಂದರೆ ಮೌರ್ಯರ ಆಳ್ವಿಕೆ ಕಾಲದಿಂದ ಬೌದ್ಧಧರ್ಮ ಭಾರತದಲ್ಲಿ ಪ್ರಚಾರದಲ್ಲಿದೆ ಆದ್ದರಿಂದ ಜಿಲ್ಲೆಯಲ್ಲಿ ಕೂಡ ಅನೇಕ ಬೌದ್ಧ ಮಂದಿರಗಳು, ತತ್ವ ವಿಶ್ಲೇಷಣೆಗೆ ಹಾಗೂ ಮತ ಪ್ರಚಾರ ಪ್ರಚಲಿತದಲ್ಲಿದ್ದುದನ್ನು ಕಾಣುತ್ತೇವೆ. ರಾಷ್ಟ್ರಕೂಟರು, ಚಾಲುಕ್ಯರು, ಜೈನ ಧರ್ಮದ ಪೋಷಕರಾಗಿದ್ದುಕೊಂಡು ಧರ್ಮಕ್ಕೆ ಪ್ರೋತ್ಸಾಹ ನೀಡಿದರು. ಕ್ರಿ.ಶ. ೧೪೭೦ ರಲ್ಲಿ ಬೀದರಕ್ಕೆ ಆಗಮಿಸಿದ ರಷ್ಯದ ಪ್ರವಾಸಿ ನಿಕಿಟನ್ ಇವನು ಬೀದರಿನಲ್ಲಿ ಜೈನರ ಮತ್ತು ಬೌದ್ಧರ ಮನೆಗಳಿಗೆ ಭೇಟಿ ನೀಡಿ ಮಾತನಾಡಿದ್ದನ್ನು ತನ್ನ ಲೇಖನದಲ್ಲಿ ಬರೆದಿದ್ದಾನೆ(ಸಬರದ ಬಸವರಾಜ:೧೯೮೨:೧೦). ಈ ಸಂದರ್ಭದಲ್ಲಿ ಜೈನ ಧರ್ಮದ ಪ್ರಭಾವವೂ ಬೌದ್ಧ ಧರ್ಮವು ಜಿಲ್ಲೆಯ ಎಲ್ಲಾ ಕಡೆ ಕಂಡು ಬರುತ್ತದೆ. ಅನೇಕ ಮಂದಿರಗಳು ಉಂಟು. ದಿನನಿತ್ಯ ಪ್ರಾರ್ಥನೆ ತತ್ವಗಳ ವಿವರಣೆ ನಡೆಯುತ್ತದೆ.

**೪.೨. ಶೈವ ಧರ್ಮ:** ಪ್ರಾಚೀನಕಾಲದಿಂದಲೂ ಜಿಲ್ಲೆಯಲ್ಲಿ ಶೈವ ಮತವಿದ್ದುದು ಸರ್ವವಿಧಿತ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕರ್ನಾಟಕದ ತುಂಬ ಕಾಳಮುಖ ಶೈವರು ಸಾಕಷ್ಟು ಪ್ರಮಾಣದಲ್ಲಿ ಮಠಗಳನ್ನು ಕಟ್ಟಿಕೊಂಡು ಶೈವ ಮತ ಪ್ರಚಾರ ಮಾಡುತ್ತಿದದ್ದು ಅನೇಕ ಶಾಸನಗಳಿಂದ ತಿಳಿಯಬಹುದು. ಕಾಳಮುಖ ಶೈವರಿಗೆ ತುಂಬ ಮಹತ್ವವಿತ್ತು. ಏಕೆಂದರೆ ಕಾಕತೀಯರು ಹಾಗೂ ಕಲಚೂರಿಗಳು ಶೈವಮತಸ್ಥರಾಗಿದ್ದರು. ಎಂಬುದಕ್ಕೆ ಕಲ್ಬುರ್ಗಿ ತಾಲೂಕಿನ ಹರಸೂರ, ಚಿತ್ತಾಪೂರ ತಾಲೂಕಿನ ಕಾಳಗಿ ಶಾಸನಗಳು ಕಲಚೂರಿಗಳ ವಂಶದ ಹಾಗೂ ಧರ್ಮದ ಬಗ್ಗೆ ಉಲ್ಲೇಖಿತವಾಗಿದೆ. ಹೀಗಾಗಿ ಜಿಲ್ಲೆಯಾದ್ಯಂತ ಅನೇಕ ಶೈವ ದೇವಾಲಯಗಳು, ಶೈವ ಅವಶೇಷಗಳು ಇಂದಿಗೂ ಕಾಣಬರುತ್ತವೆ. ಬಿಜ್ಜಳ ಶೈವನಾಗಿದ್ದು ಇವನ ರಾಜ್ಯ ಚಿನ್ಹೆ ನಂದಿಯಾಗಿತ್ತು. ದೊರೆ ಕಾಳಮುಖ ಶೈವರಿಗೆ ವಿಶೇಷ ಪ್ರೋತ್ಸಾಹ

ನೀಡುತ್ತಿದ್ದನು. ಮುಂದೆ ೧೪, ೧೫ನೇ ಶತಮಾನದವರೆಗೆ ಶೈವ ತತ್ವ ಪ್ರಚಾರದಲ್ಲಿತು. ಸದ್ಯ ಶೈವ ಧರ್ಮ ವೀರಶೈವಕ್ಕೆ ವಾಲಿದೆ. ಪ್ರಸ್ತುತ ವೀರಶೈವ ಎಂದೇ ಕರೆಯುವುದುಂಟು. ಇದಕ್ಕೆ ಬಸವಾದಿ ಶರಣರು ಹೊಸ ಕಳೆಯನ್ನು ನೀಡಿ ಬೆಳೆಸಿದರು. ಕಾಳಮುಖ ಮಠದ ಅನುಯಾಯಿಗಳಿಗೆ ಜಂಗಮರು, ಸ್ವಾಮಿಗಳು, ಬ್ರಹ್ಮಚಾರಿ, ಋಷಿ ಎಂದು ಕರೆಯುತ್ತಿದ್ದದನ್ನು ನೋಡಿದರೆ ಇವರಿಗೂ ಜಂಗಮರಿಗೂ ಸಂಬಂಧ ವಿರುವದು ಮಠಗಳಿಂದ ತಿಳಿಯುವುದು.

**೪.೩. ವೀರಶೈವ ಧರ್ಮ** : ವೀರಶೈವ ಧರ್ಮ ಸುಮಾರು ೬ನೇ ಶತಮಾನದಿಂದ ಪ್ರಚಲಿತದಲ್ಲಿದದ್ದು ಅನೇಕ ಪುರಾವೆಗಳು, ಶಾಸನಗಳು ಹೇಳುತ್ತವೆ. ಅಂದು ಅಷ್ಟು ಪ್ರಬಲವಾಗಿ ಬೆಳೆದಿರಲಿಲ್ಲ ಇದು ಸತ್ಯ. ಆದರೆ ೧೨ನೇ ಶತಮಾನದಲ್ಲಿ ಭಕ್ತಿ ಭಂಡಾರಿ ಬಸವಣ್ಣನವರೇ ಈ ವೀರಶೈವ ಧರ್ಮ ಸ್ಥಾಪಕರು ಎಂಬ ವಿಷಯ ಕುರಿತು ಹಲವಾರು ವಾದಗಳಿವೆ. ಅನೇಕ ಸಂಶೋಧಕರು, ಲೇಖಕರು, ಬುದ್ಧಿಜೀವಿಗಳು ತಮ್ಮ ತಮ್ಮ ಲೇಖನಗಳಲ್ಲಿ ವೀರಶೈವಧರ್ಮ ಬಸವಪೂರ್ವದಲ್ಲಿ ಪ್ರಚಾರದಲ್ಲಿತ್ತು ಎನ್ನುವ ಪುರಾವೆಗಳು ಉಂಟು. ಆದರೆ ೧೨ನೇ ಶತಮಾನದಲ್ಲಿ ವೀರಶೈವ ಧರ್ಮ ಹೊಸ ರೂಪ ಪಡೆದು ಜಿಲ್ಲೆಯಾದ್ಯಂತ ಬೆಳೆಯಲು ಕಾರಣೀಭೂತರಾದವರು ಬಸವಾದಿ ಶರಣರು.

ವೀರಶೈವ ಧರ್ಮವು ಜಿಲ್ಲೆಗಷ್ಟೇ ಅಲ್ಲದೆ ರಾಜ್ಯಕ್ಕೂ, ದೇಶಕ್ಕೂ ಹಾಗೂ ವಿದೇಶಕ್ಕೂ ಪ್ರಸಿದ್ಧಿಯನ್ನು ಹೊಂದಿದ ಧರ್ಮವಿದು. ಅಂತೆಯೇ ಈ ಧರ್ಮಕ್ಕೆ ವಿಶ್ವಧರ್ಮವೆಂದು ಕರೆದದ್ದು ಸೂಕ್ತವಾಗಿದೆ. ಇಷ್ಟೊಂದು ಪ್ರಸಿದ್ಧಿ ಹೊಂದಲಿಕ್ಕೆ ಆ ಸಂದರ್ಭದಲ್ಲಿ ಧಾರ್ಮಿಕ ಸ್ಥಿತಿ ತೀರ ಕಳಪೆಗೊಂಡಿತು. ಮರ, ಕಲ್ಲು, ಮಡಿಕೆ ಮತ್ತು ಮಣ್ಣು ಎಲ್ಲವು ದೇವರೆಂದು ಪೂಜಿಸಲಾಯಿತು. ಕಾಲು ಇಡಲು ಜಾಗವಿಲ್ಲದಷ್ಟು ದೇವರಿಗೆ ಪ್ರಾರ್ಥಿಸುವುದುಂಟು. ಇಷ್ಟಾದರೂ ತಮ್ಮ ತಮ್ಮ ಧರ್ಮವೇ ಶ್ರೇಷ್ಟವೆಂದು ಜಗಳನಾಡುವ ಜನಗಳು ಜೊತೆಗೆ ದೇವರ ಹೆಸರಿನಲ್ಲಿ ನಡೆಯುವ ಶೋಷಣೆ ಒಂದು ಕಡೆಯಾದರೆ, ಇನ್ನೊಂದು ಕಡೆ ಮೂಢನಂಬಿಕೆ, ಗೊಡು ಸಂಪ್ರದಾಯಗಳು, ಅನಕ್ಷರತೆ, ಅಸಡ್ಡೆ, ಢಂಭಚಾರ, ಜಾತಿ - ಭೇದ, ಮೂಢತೆ ಈ ಎಲ್ಲಾ ದುರ್ಗುಣಗಳು ಸಮಾಜದ ತುಂಬ ತುಂಬಿ ತುಳಕಾಡುತ್ತಿದ್ದವು. ಇಂತಹ ಸಂಧಿಗ್ಧ ವ್ಯವಸ್ಥೆಯಲ್ಲಿ ಶರಣರು ಉದಯಿಸಿ ಬಂದರು. ಶರಣರು ಶೋಷಣೆಯನ್ನು ಕಿತ್ತೆಗೆದು ಮಾನವನ ಬದುಕಿಗೆ ಹೊಸ ದಾರಿಯನ್ನು ನೀಡಿ ಸುವರ್ಣಾವಕಾಶಗಳನ್ನು ಮಾಡಿಕೊಟ್ಟು ವೀರಶೈವ ಧರ್ಮ ಸಮಾಜಕ್ಕೆ ನೀಡಿದರು. ಈ ಧರ್ಮ ಸರಳ ತತ್ವಗಳಿಂದ ಕೂಡಿದ್ದರಿಂದ ಜನರು ಅಪ್ಪಿಕೊಂಡು ಸ್ವೀಕರಿಸಿದರು. ಬದುಕಿನ ಮೌಲ್ಯಗಳನ್ನು ಪುನರ್

ವಿಮರ್ಶಿಸುತ್ತಾ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಆರ್ಥಿಕಕಷ್ಟೆಯಲ್ಲದೆ ಅನೇಕ ರಂಗದಲ್ಲಿ ಹೊಸ ವ್ಯಾಖ್ಯಾನವನ್ನು ರೂಪಿಸಿ ಜನರನ್ನು ಸನ್ಮಾರ್ಗದೆಡೆಗೆ ಕರೆತರುವುದು ದೇವಭಾಷೆಯನ್ನು ಜನಭಾಷೆಯನ್ನಾಗಿಸಿದ್ದರು. ಕನಸಾಗಿದ ಸ್ವರ್ಗವನ್ನು ಭೂಮಿಗೆ ತಂದು ಜನ ಜಾಗೃತಿ ಮಾಡಿದವರು ಬಸವಾದಿ ಶರಣರು.

'ಅಯ್ಯ ಎಂದರೆ ಸ್ವರ್ಗ, ಎಲೋ ಅಂದರೆ ನರಕ' ಎಂಬ ಸ್ವರ್ಗ - ನರಕಗಳ ಪರಿಕಲ್ಪನೆ ತೋರಿಸಿಕೊಟ್ಟರು. ಸಾಮಾಜದಲ್ಲಿನ ವರ್ಣಾಶ್ರಮಶ್ರೇಣಿಯನ್ನೂ ಕಿತ್ತೂಗೆದು ಎಲ್ಲರೂ ಸರಿಸಮಾನರು ಎಂದರು. ಮಹಿಳೆಗೆ ಆಗ್ರಸ್ಥಾನವನ್ನೂ ದೊರಕಿಸಿಕೊಟ್ಟವರು. ಈ ರೀತಿಯಿಂದ ಪ್ರತಿಯೊಂದು ರಂಗದಲ್ಲಿ ಮಾನವನ ಜೀವನ ಮೌಲ್ಯಗಳ ಕ್ರಾಂತಿಯಾಗಿದ್ದು ೧೨ ನೇ ಶತಮಾನದಲ್ಲಿ ಅದುವೇ ಕಲ್ಯಾಣ ಕ್ರಾಂತಿ (ಶರಣರ ಕ್ರಾಂತಿ) ಎಂದು ಪ್ರಸಿದ್ಧಿ ಹಬ್ಬಿತು. ಅನೇಕ ಶರಣರು ಹಲವಾರು ಕಡೆಯಿಂದ ಕಲ್ಯಾಣ ನಾಡಿಗೆ ಬಂದು ಮಾನವನ ಹೊಸ ಬದುಕು ನಿರ್ಮಿಸಲು ಕಾರಣರಾದರು. ಬಸವಣ್ಣ - ಅಲ್ಲಮ ಪ್ರಭು, ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಆಂಧ್ರದ ಬೊಮ್ಮಯ್ಯ ಕಾಶ್ಮೀರದ ಮಾರಯ್ಯ, ಗುಜರಾತ, ಬಂಗಾಲ ಒರಿಸ್ಸಾ, ಕೇರಳ , ನೇಪಾಳ ಮತ್ತು ಪಾಂಡ್ಯ ಮುಂತಾದ ಕಡೆಯಿಂದ ಬಂದ ಶರಣರು ಮಾನವನ ಅಭಿವೃದ್ಧಿಗೆ ಹೋರಾಡಿದರು. ಇದರಿಂದ ಶರಣರು ಹಾಕಿಕೊಟ್ಟ ವೀರಶೈವ ತತ್ವಗಳ ಅಡಿಯಲ್ಲಿ ಜನ ನಡೆದುಕೊಂಡು ಬರುತ್ತಿರುವರು. ಜನರ ಪ್ರತಿಯೊಂದು ಕ್ರಿಯೆಗಳಲ್ಲಾಗಲ್ಲಿ, ಆಚಾರ - ವಿಚಾರಗಳಾಗಲ್ಲಿ ಶರಣರ ಪ್ರೇರಣೆಯೇ ಗೋಚರಿಸುತ್ತದೆ. ಜಾತಿಗಳಲ್ಲಿ ಭೇದಭಾವವಿಲ್ಲ ಎಲ್ಲರನ್ನು ಗೌರವದಿಂದ ವ್ಯವಹರಿಸುತ್ತಾರೆ. ಇದಕ್ಕೆ ಭಿನ್ನತೆಯಲ್ಲಿ ಏಕತೆಗೆ ಜಿಲ್ಲೆ ಹೆಸರುವಾಸಿಯಾಗಿದೆ. ಇಂದಿಗೂ ಪ್ರತಿಯೊಂದು ಕಾರ್ಯಕ್ರಮದಲ್ಲಿ ಶರಣರ ನುಡಿಗಳಿಂದಲೇ ತಮ್ಮ ಕಾರ್ಯವನ್ನು ಆರಂಭಿಸುತ್ತಾರೆ. ಬಸವದಳ, ಬಸವಕೇಂದ್ರ, ರಾಷ್ಟ್ರೀಯ ಬಸವದಳ, ಸ್ವಾತಂತ್ರ್ಯ ಬಸವದಳ, ಮಠದ ಜಂಗಮರು ಮತ್ತು ಮಂದಿರ - ಮನೆಗಳಲ್ಲಿ ಶರಣರ ತತ್ವಗಳು ಜನರ ಮನೆ - ಮನಗಳಿಗೆ ಮುಟ್ಟಿಸುವ ಕಾರ್ಯ ಮಾಡುತ್ತಿದ್ದಾರೆ. ಶ್ರೀ ಭಾಲ್ಕಿ ಚನ್ನಬಸವ ಪಟ್ಟದ್ದೇವರು, ನಾವದಗಿ ರೇವಪಯ್ಯನವರು, ಮದನೂರಿನ ರೇವಣಸಿದ್ದ ಸ್ವಾಮಿಗಳು, ಹಾರಕೂಡದ ಚನ್ನಬಸವೇಶ್ವರ ಸ್ವಾಮಿಗಳು, ಮುಚ್ಚಳಂಬಿಯ ನಾಗಭೂಷಣ, ಹುಲುಸೂರಿನ ಶಿವಯೋಗಿಗಳು, ಬಸವ ಮುಕ್ತಿಮಂದಿರದ ಶ್ರೀ ಶಿವಯೋಗಿಗಳು, ಚಾಂಬೋಳದ ರುದ್ರಮುನಿ ಸ್ವಾಮಿಗಳು ಗಾದಗಿ ವೈಜಿನಾಥ ಸ್ವಾಮಿಗಳು, ದಶಮುಖ ಸ್ವಾಮಿಗಳು, ಗೋರಟಾದ ವೀರಪಾಕ್ಷಯ್ಯ ಮುಂತಾದವರು

ಮಠದ ಆಶ್ರಯದಿಂದವೀರಶೈವ ಧರ್ಮ ಪ್ರಸಾರಕ್ಕೆ ಮಾಡಿದ ಸೇವೆ ಅಪಾರವಾದದ್ದು. ಹೀಗಾಗಿ ಇವರ ಭಕ್ತರು ಈಗಲೂ ತಮ್ಮ ತಮ್ಮ ಹಳ್ಳಿಗಳಲ್ಲಿ ಗುರುಗಳ ಆದೇಶದಂತೆ ನಡೆಯುತ್ತಿರುವರು.

**೪.೪. ವೈಷ್ಣವ ಧರ್ಮ** : ವೈಷ್ಣವ ಧರ್ಮವು ಕೂಡ ಪ್ರಾಚೀನ ಕಾಲದಿಂದಲೂ ಜಿಲ್ಲೆಯಲ್ಲಿ ಕಂಡುಬರುತ್ತದೆ. ಅವರವರ ರೀತಿ ನೀತಿಗಳಲ್ಲಿ ಸರ್ವರ ಜೊತೆ ಅನುನ್ಯವಾಗಿ ವರ್ತಿಸುತ್ತಿರುತ್ತಾರೆ.

**೪.೫. ಇಸ್ಲಾಂ ಧರ್ಮ** : ಮುಸ್ಲೀಮರು ಭಾರತಕ್ಕೆ ವ್ಯಾಪಾರಕ್ಕೆಂದು ಬಂದು ಇಲ್ಲಿನ ಸಂಪತ್ತು ಸಮೃದ್ಧಿಯನ್ನು ಕಂಡು ಇಲ್ಲಿಯೇ ತಮ್ಮ ಜನ ಜೀವನಕ್ಕೆಭದ್ರ ಬುನಾದಿ ಹಾಕಿದರು. ರಾಷ್ಟ್ರಕೂಟರ ಕಾಲದಿಂದ ದಕ್ಷಿಣ ಭಾರತದಲ್ಲಿ ಇಸ್ಲಾಂ ಮತ ಪ್ರಸಾರ ಹಾಗೂ ಪ್ರಭಾವ ಪ್ರಾರಂಭವಾಯಿತು. (ಅವರೇ:೧೮) ಇವರು ತಮ್ಮ ತತ್ವಗಳಾನುಸಾರವಾಗಿ ನಡೆದುಕೊಳ್ಳುವರು. ಜೊತೆಗೆಎಲ್ಲರೊಂದಿಗೆ ಸ್ನೇಹಪರದಿಂದ ನಡೆದುಕೊಳ್ಳುತ್ತಾರೆ.

**೪.೬. ಸಿಕ್ಕರ ಪಂಥ :** ಗುರುನಾನಕರು ಆಂಧ್ರದ ಮಹಾರಾಷ್ಟ್ರ, ನಾಂದೇಡ ಹಾಗೂ ನಾಗಪೂರಗಳ ಕಡೆ ತಮ್ಮ ಧರ್ಮ ಪ್ರಚಾರಾರ್ಥವಾಗಿ೧೫ನೇ ಶತಮಾನದಲ್ಲಿ ಗುರುನಾನಕರು ಬೀದರಕ್ಕೆ ಬಂದರು. ನಗರದ ಹೊರವಲಯದ ಗುಡ್ಡದಲ್ಲಿ ತಮ್ಮ ಶಿಷ್ಯರೊಂದಿಗೆ ನೆಲೆಸಿದರು ಜನರಿಗೆ ತತ್ವದ ತಿರುಳನ್ನು ವಿವರಿಸುತ್ತಾ ಕೀರ್ತನೆ ಭಜನೆಯಲಿ ತಲ್ಲೀನರಾಗಿದ್ದರು. ಭಜನೆ ಕೀರ್ತನೆಗಳಿಗೆ ಮೆಚ್ಚಿ ಜನರು ಇವರನ್ನು ಕಾಣಲು ಗುಂಪು ಗುಂಪಾಗಿ ಬರುತ್ತಿದ್ದರು. ಈ ಸಂದರ್ಭದಲ್ಲಿ ಬೀದರ ಜನತೆ ನೀರಿಗಾಗಿ ಹಾಹಾಕಾರ ಪಡುತ್ತಿರುವಾಗ ಗುರುನಾನಕರು ತಮ್ಮ ಯೋಗ ಶಕ್ತಿಯಿಂದ ನೀರಿನ ಝರಿಯನ್ನು ಉತ್ಪಾದಿಸಿದರಂತೆ ಇದರಿಂದ ಸರ್ವರು ಇವರ ಸಾಹಸಕ್ಕೆ ಮೆಚ್ಚಿ ಕೊಂಡಾಡಿದರಂತೆ. ಇದೇ ಝರಿ 'ನಾನಕ ಝರಾ' ಎಂದು ಹೆಸರುವಾಸಿಯಾಗಿದೆ. ಗುರುನಾನಕರು ಸಿಕ್ಕರ ಪಂಥದ ತತ್ವ ಪ್ರಚಾರ ಹಾಗೂ ಅದರ ಬೆಳವಣಿಗೆಗಾಗಿ ಶ್ರಮಿಸಿದ ಮೂಲ ಪುರುಷರಾದರು. ಸಿಕ್ಕರ ಪಂಥಕ್ಕೆ ಗುರುವಾದರು. ಹಂತಹಂತವಾಗಿ ಸಿಕ್ಕರ ಪಂಥ ಬೆಳೆಯತೊಡಗಿತು.

**೪.೭. ಆರ್ಯ ಸಮಾಜ** : ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಯಲ್ಲಿ ಆರ್ಯಸಮಾಜ ತುಂಬ ಪ್ರಸಿದ್ಧಿಯನ್ನು ಪಡೆದಿದೆ. ಮಾನವನ ಜಾತಿಯಲ್ಲಿ ಹುಟ್ಟಿದವರು ಎಲ್ಲರೂ ಒಂದೇ, ಒಂದಾಗಿ ಬಾಳಲು ಸರ್ವರು ಪ್ರಯತ್ನ ಪಡಬೇಕು. ಅಂದಾಗಲೇ ಮಾನವ ಮೌಲ್ಯಗಳು

ಸಾರ್ಥಕತೆಯಾಗುತ್ತವೆ. ಮೇಲುಕೀಳು ಎನ್ನುವ ಭಾವನೆಗಳು ಮನುಷ್ಯನ ಹತ್ತಿರ ಸುಳಿಯುವುದಿಲ್ಲ. ಆಗ ಸಮಾಜದಲ್ಲಿ ಯಾವುದೇ ಸಮಸ್ಯೆಗಳು ಹುಟ್ಟುವುದಿಲ್ಲ ಎಂದು ಪ್ರಗತಿಪರ ವಿಚಾರಗಳ ಧೋರಣೆಯನ್ನು ಜಿಲ್ಲೆಯಲ್ಲಿ ಬೋಧಿಸುತ್ತಿದ್ದಾರೆ. ಅನೇಕರು ಆರ್ಯ ಸಮಾಜದ ಪ್ರಗತಿಪರ ತತ್ವಗಳಿಗೆ ಮಾರು ಹೋಗಿ ಅವು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸಾಗುತ್ತಿದ್ದಾರೆ.

**೪.೮. ಬ್ರಹ್ಮಾಕುಮಾರಿ ಸಮಾಜ** : ದೇಶ ವಿದೇಶಾದ್ಯಂತ ಕಡೆ ಸರ್ವಧರ್ಮಗಳು ಒಂದೇ ಎಂದು ಸಾರುತ್ತಾ ಜಿಲ್ಲೆಗೂ ಪ್ರವೇಶಿಸಿದೆ. ಹಲವಾರು ಕಡೆ ಆಶ್ರಮಗಳನ್ನು ಸ್ಥಾಪಿಸಿ ಇವುಗಳ ಮೂಲಕ ಮಾನವನ ಸರ್ವಾದಿಭಿವೃದ್ಧಿಗೆ ದುಡಿಯುತ್ತಲ್ಲಿವೆ. ಜಂಗಮರ ಮಠಗಳಂತೆಯೇ ಇವರು ಅನೇಕ ಕಡೆ ಆಶ್ರಮಗಳನ್ನು ಸ್ಥಾಪಿಸಿ ವೀರಶೈವ ಜಂಗಮ ಮಠಗಳ ಹಿನ್ನೆಲೆಯೊಳಗೆ ಮತ್ತು ಜಂಗಮರು, ಶರಣೆಯರೂ ಬ್ರಹ್ಮಚಾರಿಗಳಾಗಿ ಧರ್ಮ ಪ್ರಚಾರ ಮಾಡುವ ರೀತಿಯಲ್ಲಿ ಬ್ರಹ್ಮಕುಮಾರಿ ಸಮಾಜದವರು ಸೇವೆ ಮಾಡುತ್ತಿರುವುದು ಕಾಣಬಹುದು. ಮಠಗಳಲ್ಲಿ ಜಂಗಮರು ಕಾವಿ ಬಟ್ಟೆ ಧರಿಸಿಕೊಂಡು ಧರ್ಮಬೋಧನೆ ಮಾಡುತ್ತಿರುವಂತೆ ಬ್ರಹ್ಮಕುಮಾರಿಯ ಸಮಾಜದವರು ಕೂಡ ಬಿಳಿಯ ಬಟ್ಟೆ ಧರಿಸಿಕೊಂಡು ಶಿವನ ಆರಾಧಕರಾಗಿದ್ದು ಧರ್ಮ ಬೋಧಿಸುತ್ತಿರುವುದನ್ನು ನೋಡಬಹುದು.

ಹೀಗೆ ಭಿನ್ನ ಭಿನ್ನ ಮತ ಪಂಥಗಳನ್ನು ಹುಟ್ಟು ಹಾಕಿ ಸರ್ವೋದಯವನ್ನು ಕಾಪಾಡಿಕೊಂಡು ಬಂದಿವೆ. ಮೇಲಿನ ನಾನಾ ಧರ್ಮ ಪಂಥಗಳನ್ನು ಅವಲೋಕಿಸಿದಾಗ ಪ್ರಮುಖವಾಗಿ ನಮ್ಮ ಮೇಲೆ ಪ್ರಭಾವ ಬೀರಿರುವುದು ಶರಣ ಸಂಸ್ಕೃತಿ. ಇದರಿಂದಾಗಿ ಜಿಲ್ಲೆ ಅತ್ಯಂತ ಪ್ರಮುಖ ಸ್ಥಾನ ಪಡೆಯುತ್ತಿದೆ. ಶಿವಗಣಾಂಗಣ ವಾಸಸ್ಥಾನ ಇದಾಗಿದೆ. ಸಕಲ ಪಂಥಗಳನ್ನೆಲ್ಲಾ ಒಂದು ಗೂಡಿಸಿಕೊಂಡು ಹೋರಾಟ ಮಾಡಿದ ಅವರ ಪ್ರಯತ್ನ ಸಮಾಜದಲ್ಲಿನ ಏಳು - ಬೀಳುಗಳನ್ನು ಕಿತ್ತೊಗೆದು ಸಮಾಜದಲ್ಲಿ ಸಮಾನತೆಯನ್ನು ಶಾಶ್ವತವಾಗಿ ನೆಲೆಯೂರಿಸಲು ನಾಂದಿ ಹಾಡಿತ್ತು. ಆದ್ದರಿಂದಲೇ ಶರಣರ ಜೀವನ ಇಂದಿನ ಜನತೆಗೆ ಆದರ್ಶನೀಯವಾಗಿದೆ. ಶರಣರ ಭವ್ಯ ಸಂಸ್ಕೃತಿಯ ಬೆಳಕಿನಲ್ಲಿ ಜಂಗಮ ಸಮುದಾಯವು ನಡೆದುಕೊಂಡು ಬರುತ್ತಿರುವುದು ಕಾಣುತ್ತೇವೆ.

## ೫. ಸಮುದಾಯಗಳು

ಜಿಲ್ಲೆಯ ಮಾಂಜರಾ ಮತ್ತು ಕಾರಂಜಾ ಮಧ್ಯದ ಭೂಪ್ರದೇಶವು ಫಲವತ್ತಾದ ಕೆಂಪು ಮತ್ತು ಕಪ್ಪು ಮಣ್ಣಿನಿಂದ ಕೂಡಿದ್ದು, ಕಲ್ಲು ಬಂಡೆಯ ಗುಡ್ಡಗಳಿಲ್ಲದೆ ಮಣ್ಣಿನ ದಟ್ಟ

ವನಗಳಿಂದ ಕೂಡಿದ ಎತ್ತರದ ವಿಶಾಲವಾದ ಪ್ರದೇಶವಾಗಿದೆ. ಜೀವಿಗೆ ಬದುಕಲು ಅನುಕೂಲಕರ ಹವಮಾನ ಸುಲಭ ಸಹಜವಾಗಿ ದೊರೆಯುವ ಆಹಾರ ಮತ್ತು ನೀರು ಆಶ್ರಯಕ್ಕೆ ಗುಡ್ಡ, ಮರ, ದಿನ್ನೆಗಳ ನೆಲೆಯಲ್ಲಿಯೇ ಪ್ರಾಚೀನ ಜನರು ಬದುಕಿ ಬಾಳಿರುವುದನ್ನು ಇತಿಹಾಸ ತಿಳಿಸುತ್ತದೆ(ಹಿರೇಮಠ ಸೂಗಯ್ಯ: ೧೯೯೯:೩). ಅಂದರೆ ಭಾರತವು ಇತರ ಪ್ರಸಿದ್ಧ ನದಿಯ ದಂಡೆಯ ಮೇಲೆ ಬೆಳೆದು ಬಂದ ಸಂಸ್ಕೃತಿಯಂತೆ ಜಿಲ್ಲೆಯು ಕೂಡ ಮಾಂಜರಾ ನದಿಗಳ ತೀರದಲ್ಲಿಯೇ ಬೆಳೆದ ಅನೇಕ ಜನಾಂಗಗಳ (ಸಮುದಾಯಗಳು) ವಸತಿಗಳ ಮೂಲ ನೆಲೆಗಳನ್ನೆ ಗುರುಸಲಾಗಿದೆ. ಆರ್ಯ ದ್ರಾವಿಡರ ಕಾಲದಿಂದಲೂ ಜಿಲ್ಲೆಯಲ್ಲಿ ಹಲವು ಜನಾಂಗಗಳಿದ್ದು ತಿಳಿದುಬರುತ್ತದೆ. ಆದ್ದರಿಂದ ಅಂದಿನಿಂದ ಇಂದಿನವರೆಗೂ ಅನೇಕ ಜನಾಂಗಗಳು ತಮ್ಮ ತಮ್ಮ ಸಂಸ್ಕೃತಿಯ ಅಡಿಯಲ್ಲಿ ಬೆಳೆದು ಬಂದಿವೆ. ಇದರಿಂದ ಕೆಲವು ಪ್ರಮುಖ ಸಮುದಾಯಗಳ ಮೂಲ ಅಂಶಗಳನ್ನು ಕೆಳಗಿನಂತೆ ಅವಲೋಕಿಸಬಹುದು.

೧. ಸವರ್ಣೀಯರ ಸಮುದಾಯಗಳು
೨. ಹಿಂದುಳಿದ ಸಮುದಾಯಗಳು
೩. ಪರಿಶಿಷ್ಟ ಜಾತಿಗಳ ಸಮುದಾಯಗಳು
೪. ಪರಿಶಿಷ್ಟ ಪಂಗಡಗಳ ಸಮುದಾಯಗಳು
೫. ಅಲ್ಪ ಸಂಖ್ಯಾತರ ಸಮುದಾಯಗಳು
೬. ಅರೆ ಅಲೆಮಾರಿಗಳ ಸಮುದಾಯಗಳು

**೫.೧. ಸವರ್ಣೀಯರ ಸಮುದಾಯಗಳು :** ಈ ಸಮುದಾಯದಲ್ಲಿ ಬ್ರಾಹ್ಮಣ, ಜಂಗಮ, ವೀರಶೈವ, ಮರಾಠಾ, ಲಿಂಗಾಯತ ರಡ್ಡಿ, ಲಿಂಗಾಯತ ಗಾಣಿಗ ಇವುಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ.

**ಬ್ರಾಹ್ಮಣರು :** ಜಿಲ್ಲೆಯ ಬ್ರಾಹ್ಮಣ ಜನಾಂಗದ ಬಗ್ಗೆ ಅವಲೋಕಿಸಿದಾಗ ಇವರೇನು ಕರ್ನಾಟಕದ ಬ್ರಾಹ್ಮಣ ಜನಾಂಗದ ಹೊರತಾಗಿಲ್ಲ ಎನ್ನಬಹುದು. ಅಪ್ಪಟ ಸಂಪ್ರದಾಯಸ್ಥರು, ಸುಖ ಜೀವಿಗಳು, ತುಂಬ ಜಾಣರು, ಹೆಚ್ಚಾಗಿ ಯಜ್ಞಯಾಗಾದಿಗಳಲ್ಲಿ ನಂಬಿಕೆ ಯುಳ್ಳವರು, ಪೂಜಾ ಪುನಸ್ಕಾರವೆ ಇವರ ವೃತ್ತಿ. ಜ್ಯೋತಿಷ್ಯ ನೋಡುವುದು, ಪಂಚಾಂಗ ಹೇಳುವುದು, ಬಂದ ಜನಗಳಿಗೆ ಒಳ್ಳೆಯ ಯಾವುದೇ ಕಾರ್ಯವಿರಲಿ ಶುಭ ದಿನವನ್ನು ತೆಗೆದುಕೊಡುವುದು ಇದರ ಫಲವಾಗಿ ಬಂದ ದಕ್ಷಿಣ ತಮ್ಮ ಉಪಜೀವನಕ್ಕೆ ಉಪಯೋಗಿಸುತ್ತಾರೆ. ಜಂಗಮರಂತೆ ಪೂಜಾ, ಪಂಚಾಂಗ ಹೇಳುವುದು, ಸಂಸ್ಕಾರ ವಿಧಿ ವಿಧಾನಗಳನ್ನು ಮಾಡುವಂತೆ ಇವರು ತಮ್ಮ ಸಮುದಾಯದ ಧಾರ್ಮಿಕ ಕ್ರಿಯಾಕ್ರಮಗಳು ಮಾಡಿಕೊಂಡು ಬರುತ್ತಿರುವರು.

**ಜಂಗಮ ಸಮುದಾಯ :** ಜಿಲ್ಲೆಯ ತುಂಬ ಪ್ರತಿಯೊಂದು ಹಳ್ಳಿಯಲ್ಲಿ ಒಂದು, ಎರಡು ಅಥವಾ ನಾಲ್ಕು ಮನೆಗಳು ಇದ್ದಿದ್ದು ಕಂಡುಬರುತ್ತವೆ. ಸಮಾಜದಲ್ಲಿ ಉನ್ನತ ಸ್ಥಾನ ಇವರದಾಗಿದೆ. ಇವರ ವೃತ್ತಿ ಧರ್ಮ ರಕ್ಷಣೆ, ಧರ್ಮ ಪ್ರಚಾರ, ಸಾಮಾಜಿಕ ಕ್ರಿಯೆಗಳು ನೇರವೇರಿಸುವುದು ಇವುಗಳ ಪ್ರತಿಫಲವಾಗಿ ಭಿಕ್ಷೆ ಬೇಡುವುದು ಇವರ ಕೆಲಸವಾಗಿದೆ. ವೀರಶೈವರು ತಮ್ಮ ಮನೆಯಲ್ಲಿ ಇವರನ್ನು ಬರಮಾಡಿಕೊಂಡು ಪಾದೋದಕವನ್ನು ಪಡೆದು ತಮ್ಮ ಮುಂದಿನ ಕಾರ್ಯಕ್ರಮಗಳು ನಡೆಸಿಕೊಂಡು ಹೋಗುತ್ತಾರೆ.

**ವೀರಶೈವ :** ಜಿಲ್ಲೆಯಲ್ಲಿ ಈ ಸಮುದಾಯವು ಅತ್ಯಂತ ಪ್ರಾಚೀನವಾಗಿದೆ. ಅಷ್ಟೇ ವಿಶಾಲವಾಗಿದೆ. ೧೨ನೇ ಶತಮಾನದ ಬಸವಾದಿ ಶರಣರ ಪೂರ್ವದಲ್ಲಿ ಇದ್ದರೂ ಅಷ್ಟು ಪ್ರಬಲವಾಗಿ ಇರಲಿಲ್ಲ ಎನಿಸುತ್ತದೆ. ಆದರೆ ೧೨ನೇ ಶತಮಾನದಿಂದ ಪ್ರಬಲವಾಗಿ ಬೆಳದು ಬಂದ ಸಮುದಾಯ. ಶರಣರ ಧರೆಯಾಗಿರುವುದರಿಂದ ಇಲ್ಲಿನ ಜನಾಂಗಗಳು ಶರಣರ ತತ್ವಗಳನ್ನು ಮೈಗೂಡಿಸಿಕೊಂಡು ಬದುಕಲು ಪ್ರಯತ್ತಿಸುತ್ತಿವೆ. ಇವರು ತಮ್ಮ ಗುರುಗಳಾದ ಜಂಗಮ ಪಂಚಾರ್ಯರಲ್ಲಿ ನಂಬಿಕೆಯಿಟ್ಟು ನಡೆದುಕೊಳ್ಳುತ್ತಾರೆ. ಇತ್ತೀಚಿನ ವೀರಶೈವರು ಬಸವ ಸಂಸ್ಕೃತಿಯನ್ನು ಪಾಲಿಸಿಕೊಂಡು ಬರುವಲ್ಲಿ ಪ್ರಯತ್ನ ಮಾಡುತ್ತಿದ್ದಾರೆ.

ಅಲ್ಲದೆ ಈ ಸವರ್ಣೀಯ ಸಮುದಾಯಗಳಲ್ಲಿ ವೈಷ್ಣವ, ಸಮುದಾಯ ರಜಪೂತ, ಗಾಣಿಗ, ಕೋಮಟಿಗರು ಇತ್ಯಾದಿ ಸಮುದಾಯಗಳು ಕಾಣುತ್ತೇವೆ.

**೫.೨. ಹಿಂದುಳಿದ ಸಮುದಾಯಗಳು**

**ಅಗಸ :** ಜಿಲ್ಲೆಯಲ್ಲಿ ಇವರಿಗೆ ಮಡಿವಾಳ, ಸಾಕಲವಾಡು, ರಜಕ, ಧೋಬಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇವರ ವೃತ್ತಿ ಬಟ್ಟೆ ತೊಳೆಯುವುದು ವಂಶಪಾರಂಪರ್ಯವಾದ ವೃತ್ತಿ. ಇನ್ನೂ ಕೆಲವರು ಒಕ್ಕಲುತನ, ಇತರ ಖಾಸಗಿ ಕೆಲಸಗಳಲ್ಲಿಯೂ ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ಶೈವರು ಮತ್ತು ವೈಷ್ಣವರು ಕೂಡ ಇದ್ದಾರೆ. ಇವರು ವೀರಶೈವ ಮತವನ್ನು ಅನುಸರಿಸುತ್ತಾರೆ. ಬಸವೇಶ್ವರರ ಸಮಕಾಲೀನರಾದ ಮಡಿವಾಳ ಮಾಚಯ್ಯನನ್ನು ಆದ್ಯ ದೇವರೆಂದು ಗೌರವಿಸುತ್ತಾರೆ. ತಮ್ಮ ಧಾರ್ಮಿಕ ಸಮಾರಂಭಗಳಲ್ಲಿ ಜಂಗಮರು ಮತ್ತು ಬ್ರಾಹ್ಮಣ ಪುರೋಹಿತರಿಂದ ಕಾರ್ಯಗಳು ನೇರವೇರಿಸುತ್ತಾರೆ.

**ಕುಂಬಾರ :** ಜಿಲ್ಲೆಯಲ್ಲಿ ಇವರಿಗೆ ಕುಂಬಾರನೆಂದೆ ಕರೆಯುತ್ತಾರೆ. ಇವರು ಸಂಪ್ರದಾಯಕವಾಗಿ ಮಡಿಕೆ ಮತ್ತು ಹಂಚುಗಳನ್ನು ತಯಾರಿಸಿ ಮಾರಾಟ ಮಾಡುತ್ತಾರೆ. ಆದರೆ ಅಲ್ಯೂಮಿನಿಯಂ ಮತ್ತು ಪ್ಲಾಸ್ಟಿಕ್‌ನಿಂದ ತಯಾರಿಸಿದ ಪಾತ್ರೆಗಳು ಬಂದ ನಂತರ ಇವರ ಪಾತ್ರೆಗಳಿಗೆ ಬೇಡಿಕೆ

ತಗ್ಗಿದ ಮೇಲೆ ಕುಂಬಾರ ಕೆಲಸಕ್ಕೆ ಸಾಕಷ್ಟು ಪೆಟ್ಟು ಬಿದ್ದಿದೆ. ಹೀಗಾಗಿ ಅನೇಕರು ಇತರ ವೃತ್ತಿಯಲ್ಲಿಯೂ ತೊಡಗಿದ್ದಾರೆ. ಆದರೂ ಕುಂಬಾರತನ ಕೆಲಸ ಹೆಚ್ಚಾಗಿದೆ. ಇವರು ವೀರಶೈವ ದೇವರುಗಳಿಗೆ ನಡೆಯುತ್ತಾರೆ. ಇವರ ವಿಧಿ ವಿಧಾನಗಳಿಗೆ ಜಂಗಮರನ್ನು ಕರೆಯಿಸುತ್ತಾರೆ. ಇವರಲ್ಲಿಯು ಓದಿಕೊಂಡವರಲ್ಲಿ ಕೆಲವರು ಸರಕಾರಿ ನೌಕರರಾಗಿದ್ದಾರೆ. ಜಂಗಮ ಆಚಾರ್ಯರಲ್ಲಿ ನಡೆದುಕೊಳ್ಳುತ್ತಾರೆ. ಮತ್ತು ಜಂಗಮರು ಮದುವೆಯ ಸಂದರ್ಭದಲ್ಲಿ ಇವರ ಮನೆಯಿಂದ ಐರಣಿ ಕೊಡ ತೆಗೆದುಕೊಂಡು ಬರುವರು. ಅಲ್ಲದೆ ಕಂಬಾರ, ಬಡಿಗ, ಕ್ಷೌರಿಕ ಇತ್ಯಾದಿ ಸಮುದಾಯಗಳು ತಮ್ಮದೆಯಾದ ಸಂಸ್ಕೃತಿಯೊಳಗೆ ನಡೆದುಕೊಳ್ಳುವರ ಜೊತೆಗೆ ಧಾರ್ಮಿಕ ವಿಧಿವಿಧಾನಗಳಲ್ಲಿ ಜಂಗಮರ ಹತ್ತಿರ ಬಂದು ಪಂಚಾಂಗ ಕೇಳಿಕೊಳ್ಳುವುದು ಮಾಡುತ್ತಾರೆ. ಕೆಲವು ಪೂಜೆಗಳಿಗೆ ಕರೆದುಕೊಂಡು ಹೋಗುತ್ತಾರೆ. ಇವರು ವೀರಶೈವ ಧರ್ಮಕ್ಕೆ ನಡೆದುಕೊಳ್ಳುತ್ತಾರೆ.

**೫.೩. ಪರಿಶಿಷ್ಟ ಜಾತಿಗಳು:** ಸಮಗಾರ, ಹೊಲೆಯ, ಮಾದಿಗ, ವಡ್ಡ, ಲಂಬಾಣಿ, ಡೋಹರ ಇತ್ಯಾದಿ ಸಮುದಾಯಗಳು ಪರಿಶಿಷ್ಟ ಪಂಗಡಗಳಲ್ಲಿ ಕಂಡುಬರುತ್ತವೆ. ಇವರು ಹೆಚ್ಚಾಗಿ ವೀರಶೈವ ದೇವರುಗಳಿಗೆ ನಡೆಯುತ್ತಾರೆ. ಶರಣರ ಪ್ರಭಾವದಿಂದ ತಮ್ಮ ಜಾತಿಯ ಶರಣರಾದ ಹರಳಯ್ಯ, ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಇವರನ್ನು ಪ್ರಾರ್ಥಿಸುವರು. ಇವರು ಊರಿನ ಆಯಾಗಾರಿಕೆಯನ್ನು ಮಾಡುತ್ತಾ ಬರುವುದು ಇಂದಿಗೂ ಬಹುತೇಕ ಹಳ್ಳಿಯಲ್ಲಿ ಕಂಡುಬರುತ್ತದೆ.

**೫.೪. ಪರಿಶಿಷ್ಟ ಪಂಗಡಗಳು :** ಮೇದ, ಗೊಂಡ, ರಾಜಗೊಂಡ, ಟೋಕರಿ ಕೋಳಿ, ಬೇಡ, ಪಾರ್ಧಿ ಮುಂತಾದ ಬುಡಕಟ್ಟು ಗಳು ಜಿಲ್ಲೆಯಲ್ಲಿ ವಾಸಿಸುತ್ತವೆ. ಗೊಂಡ, ಟೋಕರಿಕೋಳಿ ಬುಡಕಟ್ಟುಗಳಲ್ಲಿ ಜಂಗಮರು ಹೋಗಿ ಅವರ ಮದುವೆ, ಮರಣ ಮತ್ತು ಇನ್ನಿತರ ಕ್ರಿಯೆಗಳನ್ನು ಮಾಡುವುದು, ಪೂಜಾದಿಗಳನ್ನು ನೆರವೇರಿಸುವ ಯಾವುದೇ ಶುಭ ದಿನಗಳ ಬಗ್ಗೆ ಪಂಚಾಂಗ ನೋಡಿ ಹೇಳುವುದು ಮಾಡುತ್ತಾರೆ. ಹಿಂದೆ ವೀರಶೈವ ಜಂಗಮರು ಇಂತಹವರ ಮನೆಗೆ ಹೋಗಬಾರದು ಎಂದು ಮೇಲವರ್ಗ ಆಕ್ಷೇಪ ಮಾಡುತ್ತಿತ್ತು. ಆದರೆ ಇಂದು ಆ ಕಟ್ಟಳೆಗಳು ಸಡಿಲಕೆಯಾಗಿವೆ.

**೫.೫. ಅಲ್ಪಸಂಖ್ಯಾತರ ಸಮುದಾಯಗಳು**

**ಜೈನ ಮತ್ತು ಬೌದ್ಧರು :** ಜೈನರಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ೨ ಪಂಗಡಗಳಿವೆ. ಈ ಸಮುದಾಯದವರು ಜಿಲ್ಲೆಯಲ್ಲಿ ಹೆಚ್ಚಾದ ಪ್ರಮಾಣದಲ್ಲಿ ಕಂಡುಬರು

ವುದಿಲ್ಲ. ಅವರು ಹೆಚ್ಚಾಗಿ ವ್ಯಾಪಾರದಲ್ಲಿ ತೊಡಗಿಸಿಕೊಂಡವರು. ಹೆಚ್ಚಿನ ಜನರು ವ್ಯಾಪಾರ ಮಾಡಿಕೊಂಡು ಜೀವಿಸಿರುತ್ತಾರೆ. ಬುದ್ಧ ಮತ್ತು ಮಹಾವೀರರನ್ನು ಪೂಜಿಸುತ್ತಾರೆ. ಜಿಲ್ಲೆಯ ತುಂಬ ಬೌದ್ಧ ಮತ್ತು ಜೈನ ಮಂದಿರಗಳು ಇವೆ. ಪ್ರತಿ ದಿವಸ ಪೂಜಾದಿಗಳು ನೆರವೇರುತ್ತವೆ.

**ಇಸ್ಲಾಂ :** ಇವರು ಮೂಲತ: ಅರಬ್ ದೇಶದವರು ಎಂದು ಹೇಳಲಾಗಿದೆ. ಭಾರತಕ್ಕೆ ಕ್ರಿ.ಶ. ೧೦ನೇ ಶತಮಾನದಲ್ಲಿ ವ್ಯಾಪಾರಕ್ಕಾಗಿ ಬಂದು ಸಂಪತ್ತನ್ನು ಕೊಳೆ ಹೊಡೆದವರಾದ ಮಹಮ್ಮದ್ ಘಜ್ನಿ ಮತ್ತು ಮಹಮ್ಮದ್ ಘೋರಿ ಪ್ರಮುಖರು. ಆದರೆ ಇಲ್ಲಿಯೇ ಶಾಶ್ವತ ನೆಲೆಯೂರಿದ ಘೋರಿ, ಇವನೇ ಮುಸ್ಲಿಂ ಸಂತತಿಯ ಏಳಿಗೆಗೆ ಕಾರಣೀಭೂತನಾದ. ಹೀಗಾಗಿ ಭಾರತದಲ್ಲಿ ಗುಲಾಮವಂಶ, ಖಿಜ್ಜಿ ವಂಶ, ತುಘಲಕ್ ವಂಶ ಮತ್ತು ಲೋದಿವಂಶಗಳು ಮತ್ತು ಉತ್ತರ ಭಾರತದ ಕಡೆ ಮೊಗಲರು, ದಕ್ಷಿಣ ಭಾರತದಲ್ಲಿ ಬಹಮನಿಗಳು ಮುಸ್ಲಿಂ ಜನಾಂಗದ ಬೆಳವಣಿಗೆಗೆ ನಾಂದಿಹಾಡಿದರು. ನಂತರ ಇವರು ಬಹಮನಿ ಮತ್ತು ನಿಜಾಮರ ಕಾಲದಲ್ಲಿ ಶಾಶ್ವತವಾಗಿ ನೆಲೆಯೂರಿದು. ಇವರು ಮೂಲತ: ಕಾಯಕ ಜೀವಿಗಳು. ಎಂತಹ ಕೆಲಸವಿರಲಿ ಮಾಡಲುಹಿಂದೆ-ಮುಂದೆ ಜರುಗುವುದಿಲ್ಲ. ಜಂಗಮರಂತೆ ಇವರಲ್ಲಿ ಫಕೀರ ಮುಲ್ಲಾ ಎಂಬುವರು ಮುಸ್ಲಿಂರಲ್ಲಿ ಪ್ರತಿಯೊಂದು ಕ್ರಿಯೆಗಳನ್ನು ಮಾಡುತ್ತಾರೆ. ಜಂಗಮರಂತೆ ಊರುಗಳಲ್ಲಿ ಫಕೀರರು ಹಿಟ್ಟು ಬೀಡುತ್ತಾರೆ. ಇವರು ಮಾಡುವ ಕ್ರಿಯೆಗಳು ಇಬ್ಬರಲ್ಲಿ ಬೇರೆಯಾಗಿ ಕಂಡುಬಂದರೂ ಹೊಂದಿರುವ ಉದ್ದೇಶ ಒಂದೆಯಾಗಿದೆ.

**ಕ್ರಿಶ್ಚಿಯನ್ನರು :** ಧರ್ಮ ಪ್ರಸಾರಕ್ಕೆಂದೆ ಬಂದ ಜನಾಂಗ ಜಿಲ್ಲೆಯ ತುಂಬ ನೆಲೆಸಿದ್ದಾರೆ. ಇಲ್ಲಿ ಪ್ರೊಟೆಸ್ಟಂಟರ ಜನಸಂಖ್ಯೆ ಹೆಚ್ಚು. ನಮ್ಮ ಭಾರತದ ಹೊಲೆಯರ ಸಮುದಾಯವು ಈ ಧರ್ಮಕ್ಕೆ ಮಾರು ಹೋಗಿ ಮತಾಂತರ ಗೊಂಡರು. ಹೀಗಾಗಿ ಜಿಲ್ಲೆಯ ತುಂಬ ಮತಾಂತರ ಕ್ರಿಶ್ಚಿಯನರೇ ಸಿಗುತ್ತಾರೆ. ಪ್ರತಿಯೊಂದು ಹಳ್ಳಿಗಳಲ್ಲಿ ಚರ್ಚ ಕಟ್ಟಿಸಿದ್ದಾರೆ. ತಮ್ಮ ಧರ್ಮ ಗುರುವಾದ ಯೋಸುಕ್ರಿಸ್ತನನ್ನು ಪ್ರತಿ ರವಿವಾರದಂದು ಪ್ರಾರ್ಥನೆ ಮಾಡುತ್ತಾರೆ.

**ಸಿಕ್ಕರು :** ಸಿಕ್ಕರ ಪವಿತ್ರ ಕ್ಷೇತ್ರ ಜಿಲ್ಲೆಯಾಗಿದೆ. ಸಿಕ್ಕರ ಗುರುವಾದ ನಾನಕನು ದಖ್ಖನ್ ಪ್ರದೇಶದಲ್ಲಿ ಸಂಚರಿಸುತ್ತಿದ್ದಾಗ, ಇಲ್ಲಿಗೆ ಬಂದು ತಂಗಿದನೆಂದು ಹೇಳಲಾಗಿದೆ. ಗುರುನಾನಕರು ತಮ್ಮ ಯೋಗಶಕ್ತಿಯಿಂದ ನೀರಿನ ಝರಿ ಉತ್ಪಾದಿಸಿದರಂತೆ. ಈ ಝರಿಗೆ ಗುರುನಾನಕ ಝರಿ ಎಂದು ಕರೆಯುತ್ತಾರೆ. ಇದರಿಂದ ಸಿಕ್ಕರ ಸಮುದಾಯ ಜಿಲ್ಲೆಯಲ್ಲಿ ನೆಲೆಸುವಂತಾಗಿದೆ. ಪಂಜಾಬಿ ಮತ್ತು ಹಿಂದಿ ಮಾತನಾಡುತ್ತಾರೆ. ಇವರು ವ್ಯಾಪಾರಗಳಲ್ಲಿ ಹೆಚ್ಚಾಗಿ ತೊಡಗಿಸಿಕೊಂಡಿದ್ದಾರೆ. ಗೌರಿ ಹುಣ್ಣಿಮೆಯಂದು ಜಾತ್ರೆ ನಡೆಯುತ್ತದೆ. ಇದರಲ್ಲಿ ಎಲ್ಲ ಸಮುದಾಯದವರು ಭಾಗವಹಿಸುತ್ತಾರೆ.

**೫.೬. ಅಲೆಮಾರಿಗಳು :** ಜಿಲ್ಲೆಯಲ್ಲಿ ಅರೆ ಅಲೆಮಾರಿಯ ಸಮುದಾಯಗಳು ಜೀವಿಸುತ್ತವೆ. ಕೆಲವು ದಿನಗಳು ಇಲ್ಲಿ ಕೆಲವು ದಿನಗಳು ಮತ್ತೆಲ್ಲೊ ಎಂಬ ರೀತಿಯಲ್ಲಿ ಬುದುಕುತ್ತಿವೆ. ಪ್ರಮುಖವಾಗಿ ಇರಾಣಿ ಸಮುದಾಯ, ಘಿಸಾಡಿ ಸಮುದಾಯಗಳು ತಮಟಗಾರ, ಬಾಳ ಸಂತರು, ಪೋತರಾಜರು ಉಂಟು.

ಹೀಗೆ ಎಲ್ಲಾ ಸಮುದಾಯಗಳೂ ತಮ್ಮ ತಮ್ಮ ಸಂಸ್ಕೃತಿಗಳ ನಲೆಯಲ್ಲಿ ಜೀವಿಸುತ್ತಿವೆ. ಯಾವದೇ ಸಮುದಾಯಗಳಲ್ಲಿ ಭೇದ,ಭಾವ, ತಾರತಮ್ಯತೆ ಮಾಡದೇ ಸರ್ವರು ಒಂದೇ ಎಂಬ ತತ್ವದ ಪರಿಮಿತಿಯಲ್ಲಿ ವಾಸಿಸುತ್ತಿದ್ದಾರೆ.

## ೬. ಜನ ಜೀವನ

೧೯೯೧ರ ಜನಗಣತಿಯ ಪ್ರಕಾರ ಬೀದರ ಜಿಲ್ಲೆಯ ಒಟ್ಟು ವಿಸ್ತೀರ್ಣ ೫.೪೪೮ ಚದುರ ಕಿ.ಮೀ. ಹೊಂದಿದೆ. ಮತ್ತು ಜನಸಂಖ್ಯೆ ಗಂಡು, ಹೆಣ್ಣು ಮತ್ತು ನಗರದಲ್ಲಿ ವಾಸಿಸುವ ಜನಸಂಖ್ಯೆಯ ಕೆಳಗಿನ ಕೋಷ್ಟ ೧ ರಂತೆ ಹೊಂದಿದೆ(ಕೋಷ್ಟಕ ೧ ನೋಡಿ). ಇಲ್ಲಿನ ವಾತಾವರಣ ತುಂಬ ಹಿತಕರವಾದದ್ದು ಜನರು ಕೂಡ ಅಷ್ಟೆ ಆರೋಗ್ಯವಂತರು, ಸದೃಢಕಾಯರು, ಸ್ವಲ್ಪ ಕಪ್ಪು, ಸ್ವಲ್ಪ ಕೆಂಪು ಬಣ್ಣದ ಜನರಿದ್ದಾರೆ. ಆಯಾ ಜನಾಂಗಗಳು ತಮ್ಮ ಸಂಸ್ಕೃತಿಗೆ ತಕ್ಕಂತೆ ಉಡುಪುಗಳು ಧರಿಸುತ್ತಾರೆ. ಹೆಚ್ಚಾಗಿ ಸರ್ವ ಜನಾಂಗಗಳ ಆಧುನಿಕ ಉಡುಪುಗಳಿಗೆ ಮಾರು ಹೋಗಿ ಅವುಗಳು ತೊಡುತ್ತಿದ್ದಾರೆ. ಬಂಗಾರ- ಉಂಗರ, ಚೈನು ಹೂಗಳು ಜಿಲ್ಲೆಯಲ್ಲಿ ಬಹುತೇಕ ಜನಾಂಗದವರು ಹಾಕಿಕೊಳ್ಳುತ್ತಾರೆ.

## ೭. ಮಳೆ ಮತ್ತು ಬೆಳೆಗಳು

ಪ್ರತಿ ವರ್ಷ ಜೂನ್ ತಿಂಗಳ ಮೊದಲನೆ ವಾರದಲ್ಲಿ ಮಾನ್‌ಸೂನ್ ಋತು ಪ್ರಾರಂಭವಾಗುತ್ತದೆ. ಇದು ಬೇಸಾಯಕ್ಕೆ ಅತ್ಯಂತ ಅನುಕೂಲಕರವಾದದ್ದು. ಸುಮಾರು ಒಂದು ವರ್ಷದಲ್ಲಿ ಅಂದರೆ ೫೧ ದಿನಗಳಲ್ಲಿ ಮಳೆ ಕಂಡು ಬರುತ್ತದೆ. ಇಲ್ಲಿ ಸರಾಸರಿ ೭೬೪.೮ ಮಿ.ಮೀಟರ ಮಳೆಯಾಗುತ್ತದೆ. ಸರಾಸರಿ ಉಷ್ಣಂಶ ೨೫ ರಿಂದ ೪೫ ರಷ್ಟು ಡಿಗ್ರಿ ಹೊಂದಿ ಅನುಕೂಲಕರ ವಾದ ವಾತಾವರಣ ಹೊಂದಿರುತ್ತದೆ. ಜಂಗಮರು ಪಂಚಾಂಗವನ್ನು ನೋಡಿ ಮಳೆ ಈ ತಿಂಗಳಲ್ಲಿ ಆರಂಭವಾಗುತ್ತದೆ. ಮಿರ್‌ಗ್ ಹುಡಿದನಂತರ ಮಳೆ ಬಿಳುತ್ತದೆ. ತದನಂತರ ದವಸಧಾನ್ಯಗಳನ್ನು ಈ ದಿನದಂದು ಈ ಕಡೆ ಮುಖ ಮಾಡಿ ಬಿತ್ತುವ ಕಾರ್ಯವನ್ನು ಪ್ರಾರಂಭಿಸಬೇಕೆಂದು ಇಂದಿಗೂ ಹೇಳುತ್ತಾರೆ. ಅವರು ಹೇಳಿದ ಪ್ರಕಾರ ತಮ್ಮ ಕಾರ್ಯ ಕೆಲಸಗಳಲ್ಲಿ ತೊಡಗಿಸಿಕೊಳ್ಳುವರು. ಜೋಳ, ಭತ್ತ, ಸಜ್ಜೆ, ಮೇಕೆಜೋಳ, ಹೆಸರು, ಉದ್ದು,

# ಕೋಷ್ಟಕ ೧ ಬೀದರ ಜಿಲ್ಲೆಯ ಜನಸಂಖ್ಯೆ(೧೯೯೧ರ ಜನಗಣತಿ)

| ಕ್ರ. ಸಂ | ತಾಲೂಕುಗಳು | ಒಟ್ಟು ಗ್ರಾಮ ಮತ್ತು ನಗರ | ಒಟ್ಟು ಜನಸಂಖ್ಯೆ | ಗಂಡು | ಹೆಣ್ಣು | ಒಟ್ಟು ಶೇಕಡವಾರು | ಪುರುಷರು | ಸ್ತ್ರೀಯರು |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧ | ಔರಾದ | ಒಟ್ಟು | ೨೦೯೬೮೭ | ೧೦೬೬೭೬ | ೧೦೩೦೧೧ | ೧೬.೭೪ | ೧೬.೬೪ | ೧೬.೮೫ |
| | | ಗ್ರಾಮ | ೨೦೯೬೮೭ | ೧೦೬೬೭೬ | ೧೦೩೦೧೧ | ೨೦.೮೦ | ೨೦.೮೧ | ೨೦.೯೮ |
| | | ---- | ----- | ----- | ----- | ---- | --- | --- |
| ೨ | ಬಸವಕಲ್ಯಾಣ | ಒಟ್ಟು | ೨೪೬೦೩೪ | ೧೨೪೭೧೪ | ೧೨೧೩೨೦ | ೧೯.೬೫ | ೧೯.೪೬ | ೧೯.೮೫ |
| | | ಗ್ರಾಮ | ೨೦೩೩೨೨ | ೧೦೨೫೨೭ | ೧೦೦೭೯೫ | ೨೦.೧೭ | ೨೦.೦೦ | ೨೦.೩೩ |
| | | ನಗರ | ೪೨೭೧೨ | ೨೨೧೮೭ | ೨೦೫೨೫ | ೧೭.೫೦ | ೧೭.೭೭ | ೧೭.೭೬ |
| ೩. | ಭಾಲ್ಕಿ | ಒಟ್ಟು | ೨೨೨೫೩೯ | ೧೧೩೭೮೩ | ೧೦೮೭೫೬ | ೧೭.೭೭ | ೧೭.೭೫ | ೧೭.೭೯ |
| | | ಗ್ರಾಮ | ೧೯೫೬೬೨ | ೯೯೨೨೧ | ೯೬೪೪೧ | ೧೯.೪೦ | ೧೯.೩೬ | ೧೯.೪೫ |
| | | ನಗರ | ೨೬೮೭೭ | ೧೪೫೬೨ | ೧೨೩೧೫ | ೧೧.೦೧ | ೧೧.೩೩ | ೧೦.೬೬ |
| ೪ | ಬೀದರ | ಒಟ್ಟು | ೩೨೯೮೬೬ | ೧೭೧೪೪೫ | ೧೫೮೪೨೧ | ೨೬.೩೪ | ೨೬.೭೫ | ೨೫.೯೧ |
| | | ಗ್ರಾಮ | ೧೯೯೦೬೨ | ೧೦೨೦೮೦ | ೯೬೯೮೨ | ೧೯.೭೪ | ೧೯.೯೨ | ೧೯.೫೬ |
| | | ನಗರ | ೧೩೦೮೦೪ | ೬೯೩೬೫ | ೬೧೪೩೯ | ೫೩.೬೦ | ೫೩.೯೮ | ೫೩.೧೬ |
| ೫ | ಹುಮನಾಬಾದ | ಒಟ್ಟು | ೨೪೪೨೦೭ | ೧೨೪೩೫೫ | ೧೧೯೮೫೨ | ೧೯.೫೦ | ೧೯.೪೦ | ೧೯.೬೦ |
| | | ಗ್ರಾಮ | ೨೦೦೫೪೪ | ೧೦೧೯೭೭ | ೯೮೫೬೭ | ೧೯.೮೯ | ೧೯.೯೦ | ೧೯.೮೮ |
| | | ನಗರ | ೪೩೬೬೩ | ೨೨೩೭೮ | ೨೧೨೮೫ | ೧೭.೮೯ | ೧೭.೪೨ | ೧೮.೪೨ |
| | | ಒಟ್ಟು | ೧೨೫೨೩೩೩ | ೬೪೦೯೭೩ | ೬೧೧೩೬೦ | ೧೦೦.೦೦ | ೧೦೦.೦೦ | ೧೦೦.೦೦ |
| | | ಗ್ರಾಮ | ೧೦೦೮೨೭೭ | ೫೧೨೪೮೧ | ೪೯೫೭೯೬ | ೮೦.೫೧ | ೭೯.೯೫ | ೮೧.೧೦ |
| | | ನಗರ | ೨೪೪೦೫೬ | ೧೨೮೪೯೨ | ೧೧೫೫೬೪ | ೧೯.೪೯ | ೨೦.೦೫ | ೧೮.೯೦ |

(ಆಧಾರ: ಭಾರತೊ ಜನಗಣತಿ-೧೯೯೧, ಕರ್ನಾಟಕ ಸರಣಿ ೧೧, ಪುಟ.೭೪)

೧೯೯೧ರ ಜನಗಣತಿಯ ಅಂಕಿ ಅಂಶಗಳ ಪ್ರಕಾರ ಬೀದರ ಜಿಲ್ಲೆಯ ಜನಸಂಖ್ಯೆ ೧೨,೫೨,೩೩೩(ಪುರುಷರು ೬೪,೦೯೭೩, ಸ್ತ್ರೀಯರು ೬,೧೧,೩೬೦) ಇದೆ. ಕರ್ನಾಟಕದ ಜಿಲ್ಲೆಗಳು ಹೊಲಿಸಿ ನೋಡಿದರೆ ಭೂ ಪ್ರದೇಶ ಮತ್ತು ಜನಸಂಖ್ಯೆಯಲ್ಲಿ ಬೀದರ ಜಿಲ್ಲೆಯ ಶ್ರೇಣಿ ಹದಿನೇಳನೆಯ ಸ್ಥಾನವಾಗಿದೆ. ಜಿಲ್ಲೆಯ ಜನ ಸಾಂದ್ರತೆ ಪ್ರತಿ ಚದುರ ಕಿ.ಮೀ. ೨೩೦ ಆಗಿದ್ದು, ಲಿಂಗ ಪ್ರಮಾಣ ಸರಾಸರಿ ಒಂದು ಸಾವಿರ ಪುರುಷರಿಗೆ ೯೫೩ ಸ್ತ್ರೀಯರಿದ್ದಾರೆ. ಜಿಲ್ಲೆಯ ಐದು ತಾಲೂಕುಗಳ ಜನಸಂಖ್ಯೆ ಹೋಲಿಸಿದಾಗ ಬೀದರ ಅತಿ ಹೆಚ್ಚಿನ ಹಾಗೂ ಔರಾದ ಅತಿ ಕಡಿಮೆ ಜನಸಂಖ್ಯೆಯನ್ನು ಹೊಂದಿದ ತಾಲೂಕುಗಳಾಗಿವೆ.

ಅಲಸಂದಿ, ಎಳ್ಳು ಕಾರಾಳು ಮತ್ತು ಸೂರ್ಯಕಾಂತಿ ಬೆಳೆಗಳು ಮುಂಗಾರಿನಲ್ಲಿ ಬೆಳೆಯುತ್ತಾರೆ. ಹಿಂಗಾರಿನಲ್ಲಿ ಗೋಧಿ, ಬಿಳಿಜೋಳ, ಸೂರ್ಯಕಾಂತಿ, ಕಡಲೆ, ಕುಸುಬೆ, ಅಗಸೆ, ಸಾಸೀವೆ, ತೊಗರೆ ಬೆಳೆಯುತ್ತಾರೆ. ವಾಣಿಜ್ಯ ಬೆಳೆಗಳಾದ ಕಬ್ಬು ಹೆಚ್ಚಾಗಿ ಬೆಳೆಯುತ್ತಾರೆ. ಇತ್ತಿಚಿಗೆ ರೇಷ್ಮೆ ಕೂಡ ಬೆಳೆಯುತ್ತಿದ್ದಾರೆ. ತೋಟಗಾರಿಕೆಯಲ್ಲಿ ಹೂವಿನ ಮರಗಳು, ಮಾವಿನ ಹಣ್ಣು, ಪಪಾಯಿ ಹಣ್ಣು, ನೇರಳೆಹಣ್ಣು, ಸಪೋಟ, ಬಾಳೆಹಣ್ಣು, ನಿಂಬೆಹಣ್ಣು, ಸೀತಾಫಲ್, ಬಾರೆಹಣ್ಣು, ಬೆಳೆಯುವುದುಂಟು, ಹೈನುಗಾರಿಕೆಯಲ್ಲಿ ಜಿಲ್ಲೆ ಸಮೃದ್ಧವಾಗಿದೆ. ಪ್ರತಿಯೊಬ್ಬರ ಮನೆಗಳಲ್ಲಿ ಎಮ್ಮೆ, ಆಕಳು ಇವೆ. ಹೀಗಾಗಿ ತಮಗೆ ಬೇಕಾದಷ್ಟು ಹಾಲನ್ನು ಇಟ್ಟುಕೊಂಡು ಉಳಿದ ಹಾಲು ಮಾರಾಟ ಮಾಡುತ್ತಾರೆ. ಹಾಲಿನ ಡೈರಿ ಫಾರ್ಮ ಕೂಡ ಸ್ಥಾಪಿತವಾಗಿದ್ದರಿಂದ ಬೀದರ ಜಿಲ್ಲೆಯು ಹೈನುಗಾರಿಕೆಯಲ್ಲಿ ಶ್ರೀಮಂತವಾಗಿದೆ. ಜಿಲ್ಲೆಯಲ್ಲಿ ಜಂಗಮರು ಎಮ್ಮೆ, ಆಕಳುಗಳು ಸಾಕಿಕೊಂಡು ಬರುತ್ತಿದ್ದಾರೆ. ಕೆಲವರು ಹಾಲು, ಮೊಸರು, ಬೆಣ್ಣೆ ವ್ಯಾಪಾರ ಮಾಡುವರು.

ಕುರಿಸಾಕಣಿಕೆ, ಆಡು, ಕೋಳಿ, ಹಂದಿಗಳು ಕೂಡ ಸಾಕುತ್ತಾರೆ. ಕುರಿ ಆಡುಗಳು ಸಾಕುವುದು ಜಿಲ್ಲೆಯ ಪ್ರತಿಯೊಂದು ಹಳ್ಳಿಗಳಲ್ಲಿ ಇದೆ. ಹೊಲದಲ್ಲಿ ಕುರಿ- ಆಡು ಕೂಡಿಹಾಕಿ ಅಪ್ಪಟ ಗೋಬ್ಬರವನ್ನು ತೆಗೆಯುವದಕ್ಕಾಗಿ ಕುರಿ-ಹಿಕ್ಕಿಗಳನ್ನು ಸಂಗ್ರಹಿಸುತ್ತಾರೆ. ಕೋಳಿಗಳು ಕೂಡ ಹಲವಾರು ಮನೆಗಳಲ್ಲಿ ಸಾಕುತ್ತಾರೆ. ಹಂದಿಗಳು ಕೇವಲ ಎಲುಕರು ಸಾಕುತ್ತಾರೆ. ಜೋತೆಗೆ ತುಂಡ ಉಳಿಮೆಗಾರರು ಬೇಸಾಯ ಮಾಡುವದುಂಟು ಇದು ಜಂಗಮರಲ್ಲಿಯು ಕಂಡುಬರುತ್ತದೆ. ಇವರು ಹೊಲವಿರುವ ಜನರಲ್ಲಿ ೨ ವರ್ಷಕ್ಕಾಗಿ ೫ ವರ್ಷಕ್ಕಾಗಿ ದುಡ್ಡನ್ನು ಕೊಟ್ಟು ಹೊಲವನ್ನು ಮಾಡುತ್ತಾರೆ. ಇದು ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

## ೮. ಭಾಷೆ

ಹೈದ್ರಾಬಾದ ಕರ್ನಾಟಕ ಪ್ರದೇಶವಾದ ಜಿಲ್ಲೆ ತೆಲಗು, ಮರಾಠಿ, ಗಡಿಭಾಗಗಳನ್ನೂ ಹೊಂದಿದರಿಂದ ಆಯಾ ಭಾಷೆಗಳ ಒತ್ತಡಕ್ಕೆ ಒಳಗಾಗಿದೆ. ಆದರಲ್ಲೇ ಕನ್ನಡ ವೈಭವ ಪೂರ್ಣವಾಗಿ ಬೆಳೆದು ಬಂದದ್ದು ತುಂಬ ವೈಶಿಷ್ಟ್ಯವಾಗಿದೆ. ಏಕೆಂದರೆ ಅನೇಕ ಬಗೆಯ ಜನಾಂಗಗಳು ಮತ್ತು ಭಾಷೆಗಳು ಇರುವದು ಸಹಜವಾಗಿದೆ. ಅಕ್ಕ-ಪಕ್ಕ ಆಂಧ್ರ, ಮಹಾರಾಷ್ಟ್ರ ರಾಜ್ಯಗಳಿವೆ. ಜೊತೆಗೆ ನಿಜಾಮರ ಆಳ್ವಿಕೆ ಇದ್ದುದರಿಂದ ಉರ್ದು, ವಿಮಾನ ತರಬೇತಿ ಕೇಂದ್ರವಿರುವುದರಿಂದ ಹಿಂದಿ ಮತ್ತು ಗಾಂಧಿಗಂಜಿನ ಪ್ರತಿಯೊಂದು ವ್ಯವಹಾರವೂ ಮೋಡಿ ಭಾಷೆಗಳಲ್ಲಿ ಜರುಗುತ್ತದೆ. ಈಗ ಕಡಿಮೆಯಾಗಿರುವಂತೆ ತೋರುತ್ತದೆ. ಇಷ್ಟು ಭಾಷೆಗಳ

ಕಲಬೆರಕೆ ಕಂಡು ಬರುತ್ತದೆ. ಉರ್ದು, ಮರಾಠಿ, ತೆಲಗು, ಹಿಂದಿ ಇವುಗಳ ಮಧ್ಯ ಕನ್ನಡವು ಉಳಿಸಿ ಬೆಳಸಿಕೊಂಡು ಬರುತ್ತಿದೆ. ಕರ್ನಾಟಕದಲ್ಲಿ ಬೀದರ ಜಿಲ್ಲೆಗೆ ಗಂಡು ಮೆಟ್ಟಿನ ನಾಡೆಂದು ಕರೆಯುವರು. ಮಾನವನ ಸರ್ವ ವಿಧದ ಅಭಿವೃದ್ಧಿಗೆ ಕ್ರಾಂತಿಯ ಕಹಳೆಯನ್ನೂದಿದ ತಾಣ ಎಂದು ಇತಿಹಾಸ ಪ್ರಸಿದ್ಧಿಯನ್ನು ಪಡೆದಿದೆ. ಅಪ್ಪಟ ಹಾಗೂ ಅಚ್ಚಗನ್ನಡ ಸಿಗುವುದು ಯಾವ ಜಿಲ್ಲೆ ಎಂದರೆ ಅದು ಬೀದರ ಜಿಲ್ಲೆಯೆಂದು ಭಾಷೆ ಸಂಶೋಧಕರ ಮತ ಹಾನ - ಹನ (ಇದ್ದಾನೆ) ಕುಡು-ಕೊಡು (ತೆಗೆದುಕೊಳ್ಳು) ಹಾರ-ಹರ (ಇದ್ದಾರೆ) ಕಲ್ಲಿ (ಅಲ್ಲಿ) ಕಿಲ್ಲಿ( ಇಲ್ಲಿ), ಕದು-ಕಿದು (ಅದು - ಇದು), ಅಕೋ ಪೋರಿ (ಹುಡುಗಿ), ಪಾರ (ಹುಡುಗ) ಹೊಯ್ಯಿ (ಹಾಕು), ಹೊತ್ರಾಳ್ (ಮುಂಜಾವು) ಖೊಲ್ಲಿ (ಕೋಣೆ) ಉಳ್ಳಾಕ್, ಮಾಡಾರಿ, ಹೊಂಟದ ಹೀಗೆ ಜಿಲ್ಲೆಯ ತುಂಬ ಅಚ್ಚಗನ್ನಡ ಭಾಷೆ ಬಳಸುವುದು ಸರ್ವ ಸಾಮಾನ್ಯವಾಗಿದೆ. ಅಸಂಖ್ಯಾತ ವಿಶಿಷ್ಟ ಪದಗಳು, ಸಂಖ್ಯೆವಾಚಕಗಳು, ವಿಶೇಷಣಗಳು, ವಿಭಕ್ತಿ ಪ್ರತ್ಯಯಗಳು ಇವುಗಳ ವೈಶಿಷ್ಟ್ಯ. ಉರ್ದು, ಮರಾಠಿ ಭಾಷೆ ಪ್ರಭಾವದಲ್ಲಿ ಕಂಡುಬರುವುದು ಸಹಜ (ಸವದತ್ತಿಮಠ ಸಂಗಮೇಶ:೧೯೮೨:೮೨). ಪಾರ್ಸಿ ಭಾಷೆಯ ಮಾತನಾಡುವ ಜನರು ಇದ್ದಾರೆ ಎಂಬ ಸುಳಿಯು ಇದೆ. ಕನ್ನಡ ಸದ್ಯ ವೈಭವಪೂರ್ಣವಾಗಿ ಬೆಳೆಯುತ್ತಿದೆ, ಬೆಳೆಸುವಲ್ಲಿ ಅನೇಕ ಕನ್ನಡ ಪರ ಸಂಘ ಸಂಸ್ಥೆಗಳು ಶ್ರಮಿಸುತ್ತಿವೆ. ಹೀಗಾಗಿ ಸದ್ಯದ ಕನ್ನಡ ತುಂಬ ಬಲಿಷ್ಠವಾಗಿದೆ. ಆಡಳಿತದಲ್ಲಿ ಕನ್ನಡ ಕಾರ್ಯರೂಪಕ್ಕೆ ಬಂದಿದೆ. ಆದರೂ ಸಂಪೂರ್ಣವಾಗಿ ಬರಬೇಕ್ಕಾಗಿದೆ. ಆದ್ದರಿಂದ ಸರಕಾರದವರು ತುಂಬ ಎಚ್ಚರವಹಿಸಿ ಕನ್ನಡ ಭಾಷೆ ಬೆಳಸುವಲ್ಲಿ ಗಮನಹರಿಸಬೇಕಾಗಿದೆ. ಪ್ರದೇಶದ ಭಾಷೆಯ ಬಗ್ಗೆ ಸಂಶೋಧನೆಯಾಗಬೇಕಾಗಿದೆ. ಭಾಷೆ ದೃಷ್ಟಿಯಿಂದ ಅನೇಕ ಭಿನ್ನತೆಗಳು ಕೆಲವೊಂದು ರಂಗದಲ್ಲಿ ಕಾಣಿಸಿಕೊಂಡರೂ ಬೀದರ ಕನ್ನಡ ಭಾಷೆಯ ಒಂದು ಪ್ರಮುಖ ಭಾಷಾ ಪ್ರಭೇದ ಕ್ಷೇತ್ರವೆಂದು ಹೇಳಬಹುದು.

## ೯. ವಾಸ್ತುಶಿಲ್ಪ

ಜಿಲ್ಲೆ ಕಲಾತ್ಮಕವಾದ ವಾಸ್ತುಶಿಲ್ಪವನ್ನು ಕೊಟ್ಟಿದೆ. ಹಿಂದಿನ ಪ್ರಸಿದ್ಧ ೬೪ ಕಲೆಗಳನ್ನು ಶಿಲ್ಪ ಎಂಬ ಹೆಸರಿನಿಂದ ಕರೆಯುತ್ತಿದ್ದುಂಟು. ವಾಸ್ತುಶಿಲ್ಪವು ಅವುಗಳಲ್ಲಿ ಒಂದಾಗಿದೆ. ರಾಜಮಹಾರಾಜರು ವಾಸಿಸುವುದಕ್ಕಾಗಿ ವಿಶೇಷವಾಗಿ ಕೊರೆದ ಸ್ತಂಭಗಳ ಮುಖಾಂತರ ಚಪ್ಪರಕಾರವಾಗಿ ಕೋಟೆ ಕೊತ್ತಲಗಳನ್ನು ನಿರ್ಮಿಸುತ್ತಿದ್ದರು. ಅಂತೆಯೇ ಮಸೀದಿಗಳು, ಮಂದಿರಗಳು, ಮಠಗಳು, ಗುಮ್ಮಜಗಳು ಹಾಗೂ ಕೋಟೆಗಳು ಇಂದಿಗೂ ಜೀವಂತ ಸಾಕ್ಷಿಯಾಗಿ ನಿಂತಿವೆ. ವಾಸ್ತುಶಿಲ್ಪವು ಪ್ರಮುಖವಾಗಿ ಧಾರ್ಮಿಕ ತಳಹದಿಯ ಮೇಲೆ ನಿರ್ಮಿತಗೊಂಡಿದ್ದರೂ ಇಲ್ಲಿನ ಭೌಗೋಳಿಕ ಸನ್ನಿವೇಶ ರಾಜಕೀಯ ಐತಿಹಾಸಿಕ ಪರ್ವತ ಸಂದರ್ಭಗಳು ಇದರ ಬೆಳವಣಿಗೆಯ

ತನ್ನ ದಟ್ಟ ಪ್ರಭಾವ ಮುದ್ರೆಯುತ್ತಿರುವುದನ್ನೂ ಕಾಣಬರುತ್ತದೆ. ಕಾಲಗತಿಸಿದಂತೆ ಆಯಾ ಇತಿಹಾಸಕ್ಕನುಗುಣವಾಗಿ ವಾಸ್ತು ಶಿಲ್ಪವು ಜನ್ಮತಾಳಿದೆ.

ಈಗ ದೊರಕಿರುವ ಸಾಕ್ಷಿಗಳ ಪ್ರಕಾರ ಬೀದರ ಜಿಲ್ಲೆಯು ಅತೀ ಪ್ರಾಚಿನ ಕಟ್ಟಡಗಳ ಕೆಲವು ಅವಶೇಷಗಳು ವಿದರ್ಭ ಅರಸರ ಕಾಲದವು ಎಂಬ ಊಹೆಗಳುಂಟು. ಏಕೆಂದರೆ ಬೀದರ ನಗರವು ವಿದುರನಗರ ಎಂದು ಕರೆದಿದ್ದರಿಂದ ಅವರ ಕಾಲದಿಂದಲೇ ಬಂದಿದೆ ಎಂದು ಊಹಿಸಬಹುದಾಗಿದೆ. ಆ ನಂತರ ಇತಿಹಾಸದಲ್ಲಿ ಮೌರ್‍ಯರು, ಗುಪ್ತರು ಎತ್ತರವಾದ ಗುಡ್ಡಗಳ ಇಳುಕಲ್ಲುಗಳಲ್ಲಿ ಕೊರೆದ ಗುಹೆಗಳ ರಚನೆಗಳು, ಬಸದಿಗಳು, ಗುಹಾಂತರ ದೇವಾಲಯಗಳ ಹಾಗೂ ದೇವಲಾಯಗಳು ಕಟ್ಟಡಗಳು ನಿರ್ಮಾಣವಾಗಿವೆ. ಈ ಪ್ರಾಚಿನ ಅವಶೇಷಗಳು ನಂತರದ ಶರಣರ ಗವಿಗಳ ನಿರ್ಮಾಣದಲ್ಲಿ ಕಾಣುತ್ತೇವೆ. ಹಿಂದು ದೇವಲಾಯಗಳ ನಿರ್ಮಾಣ ಗುಪ್ತರ ಕಾಲದಲ್ಲಿ ಪ್ರಾರಂಭವಾಯಿತ್ತಾದ್ದರೂ ಅದು ಜಿಲ್ಲೆಯಲ್ಲಿ ಅಭಿವ್ಯಕ್ತಗೊಂಡಿರುವುದು ಕಲ್ಯಾಣ ಚಾಲುಕ್ಯ ಹಾಗೂ ಬಹುಮನಿ ಸುಲ್ತಾನರ ಕಾಲದಲ್ಲಿ.

ಕಲ್ಯಾಣ ಚಾಲುಕ್ಯರು ಕಲಾ ಪ್ರಿಯರಾಗಿದ್ದರಿಂದ ಕಲ್ಯಾಣಪಟ್ಟಣವನ್ನು ರಾಜಧಾನಿ ಯನ್ನಾಗಿಸಿಕೊಂಡು ಸುತ್ತಮುತ್ತಲೂ ಕೋಟೆ ಕೊತ್ತಲುಗಳು ನಿರ್ಮಿಸಿದರು. ೧೦೫೦ ರಿಂದ ೧೩೧೦ ರ ವರೆಗಿನ ಕಾಲದಲ್ಲಿ ಕೆಲವು ಮಂದಿರಗಳು ನಿರ್ಮಾಣವಾದವು. ಬಹುಮನಿ ಸುಲ್ತಾನರ ಕಾಲದಲ್ಲಿ ಪರ್ಷಿಯ ಶಿಲ್ಪದ ಕಲೆಯನ್ನು ತುಂಬ ಆಕರ್ಷಕ. ಬೀದರ ಕೋಟೆಯಲ್ಲಿರುವ ಅನೇಕ ಕಟ್ಟಡಗಳು ಪರ್ಷಿಯನ್ ಕಲೆಗಾರರ ಕಲಾ ನೈಪುಣ್ಯದಿಂದ ಬೀದರಿನ ಸುತ್ತಮುತ್ತಲೂ ಇರುವ ಕೋಟೆ ಕಲಾಪ್ರಿಯರನ್ನು ಕೈ ಮಾಡಿ ಕರೆಯುತ್ತದೆ.

**೬.೧. ಬೀದರ ಕೋಟೆ :** ಬಹಮನಿ ಸುಲ್ತಾನನಾದ ಅಹಮ್ಮದ್‌ಷಾನು ಸುಮಾರು ಕ್ರಿ.ಶ. ೧೪೨೭ ರಲ್ಲಿ ಈ ಕೋಟೆಯನ್ನು ಕಟ್ಟಿಸಿದ. ದಪ್ಪಾಕಾರದ ಹಾಗೂ ಬೃಹತ್ ಭವ್ಯವುಳ್ಳ ಕೋಟೆ ವೈರಿಗಳ ದಾಳಿಯನ್ನು ತಡೆದುಕೊಳ್ಳುವ ಸಾಮರ್ಥ್ಯವುಳ್ಳದಾಗಿದ್ದು ನೋಡಲು ಅಷ್ಟೇ ತುಂಬ ಆಕರ್ಷಕವಾಗಿದೆ. ಕೋಟೆ ಎತ್ತರವಾದ ಕಲ್ಲಿನಿಂದ, ಬುರುಜಗಳಿಂದ ನಿರ್ಮಿತವಾಗಿದೆ. ಸುತ್ತಲು ಆಳ ಅಗಲವಾದ ಕಂದಕ ತೋಡಲಾಗಿದೆ. ಏಕೆಂದರೆ ವೈರಿಗಳ ದಾಳಿ ತಡೆಗಟ್ಟುವ ಸಲುವಾಗಿ ತೋಡಲಾಗಿದೆ. ಒಳಗಡೆ ಅದ್ಭುತವಾದ ಸಭಾಂಗಣವಿದ್ದು ಇದರಲ್ಲಿ ಸುಲ್ತಾನನ ಸಿಂಹಾಸನವಿತ್ತಂತೆ, ಮುಂದೆ ಹೋದಂತೆ ಸೋಲಾಕಂಬದ ಮಸೀದಿ ಸಿಗುತ್ತದೆ, ಇದು ಆ ಕಾಲದ ಉತ್ತಮ ವಾಸ್ತುಶಿಲ್ಪವಾಗಿದೆ. ಬೀದರ ಕೋಟೆಯ ಒಳಗಡೆ ವೀರಸಂಗಯ್ಯ ಸ್ವಾಮಿ ದೇವಸ್ಥಾನವಿದೆ. ೧೨-೧೩ನೇ ಶತಮಾನದಲ್ಲಿ ವೀರಸಂಗಯ್ಯನೆಂಬ ಶರಣನಿದ್ದರು. ಇವನ್ನು

ಬೀದರ ಆಳಿದನ್ನು ಎಂಬ ಮಾತುಗಳು ಕೇಳಿಸುತ್ತವೆ. ಇವರ ಶಿಷ್ಯ ಬೊಮಗೊಂಡೇಶ್ವರನ್ನಾಗಿದರು ಎಂಬುದು ತಿಳಿದುಬರುವುದು. ವೀರಸಂಗಯ್ಯ ಇವರು ಜಂಗಮರಾಗಿದ್ದರು ಎಂಬುದನ್ನು ಕಂಡುಬರುತ್ತದೆ. ಎಕೆಂದರೆ ಜಿಲ್ಲೆಯ ಸುತ್ತಮುತ್ತಿನ ಜಂಗಮರು ಇಂದಿಗೂ ತಮ್ಮ ಮನೆಯ ದೇವರೆಂದು ನಂಬಿ ಪ್ರಾರ್ಥನೆ ಮಾಡುವುದಾಗಲಿ ದೇವಾಲಯಕ್ಕೆ ಹೋಗಿ ನಮಸ್ಕರಿಸುವುದು ಮಾಡುತ್ತಾರೆ. ಜಂಗಮರ ಹೆಸರಿನ ಹಿಂದೆ'ಯ್ಯ' ಎಂಬ ಅಕ್ಷರ ಪ್ರತಿಯೊಬ್ಬ ಜಂಗಮರ ಹೆಸರಿನ ಹಿಂದೆ ಬರುವುದುಂಟು. ಹೀಗಾಗಿ ವೀರ ಶರಣರ ಜೊತೆಗೆ ವೀರ ಆಡಳಿತಗಾರನಾಗಿರಬೇಕೆಂದು ತೋರುತ್ತದೆ. ಇಂದಿಗೂ ಜಂಗಮರ ಮನೆ ದೇವರಾಗಿದ್ದಾರೆ. ಇದರಿಂದ ೧೧-೧೨ನೇ ಶತಮಾನದ ವೀರಸಂಗಯ್ಯ ಜಂಗಮರಾಗಿದ್ದರು ಎನ್ನಬಹುದು. ಇಂದಿಗೂ ಬೀದರ ಕೋಟೆಯಲ್ಲಿ ವೀರಸಂಗಯ್ಯ ದೇವಸ್ಥಾನ ಮತ್ತು ಬೊಮಗೊಂಡೇಶ್ವರ ಕೆರೆ ನೋಡಬಹುದಾಗಿದೆ.

**೯.೨. ರಂಗೀನ ಮಹಲ್ :** ರಂಗೀನ ಮಹಲ್ ಸುಂದರ ರಂಗುರಂಗಿನ ಅಲಂಕಾರಗಳಿಂದ ಮಿನುಗುತ್ತಿದೆ. ಹಲವಾರು ಚಿತ್ರಗಳಿಂದ, ಮುತ್ತಿನ ಚಿಪ್ಪುಗಳಿಂದ ಶೃಂಗಾರಗೊಂಡು ಕಲಾಕಾರನ ಕಸೂತಿ ಕೆಲಸದಿಂದ ಕೂಡಿದೆ. ಕಾಲೀ ಮಸೀದಿ,ಚೌಬಾರಾ. ಚೌಬಾರಾ ಊರಿನ ಮಧ್ಯದಲ್ಲಿ ನಾಲ್ಕು ದಿಕ್ಕಿಗೆ ರಸ್ತೆ ಒಳಗೊಂಡಿದ್ದು ಹಿಂದಿನ ಕಾಲದಲ್ಲಿ ದೀಪವನ್ನು ಹಚ್ಚಲು ಈ ಚೌಬಾರಾ ನಿರ್ಮಿಸಲಾಗಿತ್ತು ಎನ್ನಲಾಗಿದೆ.

**೯.೩. ಮದರಸ :** ಬೀದರ ನಗರದ ಮಧ್ಯದಲ್ಲಿರುವ ಮದರಸ ಪರ್ಶಿಯಾ ದೇಶದ ಶೈಲಿಯಲ್ಲಿ ಈ ಕಟ್ಟಡ ರೂಪಗೊಡಿದೆ. ಬಹಮನಿ ರಾಜ್ಯದ ಪ್ರಸಿದ್ದ ಮಂತ್ರಿಯಾದ ಮಹಮ್ಮದ ಗವಾನ ಕ್ರಿ.ಶ.೧೪೭೨ ರಲ್ಲಿ ನಿರ್ಮಿಸಿದ್ದನು. ಇದು ಇಂದಿನ ವಿಶ್ವವಿದ್ಯಾಲಯಕ್ಕೆಹೋಲುವಂತಹ ಶಿಕ್ಷಣ ಕೇಂದ್ರವಾಗಿತ್ತು. ದೇಶ ವಿದೇಶದಿಂದ ಮೇಧಾವಿಗಳು, ವಿಜ್ಞಾನಿಗಳು ಹಾಗೂ ಪ್ರಸಿದ್ದ ತತ್ವಜ್ಞಾನಿಗಳು ಹತ್ತು ಹಲವಾರು ವಿಷಯಗಳು ಕುರಿತು ಬೋಧನೆ ಮತ್ತು ಚರ್ಚೆಕೂಟಗಳು ನಡೆಯುತ್ತಿದ್ದವು. ಈ ಮದರಾಸವು ಜಂಗಮ ಮಠಗಳ ಮಾದರಿಯ ರೂಪದೊಳಗೆ ಕಂಡುಬರುತ್ತದೆ. ಹಿಂದಿನ ಕಾಲದಲ್ಲಿ ಜಂಗಮರು ಮಾತ್ರ ವೇದ, ಉಪನಿಷತ್ತು, ಶಾಸ್ತ್ರಿ, ಧಾರ್ಮಿಕ ಶಿಕ್ಷಣ ಜೊತೆಗೆ ಲೌಕಿಕ ತಿಳುವಳಿಕೆ ಕೊಡುತ್ತಿದ್ದರು. ಆದರೆ ಅಂದಿನ ಶಿಕ್ಷಣ ಎಲ್ಲರಿಗೂ ಸಿಗುತ್ತಿರಲಿಲ್ಲ ಈ ಹಿನ್ನೆಲೆಯೊಳಗೆ ಮಹ್ಮದಗವಾನ ಮದರಾಸವನ್ನು ಸ್ಥಾಪಿಸಿ ಹಲವು ಪ್ರಕಾರ ಶಿಕ್ಷಣ ಮಾದರಿಯನ್ನು ಇಟ್ಟು, ಜೊತೆಗೆ ಗುರುಕಲದಲ್ಲಿ ಶಿಷ್ಯರಿಗೆ ಇಟ್ಟುಕೊಂಡು ಶಿಕ್ಷಣ ನೀಡುವಂತೆ ವಿದ್ಯಾರ್ಥಿಗಳಿಗೆ ಇರಲು ವಸತಿ ಸೌಕರ್ಯಗಳು

ಮದರಾಸದಲ್ಲಿ ಮಾಡಲಾಯಿತು. ಅಂತೆಯೂ ಬೀದರಿನಲ್ಲಿ ಪ್ರಾಚೀನ ಭಾಷೆ, ಉರ್ದು ಭಾಷೆ ಬೆಳೆಯಲಿಕ್ಕೆ ಸಾಧ್ಯವಾಯಿತೆನ್ನಬಹುದು. ಬರಬರುತ್ತ ಶಿಕ್ಷಣ ಸರ್ವರಿಗೂ ಸಮಾನಾವಕಾಶವನ್ನು ಕೊಡಲಾಗಿದು ಕಾಣಬಹುದು.

**೯.೪. ಗೋರಿಗಳು :** ಕರ್ನಾಟಕದಲ್ಲಿಯೇ ಅದು ಬೀದರ ಮುಸ್ಲೀಮರ ಅಧಿಕತೆಗೆ ಹೆಸರುವಾಸಿ ಯಾಗಿರುವುದು ಗೋರಿಗಳು ನಿರ್ಮಿಸುವಲ್ಲಿ ಎಂದರೆ ತಪ್ಪಿಲ್ಲ. ಈ ಭಾಗದಲ್ಲಿ ತುಂಬ ಹೇರಳವಾಗಿವೆ. ಅಷ್ಟೂರಿನ ಗುಮ್ಮಟಗಳು ಬೃಹದಾಕಾರವಾಗಿವೆ. ಇವು ೨ನೇ ಅಲ್ಲಾದ್ದೀನನ ಗೋರಿಗಳೆಂದು ಕರೆಯುತ್ತಾರೆ. ಇದರಲ್ಲಿ ಒಂದು ಗುಮ್ಮಟ ಅಲ್ಲಮ ಪ್ರಭುವಿನ ಗುಮ್ಮಜವೆಂದು ಹೆಸರುವಾಸಿಯಾಗಿದೆ. ಅಲ್ಲಿ ಹಿಂದು- ಮುಸ್ಲೀಮರು ಕೂಡಿ ಪ್ರಾರ್ಥಿಸುತ್ತಾರೆ. ಎರಡು ಸಮುದಾಯಗಳ ಭಾವೈಕ್ಯತೆಯ ತಾಣವಾಗಿದೆ. ಅಲ್ಲಮಪ್ರಭು ಗೋರಿಯನ್ನು ಅವಲೋಕಿಸಿದರೆ ಪ್ರಭು ಎಂಬುವರು ಜಂಗಮನಾಗಿದ್ದಿರಬೇಕು ಎನ್ನಿಸುತ್ತದೆ. ಏಕೆಂದರೆ ಪ್ರತಿ ವರ್ಷ ಯುಗಾದಿಯ ಎರಡು ಮೂರನೆಯ ದಿವಸ ಮುಚ್ಚೆ ಜಾತ್ರೆ ಆರಂಭವಾಗುತ್ತದೆ. ಜಾತ್ರೆಗೆ ಗುಲಬರ್ಗಾ ಜಿಲ್ಲೆಯ ಮಾಂನಡೋಳ ಎಂಬ ಗ್ರಾಮದಿಂದ ಜಂಗಮ ಕುದುರೆಯ ಮೇಲೆ ಕುಳಿತುಕೊಂಡು ಬರುತ್ತಾರೆ. ಮೊದಲು ನಡೆದುಕೊಂಡು ಬರುತ್ತಿದ್ದಾರಂತೆ, ಬಂದು ಈ ಆಲ್ಲಮ ಪ್ರಭುವಿನ ಪೂಜೆ ಮಾಡಿ ಎಲ್ಲಾ ಭಕ್ತರಿಗೆ ಆಶೀರ್ವಾದಿಸಿ ಈ ಅಲ್ಲಮ ಪ್ರಭುವಿನ ಪೂಜೆ ಮಾಡಿ ..., ಹೋಗುತ್ತಾರೆ. ಇದರಿಂದ ಇಂದಿಗೂ ಪ್ರಭುವಿನ ಸಂಕೇತವಾಗಿ ಆ ಜಂಗಮರಿಗೆ ಗೌರವ ಕೊಟ್ಟು ಆಲ್ಲಮಪ್ರಭುವಿನ ಪೂಜೆ ಮಾಡುವುದು ಜಿಲ್ಲೆಯ ತುಂಬ ಕಂಡುಬರುತ್ತದೆ.

**೯.೫. ಬಸವಕಲ್ಯಾಣ ಕೋಟ :** ಬಸವಕಲ್ಯಾಣದ ಉತ್ತರ ದಿಕ್ಕಿಗಿರುವ ೧೨ ಅಡಿಗಿಂತಲೂ ಎತ್ತರವಾಗಿದ್ದು ಸುತ್ತಲು ಕಂದಕಗಳಿವೆ. ಕೋಟೆಗೆ ಪುರಾತನ ದ್ವಾರಗಳು ಒಳಗಡೆ ತೊಪುಗಳು, ಗುಂಡುಗಳು ಇವೆ. ೬೯೪ ಸೇ.ಮೀ ಉದ್ದವಿರುವ ನವಗಜ ತೋಪನ್ನು ಎತ್ತರದ ಕಟ್ಟಡದ ಮೇಲೆ ಇರಿಸಿರುವುದು ನೋಡಲು ಆಶ್ಚರ್ಯ್ಕರವಾಗಿದೆ. ಸಮೀಪದಲೇ ಚಾಲುಕ್ಯ ಅರಸರದೆಂದೇ ಹೇಳಲಾಗುವ ರಾಜ ದರ್ಬಾರ ಇದೆ. ಗಣೇಶನ ಮೂರ್ತಿಗಳು ಇವರ ಕಾಲದ್ದು ಎನ್ನಲಾಗಿದೆ. ಸ್ವಲ್ಪ ಮುಂದೆ ಹೋದಂತೆ ಬಿಜ್ಜಳನ ಅರಮನೆಯೇ ಎಂದು ಹೇಳಲಾಗುವ ಇದರ ಅಡಿ ೧೦೦ ಉದ್ದ ೨೦ ಅಡಿ ಅಗಲ ೧೦ ಅಡಿ ಎತ್ತರವಾಗಿದೆ. ಈ ಪ್ರದೇಶದಲ್ಲಿ ಪ್ರಾಚೀನ ಅವಶೇಶಗಳು ಸಿಗುವದುಂಟು ಆದ್ದರಿಂದ ಇನ್ನೂ ಸಿಗುವ

ಅವಶೇಷಗಳ ಬಗ್ಗೆ ಅಧ್ಯಯನವಾಗುವದು ಅವಶ್ಯವಿದೆ. ತದನಂತರ ಶರಣರ ಗವಿಗಳು, ಮಠಗಳು ೧೨ನೇ ಶತಮಾನದ ಪಾರ್ಲಿಮೆಂಟೆನಿಸಿದೆ, ವಿಶ್ವದಲ್ಲೇ ಹೆಸರಾದ ಅನುಭವ ಮಂಟಪ, ನಾರಾಯಣಪುರದಲ್ಲಿನ ಶಿವದೇವಾಲಯ. ಈಗ ಗರ್ಭ ಗುಡಿ ಮಾತ್ರ ಉಳಿದಿದ್ದು ಒಳಗಡೆ ಶಿವಲಿಂಗ ಇದೆ. ಸ್ತಂಭಗಳ ಮೇಲೆ ವಿವಿಧ ಬಗೆಯ ಭಂಗಿ ಚಿತ್ರಗಳಿಂದ ದೇವತೆಗಳಿಂದ ಕೆತ್ತಲ್ಪಟ್ಟಿದೆ. ಆರನೆ ವಿಕ್ರಮಾದಿತ್ಯನ ಗುರುವಾದ ರುದ್ರಮಿಶ್ರರ ಊರಾದ ಗೋರಟಾ (ಬಿ) ಇಲ್ಲಿ ರುದ್ರೇಶ್ವರ ದೇವಾಲಯ ಕಟ್ಟಿಸಲಾಗಿದೆ ಎಂದು ತಿಳಿಯುತ್ತದೆ. ಏಕೆಂದರೆ ಇಂದಿಗೂ ರುದ್ರೇಶ್ವರ ದೇವಾಲಯದ ಪೂಜಾವಿಧಿಗಳನ್ನು ರುದ್ರಾಭಿಷಕವನ್ನು ಶ್ರೀ ವೀರುಪಾಕ್ಷಯ್ಯಾ ಸ್ವಾಮಿಯವರು ನಡೆಸಿಕೊಂಡು ಬರುತ್ತಿರುವರಲ್ಲದೆ ರುದ್ರೇಶ್ವರ ಸಂಗೀತ ಪಾಠಶಾಲೆಯನ್ನು ತೆಗೆದುಅದರ ಆಗು ಹೋಗು ನೋಡಿಕೊಳ್ಳುತ್ತಿದ್ದಾರೆ. ಆರನೇಯ ವಿಕ್ರಮಾದಿತ್ಯನ ಕಾಲದಿಂದಲೂ ಜಂಗಮರು ಈ ರುದ್ರೇಶ್ವರ ದೇವಾಲಯದ ಪೂಜಾರಿಗಳಾಗಿದಿರಬೇಕೆಂದು ತಿಳಿದುಬರುತ್ತದೆ. ಶಿವದೇವಾಲಯ, ಜೈನದೇವಾಲಯ, ಕಾಖಮುಖರ ಗೋರಖನಾಥರ ಮೂರ್ತಿ ಮತ್ತು ಮಹಾಲಕ್ಷ್ಮಿ ಮೂರ್ತಿ ನೋಡಲು ಸಿಗುತ್ತವೆ.

ಉಮನಾಬಾದ ತಾಲೂಕಿನ ಜಲಸಂಗಿ ಗ್ರಾಮದಲ್ಲಿ ೬ನೇ ವಿಕ್ರಮಾದಿತ್ಯನು ನಿರ್ಮಿಸಿದ ಈಶ್ವರ ದೇವಾಲಯವಿದೆ. ಇದುಚಾಲುಕ್ಯರು ನೀಡಿದ ವಾಸ್ತುಶಿಲ್ಪಕ್ಕೆ ಅಮೋಘನೀಯ ಕೊಡುಗೆ ಶಿಲಾಬಾಲಿಕೆಗಳು ವರಹವತಾರ ವಿಗ್ರಹಗಳು ಮದನ ಮನೋಹರಿ ಉಗ್ರಹ, ನಾನಾ ಭಂಗಿಯ ನಾಟ್ಯ ಗಣಪತಿಗಳಿಂದ ಕೂಡಿದ್ದು ತುಂಬ ಮನಮೋಹಕವಾಗಿದೆ.

ಎಲ್ಲಾ ಹಂತಗಳಲ್ಲಿ ಭವ್ಯತೆಯನ್ನು ಹೊತ್ತು ನಿಂತ ಜಿಲ್ಲೆ ವಾಸ್ತು ಶಿಲ್ಪದಲ್ಲಿ ಅಲ್ಪವಿದ್ದರೂ ನಾಡಿನಲ್ಲಿ ಬರುವ ವಾಸ್ತುಶಿಲ್ಪದ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನೇ ಪಡೆದಿದೆ ಎನ್ನಬಹುದು.

## ೧೦. ಬಿದರಿ ಕಲೆ

ಸಾವಿರಾರು ವರ್ಷಗಳ ಹಿಂದೆಯೇ ಮಾನವ ಚಿತ್ರಗಳನ್ನೂ ಬರೆಯುತ್ತಿದ್ದ ಎನ್ನುವದಕ್ಕೆ ಪುರಾಣಗಳಲ್ಲಿ ಉಲ್ಲೇಖ ಸಿಗುತ್ತವೆ. ಬರಬರುತ್ತಾ ಅನೇಕ ಲೋಹ ಸಾಮಾಗ್ರಿಳನ್ನೂ ಬಿಡಿಸಿ ಚಿತ್ರಗಳನ್ನು ಬರೆಯಲು ಕಲಿತ ಅಂತಹ ಚಿತ್ರಣ ಅಥವಾ ಕಲೆಯಲ್ಲಿ ಈ ಕಲೆಯು ಒಂದು 'ಬಿದ್ರಿ' ಕಲೆ ಅತ್ಯಂತ ಪ್ರಸಿದ್ದಿಯನ್ನು ಪಡೆದದ್ದು ಈ 'ಬಿದ್ರಿ' ಎಂಬ ಹೆಸರಿನಿಂದಲೇ ಇಂದಿನ ಬೀದರಕ್ಕೆ ಹೆಸರು ಬಂದಿರಬೇಕು ಎನ್ನುವದುಂಟು ಕಲೆಗೆ 'ಬೀದರ ವರ್ಕ' ಎಂದು ಕರೆಯುತ್ತಾರೆ.

ಏಕೆಂದರೆ ಈ ಕುಶಲಕಲೆಯು ಇಲ್ಲಿಯೇ ಜನ್ಮತಾಳಿದರಿಂದ ಇದಕ್ಕೆ ಜನವಾಡಿಕೆಯಲ್ಲಿ 'ಬಿದರಿ ವರ್ಕ' ಎಂದು ಸಾಮಾನ್ಯವಾಗಿ ಕರೆಯುವ ವಾಡಿಕೆ. ಕಲ್ಯಾಣ ಚಾಲುಕ್ಯ ಮತ್ತು ಕಲಚೂರಿಗಳ ಕಾಲದಲ್ಲಿ ಬೆಳಕಿಗೆ ಬಂದಿದ್ದು ಮುಂದೆ ಅರಸರು ಇದಕ್ಕೆ ಪ್ರಾಮುಖ್ಯತೆ ನೀಡಿದರು. ಬಹಮನಿ ಸುಲ್ತಾನರ ಪ್ರಖ್ಯಾತ ಮಂತ್ರಿಯಾದ ಮಹಮ್ಮದ ಗವಾನನು ನಿರ್ಮಿಸಿದ 'ಮದರಸಾದಲ್ಲಿ' ರಾಮಣ್ಣಾ ಎನ್ನುವ ಕರಕುಶಲ ಶಿಕ್ಷಕರಿದ್ದರೆಂದು ಹೇಳಲಾಗುತ್ತದೆ. ಇವನು ಪ್ರಾಥಮಿಕ ಹಂತದಿಂದ ಪ್ರೌಢ ವ್ಯವಸ್ಥೆಗೆ ಕಲೆ ಬರಲು ಈತನೆ ಕಾರಣಿಪುರುಷ. ತದನಂತರ ಗವಾನ ಮದರಸದಲ್ಲಿ ಬಿದರಿ ಕಲೆಯು ಒಂದು ಪಠ್ಯ ವಿಷಯವನ್ನಾಗಿ ಕಡ್ಡಾಯಗೊಳಸಲಾಗಿತ್ತು. ಆದುದರಿಂದಲೆ ರಾಮಣ್ಣನ ಶಿಷ್ಯರಾಗಿ ಬೆಳೆದ ಶಜ್ಜಾದಬಾಷಾ ಮತ್ತು ಬಸಣ್ಣ (ಜಂಗಮ ಸಮುದಾದವಾಗಿದನೆಂಬ ಊಹೆ) ಇವರು ಸಹ ಕಲೆಯನ್ನು ಬೆಳೆಸುವಲ್ಲಿ ಪ್ರಮುಖರಾಗಿರುವರು. ಹೀಗಾಗಿ ಜಿಲ್ಲೆಯಲ್ಲಿ ಮುಸ್ಲಿಂ-ಹಿಂದು ಜನರು ಸರ್ವರಿಗೂ ಹಿತ ಎನ್ನಿಸುವ ಬಿದರಿಕಲೆ ನಿರ್ಮಿಸುತ್ತಾರೆ.

## ೧೧. ಶಾಸನಗಳು

ಜಿಲ್ಲೆಯ ಇತಿಹಾಸ ಹಾಗೂ ಸಂಸ್ಕೃತಿಯ ಅವಲೋಕನ ಹಿಂದಿನ ಇಂದಿನ ಹಾಗೂ ಮುಂದಿನ ಪೀಳಿಗೆ ಮಾಡಬೇಕಾದ ಕಾರ್ಯಗಳಿಗೆ, ಅನುಸರಿಸಬೇಕಾದ ಮಾರ್ಗಕ್ಕೆ ಶಾಸನಗಳೇ ದಾರಿ ದೀಪಗಳಾಗಿವೆ. ಅಂತೆಯೇ ಇತಿಹಾಸದಲ್ಲಿ ಶಾಸನಗಳ ಸ್ಥಾನ ತುಂಬ ಮಹತ್ವದಾಗಿದೆ. ಇಲ್ಲಿ ಶಾಸನಗಳ ಕೊರತೆಯೇನು ಇಲ್ಲ. ಕೆಲವು ಶಾಸನಗಳು ದೊರಕಿವೆ. ಇಲ್ಲಿ ಆಳಿದ ಅರಸರ ರಾಜಮನೆತನಗಳ ವಂಶಾವಳಿ, ವಾಸ್ತು ಶಿಲ್ಪಗಳಿಗೆ ನೀಡಿದ ಕೊಡುಗೆ ಮತ್ತು ಸಮಾಜದ ಸೇವೆಗೆ ನೀಡಿದ ದಾನ ದತ್ತಿ ಶಾಸನಗಳು ದೊರಕಿವೆ. ಅಷ್ಟೊಂದು ಶಾಸನಗಳು ಹೇಳುಕೊಳ್ಳುವ ರೀತಿಯಲ್ಲಿ ದೊರೆಯುತ್ತಿಲ್ಲಾ ಎನ್ನಿಸುತ್ತದೆ. ಏಕೆಂದರೆ ಮುಸ್ಲಿಮ್ ದೊರೆಗಳ ಆಳ್ವಿಕೆಯಲ್ಲಿ ದೇಶದ ಧಾರ್ಮಿಕ, ಸಾಮಾಜಿಕ, ಪರಂಪರೆಗೆ ಕುಂದು ಒದಗಿತು. ಅನೇಕ ಮಂದಿರಗಳು ಮೂಲ ರೂಪ ಕಳೆದುಕೊಂಡವು. ಜೊತೆಗೆ ಸುಮಾರು ಶಾಸನಗಳು ಹಾಳಾದವು. ಇದರಿಂದ ಶಾಸನಗಳ ಸಂಖ್ಯೆ ಕಡಿಮೆ ಎನ್ನಬಹುದು.

ಬಸವಕಲ್ಯಾಣ ತಾಲೂಕಿನ ನಾರಾಯಣಪೂರ ಗ್ರಾಮದ ಶಿಲಾಶಾಸನವೊಂದು ಬಸವಕಲ್ಯಾಣ ಕೋಟೆಯಲ್ಲಿ ಸಿಕ್ಕಿದೆ. ಕಾಲ ಸುಮಾರು ೧೧೧೨ ಎನ್ನಲಾಗಿದೆ. ಚಾಲುಕ್ಯ ವಿಕ್ರಮಾದಿತ್ಯನು ನಾರಾಯಣಪೂರದ ನಾರಾಯಣ ಮಂದಿರಕ್ಕೆ ದಾನಕೊಟ್ಟ ವಿಷಯ ಉಲ್ಲೇಖಿತಗೊಂಡಿದೆ.

ಇದು ಅವರ ಆಳ್ವಿಕೆಯ ಮೇಲೆ ಬೆಳಕನ್ನು ಚೆಲ್ಲಿಸುವುದರ ಜೊತೆಗೆ ಅಲ್ಲಿನ ಪ್ರಮುಖ ವ್ಯಕ್ತಿಗಳ ಹೆಸರುಗಳು ಹೆಸರಿಸಲಾಗಿದೆ.

ನಾರಾಯಣಪೂರದ ಕೆರೆಯ ಹೊಲದಲ್ಲಿ ಬಿದ್ದ ಸ್ತಂಭ ಶಾಸನ ೧೧೩೨ ಚಾಲುಕ್ಯ ಭೂವಲೋಕಮಲ್ಲನ ೫ನೇ ಸೋಮೇಶ್ವರನ ಕಾಲದ್ದು ಈಶ್ವರ ದೇವಲಾಯಕ್ಕೆ ನೀಡಿದ ದಾನದತ್ತಿಯ ಕುರಿತು ಹಾಗೂ ಆಡಳಿತದ ಬಗೆಯು ತಿಳಿಸುತ್ತದೆ. ಶ್ರೀ ಭೀಮೇಶ್ವರ ದೇವರ ಪೂಜಾಕಾರ್ಯಕ್ಕಾಗಿ ಹಲವಾರು ಬಗೆಯ ದಾನವನ್ನು ನೀಡಿದ ಚಾಲುಕ್ಯ ರಾಜನಾದ ಜಗದೇಕ ಮಲ್ಲನ ವಿಷಯವು ೧೧೪೫ ಶಾಸನದಿಂದ ತಿಳಿದು ಬರುತ್ತದೆ(ಕುಲಕರ್ಣಿ ವಿಠ್ಠಲರಾವ:೧೯೯೭:೬).

ಖೇಣಿ ರಂಜೋಳನಲ್ಲಿ ಸಿಕ್ಕಿದ ಶಾಸನವು ಅಟ್ಟಳೆ ಆಳಿದ ರಂಜೇರು ಸಿಂದರ ವಂಶಾವಳಿ ಮತ್ತು ಮೂಲದ ಚರಿತ್ರೆಯನ್ನು ತಿಳಿಸುತ್ತದೆ. ಶಾಸನವು ಆರನೇ ವಿಕ್ರಮಾದಿತ್ಯನ ಕಾಲದ ಸಿಂದ ವಂಶದ ಮಹಾಮಂಡಳಿಕನಾದ ಹಜ್ಜಮಹಿಪನು ಈ ಶಾಸನ ಬರೆಯಿಸಿದನು(ಅವರೇ:೫) ಹಳೆಗನ್ನಡ ಶೈಲಿಯಲ್ಲಿ ಮಹಾಸೃಗ್ಧರ, ತರಳ ಉಪೇಂದ್ರ ವಜ್ರ, ಕಂದ ಮತ್ತು ವೃತ್ತಗಳಲ್ಲಿ ರಚನೆಗೊಂಡಿದೆ. ಅಟ್ಟಳ ನಾಡಿನ ಅರಸನ ಮನೆತನ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ರಂಗಗಳ ಮೇಲೆ ಶಾಸನ ಹೊಸ ಬೆಳಕನ್ನು ಚೆಲ್ಲಿದೆ. ಇದರಿಂದ ಗುರುತಿಸುವುದೇನೆಂದರೆ ಹಿಂದಕ್ಕೆ ಈ ಪ್ರದೇಶಕ್ಕೆ ಅಟ್ಟಳೆ ನಾಡು ಎಂದು ಕರೆಯುತ್ತಿರುವುದು ಸೂಕ್ತ ಎನ್ನಲಾಯಿತು. ಸಿಂದರು ಈ ಭಾಗ ಆಳಿದರು ಎನ್ನುವುದಕ್ಕೆ ಶಾಸನ ತುಂಬ ಮಹತ್ವದ್ದಾಗಿದೆ. ಅದರಲ್ಲೂ ಅವರ ವಂಶದ ಸುದೀರ್ಘ ಚರಿತ್ರೆಯನ್ನು ತಿಳಿಸುವ ಪ್ರಪ್ರಥಮ ಶಾಸನವಾಗಿದೆ.

ಗೋರಟಾ ಗ್ರಾಮದ ಶಾಸನದಿಂದ ತಿಳಿದು ಬರುವುದೇನೆಂದರೆ ಇಂದಿನ ಗೋರಟಾ ಅಂದು 'ಗೋರಾಟ' ಎಂದು ಕರೆಯುತ್ತಿದ್ದರು. ಹುಲಸೂರ ಗ್ರಾಮವನ್ನು 'ಹುಲಿಚರ' ಎಂದು ಕರೆಯುತ್ತಿರುವುದು, ಹುಲಸೂರು ಶಾಸನದಿಂದ ಗೊತ್ತಾಗುತ್ತದೆ. ಮಧುಕೇಶ್ವರ ದೇವಾಲಯವು ಪ್ರಾಚೀನ ಕಾಲದಿಂದಲೂ ಬಸವಕಲ್ಯಾಣದಲ್ಲಿದ್ದು ವಿಷಯವ ಬಸವಕಲ್ಯಾಣ ಕೋಟೆಯಲ್ಲಿದ್ದ ಚಿಕ್ಕ ಶಿಲಾಶಾಸನದಿಂದ ತಿಳಿದುಬರುತ್ತದೆ. ಹಾಲಹಳ್ಳಿ ತಾಮ್ರ ಶಾಸನದಿಂದ ಭಾಲ್ಕಿ ಮೊರಖಂಡಿ (ಮಯುರಖಂಡಿ) ಬಗ್ಗೆ ತಿಳಿಸುತ್ತದೆ. ಅಲ್ಲದೇ ಬೀದರ ಜಿಲ್ಲೆಯ ದೊಡ್ಡ ನದಿಗಳು ಎನಿಸಿಕೊಂಡಿರುವ ಕಾರಂಜಾ ಮತ್ತು ಮಾಂಜರಾ ಎರಡು ನದಿಗಳ ಮಧ್ಯದಲ್ಲಿ ಮಧ್ಯಹಳೆ ಶಿಲಾಯುಗಕ್ಕೆ ಸೇರಿದ ಹಲವಾರು ನೆಲೆಗಳಲ್ಲಿ ರಂಜೀರಸಿಂದರ ನೆಲೆಯೊಂದು ಮತ್ತು ಕಲ್ಯಾಣ ಪ್ರಾಚೀನ ಇತಿಹಾಸ ಕಾಲದ ನೆಲೆಗಳಲ್ಲಿ ಮಹತ್ವದ್ದು ಎಂದು

ಡಾ. ಆರ್. ಎಂ. ಷಡಕ್ಷರಯ್ಯನವರು ಗುರುತಿಸಿದ್ದಾರೆ(ಸಿಂಪಿವೀರೇಂದ್ರ:೧೯೯೯:೩)ಅಷ್ಟೇ ಅಲ್ಲದೇ ಬೀದರ ಜಿಲ್ಲೆಯ ಶಾಸನಗಳ ಬಗ್ಗೆ ಅನೇಕರು ಅಧ್ಯಯನವನ್ನು ಮಾಡಿದ್ದು ತಮ್ಮ ಗ್ರಂಥಗಳಲ್ಲಿ ಸಂಗ್ರಹಿಸಿದ್ದಾರೆ. ಪ್ರೊ. ಜಿ. ಎಮ್. ಭೈರೂಡಗಿಯವರು ಬೀದರ ಜಿಲ್ಲೆಯ ಭಾಲ್ಕಿಯಲ್ಲಿ ದೊರೆತ ಎರಡು ಶಾಸನಗಳು ಪ್ರಕಟಿಸಿದ್ದಾರೆ. ಡಾ : ಬಾ.ರಾ.ಗೋಪಾಲ ಅವರು ಬೀದರ ಜಿಲ್ಲೆಯ ಎಂಟು ಶಾಸನಗಳು ಪ್ರಕಟಿಸಿದ್ದಾರೆ. ಕ್ರಿ.ಶ. ೧೯೫೬ ರಲ್ಲಿ ಆರ್ಕ್ಯಾಲಿಯೋಜಿಕಲ್ ಸರ್ವೇ ಆಫ್ ಇಂಡಿಯಾ ವಿಭಾಗವು ಆನ್ಯುಯಲ್ ರಿಪೋರ್ಟ್ಸ್ ಆನ್ ಇಂಡಿಯನ್ ಎಪಿಗ್ರಾಫಿ ಎಂಬ ವಾರ್ಷಿಕ ವರದಿ ಪ್ರಕಟಿಸಿತು. ೧೯೭೩ ರವರೆಗೆ ೧೫ ಸಂಪುಟಗಳು ಹೊರ ಬಂದಿವೆ. ಇದರಲ್ಲಿ ೮೫ ಶಿಲಾಶಾಸನಗಳ ವಿಷಯಗಳನ್ನು ಕೊಡಲಾಗಿದೆ. ಹಿಸ್ಟಾರಿಕಲ್ ಆ್ಯಂಡ್ ಕಲ್ಚರಲ್ ಸ್ಟಡಿ ಆಫ್ ದಿ ರೀಜನ್ ಅರೌಂಡ್ ಬಸವಕಲ್ಯಾಣ ಎಂಬ ಗ್ರಂಥದ (ಪಿಎಚ್.ಡಿ., ಡಾ. ವಿ.ಎಸ್.ಕುಲಕರ್ಣಿ) ಪ್ರಬಂಧದ ಅನುಬಂಧದಲ್ಲಿ ಸಂಗ್ರಹಿಸಿದ ೧೧೬ ಶಾಸನಗಳು ಕೊಟ್ಟಿದ್ದಾರೆ. ಇವುಗಳಲ್ಲಿ ೨೬ ಶಾಸನಗಳು ಬೀದರ ಜಿಲ್ಲೆಯಲ್ಲಿ ಸಂಗ್ರಹಿಸಲಾಗಿದೆ. ಹಲವಾರು ಹಳ್ಳಿಗಳಲ್ಲಿ ಚಾಲುಕ್ಯ ಹಾಗೂ ಕಲಚೂರಿಗಳ ಕಾಲದ ಶಾಸನಗಳು ದೊರಕುತ್ತವೆ. ಈ ಎಲ್ಲವುಗಳಿಂದ ಜಿಲ್ಲೆಯ ಸಂಸ್ಕೃತಿ, ಹಿರಿಮೆ, ಜನತೆಯ ಜೀವನದ ಮೌಲ್ಯಗಳನ್ನು ಅರಿಯಲು ತಿಳಿಸಯಲು ಅನುಕೂಲವಾಗಿದೆ. ಜಿಲ್ಲೆಯ ಆಯಾ ಕಾಲದ ಜನತೆಯ ಆದರ್ಶಗಳು, ಸ್ವಾಭಿಮಾನ, ಸ್ವಾಮಿನಿಷ್ಠೆ, ವೀರ, ತ್ಯಾಗ, ನಂಬಿಕೆ ಮತ್ತು ಆಚರಣೆ ಮುಂತಾದವುಗಳು ಅರಿಯಬಹುದಾಗಿದೆ. ಬೀದರ ತಾಲೂಕಗಳಾದ ಔರಾದ, ಬಸವಕಲ್ಯಾಣ ಅಲ್ಲದೆ ಹಲವಾರು ಗ್ರಾಮಗಳಲ್ಲಿ ಹಳೆ ಮತ್ತು ಹೊಸ ಶಿಲಾಯುಗದ ಪ್ರಾಚ್ಯವಸ್ತುಗಳು ದೊರಕಿವೆ (ಸಬರದ ಬಸವರಾಜ:೧೯೮೨:೪೦)ಮುಂದೆಯೂ ಸಿಗುತ್ತವೆ. ಆದ್ದರಿಂದ ಶಾಸನಗಳ ಸಂಶೋಧನೆ ಯಾಗುವುದು ತುಂಬ ಅವಶ್ಯಕವೆನಿಸುತ್ತದೆ. ಸಂಶೋಧನಾ ವಿದ್ಯಾರ್ಥಿಗಳು ಸಂಶೋಧಕರು ಇತ್ತ ಕಡೆ ಗಮನಿಸಬೇಕಾಗಿದೆ. ಏಕೆಂದರೆ ಜಿಲ್ಲೆ ಶಾಸನದಲ್ಲಿ ತಕ್ಕಮಟ್ಟಿಗೆ ಹೆಸರುಗಳಿಸಿದೆ ಅಂತೆಯೇ ಜಿಲ್ಲೆಯ ಸಂಸ್ಕೃತಿಯ ಹಿರಿಮೆ, ಭವ್ಯ ಪರಂಪರೆ, ಜೀವನದ ಮೌಲ್ಯಗಳು ತಿಳಿಸುವುದರ ಜೊತೆಗೆ ಇತಿಹಾಸದ ಮೇಲೆ ಹೊಸ ಬೆಳಕು ಚಲುವಲ್ಲಿ ಸಹಾಯಕವಾಗಿವೆ.

### ೧೨. ಸಾಹಿತ್ಯ

ಸಾಹಿತ್ಯ ರಂಗಕ್ಕೆ ಈ ಜಿಲ್ಲೆಯ ಕೊಡುಗೆ ಅಪಾರ ಮತ್ತು ಅಮೋಘನೀಯ. ಕೇವಲ ರಾಜ್ಯಕ್ಕೆ ದೇಶಕಷ್ಟೆ ಅಲ್ಲದೇ ಇಡೀ ವಿಶ್ವಕ್ಕೆ ಅಪೂರ್ವವಾದ ವಿಶಿಷ್ಟ ಸಾಹಿತ್ಯವನ್ನು ನೀಡಿದ ಹೆಮ್ಮೆ ಜಿಲ್ಲೆಯದ್ದಾಗಿದೆ.

ಬೀದರ ಜಿಲ್ಲೆ ಕಾಲಾನುಕಾಲದಿಂದ ರಾಜ ಮಹಾರಾಜರುಗಳಿಂದ ಆಳಲ್ಪಟ್ಟಿರುವುದರಿಂದ ಸಾಹಿತ್ಯ ರಾಜಪ್ರಭುತ್ವದಲ್ಲಿ ಅರಳಿ ಬೆಳೆಯಿತು. ಈ ಪ್ರದೇಶವು ಮೌರ್ಯರ, ಶಾತವಾಹನರ, ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯ, ಕಳಚೂರಿ, ಬಹಮನಿ ಸುಲ್ತನರ, ಹೈದ್ರಾಬಾದ ನಿಜಾಮರ ಮುಂತಾದವರ ಕಪಿಮುಷ್ಟಿಯ ಹಿಡಿತಕ್ಕೆ ಸಿಲುಕಿದರಿಂದ ಆಗಾಗ ಅವರ ಆಸಕ್ತಿಯಿಂದ ಸಾಹಿತ್ಯ ಚಿಮ್ಮಿದ್ದು ಕಂಡು ಬರುತ್ತದೆ. ಆದರೆ ೧೨ನೇ ಶತಮಾನದ ವಚನ ಸಾಹಿತ್ಯ ಕರ್ನಾಟಕಕ್ಕೆ ಅಲ್ಲದೇ ಇಡೀ ವಿಶ್ವಕ್ಕೆ ಬಹುದೊಡ್ಡ ನಿಧಿಯಾಯಿತು, ಕಳಸಪ್ರಾಯವಾಯಿತು. ರಾಜಪ್ರಭುತ್ವ ಪುರೋಹಿತ ಶಾಹಿಯ ವಿರುದ್ಧ ಸಿಡಿದೆದ್ದ ಜಗತ್ತಿನ ಮೊದಲ ಸಾಹಿತ್ಯ ಅದುವೇ ವಚನ ಸಾಹಿತ್ಯ. ಜನವಾಣಿಯನ್ನೇ ದೇವವಾಣಿಯನ್ನಾಗಿ ಮಾಡಿದ ಶ್ರೇಯಸ್ಸು ಈ ನಾಡಿನದಾಗಿದೆ. ವಚನ ಸಾಹಿತ್ಯದ ತವರೂರಾದ ಜಿಲ್ಲೆ ಶರಣರನ್ನೂ ಅನುಭಾವಿ ಕವಿಗಳನ್ನು ಕಂಡಂತೆ ಹೆಮ್ಮೆ ಪಡಬೇಕಾಗುತ್ತದೆ. ಇಲ್ಲಿಯ ಭಾಷೆ ಸಮೃದ್ಧವಾಗಿದ್ದು ಅಪ್ಪಟ ಕನ್ನಡದಲ್ಲಿ ರಚಿತವಾಗಿರುವ ವಚನಗಳಿಂದ ಆ ಕಾಲದ ಸಾಹಿತ್ಯದಿಂದ ತಿಳಿದುಬರುತ್ತದೆ. ಅನೇಕ ಪ್ರಾಚೀನ ಕೃತಿಗಳಿಗೆ ಜನ್ಮನೀಡಿದ ಈ ನೆಲ 'ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂಬ ಕವಿರಾಜ ಮಾರ್ಗಕಾರ ಹೇಳುವ ಉಕ್ತಿ ಸೂಕ್ತವೂ ಹಾಗೂ ಸ್ಪಷ್ಟವೂ ಎಂಬಂತೆ ಗೋಚರಿಸುತ್ತದೆ. ಕನ್ನಡದ ಅತ್ಯಂತ ಪ್ರಾಚೀನ ಮತ್ತು ಮೊದಲ ಗದ್ಯ ಕೃತಿಯಾದ ಶಿವಕೋಟ್ಯಚಾರ್ಯ ಅಥವ ರೇವಕೋಟ್ಯಾಚಾರ್ಯನ 'ವಡ್ಡಾರಾಧನೆ' ಬಗೆಗೆ ಮತ್ತು ರಚನೆಯ ಬಗೆಗೆ ಎತ್ತಿ ಹಿಡಿದ ಡಾ. ಹಂಪನಾಗರಾಜಯ್ಯನವರು ಲಭ್ಯ ಸಾಮಾಗ್ರಿಯ ಆಧಾರದಿಂದ ವಡ್ಡಾರಾಧನೆ ಬೀದರ ಜಿಲ್ಲೆಯ ಹಳ್ಳಿಖೇಡದಲ್ಲಿ ರಚನೆಗೊಂಡಿರಬೇಕೆಂದು ಇದರ ಕೃರ್ತು ಬ್ರಾಜಿಷ್ಟು ಎಂದು ಹೇಳಿದರಿಂದ ಇದು ಸತ್ಯವಾಗಿದ್ದರೆ ಜಿಲ್ಲೆಯ ಘನತೆ ಅದರಲ್ಲೂ ಸಾಹಿತ್ಯದ ಕೊಡುಗೆ ಅಪಾರವಾಗುತ್ತದೆ(ಭಾತಂಬ್ರ ರಘುಶಂಖ:೧೯೮೮:೨) ಚಾಲುಕ್ಯ ೬ನೇ ವಿಕ್ರಮಾದಿತ್ಯನ ಆಡಳಿತದಲ್ಲಿ ಈ ಪ್ರದೇಶಕ್ಕೆ ಕಾಶ್ಮೀರದಿಂದ ಕಲ್ಯಾಣಕ್ಕೆ ಆಗಮಿಸಿದ ಬಿಲ್ಹಣನ 'ವಿಕ್ರಮಾಂಕ ದೇವ ಚರಿತಂ' ಕೃತಿ ಮತ್ತು ವಿಜ್ಞಾನೇಶ್ವರ ಪಂಡಿತನ 'ಮಿತಾಕ್ಷರ' ಎಂಬ ಅಪೂರ್ವ ಗ್ರಂಥಗಳು ರಚನೆಯಾಗಿದ್ದು ಜಿಲ್ಲೆಯ ಹೆಗ್ಗಳಿಕೆಗೆ ಅಷ್ಟೇ ಅಲ್ಲ ಕನ್ನಡ ಸಾಹಿತ್ಯದ ಹೆಗ್ಗಳಿಕೆಗೆ ಕನ್ನಡಿ ಹಿಡಿದಂತಿದೆ. ಹಾಗೆಯೇ ೩ನೇ ಸೋಮೇಶ್ವರನ ಕಾಲದಲ್ಲಿ (೧೧೩೦)ರಲ್ಲಿ ರಚಿತವಾದ ಅಭಿಲಾಷಿತಾರ್ಥ ಚಿಂತಾಮಣಿ, ಹಲವಾರು ವಿಷಯಗಳನ್ನೊಳಗೊಂಡ ಜ್ಞಾನ ಕೋಶದ ವಿಶ್ವಕೋಶವಾಗಿದೆ. ಕಲಚೂರಿ ಬಿಜ್ಜಳ ಮಹಾದೊರೆಯ ಮಂತ್ರಿಯಾಗಿದ್ದ ಬಸವಣ್ಣ ಮತ್ತು ಇತರ ಶಿವಶರಣರಿಂದಾಗಿ ಇಡೀ ಕನ್ನಡ

ಸಾಹಿತ್ಯಕ್ಕೆ ಮೆರಗು ಬಂದಿದೆ. ಅವರಿಂದ ಸ್ಥಾಪಿತವಾದ ಅನುಭವ ಮಂಟಪ ಸಾಹಿತ್ಯಕ, ಆಧ್ಯಾತ್ಮಿಕ, ವೈಚಾರಿಕ ತತ್ವಗಳ ಕೇಂದ್ರವಾಯಿತು. ಸಾಮಾಜಿಕ ವಲಯದಲ್ಲಿ ಅಪೂರ್ವ ಕ್ರಾಂತಿ, ಪ್ರಗತಿ ಸಾಧಿಸಿತು. ದೇಶ ವಿದೇಶದ ನಾನಾ ಭಾಗಗಳಿಂದ ಬಂದ ಅನುಭವಿ ಶರಣರು ಅನುಭವ ಮಂಟಪದಲ್ಲಿ ಹಲವು ವಿಷಯಗಳನ್ನು ಚರ್ಚಿಸುವಲ್ಲಿ ಭಾಗವಹಿಸಿ ಆತ್ಮ ನಿವೇದನೆ ಮಾಡಿಕೊಂಡರು. ವಚನಗಳೆಂಬ ಪ್ರಬಲ ರಾಶಿಗೆ ಕಾರಣಿಭೂತರಾದರು. ಹೆಣ್ಣು - ಗಂಡು ಜಾತಿ - ಮತವೆನ್ನದೇ ಮುಕ್ತವಾಗಿ ಎಲ್ಲದರಲ್ಲೂ ಭಾಗವಹಿಸಲು ಅವಕಾಶವಿತ್ತು. ನಡುವೆ ಸುಳಿವಾತ್ಮ ಗಂಡು ಅಲ್ಲ, ಹೆಣ್ಣು ಅಲ್ಲ ಹೆಣ್ಣು -ಹೊನ್ನು ಮಣ್ಣು ಎಂಬುವುದು ಮನದ ಮುಂದಣ ಆಸೆಗಳೆಂದು ಎತ್ತಿ ಹಿಡಿದ ಬಸವಣ್ಣ, ಅಲ್ಲಮಾದಿಗಳಿಂದ ಶೋಭೆಗೊಂಡ ಅನುಭವ ಮಂಟಪ ಈ ಭಾಗದ ಸಾಹಿತ್ಯದ ತೂಗುವ ತೊಟ್ಟಿಲಾಯಿತು.

‘ದಯವಿಲ್ಲದ ಧರ್ಮದಾವುದಯ್ಯಾ’
‘ಬೆಟ್ಟದ ಮೇಲ್ಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯ’
‘ಬಡತನಕ್ಕೆ ಉಂಬುವ ಚಿಂತೆ
ಉಂಡರೆ ಊಡುವ ಚಿಂತೆ ’
‘ಅರಿದೊಡೆ ಶರಣ ಮರೆದೊಡೆ ಮಾನವ ’
‘ಮರಣವೆ ಮಹಾನವಮಿ’
‘ಎಲೋ ಅಂದರೆ ನರಕ
ಅಯ್ಯಾ ಅಂದರೆ ಸ್ವರ್ಗ’

ಇಂತಹ ಮಹಾಮೌಲ್ಯಗಳನ್ನು ನುಡಿದ, ಬೋಧಿಸಿದ ಶಿವಶರಣ ವಚನಕಾರರು, ಆದರ್ಶಪ್ರಿಯರು, ಲೋಕಪ್ರಿಯರು, ಸಾರ್ವಕಾಲಕ್ಕೂ ಪ್ರಸ್ತುತರಾದರು. ಇವರಿಂದ ರಚಿತವಾದ ವಚನಸಾಹಿತ್ಯ ನಿಜಕ್ಕೂ ವಿಚಾರ ತೀತವಾದ ಸಾಹಿತ್ಯ.

೧೦ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಆಯಾ ಅರಸರು ತಮ್ಮ ಪ್ರಮುಖ ಅರಸುಮನೆತನಗಳಾಗಿಸಿದ್ದರು. ಇಂತಹ ಸಂದರ್ಭದಲ್ಲಿ ಭಾರತಕ್ಕೆ ಭೇಟಿ ನೀಡಿದ ಅನೇಕ ವಿದೇಶಿ ವಿದ್ವಾಂಸರ ಲೇಖನಗಳು ಜಿಲ್ಲೆಯ ಚಾರಿತ್ರಿಕ ಮಹತ್ವವುಳ್ಳ ಅನೇಕ ವಿಷಯಗಳು ತಿಳಿಸಿದ್ದಾರೆ. ಬಹಮನಿ ಸುಲ್ತಾನರ ಕಾಲದಲ್ಲಿ ಸುಪ್ರಸಿದ್ಧ ಪರ್ಷಿಯನ್ ಕವಿ ಅಧರಿಯೆಂಬುವನು ಬೀದರದ ವೈಭವವನ್ನೂ ಕುರಿತು ತನ್ನ ಕೃತಿ ‘ಬಹುಮನ್‌ನಾಮ್’ ದಲ್ಲಿ ನಿರೂಪಿಸಿದ್ದು ಕಂಡುಬರುತ್ತದೆ. ಇನ್ನೊಬ್ಬ ರಷಿಯನ್ ಯಾತ್ರಿಕ ನಿಕಿಟನ್‌ನು ಇಲ್ಲಿ ನಡೆಯುತ್ತಿದ್ದ ವ್ಯಾಪಾರಗಳ ವಿವರಗಳು ಉಲ್ಲೇಖಿಸಿದ್ದಾನೆ. ‘ಗುಲಶನ್-ಇ-ಇಬ್ರಾಹ್ಮಿ’ ಕೃತಿಯ ಕರ್ತೃ ಮೊಹ್ಮದ ಕಾಶಿಮ ಫರಿಸ್ತಾ ಇತನು ಭಾರತ ಹಾಗೂ ಆಸ್ಮಾಬಾದಿನಿಂದ

ಬೀದರಕ್ಕೆ ಬಂದಿದು, ಕಲ್ಯಾಣದ ಮುಖಾಂತರ ಉತ್ತರ ಹಿಂದುಸ್ತಾನದೊಂದಿಗೆ ನಡೆಯುತ್ತಿದ್ದ ವ್ಯಾಪಾರ ವಿವರಗಳನ್ನು ತಿಳಿಸಿದ್ದಾನೆ(ಭಂಡೆ ವೈಜಿನಾಥ:೧೯೯೦:೮೮). ಸುಮೇರಿಯನ್ ಯಾತ್ರಿಕನಾದ ಸಯ್ಯಾದ ಅಲಿ ತಬ್ತಬಾ ಮತ್ತು ಅವನ ಮಗನಾದ ಅಬುತಾಲಿಬರು ಬುರ್ಹನ್-ಇ-ಮಾ ಅಥುರೆ ಗ್ರಂಥದಲ್ಲಿ ಬೀದರ ಜಿಲ್ಲೆಯ ಅಂದಿನ ಸ್ಥಿತಿ ಮತ್ತು ಬಹಮನಿಗಳ ಆಳ್ವಿಕೆಯನ್ನು ವರದಿ ಮಾಡಿದ್ದಾರೆ (ಅವರೇ:೮೮). ಅಲ್ಲಿಂದ ಬಹಮನಿ ಅರಸರ ಕಾಲದಲ್ಲಿ ವಿವಿಧ ಕವಿಗೋಷ್ಠಿಗಳು ನಡೆಯುತ್ತಿ ದ್ದವು. ಬಂಧೇ ನವಾಜರು ಹಾಗೂ ಇನ್ನಿತರರು ಧಾರ್ಮಿಕ ಸಾಹಿತ್ಯವನ್ನೂ ನಿರ್ಮಿಸಿದರು. ಉರ್ದು ಭಾಷೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ೩ನೇ ಮಹ್ಮದನ ಪ್ರಧಾನ ಮಂತ್ರಿ ಮಹ್ಮದ ಪ್ರೇಮಿ ಬಾಬಾಜಿಹಾನ ಎಂಬ ಬಿರುದಿನ ಗ್ರಂಥಾವಲೋಕನದಲ್ಲಿ ಆಸಕ್ತಿ ಯುಳ್ಳ ಶ್ರೇಷ್ಠ ವಿದ್ವಾಂಸ. ಇವನು ವೈಯಕ್ತಿಕ ಗ್ರಂಥಾಲಯ ವನ್ನು ಮಾಡಿದನು. ಇದರಲ್ಲಿ ಸುಮಾರು ೩೦೦೦ಪುಸ್ತಕಗಳು ಇರುವದು ತಿಳಿದುಬರುತ್ತದೆ. ಗವಾನ ಮದರಸಾ ಎಂಬ ಶಿಕ್ಷಣ ಕೇಂದ್ರ ೧೯೭೨ ರಲ್ಲಿ ಇತನೆ ಸ್ಥಾಪಿಸಿದ ಅಷ್ಟು ಪುಸ್ತಕಗಳು ಈ ಮದರಸಕ್ಕೆ ಒಪ್ಪಿಸಿದ. ಈ ಸಂದರ್ಭದಲ್ಲಿ ಕನ್ನಡದ ಅಳಿವಾಯಿತೆನ್ನಬಹುದು ಏಕೆಂದರೆ ಉರ್ದುವಿನ ಪ್ರಭಾವದಿಂದ ಮೊಗಲ ಸಂಸ್ಕೃತಿಯ ಭಾಷೆ ಬೆಳೆಯಿತು ವಿನಹ ಕನ್ನಡಕ್ಕೆ ಹೋಡೆತಬಿದ್ದು, ಪ್ರಗತಿ ಹೊಂದಲಿಲ್ಲ. ಒಂದು ರೀತಿಯಲ್ಲಿ ಗರಬಡಿದ ಹಾಗೆ ಮಡಚಿತೆನ್ನ ಬಹುದು.

ಕ್ರಿ.ಶ.೧೭೮೦ ರಿಂದ ೧೯೪೭ ರ ವರೆಗೆ ಬೀದರ ಜಿಲ್ಲೆಯ ಸಾಹಿತ್ಯದ ದೃಷ್ಟಿಯಿಂದ ಮಿಂಚಿದರೂ ಅದು ತತ್ವ ಪದ ಕಾರರಿಂದ ತಲೆ ಎತ್ತಿತ್ತು. ಈ ಹಂತದ ಅವಧಿಯಲ್ಲಿ ಸುಮಾರು ಇಪ್ಪತ್ತೈದು ತತ್ವಪದಕಾರರು ಆಗಿ ಹೋಗಿದ್ದಾರೆಂದು 'ಬೀದರ ಜಿಲ್ಲೆಯ ತತ್ವಪದಕಾರರು' ಎಂಬ ಕೃತಿಯಲ್ಲಿ ಎಚ್ ಕಾಶಿನಾಥ ರೆಡ್ಡಿ ಅಭಿಪ್ರಾಯ ಪಡುತ್ತಾರೆ. ಜಿಲ್ಲೆಯ ಬಸವಕಲ್ಯಾಣ ತಾಲೂಕಿನಲ್ಲಿಯೇ ಹೆಚ್ಚಿನ ಸಂಖ್ಯೆಯ ತತ್ವ ಪದಕಾರರು ಆಗಿ ಹೋಗಿದ್ದಾರೆ. ನಂತರ ಎಲ್ಲಾ ತಾಲೂಕೂಗಳಲ್ಲಿ ಕಂಡು ಬಂದದ್ದು ಗೋಚರ ವಾಗುತ್ತದೆ. ಪ್ರಮುಖ ತತ್ವ ಪದಕಾರರಾದ ಮರಕುಂದಿ ಬಸವಣಪ್ಪ, ನಿಡವಂಚಿಯ ಭದ್ರೇಶ್ವರ, ಮಾಣಿಕನಗರದ ಮಾಣಿಕ ಪ್ರಭು, ಕೋಹಿನೂರ ಭದ್ರಪ್ಪ, ಧುಮ್ಮನ ಸೂರಿನ ಸಿದ್ಧ ಪ್ರಭು, ಚಿಟಗುಪ್ಪ ನಾಗಪ್ಪ, ಕರಕನಹಳ್ಳಿಯ ಬಕ್ಕಪ್ರಭು, ಲಾದಾಶಿವರಾಯ, ಮಂಗಲಿಗಿಯ ನಾನಾ ಸಾಹೇಬ ಬಾಳೋಬಾ ಮತ್ತು ವೆಂಕಮ್ಮ ಮೊದಲಾದವರು ತಮ್ಮ ತತ್ವಪದಗಳಿಂದ ಸಾಹಿತ್ಯ ಲೋಕ ಬೆಳಗಿದ್ದಾರೆ.

ಸ್ವಾತಂತ್ರ್ಯ ಪೂರ್ವ ಸ್ವಾತಂತ್ರ್ಯೋತ್ತರ ಸಮಯದಲ್ಲಿ ಕನ್ನಡದ ಪರಿಸ್ಥಿತಿಯನ್ನು ಕಂಡಾಗ ಸದ್ಯದ ಶತಮಾನದ ಉತ್ತರಾರ್ಧದಿಂದ ಸಾಹಿತ್ಯ ಚಟುವಟಿಕೆಗಳು ಭರದಿಂದ ಸಾಗುತ್ತಿವೆ. ಇಲ್ಲಿನ ಬರಹಗಾರರು ಇತ್ತಿಚಿನ ಸಾಹಿತ್ಯ ಪ್ರಕಾರಗಳ ಬರವಣಿಗೆಯಲ್ಲಿ ತೊಡಗಿಸಿಕೊಳ್ಳದಿದ್ದರೂ ಅಲ್ಲಲ್ಲಿ ಕೆಲವು ಮುಖಗಳು ತೋರಿಸಿಕೊಟ್ಟಿವೆ.

**೧೨.೧. ಕವಿ ಮತ್ತು ಕಾವ್ಯಗಳು :** ಕನ್ನಡ ಭಾಷೆ ಮುಸ್ಲಿಂ ಅರಸರ ಸ್ವಭಾಷಾಭಿಮಾನದಿಂದ ನಲುಗಿತಲ್ಲದೆ ನಿಜಾಮರ ಕಪಿಮುಷ್ಟಿಗೆ ಸಿಲುಕಿತು. ಅದರ ಸ್ಥಿತಿ ಸೂತ್ರ ಹರಿದ ಗಾಳಿಪಟದಂತಾಗಿ ಉರ್ದು ಆಡಳಿತ ಭಾಷೆಯಾಯಿತು. ರಾಜ್ಯಾಶ್ರಯದ ಪ್ರೋತ್ಸಾಹದಿಂದ ಹೊರಗುಳಿದ ಕನ್ನಡ ಶ್ರೀ ಸಾಮಾನ್ಯರ ಮನ ಸೇರಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕನ್ನಡ ಭಾಷೆಯ ಉಳಿವಿಗಾಗಿ ಹಲವಾರು ಮಹನೀಯರು ಹೋರಾಡಿದ್ದರು. ಅಂತಹ ಪುಣ್ಯಜೀವಿಗಳಲ್ಲಿ ಭಾಲ್ಕಿ ಹಿರೇಮಠ ಜಂಗಮರಾದ ಡಾ. ಚನ್ನಬಸವ ಪಟ್ಟದ್ದೇವರು ಇವರು ಜಿಲ್ಲೆಯಲ್ಲಿ ಕನ್ನಡಕ್ಕೆ ಭದ್ರವಾದ ಅಡಿಪಾಯ ಹಾಕುವುದರ ಜೋತೆಗೆ ಸಾಂಸ್ಕೃತಿಯ ಪರಂಪರೆಯನ್ನು ಶೈಕ್ಷಣಿಕ ಚಳುವಳಿಯನ್ನು ಸಾಫಲ್ಯಕ್ಕೆ ತಂದ ಕೀರ್ತಿ ಪೂಜ್ಯ ಪಟ್ಟದ್ದೇವರಿಗೆ ಸಲ್ಲುತ್ತದೆ. ಮುಂದೆ ಭಾರತವು ಸ್ವಾತಂತ್ರ್ಯ ಪಡೆದಿದ್ದರೂ ಹೈದ್ರಾಬಾದ ರಾಜ್ಯದ ಅಧೀನವಿದ್ದ ಬೀದರ ಇನ್ನೂ ಗುಲಾಮಗಿರಿಯ ಸಂಕೋಲೆಯಲ್ಲಿ ಬಂಧಿಸಲ್ಪಟ್ಟಿತು. ನಿಜಾಮನ ಮತ್ತು ರಜಾಕಾರರ ದೌರ್ಜನ್ಯದಿಂದ ಜನ ತತ್ತರಿಸುತ್ತಿದ್ದರು. ಆಗ ಜನಗಳ ಬಾಯಿಂದ ಕಂಡುಂಡ ದೃಶ್ಯವನ್ನೇ ಜಾನಪದ ಹಾಡು, ಬಯಲಾಟ, ಡಪ್ಪಿನಾಟ, ಕೋಲಾಟ, ಬೊಂಬೆಯಾಟ, ಬುಲಾಯಿ ಹಾಡುಗಳು ಮತ್ತು ತತ್ವ ಪದಗಳ ಮೂಲಕ ಹೋರಬರುತ್ತಿದ್ದವು. ಹಾಗೆಯೇ ಸಾಹಿತ್ಯ ಅಭಿವೃದ್ಧಿಗೊಂಡು ಎಲ್ಲರ ಮನಸೇರುತ್ತಾ ಸಾಗಿತ್ತು.

ಈ ಪ್ರಕಾರವಾಗಿ ಕಾವ್ಯ ಹಂತಹಂತವಾಗಿ ಚಿಗುರಲು ಪ್ರಾರಂಭವಾಯಿತು. ಈ ಶತಮಾನದಲ್ಲಿ ಇತ್ತೀಚಿಗೆ ಮೆರೆಯುತ್ತಿರುವ ಹಲವಾರು ಕವಿಗಳು ಜಿಲ್ಲೆಯ ತುಂಬಾ ಕಾಣಿಸಿಕೊಂಡಿದ್ದಾರೆ. ನವೋದಯ, ನವ್ಯ, ಪ್ರಗತಿಶೀಲ, ದಲಿತ-ಬಂಡಾಯ ಸಾಹಿತ್ಯದ ಘಟ್ಟಗಳಿಗೆ ಹತ್ತಿಕೊಂಡು ಒಳ್ಳೆಯ ಕೃತಿಯನ್ನು ಕೊಡುವುದರಲ್ಲಿ ಇಂದು ಸಾಕಷ್ಟು ಪ್ರಯತ್ನಗಳು ನಡೆದಿವೆ.

೧೯೪೮ರಲ್ಲಿ ರಜಾಕಾರರು ಮಾಡಿದ ಸಾಮೂಹಿಕ ಹತ್ಯೆ, ಅತ್ಯಾಚಾರ, ಅನಾಚಾರ ಎಸಗಿದ್ದ ಕುರಿತು ಬುಲಾಯಿ ಪದ ರಚಿಸಿದ ಕಥನಕಾವ್ಯ ಇದು ಪಂ. ವೀರಪಾಕ್ಷ ಸ್ವಾಮಿ ಗೋರಟಾ (ಬಿ)

ಇವರು ರಚಿಸಿ ಕಾವ್ಯ ಪ್ರಕಾರಕ್ಕೆ ನಾಂದಿ ಹಾಡಿದರು. ಇಂದು ಆರು ಮುದ್ರಣವನ್ನು ಪಡೆದು ಮೊದಲ ಕನ್ನಡಕಾವ್ಯ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕ್ರಾಂತಿ ಭೂಮಿ ಗೋರಟಾದ ನೆಲದಿಂದ ಪ್ರಾರಂಭವಾಯಿತು.

ಕನ್ನಡ ಸಾಹಿತ್ಯ ಶ್ರೀಗೆ ಅನುಪಮ ಸೇವೆ ಸಲ್ಲಿಸಿದ ಹಿರಿಯ ಕವಿಯಿತ್ರಿ ಲಿಂ. ಜಗದೇವಿ ತಾಯಿ ಲಿಗಾಡೆ, ಲಲ್ಲೇಶ್ವರಿ ಮೂಗಿ, ಪ್ರೋ. ವೀರೇಂದ್ರ ಸಿಂಪಿ, ಪಂಚಾಕ್ಷರಿ ಪುಣ್ಯಶೆಟ್ಟಿ, ಡಾ: ಜಿ.ವಿ. ವಿಸಾಜಿ, ಡಾ. ಬಸವರಾಜ ಸಬರದ, ಡಾ: ಕಾಶಿನಾಥ ಅಂಬಲಗಿ, ದೇಶಾಂಶ ಹುಡುಗಿ, ಎಂ.ಜಿ. ಗಂಗನಪಳ್ಳಿ, ಪ್ರೋ. ಬಾಲಚಂದ್ರ ಜಯಶೆಟ್ಟಿ, ಎಂ.ಜಿ. ದೇಶಪಾಂಡೆ, ಡಾ: ಜಗನ್ನಾಥ ಹೆಬ್ಬಾಳೆ, ಪಂಚಾಕ್ಷರಿ ಹಿರೇಮಠ, ಪಿ. ಬಸವರಾಜ, ಡಾ. ವಿಜಯಶ್ರೀ ಸಬರದ, ಪ್ರೋ. ಪ್ರೇಮ ಸಿರ್ಸಿ, ಯಶೋದಮ್ಮ ಸಿದಬಟ್ಟೆ, ವೀರಶೆಟ್ಟಿ ಬಾವುಗೆ, ಟಿ. ಎಸ್. ರಶ್ಮಿ, ರಘುಶಂಖ ಭಾತಂಬ್ರಾ, ಆರ್.ಕೆ. ಹುಡುಗಿ, ಬ.ನಾ. ಸೋಲಾಪೂರೆ, ಪ್ರಭುಶೆಟ್ಟಿ ಸೈನಿಕಾರ, ಮ.ಮಾ.ಬೋರಾಳಕರ್, ಓಂಪ್ರಕಾಶ ದಡ್ಡೆ, ಪ್ರೊ. ವಜ್ರಾಪಾಟೀಲ, ಕೆರಳ್ಳಿ ಲಕ್ಷ್ಮರೆಡ್ಡಿ, ಸುಭಾಷ ನೇಳಗೆ, ಡಾ. ರಾಜೇಂದ್ರ ಯರನಾಳ, ಶಿವಾನಂದ ಸ್ವಾಮಿ ಹುಲಸೂರ, ಬಂಡೆಪ್ಪಾ ಎಸ್. ಖೋಬಾ, ವಿ. ಎಂ. ಡಾಕುಳಗೆ, ಡಾ. ವಿಶಾಲಕ್ಷಿ ಕರಡ್ಡಿ, ಹಂಶಕವಿ, ಮಲ್ಲೇಶ್ವರಿ, ವಿಕ್ರಮ ವಿಸಾಜಿ, ಡಾ: ಚುನ್ನುಲಾಲ, ನಾಗಶೆಟ್ಟಿ ಗಾದಗಿ ಇತ್ಯಾದಿ. ಅಲ್ಲದೇ ಮುಂತಾದ ಯುವ ಬರಹಗಾರರು, ಉತ್ಸಾಹಿ ಯುವಕರು ತಮ್ಮ ಪ್ರತಿಭೆಯಿಂದ ಕವನಗಳನ್ನು ರಚಿಸಿ ಅಲ್ಲಲ್ಲಿ ಜಿಲ್ಲೆಯ ಪತ್ರಿಕೆಯಲ್ಲಿ ಪ್ರಕಟಿಸಿ ಕಾವ್ಯ ಹರವನ್ನು ಹೆಚ್ಚಿಸುತ್ತಿದ್ದಾರೆ. ಹೀಗಾಗಿ ನಮ್ಮ ಸಾಹಿತಿಗಳು ತಮ್ಮ ಗಟ್ಟಿ ಬರಹದಿಂದ ಇಂದಿನ ವೈಚಾರಿಕ ಸಮಾಜಕ್ಕೆ ಸ್ಪಂದಿಸುವ ಸಾಹಿತ್ಯ ನೀಡುವಲ್ಲಿ ಜಿಲ್ಲೆಯ ಸಾಹಿತಿಗಳು, ಯುವ ಬರಹಗಾರರು ಪ್ರಯತ್ನ ಮಾಡುತ್ತಿದ್ದಾರೆ.

**೧೨.೨. ಕಥೆಗಾರರು/ಕಥೆಗಳು :** ಬೀದರ ಜಿಲ್ಲೆಯಲ್ಲಿ ಗದ್ಯಾ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥಾ ಪ್ರಕಾರವು ತುಂಬ ತಡವಾಗಿ ತನ್ನ ಇತಿಹಾಸ ಪ್ರಾರಂಭಿಸಿತೆನ್ನಬಹುದು. ಇತ್ತೀಚಿನ ದಶಕದಿಂದಲೇ ವಿನ: ಹಿಂದಿನಿಂದಲೂ ತಿಳಿಯುತ್ತದೆ. ಏಕೆಂದರೆ ತುಂಬ ದೀರ್ಘ ಕಾಲದವರೆಗೆ ಈ ಪ್ರದೇಶವು ಬರಡಾಗಿದ್ದು ಈಗತಾನೇ ಮೊಳಕೆಯೊಡೆದು ಬೆಳೆಯಲು ಪ್ರಾರಂಭಿಸಿದ್ದು ಜಿಲ್ಲೆಯ ಕತೆಯ ಇತಿಹಾಸಕ್ಕೆ ಮೆರಗು ಕೊಟ್ಟಂತಾಗಿದೆ. ಇತ್ತೀಚೆಗೆ ಬಹಳಷ್ಟು ಜನ ಕಥಾ ಸಾಹಿತ್ಯದಲ್ಲಿ ಹೆಜ್ಜೆಗಳನ್ನಿಡುತ್ತಿದ್ದಾರೆ. ಕೆಲವು ಕತೆಗಾರರಂತು ಎಲ್ಲಾ ಜಿಲ್ಲೆಯ ಬರಹಗಾರರಂತೆ ಕಥೆಯನ್ನು ಹೆಣೆದು ಜಿಲ್ಲೆಗೆ ಕೀರ್ತಿ ತರುತ್ತಿರುವರು.

ಮೊಟ್ಟಮೊದಲಿಗೆ ಜಿಲ್ಲೆಗೆ ಕಥಾ ಪ್ರಕಾರವನ್ನು ನೀಡಿದ ಭಾಲ್ಕಿ ಚನ್ನಬಸವೇಶ್ವರ ಮಹಾವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ: ಜಿ.ಬಿ. ವಿಸಾಜಿ ಅವರು ೧೯೭೮ರಲ್ಲಿ 'ಅನಂತ ಸಂಗಮ' ಪ್ರಕಟಗೊಂಡಿತು. ಎಂ.ಜಿ. ದೇಶಪಾಂಡೆ ಅವರು ೧೯೮೬ರಲ್ಲಿ ಭ್ರಮೆ ಕಥಾ ಸಂಕಲನ.

೧೯೭೮ರಲ್ಲಿ ಅರಳು, ೧೯೮೭ರಲ್ಲಿ 'ಚೇತನ' ಎಂಬ ಕಥಾಸಂಕಲನಗಳು ಹೊರಬಂದವು. ಈ ಸಂದರ್ಭದಲ್ಲಂತೂ ಜಿಲ್ಲೆಯ ಕಥೆಗಾರರ ಕಥೆಗಳು ಓದುವ ಹವ್ಯಾಸ ಹೆಚ್ಚಿಸಿತು. ಸುಬ್ಬಣ್ಣ ಅಂಬೆಸಂಗೆಯವರು ಕೃಷಿ ಉದ್ಯೋಗದೊಂದಿಗೆ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಕಥೆಗಾರ. ತದನಂತರ ೧೯೯೦ರಲ್ಲಿ 'ಯಾರನ್ನೂ ಪ್ರೀತಿಸಬೇಡ' ಹಾಗೂ ೧೯೯೬ರಲ್ಲಿ 'ಇದು ಎಂಥಾ ಲೋಕವಯ್ಯಾ' ಎಂಬ ಕಥೆಗಳು ಗುರುನಾಥ ಅಕ್ಕಣ್ಣಾ ಅವರು ತಮ್ಮದೆಯಾದ ತರಂಗಿಣಿ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ೧೯೯೦ರಲ್ಲಿ 'ಕಲ್ಲಣ್ಣನ ಕಾಂಪ್ಲೆಂಟ್' ಎಂಬ ಕಥಾ ಸಂಕಲನವೇ ಗುರುನಾಥ ಅಕ್ಕಹಲ್ಲಾ ಪ್ರಕಟಿಸಿದ್ದರು. ಪ್ರಕರಣ ಈ ಕಥೆಯು ವಾಸ್ತವಿಕ ವರ್ತಮಾನ ಕಠೋರತೆಯ ನಿರೂಪಣೆಗೆ ಕನ್ನಡಿ ಹಿಡಿಯುತ್ತದೆ. ಹೀಗಾಗಿ ರಾಜ್ಯ ಮಟ್ಟದ ಕಥಾ ಸ್ಪರ್ಧೆಯಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಗುರುತಿಸುವುದರ ಜೊತೆಗೆ ಜಿಲ್ಲೆಗೆ ಕೀರ್ತಿ ತಂದುಕೊಟ್ಟಿದೆ.

'ಕೋಡ್ಗಲ್ಲಿನ ಕೂಗು' ೧೯೯೧ರಲ್ಲಿ 'ಮಿರ್ಚಿಬಾಬಾ', ೧೯೯೩ರಲ್ಲಿ ಪ್ರಕಟಗೊಳಿಸಿದರು. ಪ್ರೊ. ಬಾಲಚಂದ್ರ ಜಯಶೆಟ್ಟಿಯವರು. ಇವರು ಹಿಂದಿ, ಕನ್ನಡ ಭಾಷೆಯ ಸಾಮರ್ಥ್ಯ ಪಡೆಯುವುದರ ಜೊತೆ ದೊಡ್ಡ ಅನುವಾದಕರು ಮತ್ತು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃಷಿಗೈದವರು. 'ಪರಿವರ್ತನೆ' ಕಥಾ ಸಂಕಲನವನ್ನು ೧೯೯೪ರಲ್ಲಿ ಖಡ್ಕೆ ಪ್ರಕಾಶನವತಿಯಿಂದ ಚಂದ್ರಕಾಂತ ಪಾಟೀಲರು ಪ್ರಕಟಿಸಿದ್ದಾರೆ.

'ಕ್ಷಿತಿಜ' ಎಂಬ ಕತೆಯು ಬಸವರಾಜ ಮಠಪತಿಯವರು ಪ್ರಕಟಿಸಿ ಕಥೆಯ ದಿಗಂತವನ್ನೇ ವಿಸ್ತರಿಸಿದರು. ವೀರಶೆಟ್ಟಿ ಬಾವುಗೆ ಇವರು 'ಆಕೆ ಮತ್ತು ನೆರಳು' ಕಥಾ ಸಂಕಲನ ಪ್ರಕಟಿಸಿದ್ದಾರೆ. ಇವರು ಕಥೆಗಾರರಲ್ಲದೆ ಕವಿಯು ಹೌದು, ಜೊತೆಗೆ ಜಿಲ್ಲೆಯ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ.

ಜಿಲ್ಲೆಯ ಕಥೆಗಾರರಲ್ಲಿ ಪ್ರಮುಖರಾಗಿ ಶ್ರೀಕಾಂತ ಪಾಟೀಲರದು ಮತ್ತು ಶಿವಕುಮಾರ ನಾಗವಾರದು ಎತ್ತಿದ ಕೈ. ಪಾಟೀಲರು ಸಾಹಿತಿ ಅಲ್ಲದಿದ್ದರೂ ಅದರ ಬಗ್ಗೆ ಯಾವಾಗಲೂ ಗೀಳು ಹುಟ್ಟಿಸಿಕೊಳ್ಳುವರು. ಇವರ ಮೊದಲನೆಯ ಕಥಾ ಸಂಕಲನ ೧೯೯೭ರಲ್ಲಿ 'ಬೆಂಕಿ

ಮರೆಯ ತಂಪು' ತಮ್ಮದೇ ಆದ ಶಶಿ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಇವರ ಎಲ್ಲಾ ಕಥೆಗಳು ಬಹುಮಾನ ಪಡೆದವುಗಳಾಗಿವೆ.

ಶಿವಕುಮಾರ ನಾಗವಾರರು ಭಾಗದ ಶ್ರೇಷ್ಠ ಕಥೆಗಾರರ ಜೊತೆಗೆ ವಿಮರ್ಶಾ ಮನೋಭಾವವುಳ್ಳವರು. ಬೇಕಾದರೆ ಶ್ರೇಷ್ಠ ಮಟ್ಟದ ಪದ ಪ್ರಯೋಗಿಸುವ ಹಂಬಲವುಳ್ಳವರು. ೨೦೦೦ರಲ್ಲಿ 'ಹಣದಿ' ಕಥೆ ಸಂಕಲನವು ಲೋಹಿಯ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಪ್ರತಿಯೊಂದು ಕಥೆಗಳು ರಾಜ್ಯ ಮಟ್ಟದ ಪ್ರಶಸ್ತಿಗಳನ್ನು ಪಡೆದವುಗಳಾಗಿವೆ.

**೧೨.೩. ಕಾದಂಬರಿ ಸಾಹಿತ್ಯ :** ಜಿಲ್ಲೆಯಲ್ಲಿ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ದೀರ್ಘವಾದ ಚರಿತ್ರೆ ಯಿಲ್ಲವಾದರೂ ಈ ಶತಕ ಕಾಲಾವಧಿಯಲ್ಲಿ ಕೆಲವು ಶ್ರೇಷ್ಠ ಕಾದಂಬರಿಗಳು ಕಾಣಿಸಿಕೊಂಡಿವೆ. ಮೊಟ್ಟ ಮೊದಲಿಗೆ ೧೯೭೩ರಲ್ಲಿ 'ಸಿಂದಿ ಬನದಲ್ಲಿ ಸಿಕ್ಕವಳು' ಎಂಬ ಕಾದಂಬರಿಯ ಮೂಲಕ ಕಾದಂಬರಿ ಕ್ಷೇತ್ರ ಹುಟ್ಟಿಕೊಂಡಿತು. ಇದು ಸುಬ್ಬಣ್ಣಾ ಅಂಬೆಸಂಗೆಯವರದು. ದುರಂತ ವಸ್ತುವನ್ನು ಹೊತ್ತು ನಿಂತ ಕಾದಂಬರಿ. ಒಂದು ಅನಾಥ ಹುಡುಗಿಯ ಚಿತ್ರಣವು ತುಂಬ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಕಾದಂಬರಿ ಸಾಹಿತ್ಯಕ್ಕೆ ದ್ವಿತೀಯದಾಗಿ ಎಂ.ಜಿ. ದೇಶಪಾಂಡೆಯವರು 'ಹೂ ಬಾಡಿದಾಗ' ಎಂಬ ಕೃತಿ, ಕಾದಂಬರಿ ಲೋಕಕ್ಕೆ ನೀಡಿದರು. 'ಮೊಮ್ಮಕ್ಕಳ ಭಾಗ್ಯ ಸಂಗವಜ್ಜಿಗ್ಯಾಕಿಲ್ಲ' ಎಂಬ ಕಾದಂಬರಿಯಲ್ಲಿ ಈ ನೆಲದ ಸತ್ವವನ್ನು ಮೈಗೂಡಿಸಿಕೊಂಡು ಆಡುನುಡಿ ಭಾಷೆಯ ಸೊಗಡನ್ನು ಬಳಸಿಕೊಂಡು ಬರೆದವರು ಡಾ. ರಾಜೇಂದ್ರ ಯರನಾಳ ರಾಷ್ಟ್ರ ಉತ್ತಮ ಶಿಕ್ಷಕಿ ಪ್ರಶಸ್ತಿ ವಿಜೇತೆ ಶ್ರೀಮತಿ ಯಶೋದಮ್ಮ ಸಿದ್ದಬಟ್ಟೆಯವರು 'ಮಂಗಳಾ' ಎಂಬ ಕಾದಂಬರಿಯನ್ನು ನೀಡಿ ಕಾದಂಬರಿಯ ಹರವನ್ನು ಹೆಚ್ಚಿಸಿದರಲ್ಲದೆ ಜಿಲ್ಲೆಯ ಓದುಗರ ಮನಸ್ಸೆಳೆದರು.

'ಮರೆಯಲಾಗದ ಮಂದಿರ ' ಪ್ರೇಮದ ವಸ್ತುವನ್ನು ತೆಗೆದುಕೊಂಡು ಯುವಕರನ್ನು ಪ್ರೀತಿಯಿಂದ ಓದಿಸುತ್ತಾ ಸಾಗುವ ಕಾದಂಬರಿ ಬಿ.ಜಿ. ರಾಠೋಡ ರಚಿಸಿ ಮತ್ತೆ ಕಾದಂಬರಿ ಕ್ಷೇತ್ರ ವಿಶಾಲಗೊಳಿಸಿದರು.

**೧೨.೪. ಅನುವಾದ :** ಜಿಲ್ಲೆಯಲ್ಲಿ ಅನುವಾದ ಕಾರ್ಯ ಹೇಳಿಕೊಳ್ಳುವಷ್ಟು ಸಾಗಿಲ್ಲವಾದರೂ ಸ್ವಲ್ಪ ಕಾರ್ಯವಾಗಿದೆ. ಅದುವೇ ತುಂಬ ಪ್ರಸಿದ್ಧಿಯನ್ನು ಪಡೆದು ಜಿಲ್ಲೆಗೆ ಕೀರ್ತಿ ತಂದುಕೊಟ್ಟಿದೆ. ಇಂಗ್ಲೀಷನಿಂದ ಕನ್ನಡಕ್ಕೆ, ಕನ್ನಡದಿಂದ ಹಿಂದಿಗೆ, ಮರಾಠಿಯಿಂದ ಕನ್ನಡಕ್ಕೆ ಅನುವಾದಿಸುವ ಕಾರ್ಯ ಅಭಿವೃದ್ಧಿಗೊಳ್ಳುತ್ತಾ ನಡೆದಿದೆ. ಇಂತಹ ಕ್ಷೇತ್ರದಲ್ಲಿ ಸೇವೆ

ಸಲ್ಲಿಸುತ್ತಿರುವ ಬಸವಕಲ್ಯಾಣ ತಾಲೂಕಿನ ರಾಜೇಶ್ವರ ಗ್ರಾಮದ ಪ್ರೊ. ಬಾಲಚಂದ್ರ ಜಯಶೆಟ್ಟಿ ಅವರು ಅನುವಾದ ಕ್ಷೇತ್ರದಲ್ಲಿ ಎತ್ತಿದ ಕೈ. ಯು. ಆರ್. ಅನಂತಮೂರ್ತಿಯವರ ಕೃತಿಗಳು, ಎಸ್. ಎಲ್. ಭೈರಪ್ಪನವರ ಕಾದಂಬರಿಗಳು, ವೀಣಾ ಶಾಂತೇಶ್ವರ ಕಥೆಗಳು ಹಿಂದಿಗೆ ಅನುವಾದಿಸಿದ್ದಾರೆ. ಜೇಡರ ದಾಸಿಮಯ್ಯನ ವಚನಗಳು, 'ಭಾರತೀಯ ಕಾವ್ಯ ಮೀಮಾಂಸೆ' ಹಿಂದಿಗೆ ಅನುವಾದಿಸಿದ್ದಾರೆ. ಪ್ರಭಾಕರ ಅತ್ರೇಯವರ 'ಭಾವ-ಬಂಧನ' ಕಾದಂಬರಿ ಕನ್ನಡಕ್ಕೆ ಅನುವಾದಿಸಿ ಅನುವಾದ ಸಾಹಿತ್ಯ ಬೆಳೆಯುವಲ್ಲಿ ಕಾರಣರಾದರು. ಇಂಗ್ಲೀಷನ ವೈಚಾರಿಕ ನೆಲೆಯ ಸಾಹಿತ್ಯ ಕನ್ನಡಕ್ಕೆ ಅನುವಾದಿಸಿದ ಕೀರ್ತಿ ಪ್ರೊ. ಆರ್.ಕೆ. ಹುಡುಗಿಯವರಿಗೆ ಸಲ್ಲುತ್ತದೆ. ಇವರು ಭಗತ್‌ಸಿಂಗ್, ರಾವ್‌ಸಾಹೇಬರ ಮುಂತಾದ ಕೃತಿಗಳು ಅನುವಾದಿಸಿದ್ದಾರೆ.

ಬಸವಕಲ್ಯಾಣ ತಾಲೂಕಿನ ಹಾಗೂ ಗುಲಬರ್ಗಾ ವಿಶ್ವವಿದ್ಯಾಲಯದ ಹಿಂದಿ ವಿಭಾಗದ ಮುಖ್ಯಸ್ಥರಾದ ಡಾ: ಕಾಶಿನಾಥ ಅಂಬಲಗಿಯವರು ಬಸವೇಶ್ವರ ವಚನಗಳು, ಪಿ.ಲಂಕೇಶರ ಕೃತಿಗಳು, ಸಾ.ರಾ.ಅಬುಬಕರರ, ಡಾ: ಜಿ. ಎಸ್. ಶಿವರುದ್ರಪ್ಪನವರ, ಚನ್ನವೀರ ಕಣವಿಯವರ, ರಂಜಾನ್ ದುರ್ಗರವರ, ಶಾಂತರಸರ ಮತ್ತು ಶೈಲಜಾ ಉಡಚಣನವರ ಇತ್ಯಾದಿ ಕೃತಿಗಳು ಕನ್ನಡದಿಂದ ಹಿಂದಿಗೆ ಅನುವಾದಿಸಿ ಕನ್ನಡ ಕಂಪನ್ನೂ ಎಲ್ಲಾ ಕಡೆ ಪಸರಿಸುವಂತೆ ಮಾಡಿದ ಶ್ರೇಯಸ್ಸು ಮೆಚ್ಚುವಂತಹದಾಗಿದೆ. ಹೀಗೆ ಅನುವಾದ ಅಷ್ಟು ಭರದಿಂದ ಸಾಗುತ್ತಿಲ್ಲವಾದರೂ ಸಾಗಿದಷ್ಟು ತುಂಬ ಪ್ರಬಲವಾಗಿದೆ. ಆದರೂ ಇನ್ನು ಈ ರಂಗ ಬೆಳೆಯುವುದು, ಬೆಳೆಸುವುದು ಜಿಲ್ಲೆಯ ಸಾಹಿತಿಗಳು ಈ ನಿಟ್ಟಿನಲ್ಲಿ ಪ್ರಯತ್ನಿಸಬೇಕಾಗಿದೆನ್ನಬಹುದು.

**೧೨.೫. ಹನಿಗವನ ಸಂಕಲನಗಳು :** ಡಾ: ಬಿ.ಬಿ. ಪೂಜಾರರ 'ಮೂರು ಬಣ್ಣ ನೂರು ಕವನಗಳು' ಎಂಬ ಹನಿಗವನ ಮೂಲಕ ನಾಂದಿ ಹಾಡಲಾಯಿತು. ಡಾ. ಕಾಶಿನಾಥ ಅಂಬಲಗಿಯವರ 'ಹುಲ್ಲು ಮೇಲಿನ ಹನಿಗಳು', ಡಾ. ಪ್ರೇಮಾ ಸಿರ್ಸೆಯವರ 'ಚುಕ್ಕೆಗಳು' ಹನಿಗವನ, ಡಾ ಕಾಶಿನಾಥ ಅಂಬಲಗಿಯವರ 'ಪಂಜಾಬಿನ ೨೦೦ ಮಿನಿಗವನಗಳನ್ನು' ಹಿಂದಿಗೆ ತಂದಿದ್ದಾರೆ. ಎಂ.ಜಿ. ದೇಶಪಾಂಡೆಯವರು, ದೇಶಾಂಶ ಹುಡುಗಿ, ಡಾ. ಜಗನ್ನಾಥ ಹೆಬ್ಬಾಳೆ, ಕೆರಳ್ಳಿ ಲಕ್ಷ್ಮಾರಡ್ಡಿ, ಸುಭಾಷ ನೇಳಗೆ, ವೀರಶೆಟ್ಟಿ ಚೌಕನಪಳ್ಳಿ, ಎಸ್.ಕೆ. ಮರಗುತ್ತಿ, ಗಂಧರ್ವಸೇನಾ, ಡಾ. ವಿಶಾಲಕ್ಷಿ ಕರಡ್ಡಿ, ಶಿವಕುಮಾರ ಸ್ವಾಮಿ ಮೊದಲಾದವರು ಹನಿಗವನ ಕ್ಷೇತ್ರವನ್ನು ವಿಸ್ತರಿಸುತ್ತಿರುವರು.

**೧೨.೬. ಶಿಶುಕವನ ಸಂಕಲನಗಳು :** 'ಹಾಡುತ್ತ ಕಲಿ' ಎಂಬ ಶಿಶುಕವನ ಸಂಕಲನದಿಂದ ಶಿಶುಕವನ ಇತಿಹಾಸ ಪ್ರಾರಂಭಿಸಿದವರು ಡಾ: ಮಾಣಿಕರಾವ ಧನಶ್ರೀಯವರು, ಮಾಶೆಟ್ಟಿ

ಬೆಳಕೇರಿಯವರ 'ಮತ್ತೆ ಬಂತು ವಸಂತ', ವಿಕ್ರಮ ವಿಸಾಜಿಯವರ 'ಗಾಳಿಪಟ', ಜಯಲಕ್ಷ್ಮಿ ಬೆಳಕೇರಿಯವರ 'ಬಿಡಿಸೋಣು ಬಾಜಗಳ ', 'ಸಂಗಮದರ ', ಇಂದುಮತಿ ಬಂಡಿ, ದೇಶಾಂಶ ಹುಡುಗಿ ಮುಂತಾದವರು ಅಲ್ಲದೇ ಜಿಲ್ಲೆಯಲ್ಲಿ ಸಾಹಿತ್ಯ ವೇದಿಕೆ ಸಂಘವು ಸ್ಥಾಪಿತಗೊಂಡಿದೆ. ಈ ನಿಟ್ಟಿನಲ್ಲಿ ಭಾಲ್ಕಿಯ ಹಿರೇಮಠದಲ್ಲಿ ಪ್ರತಿ ವರ್ಷ ಶಿಶು ಸಾಹಿತ್ಯ ಸ್ಪರ್ಧೆ ನಡೆಸಿ ಬಹುಮಾನ ಪ್ರಶಸ್ತಿ ಪತ್ರ ನೀಡುತ್ತಾರೆ. ಹೀಗಾಗಿ ಜಿಲ್ಲೆಯಲ್ಲಿ ಶಿಶುಸಾಹಿತ್ಯ ಬೆಳೆಯಲು, ಬೆಳೆಸಲು ಸಾಹಿತಿಗಳಿಗೆ ಪ್ರೋತ್ಸಾಹಿಸುತ್ತಿದ್ದಾರೆ.

**೧೨.೭. ಲಲಿತ ಪ್ರಬಂಧಗಳು :** ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ಲಲಿತ ಪ್ರಬಂಧಗಳಲ್ಲಿ ಕೃಷಿಯನ್ನು ಮಾಡಿದವರು ಪ್ರೊ. ವೀರೇಂದ್ರ ಸಿಂಪಿ, ಶ್ರೇಷ್ಠ ಆಧುನಿಕ ಪ್ರಬಂಧಕಾರರಲ್ಲಿ ಒಬ್ಬರು. 'ಕಾಗದ ಚೂರು', 'ಭಾವಮೈದುನ ' ಇದಕ್ಕೆ ೧೯೮೦ರ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿದೆ. 'ಸ್ವಚ್ಛಂದ ಮನದ ಸುಳಿದಾಟ', 'ಮಹಾರಾಷ್ಟ್ರದ ಶಿವಾಜಿ ', ಕರ್ನಾಟಕ ಮತ್ತು ಗುಲಬರ್ಗಾ ವಿಶ್ವವಿದ್ಯಾಲಯಗಳಲ್ಲಿ ಪದವಿ ಪರೀಕ್ಷೆಗಾಗಿ ಪಠ್ಯಪುಸ್ತಕವಾಗಿದೆ. 'ಪರಿಸರ ಸ್ಪಂದನ' ಇದಕ್ಕೆ ಗುಲಬರ್ಗಾ ವಿಶ್ವ ವಿದ್ಯಾಲಯದಿಂದ ಪ್ರೋತ್ಸಾಹ ಬಹುಮಾನ ದೊರೆತಿದೆ. ಲಲಿತ ಪ್ರಬಂಧ ಕ್ಷೇತ್ರದಲ್ಲಿ ಇವರ ಸೇವೆ, ಅಪಾರವಾದ ಕೊಡುಗೆ ನೀಡಿದ್ದಾರೆ. ದಿಕ್ಸೂಚಿಯಲ್ಲಿ ಪ್ರತಿ ತಿಂಗಳಲ್ಲಿ ಇವರ ಲೇಖನವನ್ನು ಹೊರ ಬರುತ್ತದೆ. ಇಂದಿನ ಯುವ ಬರಹಗಾರರು ಸದ್ಯದಲ್ಲಿ ಲಲಿತ ಪ್ರಬಂಧದ ಕಡೆ ಗಮನ ಸೆಳೆಯುವುದು ಕಂಡುಬರುತ್ತಿದೆ. ಪ್ರೊ.ಸುಭಾಷ ನೇಳಗೆ ವಿಜ್ಞಾನ ಲೇಖನಗಳನ್ನು ಲಲಿತ ಪ್ರಬಂಧ ಜಗತ್ತಿಗೆ ನೀಡುತ್ತಿದ್ದಾರೆ. ಆದರೂ ಈ ಕ್ಷೇತ್ರದಲ್ಲಿ ಜಿಲ್ಲೆ ಗುರುತಿಸಿ ಕೊಳ್ಳಬೇಕಾಗಿದೆ.

**೧೨.೮. ಜಾನಪದ ಸಾಹಿತ್ಯ :** ಅಪ್ಪಟ ಜಾನಪದ ಸಾಹಿತ್ಯ ಸಿಗುವ ಜಿಲ್ಲೆ ಎಂದರೆ ಅದು ಬೀದರ ಜಿಲ್ಲೆಯೆಂದು ಹೆಸರು ಪಡೆದಿದೆ. ಜಿಲ್ಲೆಯ ಸರ್ವಭಾಗದಲ್ಲಿ ಜಾನಪದ ಸಂಪತ್ತು ಅಪಾರವಾಗಿ ಅಡಗಿದೆ. ಅದನ್ನು ಅಗಿದು ಬೆಳಕಿಗೆ ತರುವ ಕೆಲಸ ತುಂಬ ಅವಶ್ಯಕತೆ ಇದೆ. ಏಕೆಂದರೆ ಜಿಲ್ಲೆ ಪರಭಾಷೆ ಮತ್ತು ಪರ ಸಂಸ್ಕೃತಿಗಳ ತುಳಿತಕ್ಕೆ ಒಳಗಾಗಿರುವುದರಿಂದ ಕನ್ನಡ ತನ್ನ ಶ್ರೀಮಂತಿಕೆಯನ್ನು ಕಳೆದುಕೊಂಡಂತಾಗಿದೆ. ಜಾನಪದ ಸಾಹಿತ್ಯ ಪ್ರಕಾರಗಳು ವಿಪುಲವಾಗಿ ಬೆಳೆದಿದೆ. ಆದರೆ ಇನ್ನು ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸವಾಗಬೇಕಾಗಿದೆ. ಆದರೆ ಜಾನಪದ ಕ್ಷೇತ್ರದಲ್ಲಿ ಹಲವಾರು ಲೇಖಕರು, ವಿದ್ವಾಂಸರು, ಸಂಶೋಧಕರು ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿ ಈ ರಂಗವು ನಾಡಿನಲ್ಲಿ ಗುರುತಿಸುವಂತೆ ಮಾಡಿದ್ದಾರೆ.

ಕ್ಯಾತನಹಳ್ಳಿ ರಾಮಣ್ಣನವರ ೧೯೭೬ರಲ್ಲಿ 'ಬೀದರ ಜಿಲ್ಲೆಯ ಜಾನಪದ ಗೀತೆಗಳು ಹಾಡುಗಳು', ಕಥೆಗಳು ಎನ್ನುವ ಪುಸ್ತಕಗಳ ಪ್ರಕಟಣೆಗಳು ಬಿಟ್ಟರೆ ಹೆಚ್ಚಿನ ಕೆಲಸ ನಡೆದಿಲ್ಲ ಎನಿಸುತ್ತದೆ. ಡಾ. ಜಗನ್ನಾಥ ಹೆಬ್ಬಾಳ ಅವರ ಸಂಪಾದನೆಯಲ್ಲಿ 'ಸತ್ತವರ ಹಾಡುಗಳು', ಬೀದರ ಜಿಲ್ಲೆಯ 'ಬುಲಾಯಿ ಹಾಡುಗಳು' ಎಂಬ ಮತ್ತೊಂದು ಪುಸ್ತಕ ಪ್ರಕಟಿಸಿ ಇದರಲ್ಲಿ ಐತಿಹಾಸಿಕ ಹಾಡುಗಳು, ಪುರಾಣ ಗೀತೆಗಳು-ಸಮಾಜದ ಸ್ಥಿತಿಗತಿಗಳ ಹಾಡುಗಳು ರಜಾಕರರ ಹಾವಳಿ ಹಾಡುಗಳು ರಾಜ್ಯದಲ್ಲಿ ಬಹುಮಾನಿತ ಕೃತಿಯೆಂದು ಪ್ರಸಿದ್ಧಿ ಹೊಂದಿ ಜಿಲ್ಲೆಗೆ ಮೆರಗು ತಂದಿದೆ. ಡಾ.ರಾಜೇಂದ್ರ ಯರನಾಳೆ ಅವರು 'ಸೀಗೆ ಹಾಗಳು' ಸಂಗ್ರಹಿಸಿ ಪ್ರಕಟಿಸಿದರು. ಕಾಶಿನಾಥ ರಡ್ಡಿಯವರ ಜಾನಪದ ಸಂಶೋಧನಾ ಲೇಖನಗಳು, ದೇಶಾಂಶ ಹುಡುಗಿ, ಪಂಚಾಕ್ಷರಿ ಪುಣ್ಯಶೆಟ್ಟಿ, ಶ್ರೀಕಾಂತ ಪಾಟೀಲ, ಜಗನ್ನಾಥ ಕಮಲಾಪೂರೆ, ಟಿ. ಎಂ. ಮಚ್ಚೆ, ಮ.ಮಾ.ಬೋರಾಳಕರ ಮುಂತಾದವರು ಸಾಹಿತ್ಯ ಕ್ಷೇತ್ರದಲ್ಲಿ ಪ್ರವರ್ಧಕರೆನಿಸಿದ್ದಾರೆ. ಇನ್ನೂ ಹೆಚ್ಚಿನ ಕಳೆ ಬರಬೇಕಾದರೆ ಸರಕಾರದವರು, ವಿಶ್ವವಿದ್ಯಾಲಯದವರು ಮತ್ತು ನಾಡಿನ ಜಾನಪದ ವಿದ್ವಾಂಸರು, ತಜ್ಞರು, ಸಂಶೋಧಕರು ಈ ಕಡೆ ಹೆಚ್ಚಿನ ಗಮನಹರಿಸಿ ಸಂಶೋಧಕರನ್ನು, ಸಂಗ್ರಹಕಾರರನ್ನು, ಸಂಪಾದಕರನ್ನು ಪ್ರೋತ್ಸಾಹಿಸಿ ಸಹಕಾರ ನೀಡುವುದು ಇಂದಿನ ಪರಿಸ್ಥಿತಿಯಲ್ಲಿ ತುಂಬಾ ಅವಶ್ಯಕವಾಗಿದೆ.

## ೧೩. ಸಂಶೋಧನೆ

ಜಿಲ್ಲೆಯಲ್ಲಿ ಈಗಾಗಲೇ ಅನೇಕ ಸಂಶೋಧಕರು ಜಿಲ್ಲೆಯ ಇಷ್ಟವಾದ ಕ್ಷೇತ್ರವನ್ನು ಹುಡುಕಿಕೊಂಡು ಆ ವಿಷಯದ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ. ಅಂತಹವರಲ್ಲಿ ಡಾ. ಎಲ್. ಆರ್.ಕುಲಕರ್ಣಿ 'ಬಹಮನಿ ಕಾಲದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ', ಡಾ. ವಿ. ಎಸ್.ಕುಲಕರ್ಣಿ ಜಿಲ್ಲೆಯ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಡಾ. ಮಾಣಿಕರಾವ ಧನಶ್ರೀ 'ಶಿವಶರಣರ ಕಾಲಜ್ಞಾನ ' ಕುರಿತು, ಡಾ. ಬಸವರಾಜ ಸಬರದ 'ಬಸವೇಶ್ವರ ಮತ್ತು ಪುರಂದರದಾಸರು ತಾಲನಿಕ ಅಧ್ಯಯನ', ಡಾ. ಕಾಶಿನಾಥ ಅಂಬಲಗಿಯವರು 'ಶಿವಶರಣರು ಹಾಗೂ ಹಿಂದಿ ಸಂತರ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ', ಡಾ. ಕೆ. ಎಂ. ಮೈತ್ರಿಯವರು 'ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ ಒಂದು ಸಮಾಜಶಾಸ್ತ್ರೀಯ ಅಧ್ಯಯನ', ಡಾ. ಜಗನ್ನಾಥ ಹೆಬ್ಬಾಳೆಯವರು 'ಹೈದ್ರಾಬಾದ್ ಕರ್ನಾಟಕದ ಜಾತ್ರೆಗಳು ಒಂದು ಸಾಂಸ್ಕೃತಿಕ ಅಧ್ಯಯನ', ಡಾ. ವಿ. ಎಸ್. ಕುಲಕರ್ಣಿ 'ಬಸವಕಲ್ಯಾಣ

ಪ್ರದೇಶದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ', ಡಾ. ವೈಜಿನಾಥ ಭಂಡೆಯವರು 'ಬೀದರ ಜಿಲ್ಲೆಯ ಸ್ಥಳನಾಮಗಳು' ಡಾ. ಸೋಮನಾಥ ನುಚ್ಚಾ 'ಬೀದರ ಜಿಲ್ಲೆಯ ಕೋಲಾಟದ ಹಾಡುಗಳು' ಸುಚಿತಾನಂದ ಮಲ್ಕಾಪೂರ 'ಬೀದರ ಜಿಲ್ಲೆಯ ಬೇಡ ಬುಡಕಟ್ಟು ಒಂದು ಅರ್ಥಶಾಸ್ತ್ರೀಯ ಅಧ್ಯಯನ'. ಅಲ್ಲದೆ ಇನ್ನೂ ಅನೇಕರು ಸಂಶೋಧನೆ ಯಲ್ಲಿ ಪ್ರಮುಖ ವಿಷಯವನ್ನು ಆರಿಸಿಕೊಂಡು ಅಧ್ಯಯನ ನಡೆಸುತ್ತಿದ್ದಾರೆ. ಬಸವರಾಜ ಬಲ್ಲೂರ, ಸಂಜುಕುಮಾರ ಜುಮ್ಮಾ, ರಮೇಶ ಮೂಲಗೆ, ಮ.ಮಾ. ಬೋರಾಳಕರ್, ರಾಜಶೇಖರ ಸ್ವಾಮಿ ಗೋರಟಾ, ಸಿದ್ರಾಮಯ್ಯಾ ಸ್ವಾಮಿ ಗೋರಟಾ, ಮನ್ಮಥ ಡೋಳಿ, ಜಗದೇವಿ ತಿಪ್ಪಶೆಟ್ಟಿ, ವಿದ್ಯಾವತಿ ಪಾಟೀಲ, ಜಗನ್ನಾಥ ಕಮಲಾಪೂರೆ, ಟಿ. ಎಂ. ಮಚ್ಚೆ, ಸುಭಾಷ ನೇಳಗೆ, ಧನರಾಜ ಧರಮಪೂರ, ವಿಕ್ರಮ ವಿಸಾಜಿ, ಗಂಗಾಂಬಿಕೆ ಪಾಟೀಲ, ಅಶೋಕ ಕೋರೆ, ರಾಜಕುಮಾರ ಅಲ್ಲೂರೆ ಮುಂತಾದವರು ಹಲವಾರು ವಿಷಯಗಳನ್ನು ತೆಗೆದುಕೊಂಡು ಸಂಶೋಧನಾ ಕ್ಷೇತ್ರ ವಿಸ್ತರಿಸುತ್ತಿರುವುದರಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜಿಲ್ಲೆಯಲ್ಲಿ ಅನೇಕ ಸಮುದಾಯಗಳ ಅಥವಾ ಹಿಂದುಳಿದ ವರ್ಗಗಳ ಕುರಿತು ಅಧ್ಯಯನ ನಡೆಯಬೇಕಾಗಿದೆ. ಜೊತೆಗೆ ಜಂಗಮ ಸಮುದಾಯದ ಕುರಿತು ಯಾವುದೇ ಸಾಹಿತ್ಯ ನಿರ್ಮಾಣ ಕಂಡುಬರುವುದಿಲ್ಲ. ಇದರಿಂದ ಜಿಲ್ಲೆಯ ಹಲವಾರು ಸಮುದಾಯಗಳ ಕುರಿತು ಅಧ್ಯಯನ ಮಾಡಿ ಅವರ ಕಡೆ ಗಮನಹರಿಸುವುದು ಇಂದು ಅವಶ್ಯವಾಗಿದೆ. ಕೆಳವರ್ಗದ ಸಾಹಿತಿಗಳು ಹೆಚ್ಚಾಗಿ ಕಂಡುಬರು ವುದಿಲ್ಲ. ಹೀಗಾಗಿ ಅವರ ಬಗ್ಗೆಯು ಸಾಹಿತ್ಯ ರಚನೆಯಾಗಬೇಕಾಗಿದೆ.

## ೧೪. ಜಿಲ್ಲಾ ಪತ್ರಿಕೆಗಳು

ಸಾರ್ವಜನಿಕ ಸುದ್ದಿಗಳನ್ನು, ಸಾರ್ವಜನಿಕ ಅಭಿಪ್ರಾಯಗಳನ್ನು ಮತ್ತು ಸಾರ್ವಜನಿಕ ಸತ್ಕಾರ ಮತ್ತು ವಿನೋದಗಳನ್ನು ಆಧುನಿಕ ಪ್ರಚಾರ ಮಾರ್ಗಗಳ ಮೂಲಕ ಕ್ರಮಬದ್ಧವಾಗಿ ನಂಬಿಕೆ ಅರ್ಹವಾಗುವಂತೆ ಪ್ರಚಾರ ಮಾಡುವ ಸಾಧನವೇ ಪತ್ರಿಕೋದ್ಯಮ ಎಂದು ಅಮೇರಿಕದ ವಿದ್ವಾಂಸರಾದ ರೋಲೆಂಡ್ - ಇ-ವುಲ್ ಸತಿಯವರು ವ್ಯಾಖ್ಯಾನಿಸಿದ್ದಾರೆ (ಎಸ್. ಎಂ.ಹಿರೇಮಠ:೨೭)ಇವರ ವ್ಯಾಖ್ಯಾದಿಂದ ಪತ್ರಿಕೆಗಳ ಉದ್ದೇಶ, ಗುರಿ, ಸಾಧನೆ ಎಂತಹದು ಎಂಬುದು ಅರಿಯಬಹುದಾಗಿದೆ. ಅಂತೆಯೇ ಪತ್ರಿಕೆಯನ್ನು ವಿದ್ವಾಂಸರು ಪ್ರಜಾಪ್ರಭುತ್ವ ರಾಷ್ಟ್ರದ ನಾಲ್ಕನೆಯ ಸಭೆ ಎಂದು ಕರೆಯುವುದುಂಟು.

ವೃತ್ತ ಪತ್ರಿಕೆಗಳು ಆಧುನಿಕ ಕಾಲದಲ್ಲಿ ಪ್ರತಿಯೊಬ್ಬ ಶಿಕ್ಷಿತ ಮನುಷ್ಯನ ಜೀವನಾಡಿಯಾಗಿವೆ. ಮನುಷ್ಯನ ಹತ್ತು ಪ್ರಮುಖ ಕ್ರಿಯೆಗಳಲ್ಲಿ ಇದು ಒಂದು. ಪತ್ರಿಕೆಗಳು ಮನುಷ್ಯನ ಸ್ವಾತಂತ್ರ್ಯ ಬಡಿದೆಬ್ಬಿಸುತ್ತವೆ. ಪ್ರಜಾಪ್ರಭುತ್ವ ರಕ್ಷಣೆ ಮಾಡುವುದರೊಂದಿಗೆ ವ್ಯಕ್ತಿಗಳ ಕರ್ತವ್ಯವೇನು? ಎಂಬುದನ್ನು ತಿಳಿಯಪಡಿಸುತ್ತವೆ. ಪರಿಸರದ ಸುದ್ದಿಯನ್ನು ಜನಸಮೂಹಕ್ಕೆ ಉತ್ತರಿಸುವುದರ ಜೊತೆಗೆ ಸಮಾಜದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸುವುದು. ಅಲ್ಲದೆ ಪ್ರಜೆಗಳನ್ನು ಉನ್ನತ ವಿಚಾರಗಳತ್ತ ಕರೆದುಕೊಂಡು ಹೋಗಿ ಅವರನ್ನು ಅಂಧಕಾರದಿಂದ ಮುಕ್ತಗೊಳಿಸುತ್ತವೆ. ಇಂತಹ ಕೆಲಸವನ್ನು ಬೀದರ ಜಿಲ್ಲೆಯ ಪತ್ರಿಕೆಗಳು ಸಾಹಸ ಮಾಡಿವೆ. ಆದುದ್ದರಿಂದ ಪತ್ರಿಕೆ ರಂಗವು ಅತೀ ಪ್ರಾಚೀನ ಇತಿಹಾಸ ಜಿಲ್ಲೆಗೆ ಇದ್ದದ್ದು ಗಮನಿಸಬಹುದು. ಕೆಳಕಂಡಂತೆ ಸಂಪಾದಕರು ಮತ್ತು ಅವರ ಪತ್ರಿಕೆಗಳು ಕಂಡುಕೊಳ್ಳಬಹುದು.

ಸ್ವಾತಂತ್ರ್ಯ ಪೂರ್ವದಲ್ಲಿ ನಿಜಾಮನ ಆಳ್ವಿಕೆಯ ಒತ್ತಡ ಒಂದು ಕಡೆಯಾದರೆ, ಮರಾಠಿ ಭಾಷಿಕರ ಪ್ರಾಬಲ್ಯ ಇನ್ನೊಂದೆಡೆ ನಿಜಾಮನ ಆಳ್ವಿಕೆಯ ದೌರ್ಜನ್ಯ ಪ್ರತಿಭಟನೆಗಳು ವ್ಯಾಪಕಗೊಂಡವು. ಇಂತಹ ಸಂದರ್ಭದಲ್ಲಿ ಕ್ರಿ.ಶ. ೧೯೩೦ರಲ್ಲಿ ಆರ್ಯಸಮಾಜದ ಹಿಂದು ಸಂಘಟನೆಯ ಕಾರ್ಯಗಳು ನಡೆಯಬೇಕಾಗಿದ್ದವು. ಇಂತಹ ಸಂದಿಗ್ಧ ಸಂದರ್ಭದಲ್ಲಿ 'ವೈದಿಕ ಆದರ್ಶ' ಎಂಬ ಹೆಸರನ್ನು ತಳೆದು ಉರ್ದು ಭಾಷೆಯಲ್ಲಿ ಒಂದು ವಾರಪತ್ರಿಕೆಯ ಮೂಲಕ ಪತ್ರಿಕೆಯ ಇತಿಹಾಸ ಪ್ರಾರಂಭವಾಗಿದೆ. ಕನ್ನಡ ಈ ಸಮಯದಲ್ಲಿ ಬರಿ ಮೂಲೆ ಗುಂಪಾಗಿತ್ತಲ್ಲದೇ ಅಪಾಯ ವಾತಾವರಣದಲ್ಲಿ ಇತ್ತು. ಆಗ ಭಾಲ್ಕಿಯ ಶ್ರೀ ಚನ್ನಬಸವ ಪಟ್ಟದ್ದೇವರು ಮಠದಲ್ಲಿ ನಡೆಯುತ್ತಿದ್ದ ಎಲ್ಲಾ ಮಠ ಶಾಲೆಗಳಲ್ಲಿ ಕನ್ನಡದ ಎಲ್ಲಾ ಚಟುವಟಿಕೆಗಳಿಗೆ ಪ್ರೇರಣೆಯಾಗಿದ್ದರು. ಸ್ವಾತಂತ್ರ್ಯದ ಅರವತ್ತರ ದಶಕದ ವಾಚನಾಲಯಗಳಲ್ಲಿ ಕನ್ನಡ ಪುಸ್ತಕ ಮತ್ತು ಪತ್ರಿಕೆ ತರಿಸುವುದು ಜೊತೆಗೆ ಕನ್ನಡ ಕಾರ್ಯಕ್ರಮ ನಡೆಸುವ ಕ್ರಿಯೆ ಆರಂಭವಾಯಿತು. ಹಿಂದಿ, ಉರ್ದು ಭಾಷೆಯ ಪ್ರಾಬಲ್ಯವೇ ಹೆಚ್ಚಾದಾಗ ತಾಳಿಕೋಟೆ ಭೀಮಸೇನರಾವ್, ಆರ್. ಆರ್. ದಿಗ್ಗಾವಿ ಪ್ರಭುರಾವ ಕಂಬಳಿವಾಲೆ ಇವರುಗಳು ಕನ್ನಡದಲ್ಲಿ ಕೈಬರಹದ ಪತ್ರಿಕೆಗಳನ್ನು ಹೊರತಂದರು. ೧೯೫೦ರಲ್ಲಿ 'ಇನ್ಸಾನಿಯತ್', ೧೯೬೦ ರಲ್ಲಿ ಅಬ್ದುಲ್ ಹಮೀದರ 'ಹೈದಾರಾಬಾದ್ ಕರ್ನಾಟಕ ', ೧೯೬೪ರಲ್ಲಿ ಅಬ್ದುಲ್ ವಹೀದರ 'ವಖ್ತ್‌ಕಾ ಪೈಗಾಂ', ಬೀದರ ಜಿಲ್ಲೆಯ ಉರ್ದು-ಹಿಂದಿ ಪತ್ರಿಕೆಗಳು ಹೊರ ಬಂದವು. 'ಹೈದ್ರಾಬಾದ ಕರ್ನಾಟಕ' ನಿಂತು ೧೯೭೬ರ ನಂತರ ದೈನಿಕವಾಗಿ ಹೊರಬರುತ್ತಿದೆ. ಮತ್ತೆ ಪ್ರಕಟಗೊಂಡಿಲ್ಲ. ೧೯೬೯ರಲ್ಲಿ ವಿಶ್ವನಾಥ ಪಾಟೀಲರು 'ದಮನ್' ಹಿಂದಿ ಪತ್ರಿಕೆ

ಆರಂಭಿಸಿದ್ದಾರೆ. ಇಂದಿಗೂ ಜಿಲ್ಲೆಯಲ್ಲಿ ತುಂಬ ಜನಪ್ರಿಯಾವಾಗಿದೆ. ೧೯೬೮ರಲ್ಲಿ ಶ್ರೀ ಕೃಷ್ಣಮೂರ್ತಿ ಕರ್ಪೂರರವರ 'ಡೇಲಿನ್ಯೂಜ್' ಪತ್ರಿಕೆ ಆರಂಭಿಸುವುದರೊಂದಿಗೆ ೧೯೭೯ರಲ್ಲಿ ಮೈತ್ರಿ 'ವಸಂತ ಸಂಚಿಕೆ' ಪ್ರಕಟವಾಗಿದೆ. ಮತ್ತೆ ಕೃಷ್ಣಮೂರ್ತಿ ಕರ್ಪೂರ 'ಬೀದರ ಟೈಮ್ಸ್' ಹೆಸರಿನಲ್ಲಿ ೧೯೭೪ರಲ್ಲಿ ಹಲವಾರು ಸಂಚಿಕೆಗಳನ್ನು ಪ್ರಕಟಿಸಿದರು. ಸದ್ಯ ನಿಂತು ಹೋಗಿದೆ. ನಂತರ ಶ್ರೀ.ಕೆ. ಭೀಮರಾವ ಅವರ ಸಂಪಾದಕತ್ವದಲ್ಲಿ ಶಾಂತಿವರ್ಧಕ ಶಿಕ್ಷಣ ಸಂಸ್ಥೆಯ ಮೂಲಕ ೧೯೭೧ರಲ್ಲಿ 'ಶಾಂತಿಕಿರಣ' ವಾರ ಪತ್ರಿಕೆ ಪ್ರಾರಂಭವಾಯಿತು. ಮುಂದೆ ಡಾ. ಜಿ.ವಿ. ವಿಸಾಜಿಯವರು ಮುಂದುವರೆಸಿದರು. ಆ ಮೇಲೆ ಭಾಲ್ಕಿ ಹಿರೇಮಠ ಸಂಸ್ಥಾನದವರಿಗೆ ವರ್ಗಾಯಿಸಿದ್ದುದರಿಂದ ಶಾಂತಿಕಿರಣ ಧಾರ್ಮಿಕ ಮಾಸ ಪತ್ರಿಕೆಯಾಗಿ ಪ್ರಕಟವಾಗತೊಡಗಿತು. ಈಗ ದ್ವೈಮಾಸಿಕ ಪತ್ರಿಕೆಯಾಗಿ ಹೊರಬರುತ್ತಿದೆ.

೧೯೭೫ರಲ್ಲಿ 'ಕನ್ನಡ ರತ್ನ' ಪತ್ರಿಕೆ ಗುಣವಂತರಾವ ಪಾಟೀಲರ ಸಂಗಮ ಪ್ರಿಂಟಿಂಗ ಪ್ರೆಸ್ ಮುಖಾಂತರ ಜಹೀರ ಅಜ್ಮತ್ ಅವರ ಸಂಪಾದಕತ್ವದಲ್ಲಿ ಪ್ರಾರಂಭವಾಯಿತು. ಮುಂದೆ ಹೆಚ್ಚು ದಿವಸ ನಡೆಯಲಿಲ್ಲ. ಜಹೀರ್ ಅಜ್ಮತ್ ಅವರೇ ಮತ್ತು ಮೊಹಸೀನ್ ಕಮಲ್ ಅವರ ಸಂಪಾದಕತ್ವದಲ್ಲಿ 'ಗವಾನ್' ೧೯೭೫ ರಲ್ಲಿ ಪತ್ರಿಕೆ ಪ್ರಾರಂಭವಾಯಿತು. 'ಖ್ಯಾತಿ' ಎಂಬ ಪತ್ರಿಕೆ ೧೯೭೭ರಲ್ಲಿ ಎಂ.ಜಿ. ದೇಶಪಾಂಡೆಯವರ ಸಂಪಾದಕತ್ವದಲ್ಲಿ ಪ್ರಾರಂಭವಾಯಿತು. ಇದರಲ್ಲಿ ಮೊದಲಬಾರಿಗೆ ಧಾರವಾಹಿ ಕಾದಂಬರಿ ಮಧ್ಯದಲ್ಲಿ ಚಿತ್ರಗಳು ಪ್ರಕಟಿಸುವ ಸಾಹಸ ಮಾಡಿತು. ಆದರೆ ಸದ್ಯ ಪ್ರಕಟವಾಗುತ್ತಿಲ್ಲ. ೧೯೭೭ರಲ್ಲಿ ಕಾಜಿ ಅರ್ಷದ್ ಅಲಿಯವರ 'ಬೀದರ ಕೀ ಆವಾಜ' ಹಿಂದಿ ಪತ್ರಿಕೆ ಪ್ರಾರಂಭವಾಯಿತು. ಇಂದಿಗೂ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಕಮಲಾಕರ ಜೋಷಿಯವರ 'ಬೀದರ ಸಂದೇಶ ' ಹಿಂದಿ ಪತ್ರಿಕೆ, ಖಾದ್ರಿಯವರ 'ಅರಬ್ಬಿ ಅಕ್ಕಸ್' ಶಯಸೂಲ್ ಇಸ್ಲಾಂರವರ 'ಬಸತ ಹಯಾತ್' ಉರ್ದು ಪತ್ರಿಕೆಗಳು ಹೊರಬರುತ್ತಿವೆ.

೧೯೮೦ರಲ್ಲಿ 'ಪಬ್ಲಿಕ್' ಗಂಧರ್ವ ಸೇನಾ ಅವರ ಸಂಪಾದಕತ್ವದಲ್ಲಿ ಆರಂಭವಾಗಿ ಕೆಲಕಾಲ ನಡೆದು ನಂತರ ನಿಂತು ಮತ್ತೆ ಆರಂಭವಾಗಿ ಈಗ ಆಧುನಿಕ ಯಂತ್ರಗಳಿಂದ ಸೌಲಭ್ಯ ಪಡೆದು ಪತ್ರಿಕೆಯು ಹೊರಬರುತ್ತಿದೆ. ೧೯೮೨ರಲ್ಲಿ 'ಉತ್ತರ ಕರ್ನಾಟಕ ' ದೈನಿಕ ಪತ್ರಿಕೆ ಶಿವಶರಣಪ್ಪ ವಾಲಿ ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದೆ.

ಬೀದರ ಜಿಲ್ಲೆಯಲ್ಲಿ ಇನ್ನೂ ಅನೇಕ ಪತ್ರಿಕೆಗಳು ಯಶಸ್ವಿಯಾಗಿ ಸುದ್ದಿಯನ್ನು ಪ್ರಸಾರ ಮಾಡುತ್ತಾ ಸಾಗಿವೆ. ಅವುಗಳಲ್ಲಿ 'ಕನ್ನಡಮ್ಮ' ವೆಂಕಟೇಶ ಮೊರಖಂಡಿಯವರ

ಸಂಪಾದಕತ್ವದಲ್ಲಿ ಖೈಸರ್ ರೆಹಮಾನ್‌ರವರ ಸಿಯಾಸತ್ ಪ್ರಭಾಕರ್ ದಾಂಡೇಕರ್ ಅವರ 'ಸಂಚಾರ', ಚಿಟಗುಪ್ಪಾ ಮಲ್ಲಿಕಾರ್ಜುನ ಬಿರಾದಾರವರ 'ಪರಿಹಾರ', ಮಲ್ಲಿಕಾರ್ಜುನ ಸ್ವಾಮಿಯವರ 'ಜನದನಿ', ಡಿ.ಕೆ. ಸಿದ್ರಾಮ ಅವರ 'ಬೀದರ ರಹಸ್ಯ', ಮುರಳಿಧರರಾವ ಕಾಳೆಯವರ 'ಮಹಾಕಾಯಾಸ', ಎಂ. ಎ. ಹಮೀದ್‌ರವರ 'ಹೈದ್ರಾಬಾದ್ ಕರ್ನಾಟಕ ', ಖಾಜೀ ಅರ್ಷದ್ ಅಲಿಯವರ 'ಸುರ್ಕೆ ಜಮೀನ್', ಸಿದ್ರಾಮಯ್ಯಾ ಸ್ವಾಮಿಗಳು 'ದಮನ', ತಿಪ್ಪಣ್ಣಾ ಭೋಸ್ಲೆಯವರ 'ಕಾರಂಜಾ ಎಕ್ಸ್‌ಪ್ರೆಸ್', ಪ್ರಭುರಾವ ವಾಸ್ಮತೆಯವರ 'ಬೀದರ ಜಂಗ್', ಬಾಬು ವಾಲಿಯವರ 'ವಚನ ಕ್ರಾಂತಿ' ಜೊತೆಗೆ ಸಿ.ಸಿ. ವಾರ್ತೆ ಕೂಡ ದೂರದರ್ಶನದಲ್ಲಿ ಪ್ರಸಾರಗೊಳಿಸುತ್ತಿದ್ದಾರೆ. ಶ್ರೀನಿವಾಸ ಚೌಧರಿಯವರ 'ಬೀದರ ಜಾಗೃತಿ', ಗುಲಾಮನಬಿ ಇನಾಮದಾರ 'ದಕ್ಕನ ದೇಶ ', ಬಸವರಾಜ ಪವಾರರವರ 'ಬಂಜಾರಾ ಗರ್ಜನ್', ಗುರುನಾಥ ಗಡ್ಡೆಯವರ 'ಬಹಿರಂಗ ಸುದ್ದಿ', ಕೆ. ಎಸ್. ಮೊಹಸೀನ್‌ರವರ 'ಬೀದರ ಪೋಸ್ಟ್', ವಿಜಯಕುಮಾರ ಪಾಟೀಲರ 'ಸೂರ್ಯಾಸ್ತ', ರಮೇಶ ಬಿರಾದರರವರ 'ಪ್ರಜಾ ಚಳುವಳಿ', ಭಗವಾನ ನೌಬಾದಕರವರ 'ವಿಶ್ವಾಸಿಗ', ಪ್ರಭು ಪಾಟೀಲರ 'ಕಲ್ಯಾಣ ಶಾಸನ', ಶಿವಕುಮಾರ ಒಣಗೇರಿಯವರ 'ಬಹಮನಿ ಕೋಟೆ', ಜಗನ್ನಾಥ ಚನ್ನಶೆಟ್ಟಿಯವರ 'ಕ್ರಾಂತಿ ಕಲ್ಯಾಣ', ಬಸವರಾಜ ಕಾಮಶೆಟ್ಟಿ 'ಬೀದರ ಸಂಪರ್ಕ' ದಿಲೀಪಕುಮಾರ ಕಮಠಾಣೆಯವರ 'ಬಸವ ದನಿ', ಶಾಂತಕುಮಾರರವರ 'ಬೀದರ ರಾಜಣ್ಣಾ', ಮಹಾಲಿಂಗ ಶೀಲವಂತರವರ 'ಸಪ್ತಸ್ವರ', ಶಾಕಾ ಮಾರುತಿರಾವ 'ಉಸೂಲ್', ಶ್ರೀಧರರಾವ ಮಾಲೆಯವರ 'ಕೆಂಪೂ ಭೂಮಿ', ಅರವಿಂದ ಕುಮಾರರವರ 'ಕರ್ಮಭೂಮಿ', ಅನೀಲಕುಮಾರರವರ 'ತರುಣಶಕ್ತಿ', ಆರ್. ಎಸ್. ದರ್ಗೆಯವರ 'ಹಿತರಕ್ಷಕ ', 'ಕ್ರಾಂತಿಭೂಮಿ', ಸಾತಂತ್ರ್ಯ ವಾರ್ತಾ, ಅಂತರಂಗ ಸುದ್ದಿ, ಸ್ವಾಭಿಮಾನ ಕರ್ನಾಟಕ, ನಾನಕ ಟೈಮ್ಸ್ ಮುಂತಾದ ಪತ್ರಿಕೆಗಳು ತಮ್ಮ ತಮ್ಮ ಕಾರ್ಯಗಳಲ್ಲಿ ತಲ್ಲಿನವಾಗಿ ಜಿಲ್ಲೆಯ ಹತ್ತು ಹಲವಾರು ವಿಷಯಗಳನ್ನು ನೀಡಿ ಜನಸಾಮಾನ್ಯರ ಸಮಸ್ಯೆಯ ಜೊತೆಗೆ ಪರಿಹಾರೋಪಾಯಗಳನ್ನು ತುಂಬಿ ಜಿಲ್ಲೆಯಾದ್ಯಂತ ಸೇವೆಯಲ್ಲಿ ತೊಡಗಿಸಿಕೊಂಡಿವೆ. ಈ ರಂಗದಲ್ಲಿ ಜಂಗಮ ಸಮುದಾಯದವರು ಕೆಲವೇ ಕೆಲವರು ಸೇರಿಕೊಂಡ ಪತ್ರಿಕಾ ಕ್ಷೇತ್ರಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.



ಜಿಲ್ಲೆಯಲ್ಲಿ ಕೆಲವು ಪತ್ರಿಕೆಗಳು ಯಾವ ಭೇಧ - ಭಾವವಿರಲಾರದೇ ದಿನನಿತ್ಯ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುಸುತ್ತಿವೆ. ಅಲ್ಲದೆ ಪ್ರಜಾವಾಣಿ, ಸಂಯುಕ್ತಕರ್ನಾಟಕ, ಕನ್ನಡ ಪ್ರಭ, ವಿಜಯಕರ್ನಾಟಕ, ಈ ನಾಡು, ದ ಹಿಂದು, ಡಕ್ಕನ್ ಹೆರಾಲ್ಡ್, ಇಂಡಿಯನ್ ಟೈಮ್,

ಡೆಕ್ಕನ್ ಕ್ರೊನಿಕಲ್, ಮಿಲಾಪ್ ಅಲ್ಲದೆ ಇನ್ನು ಕೆಲವು ಪತ್ರಿಕೆಗಳು ಜಿಲ್ಲೆಯ ಓದುಗರನ್ನು ಹೆಚ್ಚಿಸಲು ಜಿಲ್ಲೆಗೆ ಬರುತ್ತವೆ. ಹೆಚ್ಚಾಗಿ ಹಿರಿಯರು ಮರಾಠಿ, ಹಿಂದಿ ಪತ್ರಿಕೆಗಳನ್ನು ಓದುತ್ತಾರೆ.

## ೧೫. ಸಂಗೀತ ಪರಂಪರೆ

ಭಾರತೀಯ ಸಂಗೀತ ಪರಂಪರೆಯಲ್ಲಿ ಬೀದರ ಜಿಲ್ಲೆಗೆ ಉನ್ನತ ಸ್ಥಾನವಿದೆ. ಕಲ್ಯಾಣ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ರಾಣಿಯರಾದ ಚಂಚಲದೇವಿ ಮತ್ತು ಕೇಚಲ ದೇವಿಯರು ಹಲವಾರು ಕಲೆಗಳಲ್ಲಿ ಪರಿಣಿತಿಯನ್ನು ಪಡೆದಿದ್ದರು. ಚಂಚಲದೇವಿಗೆ, 'ಅಭಿನವ ಶಾರದೆ ' ಎಂಬ ಬಿರುದು ಇತ್ತು. ಸೈನ್ಯಧಿಕಾರಿ ರೇವಿಗಾರನ ಪತ್ನಿ ರೆಬ್ಬಲದೇವಿಗೆ 'ಪ್ರತಿಭಾ ಸರಸ್ವತಿ ನೃತ್ಯ ವಿದ್ಯಾಧರಿ' ಬಿರುದು ಇರುವುದು ತಿಳಿದು ಬರುತ್ತದೆ. ಅನಂತರ ಸಂಭಾಜಿಯೆಂಬುವನು ಬಹಮನಿ ಸುಲ್ತಾನರ ಕೊನೆಯ ಸುಲ್ತಾನನಾದ ಕಲೀಮುಲ್ಲಾನ ಕಾಲದಲ್ಲಿ ಸುಪ್ರಸಿದ್ಧ ಸಂಗೀತಗಾರನಿದ್ದನೆಂದು ಇತಿಹಾಸದಿಂದ ತಿಳಿದುಬರುತ್ತದೆ. ಹೈದ್ರಾಬಾದ ನಿಜಾಮನ ಕಾಲಕ್ಕೋ ನೃತ್ಯ, ಸಂಗೀತ ಮೇಳಗಳು, ಉತ್ಸವಗಳು ನಡೆಯುತ್ತಿದ್ದವು(ಸಬರದ ಬಸವರಾಜ:೧೯೮೨:೪೦).

ಚಾಲುಕ್ಯ ಚಕ್ರವರ್ತಿ ಭೂಲೋಕ ಮಲ್ಲನಿಂದ ರಚಿಸಲ್ಪಟ್ಟ 'ಮಾನ ಸೋಲ್ಲಾಸ ' ಗ್ರಂಥ ಸಂಗೀತ ಪರಂಪರೆಯಲ್ಲಿ ಮೈಲುಗಲ್ಲುಯಾಗಿದೆ. ಇದು ಇಂದಿನ ಬಸವಕಲ್ಯಾಣ ಪಟ್ಟಣದಲ್ಲಿ ರಚನೆಯಾದದ್ದು ಇದರ ಕಾಲ ೧೧೧೬-೧೧೨೫ರಲ್ಲಿ ಇದಕ್ಕೆ 'ಅಭಿಲಾಷಿತಾರ್ಥ ಚಿಂತಾಮಣಿ' ಎಂತಲೂ ಕರೆಯುತ್ತಾರೆ. ಇದು ಸಂಗೀತ ಅಲ್ಲದೆ ಹಲವಾರು ವಿಷಯಗಳು ಒಳಗೊಂಡಿದೆ. ಆದ್ದರಿಂದಲೇ ಸಂಗೀತದ ವಿಶ್ವಕೋಶವೆಂದು ಹೆಸರು ವಾಸಿಯಾಗಿದೆ. 'ಕರ್ನಾಟಕ ಕೀ ಸಂಗೀತ ' ಮೊಟ್ಟ ಮೊದಲು ಉಲ್ಲೇಖ ದೊರೆಯುವ ಗ್ರಂಥ ಎಂದು ವಿದ್ವಾಂಸರ ಮತ್ತು ಭೂಲೋಕ ಮಲ್ಲನ ಮಗ ಜಗದೇಕ ಮಲ್ಲನು ಬರೆದ 'ಸಂಗೀತ ಚೂಡಾಮಣಿ' ಇದು ಸಂಗೀತ ರಂಗದಲ್ಲಿ ಪ್ರಮುಖ ಗ್ರಂಥವಾಗಿದೆ. ಇಂತಹ ಎರಡು ಮೇರು ಕೃತಿಗಳು ಸಂಗೀತ ಲೋಕಕ್ಕೆ ನೀಡಿದು ಬೀದರ ಜಿಲ್ಲೆ ಎಂದು ಹೆಗ್ಗಳಿಕೆಗೆ ಪಾತ್ರವಾಗಿದೆ.

ಜಿಲ್ಲೆಯಾದ್ಯಂತ ಮಠಗಳಲ್ಲಿ, ಮಂದಿರಗಳಲ್ಲಿ ಮತ್ತು ಸಂಗೀತ ಪಾಠ ಶಾಲೆಗಳಲ್ಲಿ ಸಂಗೀತಕ್ಕೆ ಸೇವೆಯನ್ನು ನೀಡಿದ ಸಂಗೀತಗಾರರಿಗೂ, ಸಂಗೀತ ಸಂಸ್ಥೆಗಳಿಗೂ ನಮಿಸಬೇಕಾಗಿದೆ. ಬಸವಕಲ್ಯಾಣ ತಾಲೂಕಿನ ಗಡಿಗೌಡಗಾಂವದವರಾದ ನೂರಂದಯ್ಯಾ ಸ್ವಾಮಿ, ಗವಾಯಿಗಳು, ಗೋರಟಾ (ಬಿ) ಗ್ರಾಮದ ರಾಚೋಟಿ ಶರಣಯ್ಯಾನವರು,

ರೇವಣಯ್ಯ ಶಿವಲಿಂಗಯ್ಯಾ, ವಿರೂಪಾಕ್ಷಯ್ಯಾ ಸ್ವಾಮಿ, ವಿರೂಪಾಕ್ಷ ಶಿವಲಿಂಗಯ್ಯಾ ಮಠಪತಿ, ಪ್ರೊ, ಸಿದ್ರಾಮಯ್ಯ, ಹುಮನಾಬಾದಿನ ಪರಶುರಾಮಜೀ ಖಮೀತಕರ, ಹಳ್ಳಿಖೇಡ ಗ್ರಾಮದ ಮುನ್ನಿಗವಾಯಿ, ದುಬಲಗುಂಡಿ ಸಿದ್ರಾಮಯ್ಯ ಸ್ವಾಮಿ, ಗುರುಪಾದಯ್ಯಾ ಶಂಕರಗುಡಿ, ಘಾಟಬೋರಳದ ಭೀಮಣಪ್ಪ ಪಂಚಾಳ, ಕೇಶವರಾವ ವಾಘಮೊರೆ, ಮಂಠಾಳದ ಚೆನ್ನಯ್ಯಾ ಸ್ವಾಮಿ, ಭಾಲ್ಕಿ ತಾಲೂಕಿನ ಕಾಶೆಪ್ಪ ಖಂಡ್ರೆ ಗವಾಯಿಗಳು, ನನ್ನೇ ಬಾಬು. ಹಾರ್ಮೋನಿಯಂ ಸಾಮ್ರಾಟನೆಂದು ಹೆಸರು ಮಾಡಿದವರು. ಭಾಟಸಾಂಗ್ವಿದ ಕೇಶವರಾವ ಸೂರ್ಯವಂಶಿ, ಶೇಖಹನ್ನೂಮಿಯಾ, ಕಾಶಿನಾಥ ಇಗವೆ, ರಾಮರಾವ ರೋಳೆ, ಮಾಧವರಾವ ಲಂಚಿ ಮೇಹಕರ, ಬಳಿರಾಮ ಮಾಸ್ತರ ಪಂಚಾಳ, ಪ್ರಭುಲಿಂಗ ಸ್ವಾಮಿ ಮೆಹಕರ, ಚನ್ನಬಸಯ್ಯ ಮೆಹಕರ, ಭೀಮರಾವ ಸಂಗಮಕರ್, ಬಾಬುವಾಘಮೋರೆ, ಬಸವಣ್ಣಪ್ಪ ಸಂಗಮ, ಜರ್ನಾಧನ ವಾಘಮೊರೆ, ವೈಕುಂಠದತ್ತ ಮಹಾರಾಜರು, ಶ್ರೀಮತಿ ವೈಕುಂಠದತ್ತ, ಔರಾದ ತಾಲೂಕಿನ ಕಮಲನಗರದ ಫತ್ತೇ ಅಹಮದ, ಬೀದರ ಜಿಲ್ಲೆಯ ಕೊಳಲು ವಾದಕರೆಂದು ಹೆಸರುವಾಸಿಯಾದ ಬೀದರ ತಾಲೂಕಿನ ಚಿದ್ರಿ ಗ್ರಾಮದ ಹನುಮಂತಪ್ಪಾ, ರಾಮುಲು ಗಾದಗಿಕರ್, ಸುರೇಶ ಪೂಜಾರಿ, ರಾಜಕುಮಾರ ಮುಡಬಿ, ಈಶ್ವರಪ್ಪ ಪಾಂಚಳ, ರಾಜಶೇಖರ ಸ್ವಾಮಿ, ಶಂಭುಲಿಂಗ ವಾಲದೊಡ್ಡಿ, ಶೇಷಪ್ಪ ಗಚ್ಚೂರ, ಅಮೀನ ಸಾಬ, ಆನಂದ, ಪ್ರಭು ಮಹಾರಾಜ, ರಾಜೋಳದ ಗದಗ್ಗಯ್ಯಾ ಮಠಪತಿ, ಚಿಟಗುಪ್ಪದ ಫಕಿರೇಶ ಅಗಡಿ, ವಿಜಯಲಕ್ಷ್ಮಿ ಕುಲಕರ್ಣಿ, ಸಿದ್ದಯ್ಯಾ ಮಠ, ಜಗನ್ನಾಥ ನಾನಕೇರ, ನರಸಿಂಹಲೂ ಡಪ್ಪೂರ್, ರೇವಪ್ಪ ಮುಚಳಂಬಿ, ಶಿವಕುಮಾರ ಪಂಚಾಳ, ದೇವಿದಾಸ ಚಿಮಕೊಡ, ಕು.ಕವಿತಾ ಮಠಪತಿ, ಕು. ಶಿವಾಲೀಲಾ ಸಿದ್ದವೀರೆ, ಮುಂತಾದ ಮಹನೀಯರು ಸಂಗೀತ ಕ್ಷೇತ್ರದ ಹರವನ್ನು ವಿಶಾಲಗೊಳಿಸುವಲ್ಲಿ ಶ್ರಮಿಸಿ, ಶ್ರಮಿಸುತ್ತಿದ್ದಾರೆ.

೬ನೇ ವಿಕ್ರಮಾದಿತ್ಯನ ಕಾಲದ ಶಾಸನದಿಂದ ಗೋರಟಾ (ಬಿ) ಗ್ರಾಮದಲ್ಲಿ ಸಂಗೀತ ಅಗ್ರಹಾರ ಇತ್ತು ಎಂದು ತಿಳಿದು ಬರುತ್ತದೆ(ಮಠಪತಿ ಸಿದ್ರಾಮಯ್ಯ:೧೯೮೮:೩೬). ಇಂದಿಗೂ ಈ ಸಂಗೀತ ಅಗ್ರಹಾರವು ಶ್ರೀ ವೀರಪಕ್ಷಯ್ಯ ಸ್ವಾಮಿ ಜಂಗಮರು ನಡೆಸಿಕೊಂಡು ಬರುತ್ತಿದ್ದಾರೆ. ಭಾಲ್ಕಿ ಹಿರೇಮಠದಲ್ಲಿಯೋ ಸಂಗೀತ ಶಿಕ್ಷಣ ಜೊತೆಗೆ ಅನೇಕ ಮಠಗಳಲ್ಲಿ, ಮನೆಗಳಲ್ಲಿ ಸಂಗೀತ ಶಿಕ್ಷಣ ಒದಗಿಸಿದ್ದರಿಂದ ಸಂಗೀತ ಕ್ಷೇತ್ರದಲ್ಲಿ ಹೆಚ್ಚಾಗಿ ಜಂಗಮರು ಕಂಡುಬರುವು ದುಂಟು. ಈ ಪರಂಪರೆಯಿಂದ ಜಿಲ್ಲೆಯಲ್ಲಿ ತುಂಬ ಸಂಗೀತ ಶಾಲೆಗಳು, ಸಂಸ್ಥೆಗಳು ತೆರೆದು ಸಂಗೀತವನ್ನು ಬೆಳೆಸುವಲ್ಲಿ ಮಹತ್ತರವಾದ ಪಾತ್ರ ವಹಿಸಿವೆ. ಭಾಲ್ಕಿಯ

ಸರಸ್ವತಿ ಸಂಗೀತಾ ಈ ಕ್ಷೇತ್ರದಲ್ಲಿ ಜಿಲ್ಲೆ ಇನ್ನೂ ದೊಡ್ಡ ಹೆಜ್ಜೆ ಇಡಬೇಕಾಗಿದೆ. ಕಾಲೇಜ ಮಟ್ಟದಲ್ಲಿ ಸಂಗೀತ ಒಂದು ವಿಷಯವಾಗಿ ಇಡುವುದು ತುಂಬ ಅವಶ್ಯವೆಂದು ತೋರುತ್ತದೆ. ಏಕೆಂದರೆ ಬೇರೆ ಜಿಲ್ಲೆಯ ಸಂಗೀತಕ್ಕೆ ಹೋಲಿಸಿ ನೋಡಿದರೆ ಬೀದರ ಜಿಲ್ಲೆ ಹಿಂದುಳಿದಿದೆ ಎನ್ನಿಸುತ್ತದೆ. ಆದರಿಂದ ಸಂಗೀತವು ಜಿಲ್ಲೆಯಾದ್ಯಂತ ಬೆಳೆಸುವಲ್ಲಿ ಹೆಚ್ಚು ಕಷ್ಟ ಪಡಬೇಕಾಗಿರುವುದು.

## ೧೬. ಪ್ರೇಕ್ಷಣಿಯ ಸ್ಥಳಗಳು

ದೇಶದ ಹಾಗೂ ರಾಜ್ಯದ ಪ್ರೇಕ್ಷಣಿಯ ಸ್ಥಳಗಳಲ್ಲಿ ಬೀದರ ಜಿಲ್ಲೆಯು ಒಂದಾಗಿದೆ. ಮಹಮ್ಮದ ಶಹನ ಹತ್ತು ವರ್ಷಗಳ ಆಳ್ವಿಕೆಯಲ್ಲಿ ಜಿಲ್ಲೆಯು ಅನೇಕ ಕಟ್ಟಡಗಳಿಂದ, ಮಸೀದಿಗಳಿಂದ ಮತ್ತು ವಿಶಾಲವಾದ ಕೋಟೆ ಗೋಡೆಗಳಿಂದ ಜಿಲ್ಲೆ ಅಲಂಕಾರಗೊಳಿಸಿದನೆಂದು ತಿಳಿದು ಬರುತ್ತದೆ. ಈ ಸುಲ್ತಾನನ ಕಾಲದಲ್ಲಿ ಮತ್ತು ಮುಂದೆ ಬಂದ ಬರೀದ ಶಾಹಿ ಅರಸರ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ಕಟ್ಟಡಗಳು ಇಂದಿಗೂ ಸುರಕ್ಷಿತವಾಗಿದ್ದು ಪ್ರವಾಸಿಗರ ಕಣ್ಮನಗಳನ್ನೂ ಆಕರ್ಷಿಸುತ್ತಲ್ಲಿವೆ.

**೧೬.೧. ಬೀದರ ಕೋಟೆ :** ಬಹಮನಿ ರಾಜ್ಯದ ಸುಲ್ತಾನ ಅಹಮ್ಮದ ಶಾಹ ೧೪೨೮ ರಲ್ಲಿ ಬೀದರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಆಗ ಕೋಟೆ ಕಟ್ಟಿದ ನೆಂದು ಪಂಡಿತರ ಅಭಿಪ್ರಾಯವಾಗಿದೆ. ಆದರೆ ವರಂಗಲ್ಲಿನ ಕಾಕತೀಯ ಮನೆತನದ ಅರಸರು ತಮ್ಮ ಆಳ್ವಿಕೆಯ ಕಾಲದಲ್ಲಿ ಬೀದರ ಕೋಟೆ ಕಟ್ಟಲು ಬುನಾದಿ ಹಾಕಲಾಯಿತೆಂದು ಎನ್ನಲಾಗಿದೆ. ಆದರೆ ಅಹಮ್ಮದಶಾಹನು ಬೀದರ ನಗರವನ್ನು ಒಂದು ಶಿಲ್ಪ ಕಲೆಯನ್ನಾಗಿಸಿದ ಕೀರ್ತಿಗೆ ಪಾತ್ರನಾಗಿದ್ದಾನೆ. ಈ ಕೋಟೆ ಪ್ರಸಿದ್ಧ ಕೋಟೆಗಳಲ್ಲಿ ಒಂದು. ತುಂಬ ದೊಡ್ಡದಾಗಿ ಹೊರಗೆ ಸುತ್ತಾ ಮುತ್ತಾ ಸುಮಾರು ೫ ಕಿ.ಮೀ. ರದಷ್ಟು ಬುನಾದಿಯಿಂದ ಕೂಡಿದೆ ಕೋಟೆಯ ಹೊರಗಡೆ ಎರಡು ಮಧ್ಯದಲ್ಲಿ ಸುಮಾರು ೩೦ ಅಡಿ ಎತ್ತರದ ಕಂದಕಗಳಿವೆ ಕೋಟೆಗಳ ಒಳಗಡೆ ತೋಪುಗಳಿವೆ. ಇವುಗಳನ್ನು ನಿಲ್ಲಿಸಲು ಎತ್ತರವಾದ ಹಾಗೂ ಗಟ್ಟಿ ಬುನಾದಿಯಿಂದ ಕೂಡಿದ ಬುರುಜಗಳಿವೆ. ಒಳಗಡೆ ಹೋದಂತೆ ಸುಂದರವಾದ ಕಣ್ಣಿಗೆ ಕಟ್ಟುವಂತಹ ಅರಮನೆ, ಸಭಾಗೃಹ, ರಂಗೀನ ಮಹಲ್, ಸಭಾ ಸದನ, ಗಗನ ಮಹಲ್, ಟಂಕಶಾಲೆ, ಆಯುಧಶಾಲೆ, ತುರ್ಕಿ ಮಾದರಿಯ ಹಲವಾರು ಕಟ್ಟಡಗಳಿವೆ. ಇಲ್ಲಿ ಸುಮಾರು ೧೫೦ ಅಡಿ ಎತ್ತರದ ಬಾವಿಯಿಂದ ಇಡೀ ಕೋಟೆಗೆ ನೀರು ಪೂರೈಕೆಯಾಗುತ್ತಿದುದ್ದುಂಟು.

ಬೀದರ ಕೋಟೆಯ ಕುರಿತು ಫ್ರೆಂಚ ಪ್ರವಾಸಿಗನಾದ ಥಿವೇನಾಟ್ಥ ಎಂಬುವನು ೧೬೬೭ ರಲ್ಲಿ ಬೀದರಕ್ಕೆ ಭೇಟಿಕೊಟ್ಟು ಬೀದರ ಕೋಟೆಯ ಬಗ್ಗೆ ತನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ "ಇದೊಂದು ದೊಡ್ಡ ಮಾರ್ಗ, ಉನ್ನತ ಗೋಡೆಗಳು,ಗೋಪುರಗಳು, ಇಲ್ಲವೆ ಗೋಪುರಗಲ ಮೇಲೆ ದೊಡ್ಡ ದೊಡ್ಡ ತೋಪುಗಳಿವೆ. ಮೂರು ಸಾವಿರ ಸೈನಿಕರು ದುರ್ಗವನ್ನು ರಕ್ಷಿಸುತ್ತಾರೆ. ಇದರಲ್ಲಿ ಅರ್ಧದಷ್ಟುಅಶ್ವಾರೊಹಿಗಳಿದ್ದಾರೆ. ಯಾವಾಗಲು ದುರ್ಗ ರಕ್ಷಿಸಲು ಸೈನ್ಯ ಸಜ್ಜಾಗಿರುತ್ತದೆ. ಕೋಟೆಯ ಒಳಗಡೆ ಅಪರೂಪದ ರಂಗೀನ ಮಹಲ್ ಕಪ್ಪು ಕಲೆಯಿಂದ ನಿರ್ಮಿಸಲಾಗಿದೆ. ಮೇಲೆ ಕುಸುರಿನ ಕೆಲಸದಿಂದ ಭವ್ಯವಾಗಿ ಕಂಡುಬರುತ್ತದೆ, ಅಲ್ಲದೆ ಪ್ರಾಚೀನ ಶಿಲ್ಪಿಗಳು ಕೆತ್ತಲಾಗಿದೆ. ಸೋಲಾಖಂಬ ಎಂಬ ದೊಡ್ಡ ಮಸೀದಿ ಇದೆ. ತಖ್ತ ಮಹಲ್ ಸಭಾಗೃಹ ಇದೆ. ಇಲ್ಲಿ ಅನೇಕ ಸುಲ್ತಾನರ ಸಿಂಹಾಸನ ಪಟ್ಟಾಭಿಷೇಕಗಳಿವೆ. ಬೀದರಕ್ಕೆ ಎಂಟು ದ್ವಾರಗಳಿವೆ. ಪ್ರತಿಯೊಂದು ದ್ವಾರದಲ್ಲಿ ಪಾರ್ಸಿ ಭಾಷೆಯ ಶಾಸನಗಳಿವೆ ಎಂದು ಅಭಿಪ್ರಾಯ ಪಟ್ಟಿದ್ದಾನೆ"( ಎಲ್.ಆರ್.ಕುಲಕರ್ಣಿ:೧೯೭೧:೨೨).

**೧೬.೨. ಚೌಬಾರಾ :** ಬೀದರ ನಗರದ ಮಧ್ಯದ ನಾಲ್ಕು ರಸ್ತೆಗಳು ಕೂಡುವಲ್ಲಿ ಇದನ್ನು ನಿರ್ಮಿಸ ಲಾಗಿದೆ. ಎತ್ತರ ತಳಪಾಯದಿಂದ ೭೧ ಅಡಿ ಸುತ್ತಳತೆ ೩೩ ಅಡಿಯಿಂದ ಕೂಡಿದೆ. ಇದು ಬಹಮನಿ ಸುಲ್ತಾನರ ಕಾಲದಲ್ಲಿ ನಿರ್ಮಿತವಾಗಿದೆ ಎಂದು ಇತಿಹಾಸಕಾರರ ಮತ. ಆದರೆ ಇತ್ತೀಚಿನ ಸಂಶೋಧನೆಯ ಪ್ರಕಾರ ಕಾಕತೀಯರ ಕಾಲದಲ್ಲಿ ನಿರ್ಮಿತವಾದದ್ದು ಎಂಬ ಊಹೆಗಳು ಹೊರಬರುತ್ತಿವೆ. ಇದರ ಸುತ್ತಲೂ ಕಮಾನುಗಳಿಂದ ಕೂಡಿದೆ. ಇಂದಿಗೂ ಕಟ್ಟಡ ಗಟ್ಟಿಮುಟ್ಟಾಗಿ ನಗರದ ಮಧ್ಯ ಇದೆ.

**೧೬.೩. ಮಹಮ್ಮದ್ ಗವಾನ ವಿದ್ಯಾಲಯ :** ಇದು ಬಹಮನಿ ಕಾಲದ ಕಟ್ಟಡ. ಇದಕ್ಕೆ 'ಮದರಸಾ' ಎಂದು ಕರೆಯುತ್ತಾರೆ ಹಾಗೂ ಬೀದರ ಜನತೆ ಗಾಜಿನ ಕಂಬ ಎಂತಲೂ ಹೇಳುತ್ತಾರೆ. ಬಹಮನಿ ಸುಲ್ತಾನರ ಪ್ರಸಿದ್ಧ ಮಂತ್ರಿಯಾದ ಮಹ್ಮದ್ ಗವಾನ ಕ್ರಿ.ಶ. ೧೪೭೨ರಲ್ಲಿ ಈ ವಿಶ್ವವಿದ್ಯಾಲಯವನ್ನು ಪರ್ಷಿಯಾ, ಇರಾನ ಮುಂತಾದ ಕಡೆಯಿಂದ ಕಲಾಕಾರರನ್ನು ತಾಂತ್ರಿಕ ಜಾಣರನ್ನು ಕರೆಯಿಸಿ ನಿರ್ಮಿಸಿದನು. ಇಲ್ಲಿ ತತ್ವಜ್ಞಾನ, ಗಣಿತಶಾಸ್ತ್ರ, ವಿಜ್ಞಾನ, ಭಾಷಾಶಾಸ್ತ್ರ, ಕರಕುಶಲತೆಗಳ ಬಗ್ಗೆ ಜ್ಞಾನವನ್ನು ಒದಗಿಸಲಾಗುತ್ತಿತ್ತು. ಜಗತ್ತಿನ ಪ್ರಸಿದ್ಧ ವಿಶ್ವವಿದ್ಯಾಲಯಗಳಿಂದ ಮೇಧಾವಿಗಳು, ಸಂಶೋಧಕರು, ವಿದ್ವಾಂಸರು ಮುಂತಾದವರು ಹತ್ತು ಹಲವಾರು ವಿಷಯಗಳ ಕುರಿತು ಚರ್ಚಿಸಲಾಗುತ್ತಿತ್ತು. ಪ್ರಸಿದ್ಧ ವಿಜ್ಞಾನಿಗಳು ಹಾಗೂ ತತ್ವಜ್ಞಾನಿಗಳು ಸೇರುವ ಅಪೂರ್ವ ಸಂಗಮವಾಗಿತೆನ್ನಬಹುದು.

ಗವಾನನು ಬರೆದ 'ರಿಯಾಝು- ಉಲ್- ಇನ್‌ಷಾ', 'ಮಿನಾ-ಝುರ್ ಉಲ್- ಇನಷಾ' ಎಂಬ ಎರಡು ಪರ್ಷಿಯನ್ ಭಾಷೆಯ ಗ್ರಂಥಗಳು ದೊರಕಿವೆ. ಇವುಗಳಿಂದ ತಿಳಿದು ಬರುವುದೇನೆಂದರೆ ಇಲ್ಲಿನ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ, ಶಿಕ್ಷಣ ಹಾಗೂ ಹಲವಾರು ಸೌಕರ್ಯಗಳನ್ನು ಒದಗಿಸ ಲಾಗುತ್ತಿತ್ತು(ಅವರೇ:೨೮). ಪ್ರಾಧ್ಯಾಪಕರಿಗೂ, ಸಾಧು ಸಂತರಿಗೂ, ಸತ್ಪುರುಷರಿಗೂ ನೆಲೆಸುವ ವ್ಯವಸ್ಥೆಯನ್ನು ಮಾಡಲಾಗಿತ್ತು ಎನಿಸುತ್ತದೆ. ಕಟ್ಟಡ ಕರಕುಶಲತೆಯಿಂದ ಭವ್ಯವಾಗಿದೆ. ಮೂರು ಅಂತಸ್ತಿನಿಂದ ಕೂಡಿದೆ. ಇದರ ಎರಡು ಬದಿಗೆ ಎರಡು ಸ್ತಂಭಗಳಿದ್ದವು. ಸದ್ಯ ಒಂದು ಮಾತ್ರವಿದೆ. ಇನ್ನೊಂದು ಪ್ರಕೃತಿ ವಿಕೋಪಕ್ಕೆ ನಾಶವಾಗಿದೆ.(ಸಿಡಿಲು) ಕಟ್ಟಡ ಪೂರ್ವ ಪಶ್ಚಿಮವಾಗಿ ೨೪೧ ಅಡಿಗಳವರೆಗೆ ಉದ್ದವಾಗಿದೆ. ಉತ್ತರದಕ್ಷಿಣಕ್ಕೆ ೨೨೦ ಅಡಿಗಳವರೆಗೆ ವಿಸ್ತರವಾಗಿದೆ. ಗೋಡೆಗಳ ಮೇಲೆಲ್ಲಾ ಚೀನಿ ಮಣ್ಣಿನ ಪ್ಲೇಟಿನಲ್ಲಿ ಕಲಾಕುಸುರಿಯನ್ನು ಕೆತ್ತಲ್ಪಟ್ಟಿದೆ. ಬಣ್ಣ ಬಣ್ಣದ ಕಲಾಕೃತಿಗಳನ್ನು ಕುರಾನಿನ ಕೆಲವು ಉಕ್ತಿಗಳು ಕಟ್ಟಡದ ಗೋಡೆಗಳ ಮೇಲೆ ಬರೆಯಲ್ಪಟ್ಟಿವೆ. ಭಾರತದ ಪ್ರಾಚೀನ ಕಟ್ಟಡಗಳಲ್ಲಿ ಈ ವಿಶ್ವವಿದ್ಯಾಲಯ ಅನುಪಮ ಸುಂದರವಾಗಿದೆ. ಹಾಗೂ ಇಂತಹ ಕಟ್ಟಡ ಇನ್ನೊಂದಿಲ್ಲ ಎಂದು ರಷಿಯಾದ ಪ್ರವಾಸಿ ನಿಕೆಟಿನ್ ಹಾಗೂ ಸರ್ ರಿಚರ್ಡ್ ಟೆಂಪಲ್ ಇವರುಗಳು ವಿಶ್ವವಿದ್ಯಾಲಯದ ಬಗ್ಗೆ ನೀಡಿದ ಅಭಿಪ್ರಾಯವಾಗಿದೆ(ಅವರೇ:೩೦). ಸದ್ಯ ಇದರ ಒಳಗಡೆ ಮುಸ್ಲಿಮ್ ಬಾಂಧವರು ಪ್ರಾರ್ಥನೆ ಸಲ್ಲಿಸುತ್ತಾರೆ. ಇದು ಅಷ್ಟು ಸರಿಯಲ್ಲ ಎನಿಸುತ್ತದೆ. ಏಕೆಂದರೆ ಇದೊಂದು ಜಾಗತಿಕ ಮಟ್ಟದ ಐತಿಹಾಸಿಕ ಸ್ಥಳವಾಗಿರುವುದರಿಂದ ಸಂಪೂರ್ಣ ವ್ಯವಸ್ಥೆ ಸರಕಾರದ್ದೆಯಾಗಿರಬೇಕು. ಹೀಗಾಗಿ ಅದು ಯಾವುದೇ ಸಮುದಾಯದ ಸ್ವತ್ತುಯಾಗಿರಬಾರದು. ಹೀಗೆಯೇ ಮುಂದುವರೆದರೆ ಅದು ನಾಶವಾಗಿ ಪ್ರೇಕ್ಷಕರು ಅದನ್ನು ಸಂಪೂರ್ಣವಾಗಿ ವೀಕ್ಷಿಸಲು ಸಾಧ್ಯವಿಲ್ಲ. ಇದರ ಸಂರಕ್ಷಣೆ ಸರಕಾರದ ಕರ್ತವ್ಯವಾಗಿದ್ದರಿಂದ ಎಲ್ಲವು ಹತೋಟಿಯಲ್ಲಿ ಇರಬೇಕು. ಹೀಗಾಗದೆ ಇದ್ದಲ್ಲಿ ಎಂತಹ ಪ್ರಸಿದ್ಧ ತಾಣವಾಗಿದರೂ ಅದು ತನ್ನ ಮಹತ್ವವನ್ನು ಕಳೆದುಕೊಳ್ಳುವಲ್ಲಿ ವಿಳಂಬವಿಲ್ಲ ಎನಿಸುತ್ತದೆ. ಹೀಗಾಗಿ ಸರಕಾರವು ಇಂತಹ ಯಾವುದೇ ಐತಿಹಾಸಿಕ ಕಟ್ಟಡವಿರಲಿ ಅದಕ್ಕೆ ಗಮನವನ್ನು ಕೊಟ್ಟು ಒಂದು ಸಮುದಾಯಕ್ಕೆ ಬಲಿಯಾಗದಂತೆ ನೋಡಿಕೊಳ್ಳಬೇಕಾಗಿದೆ. ಏಕೆಂದರೆ ಮುಂದೆ ಅದು ದೊಡ್ಡ ಸಮಸ್ಯೆಯಾಗಿ ಕಲಹ ಉಂಟಾಗಿ ಜನರಲ್ಲಿ ಮನಸ್ತಾಪ ಬರುತ್ತದೆ ಎನ್ನುವಲ್ಲಿ ಸಂಶಯವಿಲ್ಲ.

**೧೬.೪. ಪಾಪನಾಶ ದೇವಾಲಯ :** ಬೀದರದಿಂದ ಒಂದು ಕಿ.ಮೀ. ದೂರದಲ್ಲಿದೆ. ಪಾಪನಾಶಕ್ಕೆ ಪುರಾಣದ ಮಹತ್ವದಾದ ಈಶ್ವರನ ಕಥೆಯಿದೆ. ತುಂಬ ಆಕರ್ಷಕವಾದ

ಶಿವಲಿಂಗವಿದೆ. ಈ ಶಿವಲಿಂಗದ ವಿಚಾರದಲ್ಲಿ ಹಲವಾರು ದಂತಕಥೆಗಳುಂಟು. ಇದಕ್ಕೆ ರಾಮೇಶ್ವರ ಎಂತಲೂ ಕರೆಯುತ್ತಾರೆ. ಶಿವಲಿಂಗ ರಾಮನಿಂದ ಸ್ಥಾಪಿತವಾಗಿದೆ. ಶ್ರೀರಾಮನು ಲಂಕೆಯಿಂದ ಆಯೋಧ್ಯೆಗೆ ಮರಳುವಾಗ ಶ್ರೀರಾಮಚಂದ್ರನು ಇಲ್ಲಿ ನೆಲೆಸಿ ಶಿವಲಿಂಗ ಸ್ಥಾಪಿಸಿದನು ಎನ್ನುವ ಪ್ರತೀತಿಗಳಿವೆ. ಜೊತೆಗೆ ಶುಕ್ರಚಾರ್ಯರು ಲಿಂಗವನ್ನು ಪೂಜಿಸುತ್ತಿದ್ದರು ಎಂಬ ಜನವಾಡಿಕೆಯುಂಟು.

ಇದು ಸುಂದರವಾದ ಎರಡು ಗುಡ್ಡಗಳ ಮಧ್ಯೆ ಶಿವ ಮಂದಿರವು ಇದೆ. ಸುತ್ತಾಮುತ್ತಲು ನೀರಿನ ಚಿಲುಮೆಗಳಿವೆ. ಮಂದಿರದ ಪೂರ್ವಕ್ಕೆ ಕೊಳ(ಗುಂಡ)ವಿದೆ. ಇಲ್ಲಿ ಭಕ್ತರು ಸ್ನಾನವನ್ನು ಮುಗಿಸಿಕೊಂಡು ಶಿವಲಿಂಗ ಪೂಜೆಗೆ ತೆರಳುತ್ತಾರೆ ಮತ್ತು ಕೊಳದಲ್ಲಿ ಸ್ನಾನ ಮಾಡಿದ್ದರಿಂದ ಹಿಂದಕ್ಕೆ ಮಾಡಿದ ಎಲ್ಲಾ ಪಾಪವು ನಾಶವಾಗುತ್ತದೆ ಎಂದು ಬಲವಾಗಿ ನಂಬಿದ್ದಾರೆ. ಅದಕ್ಕಾಗಿಯೋ ಇದಕ್ಕೆ ಪಾಪನಾಶಿನಿ ಎಂದು ಕರೆಯುವುದುಂಟು. ಶಿವರಾತ್ರಿ ಶ್ರಾವಣ ಮಾಸದ ಹಬ್ಬದಂದು ದೊಡ್ಡ ಪ್ರಮಾಣದ ಜನಜಾತ್ರೆ ಸೇರುತ್ತದೆ. ಹತ್ತು ಹಲವಾರು ಕಡೆಯಿಂದ ಶಿವಭಕ್ತರು ಹರಕೆ ಹೊತ್ತು ಬಂದು ತಮ್ಮ ಭಾರವನ್ನು ಇಳಿಸಿಕೊಳ್ಳುತ್ತಾರೆ. ಈ ಶಿವಲಿಂಗದ ಪೂಜಾರಿಗಳು ಜಂಗಮರಾಗಿದ್ದಾರೆ. ಇಡೀ ದೇವಲಾಯದ ವ್ಯವಸ್ಥೆಯನ್ನು ಜೊತೆಗೆ ಅನೇಕ ಪೂಜಾದಿಗಳು ಶುಭಕಾರ್ಯಗಳು ನಡೆಸಿಕೊಂಡು ಸಾಗುತ್ತಿದ್ದಾರೆ.

**೧೬.೫. ಮೈಲಾರ ಮಲ್ಲಣ್ಣಾ ದೇವಸ್ಥಾನ (ಮಲ್ಲಾರಿ):** ಇದು ಬೀದರ ನಗರದಿಂದ ೧೫ ಕಿ.ಮೀ. ದೂರದಲ್ಲಿದೆ. ಇದು 'ದಕ್ಷಿಣಕಾಶಿ' ಎಂದೇ ಹೆಸರುವಾಸಿಯಾಗಿದೆ. ಡಾ: ಎಲ್. ಆರ್. ಕುಲಕರ್ಣಿಯವರು ಇದಕ್ಕೆ 'ಕರ್ನಾಟಕ ಕಾಶಿ' ಎಂದು ಕರೆದಿದ್ದಾರೆ. ಈ ದೇವಾಲಯಕ್ಕೆ ಖಂಡೇರಾಯ, ಖಂಡೋಬಾ, ಮಾರ್ಥಂಡ ಹಾಗೂ ಮಲ್ಲಾರಿ ಮಲ್ಲೇಶ್ವರ ಇತ್ಯಾದಿ ಹೆಸರುಗಳಿಂದ ಕರೆಯುವರು. ಮಲ್ಲಾರಿ ಮಹಾತ್ಮೆ ಎಂಬ ಗ್ರಂಥದಲ್ಲಿ ಈ ಸ್ಥಳದ ವರ್ಣನೆ ಉಲ್ಲೇಖಗೊಂಡಿದೆ. ಈ ಕ್ಷೇತ್ರದಲ್ಲಿ ಅನೇಕ ದೇವತೆಗಳು, ಮುನಿಗಳು ವಾಸವಾಗಿದ್ದರೆಂದು ನಂಬಿಕೆ. ಇಲ್ಲಿ ಪ್ರಾಚೀನ ಗ್ರಂಥಗಳಾದ ಬ್ರಹ್ಮಾಂಡ ಪುರಾಣ, ಸ್ಕಂದ ಪುರಾಣ, ಗರುಡ ಪದ್ಮಪುರಾಣ ಹಾಗೂ ಸಹ್ಯಾದ್ರಿಖಂಡ ಮುಂತಾದವುಗಳಲ್ಲಿ ಮಲ್ಲಾರಿ ದೇವಸ್ಥಾನದ ಬಗ್ಗೆ ಉಲ್ಲೇಖಿತವಾಗಿರುವುದು ತಿಳಿಸುತ್ತವೆ. ಅಲ್ಲದೆ ಇದಕ್ಕೆ 'ಪ್ರೇಮಪುರವೆಂತಲೂ, ಕುಂತಲ ಪ್ರದೇಶವೆಂದು ಮತ್ತು ಮಣಿಚಲಪ್ರದೇಶವೆಂದು' ಕರೆಯುತ್ತಿದ್ದರು. ಕನ್ನಡ, ಮರಾಠಿ ಮತ್ತು ತೆಲುಗು ಭಾಷೆಗಳನ್ನಾಡುವ ಜನರು ನೆಲೆಸಿದ್ದರು ಎಂಬುದು 'ರಂಜೆರುವಿನ ಸಿಂಧರು'

ಎಂಬ ಪುಸ್ತಕದಲ್ಲಿ ಉಲ್ಲೇಖಿತಗೊಂಡಿದೆ. ಅಲ್ಲದೇ ದೇವಾಲಯದ ಬಗ್ಗೆ ಅನೇಕ ದಂತಕಥೆಗಳುಂಟು. ಸದ್ಯ ಖಾನಾಪುರ ಎಂದು ಪ್ರಸಿದ್ಧಿ ಹೊಂದಿದೆ.

**೧೬.೬. ನಾನಕ ಝರಾ :** ಸಿಖ್ಖರ ಗುರುಗಳಾದ ಗುರುನಾನಕರಿಂದಲೇ ಈ ಸ್ಥಳ ನಿರ್ಮಾಣವಾಗಿದೆ. ಸಿಖ್ಖರ ಪವಿತ್ರ ಕ್ಷೇತ್ರವಾಗಿದೆ. ಗುರುನಾನಕರು ಸಿಕ್ಖಧರ್ಮವನ್ನು ಕರ್ನಾಟಕ, ಆಂಧ್ರ ಹಾಗೂ ಮಹಾರಾಷ್ಟ್ರ ಅಲ್ಲದೆ ಅನೇಕ ಕಡೆ ಧರ್ಮ ಪ್ರಚಾರಾರ್ಥವಾಗಿ, ಮಾನವನ ಕಲ್ಯಾಣಭಿವೃದ್ಧಿಗಾಗಿ ದಕ್ಷಿಣ ಭಾರತಕ್ಕೆ ಬಂದರು. ಕೊನೆಗೆ ಬೀದರ ನಗರಕ್ಕೆ ತಲುಪಿದರು. ಬೀದರದಿಂದ ಒಂದು ಕಿ.ಮೀ. ದೂರದಲ್ಲಿನ ಗುಡ್ಡದಲ್ಲಿ ತಮ್ಮ ಶಿಷ್ಯವೃಂದದೊಂದಿಗೆ ಬಂದು ನೆಲೆಸಿದರು. ಹಲವಾರು ಜನರ ಪ್ರೀತಿಗೆ ಪಾತ್ರರಾದರು. ಇದೇ ಸಂದರ್ಭದಲ್ಲಿ ಬೀದರಿನ ಜನತೆ ನೀರಿನ ಸಲುವಾಗಿ ಹಾಹಾಕಾರ ಪಡುತ್ತಿರುವಾಗ ಗುರುನಾನಕರು ಅದೇ ಬೆಟ್ಟದಲ್ಲಿ ತಮ್ಮ ತಪೋಶಕ್ತಿಯಿಂದ ಅವರ ಒಂದು ಪಾದವನ್ನು ನೆಲಕ್ಕೆ ಒತ್ತಿದ ಕೂಡಲೇ ತಕ್ಷಣವೇ ಸಿಹಿ ನೀರಿನ ಚಿಲುಮೆ ಚಿಮ್ಮತೊಡಗಿತು. ನಗರದ ಜನತೆ ಹರ್ಷಿತಗೊಂಡು ಗುರುನಾನಕರ ಗುಣಗಾನ ಎಲ್ಲಾ ಕಡೆ ಹರಿಸಿದರು. ಮುಂದೆ ಝರಿ ಚಿಲುಮೆ - ನಾನಕ ಝರಾ ಎಂಬ ಖ್ಯಾತಿ ಪಡೆಯಿತು. ಅದೇ ಸ್ಥಳದಲ್ಲಿ ಸುಂದರವಾದ ಮಂದಿರವನ್ನು ನಿರ್ಮಿಸಲಾಗಿದೆ. ಜೋಗಾಸಿಂಗ್ ಪಾರ್ಕ್ ಮಾಡಿದ್ದಾರೆ. ಇದು ನಗರದ ನಿವಾಸಿಗಳಿಗೆ ಸಂಜೆಯ ಸಮಯದಲ್ಲಿ ವಿಶ್ರಾಂತಿಯನ್ನು ಪಡೆಯಲು ಸಹಾಯಕವಾಗಿದೆ.

**೧೬.೭. ನರಸಿಂಹಾ ಝರಾ :** ಬೀದರದಿಂದ ಎರಡು ಕಿ.ಮೀ. ದೂರದಲ್ಲಿದೆ, ಇದೊಂದು ಪ್ರಸಿದ್ಧ ವಾದ ಅದ್ಭುತವಾದ ಗುಹಾಂತರ ದೇವಾಲಯವಾಗಿದೆ. ಸದಾ ಎಡಬಿಡದೆ ನೀರು ಹರಿಯುತ್ತವೆ. ಈ ಕ್ಷೇತ್ರ ನರಸಿಂಹಯೋಗಿಯ ತಪಸ್ಸಿನ ಫಲವಾಗಿ ಪ್ರಸಿದ್ಧಿಗೆ ಬಂತು. ಅಂತೆಯೇ ಈ ಪ್ರದೇಶವು ಅನುಷ್ಠಾನಕ್ಕೆ ತಪಸ್ಸಿಗೆ ತುಂಬ ಪವಿತ್ರವಾದದ್ದು ಹೀಗಾಗಿ ನರಸಿಂಹಯೋಗಿ ತನ್ನ ಶಿಷ್ಯರೊಡನೆ ಬಂದು ನೆಲೆಸಿದರೆಂದು ಬೀದರ ಜನತೆಯ ನಂಬಿಕೆ. ಗುಹೆಯ ಒಳಗಡೆ ನರಸಿಂಹ ಮೂರ್ತಿ ಸ್ಥಾಪಿತವಾಗಿದೆ. ದರ್ಶನ ಪಡೆಯಬೇಕಾದರೆ ಸುರಂಗ ಮಾರ್ಗದಿಂದ ಗವಿಯಲ್ಲಿ ಹೋಗಬೇಕಾಗುತ್ತದೆ. ಗವಿಯ ಕಾಲುವೆ ೯೧ ಮೀಟರ ಉದ್ದಳತೆ, ೨ ಮೀಟರ ಅಗಲವಾಗಿದೆ. ಕಾಲುವೆಯಲ್ಲಿ ಯಾವಾಗಲೂ ೧.೩೭ ಮೀಟರಷ್ಟು ಆಳದಲ್ಲಿ ನೀರು ಇರುತ್ತವೆ. ಭಕ್ತಾದಿಗಳು ಈ ಎದೆಯೆತ್ತರದ ನೀರನೊಳಗಿನಿಂದಲೇ ನಡೆದುಕೊಂಡು ಹೋಗಿ ನರಸಿಂಹನ ದರ್ಶನ ಪಡೆಯುತ್ತಾರೆ. ಯಾವಾಗಲೂ ಒಂದೇ ಸಮತಳಿಯಲ್ಲಿ ನೀರು ಇರುವದರಿಂದ ಜನತೆಗೆ ತುಂಬ ಅಶ್ಚರ್ಯಕರವಾಗಿದೆ. ತಾಣದ ಬಗ್ಗೆ ಅನೇಕ ಪೌರಾಣಿಕ ಕಥೆಗಳು ಉಂಟು.

ಹಿರೋಡೆ ಎಂದು ಕೂಡ ಕರೆಯುತ್ತಾರೆ ಇನ್ನೊಂದು ವಿಶೇಷವೆನೆಂದರೆ ಯಾವುದೇ ಹೆಣ್ಣು ಮಗಳು ಮೊದಲು ಬಸುರಿಯಾದಾಗ ಈ ಹಿರೊಡೆಗೆ ನೈವಿದ್ಯವನ್ನು ಮೊದಲು ಮಾಡುವದು ತುಂಬ ವಾಡಿಕೆಯಿದೆ ದೇವಾಲಯದ ಸುತ್ತಲೂ ಗುಡ್ಡ ಆವರಿಸಲ್ಪಟ್ಟಿದೆ. ಜೊತೆಗೆ ಕೇದಗಿತೋಟ ಬಂದ ಭಕ್ತಾದಿಗಳಿಗೆ ಹರ್ಷವುಂಟು ಮಾಡುತ್ತದೆ.

**೧೬.೮. ಸಾಧೋ ಘಾಟ :** ಇದು ಕರ್ನಾಟಕದ ಪಂಢರಪೂರವೆಂದು ಪ್ರತೀತಿ. ಬೀದರದಿಂದ ೬ ಕಿ.ಮೀ. ದೂರದಲ್ಲಿದೆ ಇದಕ್ಕೆ ಸಿದ್ದಪೂರವೆಂತಲೂ ಕರೆಯುವುದುಂಟು. ಮೂರು ನೂರು ವರ್ಷಗಳ ಐತಿಹಾಸಿಕ ಪರಂಪರೆ ಇದಕ್ಕಿದೆ. ಸಾಧು-ಸಂತರ ಆಧ್ಯಾತ್ಮಿಕ, ಧಾರ್ಮಿಕ ಪವಿತ್ರ ಕ್ಷೇತ್ರವೆಂದು ಹೆಸರುವಾಸಿಯಾಗಿದೆ. ಸಿದ್ದೇಶ್ವರ ಮಹಾರಾಜರು ೩೬ ವರ್ಷಗಳ ಕಾಲ ಕಠಿಣ ತಪಸ್ಸನ್ನಾಚರಿಸಿ ವಿಠಲನನ್ನು ಸಾಕ್ಷತ್ಕಾರ ಮಾಡಿಕೊಂಡ ತಪೋಭೂಮಿಯಾಗಿದೆ.

**೧೬.೯. ಹಜರತ್ ಶಾಹ ಅಬ್ದುಲ ಫೈಜನ ದರ್ಗಾ :** ಐತಿಹಾಸಿಕ ಪ್ರಸಿದ್ಧ ಪುಣ್ಯ ಕ್ಷೇತ್ರವಾಗಿದೆ. ದರ್ಗಾವು ಮುಸಲ್ಮಾನರ ರಾಜ್ಯದ ೩ನೇ ಮಹಮ್ಮದ ಶಾಹನ ದೊರೆಯನ ಕಾಲದಲ್ಲಿ ಈತನು ಪ್ರಸಿದ್ದ ಸಂತನು ಹಾಗೂ ಪವಾಡ ಪುರುಷನಾಗಿದ್ದನು. ಎಲ್ಲಾ ಜನಗಳಿಗೆ ತುಂಬ ಹತ್ತಿರವಾಗಿದ್ದು ಅವರ ಕುಂದು ಕೊರತೆಗಳಲ್ಲಿ ಸಹಕರಿಸುತ್ತಿದ್ದ. ಹೀಗಾಗಿ ನಗರದ ಸರ್ವಜನಾಂಗವು ಮೆಚ್ಚುತ್ತಿತು. ಅಂತೆಯೇ ಇಂದಿಗೂ ಇತನ ಸಮಾದಿಗೆ ಜನರು ಹೋಗುತ್ತಾರೆ ಮಕ್ಕಳಿಗಾಗಲಿ, ದೊಡ್ಡವರಿಗಾಗಲಿ ಯಾವುದೇ ಕಾಯಿಲೆ ಬಂದರೆ ದರ್ಗಕ್ಕೆ ಹೋಗಿದ್ದರೆ ಸಾಕು ನಿವಾರಣೆಯಾಗುತ್ತದೆ ಎಂಬ ಭಕ್ತರವಾಣಿಯಾಗಿದೆ. ಇದು ಬಹಮನಿ ರಾಜನಾದ ೩ನೇ ಮಹಮ್ಮದ ಶಾಹನು ಪ್ರತಿಷ್ಠೆಯನ್ನು ಉಳಿಸಿಕೊಡಿದೆ.

**೧೬.೧೦. ಮುಲ್ತಾನಿ ಬಾಷಾ ದರ್ಗಾ :** ಇದು ಬೀದರ ಕೋಟೆಯ ಸಮೀಪದಲ್ಲಿದೆ ಇತನು ಶೇಖ ಮಹಮ್ಮದ ಎಂಬ ಬಹಮನಿ ಅರಸರ ಕಾಲದಲ್ಲಿ ಶ್ರೇಷ್ಠ ಸಂತನಾಗಿದ್ದನು. ಇವನು ಸುಮಾರು ಐದು ನೂರು ವರ್ಷಗಳ ಹಿಂದೆ ಜೀವಿಸಿದ್ದ. ಇವರ ವಂಶಜರು ಮುಲ್ತಾನಿನಿಂದ ಭಾರತಕ್ಕೆ ಬಂದಿದ್ದರಿಂದ ಇವನಿಗೆ ಶೇಖ ಮಹಮ್ಮದ ಮುಲ್ತಾನಿ ಬಾಷಾ ಎಂದು ಕರೆಯುತ್ತಿದ್ದರು. ಆದ್ದರಿಂದಲೇ ದರ್ಗಾವನ್ನು ಮುಲ್ತಾನಿಬಾಷಾ ದರ್ಗಾ ಎಂದು ಪ್ರಚಾರವಾಗಿದೆ.

**೧೬.೧೧. ಶುಕ್ಲ ತೀರ್ಥ:** ಇದು ಬೀದರ ಕೋಟೆಯ ಹೊರವಲಯದಲ್ಲಿದೆ. ಲಂಕಾಪತಿಯಾದ ಹಾಗೂ ಶಿವಭಕ್ತನಾದ ರಾವಣನು ಶುಕ್ಲ ಮುನಿಯ ದರ್ಶನಕ್ಕಾಗಿ ಈ ಸ್ಥಳಕ್ಕೆ ಬಂದಿದನೆಂಬ

ಪ್ರತೀತಿ ಇದೆ. ದೈತ್ಯ ಗುರು ಶುಕ್ಲಚಾರ್ಯ ಅಥವಾ ಶುಕ್ಲ ಮುನಿಯು ತಪಸ್ಸು ಮಾಡಿದ ನಿಮಿತ್ಯವಾಗಿ ಈ ಕ್ಷೇತ್ರ ನಿರ್ಮಾಣಗೊಂಡಿದೆ ಎಂಬ ಜನವಾಣಿ. ಒಂದು ದೊಡ್ಡ ಗುಹೆಯಿದೆ ಒಳಗಡೆ ನೀರಿನ ಚಿಲುಮೆ ಇದೆ. ಈ ಚಿಲುಮೆಯಲ್ಲಿ ಶುಕ್ಲಚಾರ್ಯ ಸ್ನಾನ ಮುಗಿಸಿಕೊಂಡು ಪಾಪನಾಶಿನಿಗೆ ಹೋಗಿ ಶಿವಲಿಂಗ ಪೂಜಾ ಮಾಡುತ್ತಿದ್ದನಂತೆ. ಆದರಿಂದ ಇದಕ್ಕೆ ಶುಕ್ಲ ಮುನಿತೀರ್ಥ ವೆಂದೇ ಜನಗಳು ಇಂದಿಗೂ ಕರೆಯುತ್ತಾರೆ. ಇಲ್ಲಿ ಶಾಮರಾವ ಮಹಾರಾಜರು ಬಂದು ನೆಲೆಸಿ ಇಲ್ಲಿ ೧೦೧ ಬಿಲ್ವಪತ್ರಿಗಳ ಮರಗಳನ್ನು ಬೆಳೆಸಿ ಜೊತೆಗೆ ಹಲವಾರು ಗಿಡಗಳನ್ನು ಬೆಳೆಸಿ ಕ್ಷೇತ್ರ ಹಸಿರಿನ ಸೌಂದರ್ಯ ಮಾಡಿದರು ಮುಂದೆ ಗುಹೆಯಾ ಚಿಲುಮೆಯಲ್ಲಿ ಒಂದು ಶಿವಲಿಂಗ ಸ್ಥಾಪಿಸಿದರು. ಆ ಮೇಲೆ ಒಂದು ಮಡಿವಾಳೇಶ್ವರ ಮೂರ್ತಿ ಸ್ಥಾಪಿಸಿ ಸುಂದರವಾದ ಮಂದಿರವನ್ನು ನಿರ್ಮಿಸಿ ಕಾಲವಾಗಿದ್ದಾರೆ. ಇಂದಿಗೂ ಈ ಮಂದಿರದಲ್ಲಿ ಅನೇಕ ಭಕ್ತಾದಿಗಳು ಆಗಮಿಸಿ ಹುಣ್ಣಿ ಆಮವಾಸೆ ದಿವಸಗಳಲ್ಲಿ ಭಜನೆ, ಕಿರ್ತನೆ, ನೇರವೇರಿಸುತ್ತಾರೆ. ಮೊದಲು ಹೇಗೆ ಇದೆಯೋ ಹಾಗೆಯೇ ಇದೆ. ಆದರೆ ಸರಕಾರದವರು ಈ ಕಡೆ ಗಮನಾಹರಸಿ ಐತಿಹಾಸಿಕ ಸ್ಥಳವನ್ನಾಗಿ ಪರಿಗಣಿಸಿ ಅಭಿವೃದ್ಧಿ ಪಡಿಸುವುದು ಸದ್ಯಾ ಅವಶ್ಯವಾಗಿದೆ.

**೧೬.೧೨. ಬಸವಕಲ್ಯಾಣ :** ಬೀದರದಿಂದ ೮೦ ಕಿ.ಮೀ ದೂರದಲ್ಲಿ ಐತಿಹಾಸಿಕ ಅವಶೇಷಗಳನ್ನು ಹೊತ್ತುನಿಂತಿದೆ. ೧೨ನೇ ಶತಮಾನದ ಚಾಲುಕ್ಯರ ಕಾಲದಲ್ಲಿ ತುಂಬ ಹೆಸರುವಾಸಿಯಾಗಿ ಮೆರೆದ ನೆಲ ಇದಾಗಿದೆ. ಏಕೆಂದರೆ ಬಸವಣ್ಣ, ಅಲ್ಲಮ ಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ದರಾಮ ಮುಂತಾದ ಶರಣ-ಶರಣೆಯರು ವಚನ ಸಾಹಿತ್ಯವನ್ನು ನಿರ್ಮಾಣ ಮಾಡಿದ ಅನುಭವ ಮಂಟಪವಿದೆ. ಇದು ಅನುಭಾವ ಅಧ್ಯಾತ್ಮಿಕ ಸುಧೆಯನ್ನು ನೀಡುವ ಮಾನವನ ಅಭಿವೃದ್ಧಿಯ ಕಡೆಗೆ ಕರೆದುಕೊಂಡು ಹೊಸ ಅನುಭವ ಮಂಟಪ ಇದರಲ್ಲಿ ಅಂದಿನ ಶರಣರು ವಚನ ಸಾಹಿತ್ಯವನ್ನು ನಿರ್ಮಿಸಿದರು. ತೈಲ ಚಿತ್ರವನ್ನೇ ಶರಣರನ್ನು ನೋಡಲು ತುಂಬ ಮನಮೊಹಕವಾಗಿದೆ. ಅಲ್ಲದೆ ತಿಪ್ರಾಂತ ಕೆರೆ ಅಕ್ಕನಾಗಮ್ಮ ನಗವಿ, ಅರಿವಿನಗವಿ, ಬಸವೇಶ್ವರ ಮಹಾಮನೆ, ಮಡಿವಾಳ ಮಾಚಯ್ಯನ ದೇವಾಲಯ, ಉತ್ತರಕ್ಕಿರುವ ಕೋಟೆಯ ಅರಮನೆ ನಗರದ ಮಧ್ಯ ಹೊಳೆಯುವ ಬಸವೇಶ್ವರ ದೇವಲಾಯ, ಗೋರಟಾ ನಾರಾಯಣಪುರ, ಮಿರಕಲ್, ಶಿವಪೂರ ಮುಂತಾದ ಸ್ಥಳಗಳಲ್ಲಿ ಅವಶೇಷಗಳು ಹೊಂದಿ ಅಂದಿನ ಪರಂಪರೆಯನ್ನೇ ಕೂಗಿ ಹೇಳುತ್ತವೆ.

**೧೬.೧೩. ಭಾಲ್ಕಿ :** ಭಾಲಕೇಶ್ವರ ಮಂದಿರ, ಭಾತಂಮ್ರ ವೀರಭದ್ರೇಶ್ವರ ಮಂದಿರ, ಸಿದ್ದೇಶ್ವರ ದೇವಾಲಯ ಅಳವಾಯಿ ಲಕ್ಷ್ಮಿ ದೇವಲಾಯ ಹುಮನಾಬಾದಿನ ವೀರಭದ್ರೇಶ್ವರ ದೇವಲಾಯ,

ಕರಕನಳ್ಳಿ ಶಿವಯೋಗಿ,ಮಾಣಿಕನಗರದ ಮಾಣಿಕ ಪ್ರಭುಗಳ ಗದ್ದುಗೆ, ಚಾಂಗಲೇರ ವೀರಭದ್ರೇಶ್ವರ ದೇವಾಲಯ, ಜಲಸಂಗಿ ಈಶ್ವರ ದೇವಾಲಯ ಹಳ್ಳಿಖೇಡನ ಶಿವಮೂರ್ತಿ. ಔರಾದ ಅಮರೇಶ್ವರ ದೇವಾಲಯ, ಸಂಗಮದ ಸಂಗಮೇಶ್ವರ ದೇವಾಲಯ ಮುಂತಾದವು ಜಿಲ್ಲೆಯ ಸಾಂಸ್ಕೃತಿಕ, ಐತಿಹಾಸಿಕ, ಸಾಮಾಜಿಕ, ರಾಜಕೀಯ ಪರಂಪರೆಯನ್ನು ತಿಳಿಸುವಲ್ಲಿ ತಿಳಿಯುವಲ್ಲಿ ಅಧ್ಯಯನ ಮಾಡುವಲ್ಲಿ ಕೈ ಮಾಡಿ ಕರೆಯುತ್ತಿವೆ. ಆದರೆ ಇಂದಿನ ದಿನಮಾನ ಗಳಲ್ಲಿ ಅವುಗಳನ್ನು ಸಂರಕ್ಷಿಸಿ ಜೊತೆಗೆ ಕಾಪಾಡಿಕೊಂಡು ಬರುವುದು ಎಷ್ಟು ಮುಖ್ಯವೋ, ಅಷ್ಟೆ ದಾಖಲೆ ರೂಪದಲ್ಲಿ ಮುಂದಿನ ಯುವ ಪೀಳಿಗೆಗಳಿಗೆ ತಿಳಿದುಕೊಳ್ಳುವಲ್ಲಿ ಹಲವು ಪ್ರಕಾರದ ಸಂಶೋಧನೆ ಕಾರ್ಯ ನಡೆಯ ಬೇಕಾದದ್ದು ಅವಶ್ಯ.

ಬೀದರ ಜಿಲ್ಲೆ, ರಾಷ್ಟ್ರ, ರಾಜ್ಯದಲ್ಲಿ ತನ್ನದೆಯಾದ ಸ್ಥಾನವನ್ನು ಕಲ್ಪಿಸಿಕೊಂಡದೆ. ಇಂತಹ ಭವ್ಯ ಸಂಸ್ಕೃತಿಯ ಸಾಗರದಲ್ಲಿ ಸುಮಾರು ಜಾತಿ-ಜನಾಂಗಗಳ ಮತ್ತು ಸಮುದಾಯಗಳ ಸಂಸ್ಕೃತಿಯ ನೆಲೆ ಬೆಳೆದು ಹೆಮ್ಮರವಾಗಿದೆ. ಈ ಹಲವಾರು ಸಮುದಾಯಗಳಲ್ಲಿ ಜಂಗಮ ಸಮುದಾಯ ಜಿಲ್ಲೆಯಾದ್ಯಂತ ಒಂದಾಗಿದೆ. ಈ ಜಂಗಮ ಸಮುದಾಯವನ್ನು ಸಾಂಸ್ಕೃತಿಕ ಅಧ್ಯಯನದ ಮೂಲಕ ಅಧ್ಯಯನಿಸುವುದಾಗಿದೆ. ಜಂಗಮರ ಪ್ರಾಚೀನತೆ, ಸಾಮಾಜಿಕತೆ, ಧಾರ್ಮಿಕ, ರಾಜಕೀಯ ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಅವರನ್ನು ಗುರುತಿಸಿ ಸಾಧಿಸಿದ ಸಾಧನೆ, ಹಿನ್ನಲೆಯನ್ನು ಕುರಿತು ಅಧ್ಯಯನ ಮಾಡುವುದಾಗಿದೆ.

## ಆಕರ ಗ್ರಂಥಗಳು


೧. ಸುಬ್ರಹ್ಮಣ್ಯ ಟಿ.ವಿ.(ಡಾ), ೧೯೯೫, ಭಾರತ ಸಿಂದು ರಶ್ಮಿ ಒಂದು ಸಾಂಸ್ಕೃತಿಕ ಮತ್ತು ಸಾಹಿತ್ಯದ ಅವಲೋಕ, (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,) ಪು.೨೨

೨. ಸಬರದ ಬಸವರಾಜ,(ಡಾ) ೧೯೮೨, ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ, (ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ I, IX, ೧೦, ೧೮, ೪೦.

೩. ಸಿಂಪಿ ವೀರೇಂದ್ರ, ಗುರುಸಿದ್ಧಪ್ಪ ಸೋಮಶೆಟ್ಟಿ(ಸಂ), ೧೯೯೯, ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು, (ಬೀದರ, ಜಿಲ್ಲಾಡಳಿತ,) ಪು.೨,೪,೩.

೪. ಭಂಡಿ ವೈಜನಾಥ,(ಡಾ) ೧೯೯೦, ಬೀದರ ಜಿಲ್ಲಾ ಸ್ಥಳನಾಮಗಳು(ಅಪ್ರಕಟಿತ) ಪು.೯೧,೯೧ ೯೯, ೮೮.೮೮

೫. ಕುಲಕರ್ಣಿ ಎಲ್.ಆರ್.(ಡಾ), ೧೯೭೧, ಬೀದರ, (ಐ.ಬಿ.ಎಚ್.ಪ್ರಕಾಶನ, ಬೆಂಗಳೂರು), ಪು.೩, ೨೨, ೨೮,೩೦.

೬. ಹಿರೇಮಠ ಸೂಗಯ್ಯ(ಪ್ರೊ), ೧೯೯೦, ರಂಜೇರುವಿನ ಸಿಂದರು, (ಬೀದರ, ಬಿ.ವಿ.ಬಿ.ಕಾಲೇಜು), ಪು.೩.

೭. ಸವದತ್ತಿ ಸಂಗಮೇಶ,(ಡಾ) ೧೯೮೨, ತಿರುಳ್ಗನ್ನಡ, ೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಪು.೮೨.

೮. ಕುಲಕರ್ಣಿ ವಿಠ್ಠಲರಾವ (ಲೇ), ಹೆಬ್ಬಾಳೆ ಜಗನ್ನಾಥ(ಸಂ) ಬೀದರ ಜಿಲ್ಲಾದರ್ಶನ, (ಬೀದರ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,) ಪು.೬೫,೩೬.

೯. ಭಾತಂಬ್ರಾ ರಘುಶಂಖ(ಲೇ), ಹೆಬ್ಬಾಳೆ ಜಗನ್ನಾಥ, ಗುಂದಗಿ ಶಿವಾನಂದ(ಸಂ), ೧೯೯೮, ಬೀದರ ಜಿಲ್ಲಾ ಸಾಹಿತ್ಯ ಅವಲೋಕವ, (ಬೀದರ, ಕನ್ನಡ ಸಾಹಿತ್ಯ ಪರಿಷತ್ತು,) ಪು.೨.

೧೦. ಹಿರೇಮಠ ಎಸ್.ಎಂ.(ಡಾ), ಸಮೂಹ ಮಾಧ್ಯಮ,(ಗದಗ ವಿದ್ಯಾನಿಧಿ ಪ್ರಕಾಶನ, ಸ್ಟೇಶನ್ ರಸ್ತೆ), ಪು.೨೭.

ಅಧ್ಯಾಯ ೩

# ಜಂಗಮರ ಪ್ರಾಚೀನತೆ ಮತ್ತು ನಡೆದು ಬಂದ ದಾರಿ

೧. ಜಂಗಮ ಪದದ ಅರ್ಥ

೨. ಜಂಗಮರ ಪ್ರಾಚೀನತೆ ಅಥವಾ ಮೂಲ

೩. ಶಾಸನಗಳಲ್ಲಿ ಜಂಗಮರು

೪. ಜಂಗಮರು ನಡೆದು ಬಂದ ದಾರಿ

೫. ಜಂಗಮರ ವಂಶ ವೃಕ್ಷ

೬. ಜಂಗಮರಲ್ಲಿ ವರ್ಗಗಳು(ಪಂಗಡಗಳು)

   ೧. ಪಟ್ಟದ್ದೇವರು (ಮಠಾರ್ಯಾ ಮತ್ತು ಮಠಸ್ಥ)

   ೨. ಹಿರೇಮಠ

   ೩. ಮಠಪತಿ

   ೪. ಸುಕಾಸ್ಥಿ

   ೫. ಗಣಾಚಾರಿ

   ೬. ಸ್ಥಾವರಾರ್ಯ

   ೭. ಗಣಕುಮಾರ

೭. ವಿರಕ್ತ ಮಠಾಧೀಶರು

ಆಧಾರ ಗ್ರಂಥಗಳು

ಭಾರತ ದೇಶವು ಮೂಲತಃ ಧರ್ಮ ಪ್ರಧಾನವಾದ ದೇಶ. ಇಲ್ಲಿ ವಿವಿಧ ಧರ್ಮಗಳು ಹುಟ್ಟಿಕೊಂಡಿವೆ ಮತ್ತು ನೆಲೆಸಿವೆ. ಇವುಗಳಲ್ಲಿ ವೀರಶೈವ ಧರ್ಮವು ಒಂದಾಗಿದೆ. ಇದು ವಿಶ್ವಧರ್ಮವಾಗಿ ಪರಿಣಮಿಸಿದೆ. ಅಂತೆಯೇ ವೀರಶೈವ ಧರ್ಮ ಸಕಲ ಮಾನವ ವರ್ಗಕ್ಕೆ ಬೇಕಾಗಿರುವ ಸಂದೇಶಗಳು ಹೇಳುತ್ತದೆ. ಅಂದರೆ ವಿವಿಧತೆಯಲ್ಲಿ ಏಕತೆಯನ್ನು ಉಂಟು ಮಾಡುವುದೇ ಈ ಧರ್ಮದ ಮೂಲ ಉದ್ದೇಶವಾಗಿದೆ.

ವೀರಶೈವ ಧರ್ಮದಲ್ಲಿ ಜಂಗಮ ಸಮುದಾಯಕ್ಕೆ ತುಂಬ ಮಹತ್ವವಿದೆ. ಈ ಜಂಗಮರು ಭಾರತಾದ್ಯಂತ ಮಠಗಳನ್ನು ಕಟ್ಟಿಕೊಂಡು ಇದರ ಕೆಳಗೆ ಅನೇಕ ಶಾಖೆಗಳು ನಿರ್ಮಿಸಿ ಇವುಗಳಿಂದ ಜನಾಂಗದ ವ್ಯವಸ್ಥೆಯ ಸಲುವಾಗಿ ಧರ್ಮ, ನೀತಿ, ಜ್ಞಾನ ಹಾಗೂ ತಪಸ್ಸೆಂಬ ಶಿವಯೋಗವನ್ನು ಎಲ್ಲಾ ದಿಶೆಗಳಲ್ಲಿ ಹರಡುತ್ತಾ ಎಲ್ಲಾ ಕಡೆ ಸಂಚರಿಸುತ್ತಾ, ಸಮಾಜವು ಸುವ್ಯವಸ್ಥೆಯ ಮಾರ್ಗದೆಡೆಗೆ ಕೊಂಡೊಯ್ದಿದ್ದರು. ಜಂಗಮರು ಮೂಲತಃ ಸಮಾಜ ಸೇವಕರು 'ವಿನಯ ವಿದ್ಯಾ ವಿಭೂಷಣಂ' ಎಂದು ಹೇಳುವುದಾದರೆ 'ವಿನಯಂ ಜೀವನ ವೈಶಿಷ್ಟ್ಯಂ' ಎನ್ನಬಲ್ಲ ಕರ್ಮಯೋಗಿಗಳು. ಗರ್ವ ಅಹಂಕಾಗಳನ್ನು ಮೆಟ್ಟಿ ಪರಿಶುದ್ಧ ಪಾವಿತ್ರ್ಯಯ ಜೀವನ ನಡೆಸಬಲ್ಲ ಜೀವಿಗಳು. ಯಾವುದೇ ಆಮಿಸೆಗಳಿಗೆ ಬಲಿಯಾಗದೆ ಕರ್ಮದ ಕಾರ್ಯ ವನ್ನೇ ಸೇವೆಯನ್ನು ಮಾಡಿಕೊಂಡವರು ಜಂಗಮರು. 'ಜಗದಗಲ ಮುಗಿಲಗಲ ಮಿಗೆಯಲು ನಿಮ್ಮಗಲ' ಎಂಬ ಬಸವಣ್ಣನವರ ವಾಣಿಯಂತೆ ಎಲ್ಲೆಲ್ಲೋ ಸಕಾರ ಮೂರ್ತಿ ಯಂತೆ ಕಾಣಬಲ್ಲ ಶಿವಸ್ವರೂಪಿಗಳು.

ವೀರಶೈವ ಧರ್ಮದಲ್ಲಿ ಮುಖ್ಯವಾಗಿ ಜಂಗಮರ ಪಾತ್ರ ಹಿರಿದು. ತಮ್ಮ ಧಾರ್ಮಿಕ ಚಟುವಟಿಕೆಗಳಿಗೆ ಸೂತ್ರಧಾರಿಗಳಾಗಿ ಸಕಲ ಕಾರ್ಯಗಳಿಗೆ ಮಾರ್ಗದರ್ಶನ ನೀಡುವ ಕೊಂಡಿಯಾಗಿ ನಿಲ್ಲಬಲ್ಲವರು. ತಾಯಿಯ ಗರ್ಭದಲ್ಲಿ ಮಗು ಮೂಡಿದಾಗಲೇ ವೀರಶೈವರಿಗೆ ನೆನಪಾಗುವುದು ಜಂಗಮ. ಜಂಗಮರಿಂದ ಪ್ರಪ್ರಥಮವಾಗಿ ಲಿಂಗಧಾರಣೆಯಾಗುವುದು.

ಏಕೆಂದರೆ ಮಗುವಿಗೆ ಲಿಂಗ ಕಟ್ಟಿದ ನಂತರವೇ ಆ ಮಗುವಿನ ಇನ್ನಿತರ ಕ್ರಿಯೆಗಳು ಜರುಗುತ್ತವೆ. ಮಗು ಲಿಂಗಾಂಗಿಯಾಗಿ ಜಂಗಮನಂತೆ ಸಾತ್ವಿಕ ಗುಣಗಳನ್ನು ಅಳವಡಿಸಿಕೊಂಡು ಈ ನರಲೋಕದಲ್ಲಿ ಮಾನವೀಯ ಜೀವನ ನಡೆಸುತ್ತದೆ. ಹೀಗೆ ಜಂಗಮರು ಬೇರೆ ಬೇರೆ ಜಾತಿ ಹಾಗೂ ಜನಾಂಗದ ಜನರ ಉದ್ಧಾರಕ್ಕಾಗಿ ಧರ್ಮ ಹಾಗೂ ನೀತಿಯನ್ನು ಹರಡುತ್ತಾ ಊರಿನಿಂದ ಊರಿಗೆ ಪ್ರಯಾಣ ಬೆಳೆಸುತ್ತಿರುವರು. ಜನಕಲ್ಯಾಣ ಸೇವೆಗೆ ಕಟ್ಟುಬದ್ಧರಾಗಿ ಜನಾಂಗದ ಏಳಿಗೆಗಾಗಿ ಸಂಚರಿಸುತ್ತಾ ಕಾಯಕವನ್ನು ಕೈಗೊಂಡಿರುವ ಜಂಗಮರು ಅಂದಿನಿಂದ ಇಂದಿನವರೆಗೂ ಮಠಗಳು ಕಟ್ಟಿಕೊಂಡು ತಮ್ಮ ಸೇವೆಯನ್ನು ಮುಂದುವರೆಸುತ್ತಾ ಬಂದಿರುವ ಸಮುದಾಯ ಜಂಗಮ ಸಮುದಾಯ. ಇದು ಒಂದು ಭೂಗತ ಪ್ರದೇಶದಲ್ಲಿ ನೆಲೆಸಿದ ಸಮುದಾಯ ಆಯಾ ಪ್ರಾದೇಶಿಕತೆಯ ಹಿನ್ನಲೆಯನ್ನೊಳಪಡಿಸಿಕೊಂಡು ಭಿನ್ನ ಭಿನ್ನ ರೂಪ ತಾಳುತ್ತದೆ. ಕರ್ನಾಟಕದ ಗಡಿ ಭಾಗವಾದ ಬೀದರ ಜಿಲ್ಲೆ ಹೈದ್ರಾಬಾದ ಕರ್ನಾಟಕದ ಒಂದು ಭಾಗವಾದುದರಿಂದ ಆಂಧ್ರ, ಮಹಾರಾಷ್ಟ್ರ ಪ್ರಭಾವ ಈ ಸಮುದಾಯದ ಮೇಲಾಗಿ ಕರ್ನಾಟಕದಾದ್ಯಂತ ಜಂಗಮ ಒಂದೆನಿಸಿದೆ. ಈ ಜಿಲ್ಲೆಯ ಸಾಂಸ್ಕೃತಿಕ ಜೀವನ ವಿಧಾನವೇ ಬೇರೆ ರೀತಿಯಾಗಿದೆ. ಈ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದಾಗಿದೆ.

## ೧. ಜಂಗಮ ಪದದ ಅರ್ಥ

ಜಂಗಮ ಪದಕ್ಕೆ ಅನೇಕ ರೀತಿಯಿಂದ ಅರ್ಥೈಸಿದ್ದು ಕಂಡುಬರುತ್ತದೆ. ಇದು ಹಂತಹಂತ ವಾಗಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದು ಕಾಣುತ್ತೇವೆ. 'ಜಂಗಮ' ಎಂಬ ಶಬ್ದದಲ್ಲಿರುವ

'ಜಂ' - ಎಂಬುದಕ್ಕೆ ಜನನಾಭಾವವೂ

'ಗ' - ಕಾರಕ್ಕೆ ಸಂಸಾರದಲ್ಲಿ ಹೊಂದಬೇಕಾಗಿರುವ ಗಮ್ಯಸ್ಥಾನ ಭಾವವು

'ಮ' - ಕಾರಕ್ಕೆ ಮರಣ ಭಾವವು ಎಂಬ ಅರ್ಥ ಕಂಡುಬರುತ್ತದೆ.

ಅಂದರೆ ಜಂಗಮ ಶಬ್ದಕ್ಕೆ ಗಮ್ಯಸ್ಥಾನ, ಮರಣಗಳಿಲ್ಲದವನ್ನು ಗಮಾನಾಗಮನ ರಹಿತನೂ, ಮಾನವನ ಧರ್ಮದಿಂದ ದೂರವಾದವನು ಜಂಗಮನೆಂದು ಕರೆಯಲ್ಪಡುತ್ತಾನೆ. ಈ ಜಂಗಮ (ಶಬ್ದಕ್ಕೆ) ಸ್ವಾತಂತ್ರನು, ವಿಕಲ್ಪಹಿತನು, ಪೂರ್ವ ಜನ್ಮದ ಕರ್ಮ ಬಂಧನಕ್ಕೆ ಒಳಗಾದವನು, ನಿ : ಶೂನ್ಯನೂ, ಅಖಂಡನು ಆದವನೇ ಜಂಗಮನು. ಅಲ್ಲದೆ ಜಂಗಮ

ಸಾಕ್ಷಾತ್ ಪರಶಿವನು ಗುಣಾತೀತನೂ ಕ್ರಿಯಾತೀತನೂ, ಸತ್‌ಚಿತ್ ಆನಂದರೂಪನು ಇಂತಹ ಗುಣಗಳನ್ನು ಹೊಂದಿದ್ದವನೆ ಜಂಗಮ ಎಂದು(ಬಸವರಾಜ:೧೯೬೪:೧೯೨) ಅರ್ಥೈಸಲಾಗಿದೆ.

ಕನ್ನಡ ನಿಘಂಟಿನಲ್ಲಿ (ಸಂ.ಖ.ಪು.೨೯೩೫)ಜಂಗಮ ಎಂದರೆ ಚಲಿಸುವ, ಸಂಚರಿಸುವ, ಚೈತನ್ಯವುಳ್ಳ, ಜೀವಿಸುವ ಅಲ್ಲದೆ ಮಠಮಾನ್ಯಗಳಿಲ್ಲದ ಲೋಕ ಸಂಚಾರಿಯಾದ ವಿರಕ್ತ, ಅಯ್ಯಾ, ಹಾಗೂ ಅಚರ - ಚರ ಎಂಬ ಶಬ್ದಗಳು ಕಂಡುಬರುತ್ತವೆ.

'ಅಂತರ್ಧಾಯ ಲಲಾಚಾಕ್ಷಂ ಶಸಾಂಕಂ ಸಂವಿಧಾಯ ಚ !

ಅವಾಮಭಾಗಲಲನೋ ಜಂಗಮ'

ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲಾಗಿದೆ. ಮಂಡೆಯ ಚಂದ್ರಕಲೆ, ಹಣೆಗಣ್ಣು ಮತ್ತು ಎಡಗಡೆ ಅಗಜೆಯರನ್ನು ಮರೆಮಾಚಿದ ಸಾಕ್ಷತ್ ಮಹೇಶ್ವರನೇ ಜಂಗಮ ಎಂದು ಹೇಳಲಾಗಿದೆ.

'ಅಹಮೇವ ಮಹೇಶಾನಿ ಧೃತ್ವ ಜಂಗಮ ವಿಗ್ರಹಂ

ಮದ್ಭತ್ತಾನು ಗ್ರಹಾರ್ಥಯ ಪರ್ಯಚಾಮಿ ಮಹೀತತೀ'

ಭಕ್ತರನ್ನು ಅನುಗ್ರಹಿಸಲು ಸಂಚರಿಸುವನೆ ಜಂಗಮ ಎಂದು ವಿರಾಗಮಗಳ ಹೇಳಿಕೆ.

'ಜಂಗಮ : ಶಿವರೂಪ ಸ್ವಾಯತ್, ಶಿವ ಏವ ಜಂಗಮ :'

ಅಂದರೆ ಶಿವನೇ ತಾನಾಗಿರುವ ಶಿವಯೋಗಿಗೆ ಜಂಗಮನೆಂದು ವೈದಿಕ ನಿಘಂಟಿನಲ್ಲಿ ಹೇಳಲಾಗಿದೆ.

'ಲತೆಗಳ್ ಜಂಗಮರೂಪದಿಂ ನೆರೆದುಪೋ'

ಎಂದು ಹೂಗಳ ರೂಪವನ್ನು ಅಂದರೆ ಕೋಮಲವಾದ ಮೃದುವಾದ ಹೃದಯವನ್ನು ಎಂದು ಪಂಪಭಾರತ (ಪು - ೪೩೯)ರಲ್ಲಿ ಹೇಳಲಾಗಿದೆ.

ಮನಕ ಹಿಂದಿ ಕೋಶದಲ್ಲಿ 'ಜಂಗಮ' ಶಬ್ದಕ್ಕೆ ಚರವೆಂದು ಲಿಂಗಾಯತ ಶೈವ ಸಂಪ್ರದಾಯದ 'ಉಪಾಧಿ' ಎನ್ನುವ ಅರ್ಥಗಳಿವೆ. ಹಿಂದಿ ಶಬ್ದದ ಸಾಗರ ಕೋಶದಲ್ಲಿ ಜಂಗಮ ಶಬ್ದಕ್ಕೆ ಚಲಿಸುವ ದಾಕ್ಷಿಣಾತ್ಯ ಲಿಂಗಾಯತ: ಶೈವ ಸಂಪ್ರದಾಯದ ಗುರುಗಳು. ಇವರಲ್ಲಿ ಎರಡು ವಿಧ ವಿರಕ್ತರು ಹಾಗೂ ಗೃಹಸ್ಥರು ಎಂದು ಲಿಂಗಾಯತರಲ್ಲಿ ಇವರಿಗೆ

ವಿಶೇಷ ಎಂದು ಹೇಳಿದೆ.

ಮರಾಠಿಯ ಸುಲಭ ವಿಶ್ವಕೋಶ ಭಾಗ - ೨ (ಪು : ೧೮೨೫) ರಲ್ಲಿ 'ಜಂಗಮ' ಶಬ್ದಕ್ಕೆ 'ಹೀ ಲಿಂಗಾಯ ಗುರೂಚಿ ಜಾತೆ ಅಹೇ' ಇದು ಲಿಂಗಾಯತ ಗುರುಗಳ ಒಂದು ಜಾತಿ ಎಂದು ವಿವರಿಸಿದೆ.

ಮೋನಿಯರ್ ವಿಲಿಯಮ್ಸ್ ತನ್ನ ಡಿಕ್ಷನರಿಯಲ್ಲಿ ಜಂಗಮ ಶಬ್ದಕ್ಕೆ ಚಲನೆಯುಳ್ಳದ್ದು, ಶೈವ ಸಂತತಿ ಜಂಗಮ. ಇದು ವೀರಶೈವ ಧರ್ಮದಲ್ಲಿ ವಿಶಿಷ್ಟಾರ್ಥವುಳ್ಳ ಪಾರಿಭಾಷಿಕ ಶಬ್ದ ಅಷ್ಟಾವರಣದಲ್ಲಿ ಅದು ಮೂರನೆಯದು ಎನ್ನುತ್ತಾರೆ.

ಜಂಗಮ ಜ್ಞಾನಿ, ಸಂಚಾರಿ, ವಿರಕ್ತನಾಗಿರಬಹುದು. ಇಲ್ಲವೇ ಜ್ಞಾನಿಯಾಗಿ ಗೃಹಸ್ಥನಾಗಿರ ಬಹುದು. ಅವನು ಪಡೆಯುವ ಧಾರ್ಮಿಕ ಸಂಸ್ಕಾರ ದೀಕ್ಷೆಯಿಂದ ಸಮಾಜದಲ್ಲಿ ಅವನಿಗೆ ಗುರುಪದವಿ ದೊರೆಯುತ್ತದೆ. ಭಕ್ತರ ನಡೆ-ನುಡಿಗಳನ್ನು ತಿದ್ದಿ ಧಾರ್ಮಿಕ ಸಾಂಪ್ರದಾಯ ಗಳನ್ನು ಕಾಪಾಡತಕ್ಕವನು ಜಂಗಮನಾಗುತ್ತಾನೆ ಎಂದು ಡಾ : ನಂದಿಮಠರು ಅಭಿಪ್ರಾಯಿಸಿದ್ದಾರೆ.

ಆನಂದಗಿರಿಯ ಶಂಕರ ದಿಗ್ವಿಜಯದ ಶೈವಮತ್ ನಿರಾಕರಣಮ್ ಎಂಬ ಭಾಗದಲ್ಲಿ 'ಹೃದಿ ತ್ರಿಶೂಲಂ ಶಿರಸಿ ಪಾಷಾಣ ಲಿಂಗ ಚಧಾರಯಂತಿ ಜಂಗಮಾ' ಎನ್ನುವುದು ಉಲ್ಲೇಖಿತವಾಗಿದೆ. ಅಂದರೆ ಎದೆಯಲ್ಲಿ ತ್ರಿಶೂಲವನ್ನು ಮತ್ತು ತಲೆಯಲ್ಲಿ ಶಿವ ಲಿಂಗವನ್ನು ಧರಿಸುವವರು ಜಂಗಮರು ಎಂದು ಹೇಳಿದೆ.

ಕಿಟಲ್ ಕೋಶದಲ್ಲಿ ಜಂಗಮ ಶಬ್ದಕ್ಕೆ "Jangama moving, Locomotive, that which has motion living, a walking linga. A lingavanta (Sometimes married, sometimes unmarried) of a higher position brought about by a king of Diksha also called an Ayya whose feet and linga are worshipped by the other lingavantas who lives either by begging and eating the (Lingavantas or by trady) houses of the various castes of the lingavantas or by trading and made a guru" ಎಂದು ವಿಸ್ತಾರವಾಗಿ ವಿವರಿಸಲಾಗಿದೆ.

೧೨ನೇ ಶತಮಾನದಲ್ಲಿ ಶರಣರ ಸಾಹಿತ್ಯದಲ್ಲಿ ಬಳಸಲ್ಪಟ್ಟಿರುವ ಪಾರಿಭಾಷಿಕ ಶಬ್ದಗಳಲ್ಲಿ ಜಂಗಮ ಪದವು ಒಂದು. ಈ ಪದಕ್ಕೆ ವಿಸ್ತೃತ ತಾತ್ವಿಕ ಅರ್ಥ ಬಂದಿರುವುದು ರೋಚಕ ಸಂಗತಿ. ಜಡತ್ವಕ್ಕೆ ವ್ಯತಿರಿಕ್ತವಾದ ಚಲನಶೀಲತೆಯ ಚಲನಶೀಲ ಮೌಲ್ಯಗಳ ಚೈತನ್ಯದ ಪ್ರತೀಕವಾಗಿದೆ. 'ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ' ಎಂಬುವುದು ಅನುಭಾವದ ತೀರ್ಮಾನವನ್ನು ಸೂಚಿಸುತ್ತದೆ. ಜಂಗಮವು, ಜಂಗಮವ, ಜಂಗಮವಾಗಲು ಮುಂತಾದ ಪದ ರೂಪಗಳು ಕಂಡು ಬರುತ್ತವೆ. ಇಂಥ ಪ್ರಯೋಗದಲ್ಲಿ ತಾತ್ವಿಕತೆಯಲ್ಲದ, ಸಾಧನೆಯಲ್ಲದ, ಸಾಮೂಹಿಕತೆ, ಸಾಂಗಕತೆ ಧ್ವನಿತವಾಗುತ್ತದೆ. ಅನುಭಾವದಿಂದ ಹುಟ್ಟಿತು ಜಂಗಮವು ಎಂದು ಹೇಳಿದ ಅಲ್ಲಮಪ್ರಭುಗಳು ಜಂಗಮನರಿವು ಬೇಡಿದಲ್ಲಿ ಹೋಯಿತು. 'ಜಂಗಮ ಘನವೆನೆಂಬೆ ಬೇಡಿಕಿರಿದಾಯಿತು' ಎಂದು ಎಚ್ಚರಿಸಿದ್ದಾರೆ.

ಬಸವಣ್ಣನವರು ತಮ್ಮ ವಚನಗಳಲ್ಲಿ ಜಂಗಮ ಪದಗಳನ್ನು ಕೆಲವು ಕಡೆ ನಪುಂಸಕಾರ್ಥ ದಲ್ಲಿಯೂ, ಕೆಲವು ಕಡೆ ಪುಲ್ಲಿಂಗಾಥರದಲ್ಲಿಯೂ ಬಳಸಿರುವುದು ಅವರ ವಚನಗಳ ಮೂಲಕ ಕಂಡುಕೊಳ್ಳಬಹುದು. 'ಜಂಗಮದೊಳಗೆ ಲಿಂಗಯ್ಯಾನಿದ್ದಾನೆ'. ಜಂಗಮಕ್ಕಲ್ಲದೆ ಮಾಡೆನೀಧನವನು, 'ಲಿಂಗದ ಬಾಯಿ ಜಂಗಮ', ಜಂಗಮ ಮುಖ ಲಿಂಗವಾದ ಕಾರಣ ಎಂಬ ವಾಕ್ಯಗಳಲ್ಲಿ ಬಳಸಲಾಗಿರುವ ಜಂಗಮ, ಪದವು ಸಮಾಜವನ್ನು ಸೂಚಿಸುತ್ತದೆ ಯಲ್ಲದೆ ಅದು ಸಮಾಜದ ದೇವರು ಎಂಬ ಪ್ರಮೇಯವನ್ನು ಪ್ರಕಟಿಸುತ್ತದೆ.

ಶರಣರು ಕಲ್ಪಿಸಿಕೊಂಡ 'ಜಂಗಮ ಪರಿಕಲ್ಪನೆ' ವಿಶಾಲವಾದದ್ದು ಶರಣರು ಇದನ್ನು ಒಂದು ತತ್ವ ಕೊಟ್ಟರು. ಲಿಂಗ ಎಂಬುದು ಸಾಧಕನ ಕೈಯಲ್ಲಿದ್ದರೂ ಸ್ಥಾವರವೇ, ಗುಡಿಯಲ್ಲಿದ್ದರೂ ಸ್ಥಾವರವೇ ಅದನ್ನೊಂದು ಸಾಂಕೇತಿಕ ಸಾಧನವಾಗಿಸಿಕೊಂಡು ಮನಸ್ಸಿನಿಂದ ಭಾವಕ್ಕೆ ಭಾವದಿಂದ ಆತ್ಮಕ್ಕೆ ಅಧ್ಯಾತ್ಮದ ಆನಂದವನ್ನು ಆತ್ಮಿಕ ತಾದ್ಯಾತ್ಮವನ್ನು ದೈವದೊಡನೆ ಹೊಂದುವ ಮಾನಸೋಲ್ಲಾಸದ ಮುಕ್ತಿಯನ್ನು ಪಡೆಯುವುದಾಗಿದೆ. ಇದಕ್ಕೆ ಐಕ್ಯಸ್ಥಲದ ಗುರಿ ಎನ್ನುತ್ತಾರೆ. ಐಕ್ಯಸ್ಥಲದಲ್ಲಿ ಇಷ್ಟಲಿಂಗವು ಅವನಿಗೆ ದೈವವೆನಿಸಿ ಅದರ ಪೂಜೆಯ ಗೊಜಲನ್ನೂ ದೂರ ಮಾಡುತ್ತಾರೆ ಶರಣರು. ಜಂಗಮನೊಬ್ಬನೆ ಕೊನೆಯವರೆಗೂ ಮುನ್ನಡೆಯಿಸಿಕೊಂಡು ಹೋಗುವವನೆಂದರೆ ಜಂಗಮನು. ಇದರಿಂದ ಜಂಗಮನಿಗೆ ಸಾಮಾಜಿಕ ಸ್ಥಾನವಿದೆ. ಶ್ರೇಷ್ಠತ್ವವಿದೆ. ಚಲನೆ, ಜಾಗೃತಿ, ಜ್ಞಾನಗಳು ಜೀವಂತಿಕೆಯ ಲಕ್ಷಣಗಳು ಎಂದು ವಿಶಾಲಾರ್ಥವನ್ನು ನೀಡಿದ್ದು ನೋಡುತ್ತೇವೆ.

ಶರಣರು ಗುರು, ಲಿಂಗ, ಜಂಗಮ ಒಂದೇ ಎನ್ನದೆ ಜಂಗಮಕ್ಕೆ ತುಂಬ ಮಹತ್ವವನ್ನು ಒದಗಿಸಿದ್ದಾರೆ. ಅದಕ್ಕೆ 'ಗುರುಲಿಂಗ ಜಂಗಮ ಒಂದೆ ಎಂದರಿಯದೆ ಮಾಡುವ ಭಕ್ತಿಯೋ ಅನಾಚಾರ ಜಂಗಮ ವಿರಹಿತವಾದ ಭಕ್ತಿಯಿಲ್ಲ, ಭಕ್ತಂಗಾದರೂ ಜಂಗಮವೇ ಬೇಕು. ಗುರುಲಿಂಗವಾದರೂ ಜಂಗಮವೇ ಬೇಕು, ಜಂಗಮಕ್ಕಾದರೂ ಜಂಗಮವೇ ಬೇಕು' ಎಂದು ಮೊಳಿಗೆ ಮಾರಯ್ಯನವರ ಜಂಗಮದ ವಿಶೇಷತೆಯನ್ನು ವ್ಯಕ್ತಪಡಿಸಿದ್ದಾರೆ. ಈ ಮೂವರಲ್ಲಿ ಜಂಗಮ ಅತ್ಯಂತ ಶ್ರೇಷ್ಠ ಎಂದು ಹೇಲುವುದು ಅವಲೋಕಿಸಿದರೆ ಇದು ಜಂಗಮನ ಉನ್ನತ ವ್ಯಕ್ತಿತ್ವವೇ ಕಾರಣ. ಇವನ ಗುರಿ ವಿಶ್ವಕಲ್ಯಾಣ ಇದರಿಂದ ಸಮಾನ್ಯವಾಗಿ ಇವನ ಮೇಲೆ ಪೂಜೆ ಭಾವನೆ ಬಂದಿತ್ತು ಎನ್ನುವುದು ಖಚಿತ. ಹಾಗೆಯೇ ಸಂಸಾರ ಬಂಧನದಿಂದ ಮುಕ್ತನಾಗಿ ನಿಸ್ವಾರ್ಥ ಸರ್ವಸಂಗಪರಿತ್ಯಾಗಿಯೋ, ನಿರ್ಲಿಪಕನೋ, ನೊರ್ಮೋಹಿಯಾ ಯಾದ್ದುರಿಂದ ಇವನ ಪ್ರತಿಯೊಂದು ಯೋಗಕ್ಕೆ ನೋಡಿಕೊಳ್ಳುವುದು ಸಮಾಜದ ಜವಾಬ್ದಾರಿಯಾಗಿತ್ತು. ಹೀಗಾಗಿ ದಾಸೋಹದಲ್ಲಿ ಧನವ ಕೊಟ್ಟು ಜಂಗಮವನ್ನು ಸಂತೃಪ್ತಿ ಮಾಡಿಸಬೇಕೆಂಬ ಆಶೆ ಇಂದು ವೀರಶೈವ ಭಕ್ತರಲ್ಲಿ ಸ್ಮರಿಸಬೇಕಾದದ್ದು.

✓ ಜಂಗಮ ಪದವು ಮೇಲಿನ ನಾನಾ ರೀತಿಯ ಅರ್ಥವನ್ನು ಪಡೆದುಕೊಂಡಿದೆ. ಆದರೆ ಇಂದು ಜಂಗಮ ಎಂದಕ್ಷಣ ಜಂಗಮ ಜಾತಿಯವನು ಎಂದು ಪರಿಗಣಿಸುವುದು ಕಾಣುತ್ತಿದ್ದೇವೆ. ಅಂದರೆ ವಿಶಾಲ ಅರ್ಥಕ್ಕೆ ಜಾತಿ ಸೂಚಕವಾಗಿ ಬಳಕೆಯಾಗುತ್ತಿರುವುದು ನೋಡಬಹುದು. ಈ ಜಂಗಮರಲ್ಲಿ ಮೂರು ಪ್ರಕಾರವಾಗಿ ವಿಂಗಡಿಸಲಾಗಿದೆ.

೧. ಸ್ವಯ ಜಂಗಮ : ತನ್ನನ್ನು ತಾನು ಅರಿತವನು ಸ್ವಯ ಜಂಗಮ ಅಲ್ಲದೆ ಅತ್ತಿತ್ತ ಸುಳಿಯದಂತೆ ಒಂದು ನೆಲೆಯಲ್ಲಿರುವಾತನೆ ಸ್ವಯ ಜಂಗಮ.

೨. ಚರ ಜಂಗಮ : ತನ್ನನ್ನು ತಾನು ಗಲಿದು ಜಗದ ಜನರನ್ನೂ ಭಕ್ತಿಮಾರ್ಗದಿಂದ ಗಲಿಸಲು ಸಂಚರಿಸುವಾತನು ಚರ ಜಂಗಮನು.

೧. ಪರ ಜಂಗಮ : ಇನ್ನೂ ಇಹದ ಇರುವಿಕೆ ಚರಿಸುವಿಕೆಗಳನ್ನು ಮೀರಿ ಇದ್ದು ಇಲ್ಲದೆ ಹೊದಿದ್ದಯಾ ಹೊದ್ದದ ಸ್ಥಿತಿಗೇರಿ ಪರದಲ್ಲಿ ಪರಿಣಮಿಸುವವನೆ ಪರ ಜಂಗಮ(ಬಸವರಾಜ ಬ್ರ.ಪಂಡಿತಶಾಸ್ತ್ರಿ:೧೯೬೪:೧೯೨, ೯೯೪-೧೯೫). ಈ ರೀತಿಯಾಗಿ ಜಂಗಮನ ಕಾರ್ಯ

ಪ್ರವೃತ್ತಿಯ ಮೇಲೆ ಅವನ ವ್ಯಕ್ತಿತ್ವವನ್ನು ಅಳೆದು ಕೊಟ್ಟದ್ದು ಮೇಲಿನ ಮಾತುಗಳಿಂದ ಗಮನಿಸಬೇಕು. ಜೊತೆಗೆ ಭಕ್ತರ ಒತ್ತಾಯದ ಕಾರಣಕ್ಕಾಗಿ ಜಂಗಮರು ಅಲ್ಲಲ್ಲಿ ನೆಲೆಯಾಗಿ ನಿಲ್ಲಲು ಪ್ರಾರಂಭಿಸಿರಬೇಕೆಂದು ತೋರುತ್ತದೆ. ಬಹುತೇಕವಾಗಿ ಈ ಸ್ವಯ ಜಂಗಮ, ಚರ ಜಂಗಮ, ಪರ ಜಂಗಮ ಎಂಬ ಪರಿಕಲ್ಪನೆ ಹುಟ್ಟಿಕೊಂಡಿರಬೇಕೆಂದು ಸ್ಪಷ್ಟವಾಗುತ್ತದೆ.

ಹೀಗೆ ಶರಣರ ದೃಷ್ಟಿಯಲ್ಲಿ ತಿರುಗಾಟ, ಅವನು ಒಂದುಜಾಗಕ್ಕೆ ಅಂಟಿಕೊಳ್ಳದೆ ನಿರಂತರವಾಗಿ ಚಲಿಸುತ್ತಿದ್ದವನು ಜ್ಞಾನಕ್ಕೆ ಆತ್ಮೋದ್ಧಾರಕ್ಕಾಗಿ ಎಲ್ಲವನ್ನು ತ್ಯಾಜಿಸಿ ನಿತ್ಯಸಂಚಾರಿಯಾಗಿದ್ದ ವ್ಯಕ್ತಿಯೋ ಜಂಗಮ ಎನ್ನುವುದನ್ನು ವ್ಯಾಪಕವಾದ ಅರ್ಥವನ್ನೆ ನೀಡಿ ವಿಶಾಲಗೊಳಿಸಿದ್ದಾರೆ. ಮುಂದೆ ಈ ೧೨ನೇ ಶತಮಾನದ ಕಾಯಕ ಕ್ರಾಂತಿಯಾದಾಗ ಜಂಗಮರು ಸಹಜವಾಗಿ ಭಕ್ತರ ದಶಕರ್ಮವಿಧಿಗಳನ್ನು ಸಿದ್ಧಾಂತಾನುಸಾರ ನಡೆಸಿಕೊಡುವ ಪರಂಪರಾಗತ ತಮ್ಮ ಕಾಯಕವನ್ನು ಮುಂದುವರೆಸಿದರು. ಆದರೆ ಕಾಲಾನಂತರದಲ್ಲಿ ಶರಣರು ಕೊಟ್ಟ ಜಂಗಮ ಕಲ್ಪನೆ ಮರೆಯಾಗಿ ಬರಬರುತ್ತಾ ಒಂದು ಸಮುದಾಯವಾಗಿ ಪರಿಣಮಿಸಿ ಸಮಕಾಲೀನ ಜಂಗಮ ಜನ್ಮದಿಂದ ಪ್ರಾಪ್ತವಾಗಿದೆ. ಒಟ್ಟಿನಲ್ಲಿ ವಚನಕಾರರ ಜಂಗಮ ಪರಿಕಲ್ಪನೆಗೂ ಪ್ರಸ್ತೂತ ಸಮಾಜದ ಜಂಗಮ ಪರಿಕಲ್ಪನೆಗೂ ನಂಟು ಇಲ್ಲದಂತೆಯಾಗಿರುವುದು ಗಮನಿಸಬೇಕಾಗಿದೆ. ಏಕೆಂದರೆ ವೀರಶೈವ ಸಮಾಜದ ಬೆಳವಣಿಗೆಯಲ್ಲಿ ಅನೇಕ ಆಂತರೀಕ ಬದಲಾವಣೆಗಳು ಪರಿವರ್ತನೆಗಳು ನಡೆದು ಹೋಗಿವೆ.

ಮುಂದೆ ಜಂಗಮರು ತಮ್ಮ ಕಾಯಕವನ್ನು ಮುಂದುವರೆಸುತ್ತಾ ಭೀಕ್ಷೆ ಬೇಡುವ ತಮ್ಮ ಪಾರಂಪರಿಕ ಕಾಯಕ ಹಾಗೆಯೋ ಮುಂದುವರೆಯಿತು. ಜಂಗಮರ ಮಠಗಳಲ್ಲಿ ಧಾರ್ಮಿಕ ಕಾರ್ಯಗಳೊಂದಿಗೆ ಶಿಕ್ಷಣ ಕಾರ್ಯವೂ ಆರಂಭವಾಗಿ ಜಂಗಮರ ಮಠಗಳು ವಿದ್ಯಾ ಕೇಂದ್ರಗಳಾದವು. ಜನಸಂಖ್ಯೆ ಬೆಳೆದಂತೆ ಜಂಗಮರ ಸಂಖ್ಯೆಯು ಬೆಳೆಯಿತು. ಹೀಗಾಗಿ ತಮ್ಮ ಕಾಯಕದಿಂದ ಕುಟುಂಬ ಪೋಷಣೆಯಾಗುವುದು ಅನಿವಾರ್ಯವಾಗುತ್ತಾ ಬಂತು. ಇದರಿಂದ ಇನ್ನಿತರರಂತೆ ಹಲವಾರು ವೃತ್ತಿಗಳನ್ನು ಪಡೆದುಕೊಂಡು ಜೀವಿಸುತ್ತಿರುವರು. ಪುರಾಣ, ಪ್ರವಚನ, ನೌಕರಿಗಳಲ್ಲಿ ತೊಡಗಿಸಿಕೊಂಡರು. ಅನಿವಾರ್ಯವಾಗಿ ತಮ್ಮ ತಮ್ಮ ವೃತ್ತಿಯನ್ನು ಮುಂದುವರೆಸಿಕೊಂಡು ಬಂದಂತೆ ಅವರಿಗೆ ಸಾಮಾಜಿಕ, ಧಾರ್ಮಿಕ ಕಾರ್ಯಗಳು ಉಪವೃತ್ತಿಯಾಗಿ ಮಾಡಿಕೊಂಡು ಜಂಗಮ ಕಾರ್ಯಕ್ಷೇತ್ರವನ್ನು ಮುಂದುವರೆಸಿಕೊಂಡು

ನಡೆದರು. ಪ್ರಾಚೀನ ಕಾಲದಿಂದಲೂ ಪಾರಂಪರಿಕವಾಗಿ ಜಂಗಮರು ಬಹುತೇಕ ಮಹತ್ವದ ಕಾರ್ಯಗಳಲ್ಲಿ ತೊಡಗಿದ್ದರಿಂದ ಮಠಗಳಿಗೆ ಜಂಗಮ ವಟುಗಳನ್ನೆ ನೇಮಿಸುವಾಗ ಜಂಗಮ ವಾಟುಗಳನ್ನೇ ನೇಮಿಸುವ ಪದ್ಧತಿ ಆರಂಭವಾಯಿತು. ಇಂದಿಗೂ ಪೂರ್ವಕಾಲದಿಂದಲೂ ಜಂಗಮರು ಪೀಠದ ಮಠಾಧ್ಯಕ್ಷರಾಗಿ ಬರುತ್ತಿದ್ದಾರೆ.

೨೦ನೇ ಶತಮಾನದ ಉತ್ತರಾರ್ಧದವರೆಗೂ ಜಂಗಮರ ಸ್ಥಿತಿಯಲ್ಲಿ ಹೆಚ್ಚು ಏರುಪೇರು ಗಳಾಗಲಿಲ್ಲ. ಆದರೆ ಇತ್ತೀಚಿನ ಎರಡು ಮೂರು ದಶಕಗಳಲ್ಲಿ ಆದ ರಾಜಕೀಯ, ಸಮಾಜಿಕ, ಶೈಕ್ಷಣಿಕ ಬದಲಾವಣೆಗಳಿಂದ ಜಂಗಮರ ಕುಟುಂಬಗಳು ಹಿಂದುಳಿದಿದ್ದು ಕಾಣುತ್ತೇವೆ. ಕಾರಣ ಭಕ್ತರ ಭಕ್ತಿಯ ಅಲೆಗಳು ಕುಂಠಿತಗೊಂಡು ನಿಷ್ಠಾವಂತ ಭಕ್ತರ ಸಂಖ್ಯೆ ಕಡಿಮೆಯಾಗಿ ಭೀಕ್ಷೆಯಿಂದ ಬದುಕುವುದು ಅಸಾಧ್ಯವಾಯಿತು. ಮೊದಲಿನಿಂದ ಯಾವುದೇ ವೃತ್ತಿಯಲ್ಲಿ ಪರಿಣಿತ ಹೊಂದದ ಕಾರಣವಾಗಿ ಅನೇಕ ನೌಕರಿಯಲ್ಲಿ ತೊಡಗಿಸಿಕೊಳ್ಳಬೇಕಾಯಿತು. ಧಾರ್ಮಿಕ ಸಂಸ್ಕಾರ, ವಿದ್ಯಾ ಇವುಗಳೇ ಅವರ ಆಸ್ತಿಯಾಗಿದ್ದವು. ಇದರಿಂದ ದೇವರಕ್ಕಿಂತಲು ಹೆಚ್ಚು ಗೌರವವಿತ್ತು. ಇಂದಿಗೂ ಇದೆ. ಅಷ್ಟು ಉಳಿದುಬಂದಿಲ್ಲ. ಆದರೂ ಜಂಗಮ ಸಮುದಾಯಗಳು ಎಲ್ಲಾ ಕಡೆ ಇನ್ನು ತಮ್ಮ ತಮ್ಮ ಜಂಗಮ ಕಾಯಕ ಪರಂಪರೆ ತೊಡಗಿಸಿಕೊಂಡು ಕೆಲವರು ಬರುತ್ತಿದ್ದರೇ ಇನ್ನು ಕೆಲವು ಇತರ ವೃತ್ತಿಗಳಲ್ಲಿ ನಿರಂತರಾಗಿದ್ದಾರೆ.

## ೨. ಜಂಗಮರ ಪ್ರಾಚೀನತೆ

ಜಂಗಮ ವೀರಶೈವ ಧರ್ಮದ ಅಥವಾ ಲಿಂಗಾಯತ ಸಮಾಜದ ಪ್ರಮುಖನಾಗಿಯೂ, ಧರ್ಮದ ಸಾಕಾರ ಮೂರ್ತಿಯಾಗಿಯೂ ಜೊತೆಗೆ ಧರ್ಮ ಸಂರಕ್ಷಕರಾಗಿಯೂ ಸಮಾಜದಲ್ಲಿ ಸೇವೆ ಸಲ್ಲಿಸುತ್ತಾರೆ. ಇವರು ಕುಡಿತವಾಗಲಿ, ಮಾಂಸಾಹಾರವಾಗಲಿ, ಅನೈತಿಕ ವ್ಯವಹಾರ ವಾಗಲಿ, ಮತ್ತು ಧೂಮ್ರಪಾನದಿಂದಾಗಲಿ ತುಂಬಾ ದೂರವಿರುತ್ತಾರೆ. ಆದರೆ ಇಂದಿನ ಸಂದರ್ಭದಲ್ಲಿ ಕೆಲವರು ಮೇಲಿನ ಅಂಶಗಳು ತಮ್ಮ ಜೀವನದಲ್ಲಿ ಆಳವಡಿಸಿಕೊಳ್ಳುತ್ತಿದ್ದಾರೆ. ಆದರೂ ನಿತ್ಯವೂ ಸ್ನಾನ, ಶಿವಪೂಜೆಗಳನ್ನು ಬಿಡದೆ ನಡೆಸುತ್ತಾ ಒಳ್ಳೆಯ ಜೀವನವನ್ನು ನಡೆಸಬೇಕೆಂದು ಸಮಾಜವು ನಿರೀಕ್ಷಿಸುತ್ತದೆ. ಭಕ್ತರ ಮನೆಗಳಲ್ಲಿ ಅಂದರೆ ಜನನ, ಮರಣ

ಗಳಲ್ಲಿ ವಿವಾಹ ಹಬ್ಬಗಳಲ್ಲಿ ಅಲ್ಲದೆ ಹಲವಾರು ಧಾರ್ಮಿಕ ವಿಧಿ ಸಂಸ್ಕಾರಗಳಲ್ಲಿ ಇವರ ಸ್ಥಾನ ಅತೀ ಎತ್ತರದ್ದು. ಜಂಗಮರು ಮಗುವಿಗೆ ಲಿಂಗಧಾರಣೆ ಮಾಡಿ ಹೆಸರಿಡದ ಹೊರತು ಆ ಮಗು ಭವಿಯಾಗಿಯೇ ಇರುತ್ತದೆ. ವೀರಶೈವನಾಗುವುದಿಲ್ಲ ಏಕೆಂದರೆ ಧರ್ಮವನ್ನು ನೀಡುವವನು ಜಂಗಮ. ಇವರ ಪಾದೋದಕವನ್ನು ಜನ ತಮ್ಮ ಇಷ್ಟಲಿಂಗಗಳ ಮೇಲೆ ಹಾಕಿಕೊಂಡು ತೀರ್ಥವೆಂದು ಸೇವಿಸುವುದಾಗಲಿ, ಮನೆತುಂಬ ಸಿಂಪಡಿಸುವುದಾಗಲಿ, ಗರ್ಭಗುಡಿಯ ಶಿವಲಿಂಗದ ಮೇಲೆ ಕಾಲು ಇಡಿಸಿ ಅಭಿಷೇಕ ಮಾಡಿಸುವುದಾಗಲಿ, ಮನೆಯವರು ಎಲ್ಲರೂ ತೀರ್ಥವೆಂದು ತೆಗೆದುಕೊಳ್ಳುವುದಾಗಲಿ ನೋಡಿದರೆ ಇವರ ಸ್ಥಾನ ದೇವರಕ್ಕಿಂತಲು ದೊಡ್ಡದಾಗಿರುವುದು ಎನ್ನುವಲ್ಲಿ ಗಮನಿಸಬೇಕಾದದ್ದು.

ಭಾರತದಲ್ಲಿ ಶೈವಧರ್ಮ ತುಂಬ ಪ್ರಾಚೀನವಾದುದು ಶಿವಾಗಮಗಳು ಅದರ ಆಧಾರ ಗ್ರಂಥಗಳು. ದ್ರಾವಿಡ ಸಂಸ್ಕೃತಿಯ ನೆಲೆಗಳು ಶಿವಾಗಮಗಳಲ್ಲಿ ನೋಡಬಹುದಾಗಿದೆ. ಶೈವಧರ್ಮ ಮತ್ತು ವೈದಿಕ ಧರ್ಮದ ಸುಮಾರು ಪ್ರಮುಖಾಂಶಗಳನ್ನು ಗುರುತಿಸಬಹುದಾಗಿದೆ. ಏಕೆಂದರೆ ಇದರ ಅನೇಕ ಉದಾಹರಣೆಗಳು ಇವೆ ಮೂರ್ತಿ ಪೂಜೆ, ದೇವಾಲಯಗಳ ನಿರ್ಮಾಣ ಮುಂತಾದವುಗಳು. ವೈದಿಕ ಧರ್ಮ ಈ ಕಾರಣಕ್ಕಾಗಿ ಪ್ರಚ್ಛನ್ನ ಶೈವವಾಗಿ ಭಾರತದ ತುಂಬ ಪ್ರಚಾರಗೊಂಡಿದೆ. ಇದರಿಂದ ಇದರ ಅನೇಕ ಶಾಖೋಪ ಶಾಖೆಗಳು ಪಾಶುಪತ, ಕಾಳಾಮುಖ, ಲಾಕುಳ, ಕೌಳ ಮತ್ತು ಪ್ರತ್ಯಭಿಜ್ಞೆ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಇಂದಿಗೂ ದೇಶಾದ್ಯಂತ ಇದರ ಪ್ರಭಾವ ಕಾಣಬಹುದಾಗಿದೆ. ಶೈವಧರ್ಮದಲ್ಲಿ ಅನಾದಿ - ಆದಿ - ಮಹಾ - ಅನು - ಅವಾಂತರ ಹಾಗೂ ಪ್ರವರವೆಂದೂ ವಾಮ - ದಕ್ಷಿಣ - ಮಿಶ್ರ ಸಿದ್ಧಾಂತಗಳೆಂದೂ ಅಲ್ಲದೆ, ಸಾಮಾನ್ಯ ಮಿಶ್ರ - ಶುದ್ಧ ವೀರಶೈವ ಎನ್ನುವ ಪ್ರಭೇದಗಳಿವೆ ಎಂದು ಶ್ರೀ ನಿಜಗುಣರು ಕನ್ನಡದ ವಿಶ್ವಕೋಶವೆಂದು ಪ್ರಸಿದ್ಧವಾದ ತಮ್ಮ ವಿವೇಕ ಚಿಂತಾಮಣಿಯಲ್ಲಿ (ಪುಟ ೭೭ - ೭೮) ತಿಳಿಸಿದ್ದಾರೆ. ಶೈವ ಶಾಖೆಯಾದ ಪಾಶುಪಾತದಲ್ಲಿ, ಪಾಶುಪತ ಮತ್ತು ಮಹಾಪಾಶುಪತವೆಂದು ಎರಡು ವಿಧ. ಈ ಮಹಾಪಾಶುಪತ ಮತವೇ ವೀರಶೈವವೆಂದು ಅಗಮಗಳ ಮತ. ಮಹಾ ಪಾಶುಪತರು ಲಿಂಗಧಾರಿಗಳಾಗಿದ್ದರು. ಇವರೇ ವೀರಶೈವರೆಂದು ಶ್ರೀಪತಿ ಪಂಡಿತರ ಅಭಿಪ್ರಾಯ(ಶ್ರೀ ಷಣ್ಮುಖಯ್ಯ ಅಕ್ಕುರಮಠ:೨೦೦೧:೭). ಮುಂದುವರೆದು ನೋಡಿದರೆ ಶೈವರ ಕಾಲದಲ್ಲಿ ವೀರಶೈವ ಶಾಖೆಗಳು ಇದ್ದಿದ್ದವು ತದನಂತರ ಶೈವ ಶಾಖೆಗಳು ವೀರಶೈವ ಶಾಖೆಗಳಲ್ಲಿ ಸೇರಿಕೊಂಡಿದಂತೆ ತೋರುತ್ತದೆ.

ಮೇಲಿನ ವಿಷಯದಂತೆ ವೀರಶೈವರಿಗೆ ಪ್ರಾಚೀನಕಾಲದಲ್ಲಿ ಪಾಶುಪತರು, ವ್ರಾತ್ಯರು, ಕರಪೀಠಾರ್ಚಕರು, ಪಾಣಿಪೀಠಾಚಾರ್ಯರು, ಮುನಿಗಳು, ಜಂಗಮರು ಎನ್ನುವ ಹೆಸರಿನಿಂದ

ಕರೆಯುತ್ತಿದ್ದರು ಎಂಬುದು ಸರ್ವವಿಧಿತವಾಯಿತು. ಈ ದಿಸೆಯಲ್ಲಿ ನಡೆದಿರುವ ಸಂಶೋಧನೆಯ ಪ್ರಕಾರ ಅಂದರೆ ಭಾರತ ಮತ್ತು ಪಾಶ್ಚಿಮಾತ್ಯ ವಿದ್ವಾಂಸರ ಬರವಣಿಗೆಯ ಹಲವಾರು ಪ್ರಕಾರಗಳ ವಿಷಯಗಳ ಮೇಲೆ ಹೊಸ ವಿಚಾರಗಳನ್ನು ಹೊರ ಹೊಮ್ಮಿವೆ. ಅವುಗಳನ್ನು ಶ್ರೀ. ಜ.ಚ.ನಿ. ಅಧ್ಯಯನ ಪೀಠ ಬೆಂಗಳೂರರವರ ಶಿವಾಗಮ ಸೌರಭ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಇನ್ನೊಂದು ಗ್ರಂಥವಾದ ಇಂಗ್ಲೀಷನ THE VRATYAS IN ANCIENT INDIA ಇದರ ಪ್ರಕಾರ ಸುಮಾರು ಐದು ಸಾವಿರ ವರ್ಷಗಳ ಹಿಂದೆ ಆರ್ಯರು ಭಾರತವನ್ನು ಪ್ರವೇಶಿಸಿದರು. ಆರ್ಯರು ಮೂಲತ: ಅಗ್ನಿಪೂಜಕರು. ಆದರೆ ಋಗ್ವೇದಲ್ಲಿ ಮೂರ್ತಿಪೂಜೆ ಇಲ್ಲ ಎಂಬುವುದು ಪಾಶ್ಚಿಮಾತ್ಯರ ಅಭಿಪ್ರಾಯ. ಅಂದರೆ ಆರ್ಯರು ಭಾರತಕ್ಕೆ ಬರುವುದಕ್ಕಿಂತ ಪೂರ್ವ ಮೂಲ ನಿವಾಸಿಗಳಲ್ಲಿ ಮೂರ್ತಿ ಪೂಜೆ ಇತ್ತು ಎನ್ನುತ್ತಾರೆ. ಅದರಲ್ಲಿ ಶಿವಲಿಂಗ ಪೂಜೆ ತುಂಬ ಪ್ರಚಾರದಲ್ಲಿದ್ದು ಮತ್ತು ಪಾಶುಪತ ಮತಾಚಾರಣೆಗಳಿದ್ದವು. (ಮೂಲ ನಿವಾಸಿಗಳ ಭಾಷೆ ಪೂರ್ವ ದ್ರಾವಿಡ) ಇದನ್ನು ಅಗ್ನಿಪೂಜಕರಾದ ಆರ್ಯರ ವಿಕೋಪಕ್ಕೆ ಕಾರಣವಾಯಿತು. ಮೂಲ ನಿವಾಸಿಗಳ ಭಾಷೆ ಪೂರ್ವ ದ್ರಾವಿಡ ಮತಾಚರಣೆ ಪಾಶುಪತ ಧರ್ಮ ಇದಕ್ಕಾಗಿ ಇಬ್ಬರಲ್ಲಿ ಸತತ ಹೋರಾಟ ಅನಿವಾರ್ಯವಾಗಿತ್ತು. ಆರ್ಯರು ಮೂಲ ನಿವಾಸಿಗಳಿಗೆ ದಾಸ, ದಸ್ಸು, ವ್ರಾತ್ಯಾ ಮುಂತಾದ ಶಬ್ದಗಳಿಂದ ಕರೆಯುತ್ತಿದ್ದರು. (ರಂಭಾಪೂರಿ ಬೆಳಕು ದ್ವೈಮಾಸಿಕ ಪತ್ರಿಕೆಯ ಡಿಸೆಂಬರ ೧೯೯೬ ವೇದಕಾಲದ ಜಂಗಮ ಎಂಬ ಲೇಖನದಿಂದ ತಿಳಿದು ಬರುತ್ತದೆ.)

'ವ್ರಾತ್ಯಾವಾ ಇದ ಮಗ್ರ ಅಸೀತ್' (ಸ್ವಪ್ಪತಿ ಸಂಹಿತೆ) ಅಂದರೆ ಜಗತ್ತಿನಲ್ಲಿ ಮೊಟ್ಟ ಮೊದಲ ಇದ್ದವನು ಪ್ರಾತ್ಯಾಎಂದು ಹೇಳಿದೆ.

ವ್ರಿಯಂತೆ ದೇಹೇನ ಇತಿ ವ್ರತಾ :
ತೇಷಾಂಸ ಮೂಹಾ: ವ್ರಾತಾ : ಜೀವ ಸಮೂಹ :
ತೇಷಾಂಪತಿ ! ವ್ರಾತ್ಯಾ : ಪರಮೇಶ್ವರ :(ನಂಜುಂಡ ದೀಕ್ಷಿತ:೧೯೧೨:೨೩.೨)

ಎಂದು ವ್ಯಾಖ್ಯಾನಿಸಿದೆ. ಅಂದರೆ ದೇಹ ದಾರುಣ ಮಾಡಿರುವ ಜನರಿಗೆ ವ್ರಾತ : ಎಂದು ಹೆಸರು. ಇಂತಹ ಜೀವ ಸಮೂಹಕ್ಕೆ ಪತಿಯಾದ ಪರಮೇಶ್ವರನು ವ್ರಾತ್ಯ. ಶಿವ ಸಹಸ್ರ ನಾಮ ಭಾಷ್ಯ ಪದದಲ್ಲಿ ಪಶುಪತಿ ಶಬ್ದಕ್ಕೆ ನೀಡಿರುವ ನಿರ್ವಾಚನವು ಇದನ್ನು ಹೋಲುತ್ತದೆ (ಜಯದೇವ ಶರ್ಮಾ:೧೯೯೧:೫೮೫). ಹುಟ್ಟು ಸಾವುಗಳ ಭಾವಚಕ್ರಕ್ಕೆ ಒಳಗಾಗಿರುವ ಜೀವರು ಪಶುಗಳು. ಅವರಿಗೆ ಪತಿಯಾದವನು ಪಶುಪತಿ ಎನ್ನಲಾಗಿದೆ.

'ಆತ್ಮನ ! ಪಶವ : ಪ್ರೋಕ್ತಾ : ಸರ್ವೇ ಸಂಸಾರ ವರ್ತಿನ : ತೇಷಾಂ ಪತಿತ್ವತ್ ದೇವೇಶ: ಶಿವ : ಪಶುಪತಿ : ಸ್ಮೃತ :' ಈ ಶ್ಲೋಕದಿಂದ ತಿಳಿಯವುದೇನೆಂದರೆ ವ್ರಾತ್ಯ ಮತ್ತು ಪಶು ಪದಗಳೆರಡು ಒಂದೇ ಅರ್ಥವನ್ನೇ ನೀಡಬಲ್ಲವೆಂದು ತಿಳಿಯುತ್ತದೆ. ಸಿದ್ಧಾಂತ ಶಿಖಾಮಣಿ ಯಲ್ಲಿ ವೀರಶೈವವನ್ನು ಪಶುಪತ ಮತದಸಾರವೆಂದು ಕರೆಯಲಾಗಿದೆ (ನಂಜುಂಡರಾಧ್ಯ ಎಂ.ಜಿ.:೧೯೬೬:೫). ಹೀಗಾಗಿ ಭಾರತದ ಮೂಲ ನಿವಾಸಿಗಳು ವ್ರಾತ್ಯರು ಎಂದಾಯಿತು. ಮುಂದೆ ಇನ್ನು ಅನೇಕ ವಿದ್ವಾಂಸರು ವ್ರಾತ್ಯ ಪದದ ಬಗ್ಗೆ ವ್ಯಾಖ್ಯಾನವನ್ನು ಹೇಳಿರುವುದು ತಿಳಿದುಕೊಂಡು ವಿಚಾರಕ್ಕೆ ಬರಬಹುದು.

೧. ಜೆ. ಡಬ್ಲು ಹಾಯರ್ - ವ್ರಾತ್ಯರು ಬ್ರಾಹ್ಮಣೇತರರು ಎಂದಿದ್ದಾರೆ.

೨. ಡಿ. ಕರ್‌ಮರ್‌ಕರ್ ಪ್ರಕಾರ - ವ್ರಾತ್ಯರು ತಮ್ಮದೇ ಆದ ತಾತ್ವಿಕ ಹಿನ್ನಲೆಯನ್ನು ಹೊಂದಿದ್ದರು ಎನ್ನುತ್ತಾರೆ.

೩. ಜೆ. ಚಾರ್‌ಪೆಂಟಿಯಾರ್ - ವ್ರಾತ್ಯರು ಪ್ರಾಚೀನ ಶಿವೋಪಾಸಕರು ಎಂದು ಹೇಳಿದ್ದಾರೆ. ಮುಂದೆ ಹಾಯರ್ ಅವರು ವ್ರಾತ್ಯರು ಯೋಗಿಗಳ ಸಂಪ್ರದಾಯಕ್ಕೆ ಸೇರದವರು ಎಂದು ಅಭಿಪ್ರಾಯಪಡುತ್ತಾರೆ. ಇವರ ಅಭಿಪ್ರಾಯದ ಪ್ರಕಾರ ಭಾರತದ ಮೂಲ ನಿವಾಸಿಗಳು ವ್ರಾತ್ಯರು. ಈ ವ್ರಾತ್ಯರೇ ಶಿವ ಅರ್ಚಕರು ಶಿವಪೂಜೆ ಮಾಡುವರು ಮತ್ತು ಶಿವಯೋಗಿಗಳು (ಜಂಗಮ) ಆಗಿದ್ದರು ಎಂದರ್ಥ. ಈ ಮೇಲಿನ ಮಾತುಗಳು ಆಗಮದ ಜಂಗಮ ಶಬ್ದ ನಿರ್ವಚನವನ್ನು ಹೋಲುತ್ತದೆ. ವ್ರಾತ್ಯರು ಪ್ರಾಚೀನ ಶಿವೋಪಾಸಕರು ಯೋಗಿಗಳ ಸಂಪ್ರದಾಯಕ್ಕೆ ಸೇರಿದವರು ಜನೋಪಕಾರಿಗಳು ಲೋಕಕಲ್ಯಾಣಕ್ಕಾಗಿ ಎಲ್ಲೆಡೆ ಸಂಚರಿಸುವ ಯೋಗಿಗಳು ಚರ ಜಂಗಮರು ಪರಮೇಶ್ವರನೆ ತನ್ನ ಹಣೆಗಣ್ಣು ಮತ್ತು ವಾಮಭಾಗದ ಗಿರಿಜೆಯನ್ನು ದೂರವಿಟ್ಟು ಸಾಮಾನ್ಯ ಮಾನವನಂತೆ ಜಂಗಮ ರೂಪಧರಿಸಿ ಸಂಚರಿಸುತ್ತಾನೆ ಎಂದು ಹೇಳಲಾಗಿದೆ. ಈ ಮಾತನ್ನೇ ಆಚಾರ್ಯ ಶಂಕರರು ಹೇಳಿರುವ ಮಾತು ವ್ರಾತ್ಯ ಎಂದರೆ ಸಂಸ್ಕಾರವಿಲ್ಲದವರು, ಅವರು ಪ್ರಕೃತಿಯಿಂದಲೇ ಶುದ್ಧರಾದವರು ಎಂದು ವಿವರಿಸಿರುವುದು ತುಂಬ ಸೂಕ್ತವಾಗಿದೆ.

ಯಜುರ್ವೇದ ಮತ್ತು ಅಥರ್ವವೇದಗಳ ಮಧ್ಯಂತರ ಕಾಲದಲ್ಲಿ ಶಿವನ ಅಷ್ಟ ಮೂರ್ತಿತ್ವವು ರೂಪಗೊಂಡಿತು. ಅದರಲ್ಲಿ ಶಿವನಿಗೆ ಪಶುಪತಿ ಎಂದು ಹೇಳಲಾಗಿದೆ. ಯಜುರ್ವೇದದಲ್ಲಿ ಶಿವನಿಗೆ ವ್ರಾತ್ಯನಾಂಪತಿ ಎಂದು ಹೇಳಲಾಗಿದೆ. ಋಗ್ವೇದದಲ್ಲಿ ವ್ರಾತ್ಯ ಪದವಿಲ್ಲ ಸಿಂಧೂ

ಕಣಿವೆಯ ನಾಗರೀಕತೆಯಲ್ಲಿ ಶಿವನು ರುದ್ರನೆಂದೂ, ಅಸೂರನೆಂದು ವರ್ಣಿತನಾಗಿದ್ದಾನೆ. ಶಿವನು ಅಲೆಮಾರಿ (ಜಂಗಮ) ದೇವತೆ ಲೋಕಕಲ್ಯಾಣಕ್ಕಾಗಿ ನಾಲ್ಕು ದಿಕ್ಕುಗಳಲ್ಲಿಯೂ ಸಂಚರಿಸುವವನು ಶಿವನಿಗೆ ಯಜ್ಞಾಧಿಪತ್ಯ ಅಥರ್ವದಲ್ಲಿ ಋಷಿಮುನಿಗಳ ಸ್ಥಾನ, ಶಿವ - ಶಕ್ತಿ ತಂತ್ರಗಳ ಉಲ್ಲೇಖ ವ್ರಾತ್ಯರ ಸಂಪರ್ಕದಿಂದ ಭಾರತ ಸಂಸ್ಕೃತಿಯಲ್ಲಿ ಹೊಸ ಅಂಶಗಳು ಚೌದರಿಯವರ ಗ್ರಂಥದಲ್ಲಿ ಉಲ್ಲೇಖಿತವಾಗಿದೆ. ಒಟ್ಟಿನಲ್ಲಿ ಚೌಧರಿಯವರು ಪ್ರಬಂಧವನ್ನು ಪ್ರಕಟಿಸಿ ಮಹತ್ವ ವಿಚಾರಗಳು ಹೊರಹಾಕಿದ್ದಾರೆ. ಏಕೆಂದರೆ ವ್ರಾತ್ಯರ ಬಗೆಗೆ ಕೊಟ್ಟಿರುವ ವಿವರಣೆ ಸಿಂಧೂ ನಿವಾಸಿಗಳಲ್ಲಿ ಮುಖ್ಯರಾದ ವ್ರಾತ್ಯರಿಗೆ ಅನ್ವಯಿಸುತ್ತದೆ. ಅದಲ್ಲದೆ ಯಾಗ ಮಾಡದವರು, ಲಿಂಗಪೂಜಾಸಕ್ತರು ಮುಂತಾದ ಮಾತುಗಳು ವ್ರಾತ್ಯ ಪಾಶುಪತರಲ್ಲಿನ ವಿಶಿಷ್ಟ ಗುಣಗಳನ್ನು ಕಾಣಬರುತ್ತದೆ.

ಜಟಿನೋ ಮುಂಡಿನೋ ವಾಪಿ ಶಿಖಿನೋ ವ್ಯಾಪಿ ಸಂತತಂ
ಭಿಕ್ಷಾಶಿನೋ ಭಯಾತೀತಾ : ಕಾಷಾಯ ವಸನಾಸ್ತಥಾ :

ವ್ರಾತ್ಯ ಪಾಶುಪತರನ್ನು ವೈದಿಕ ಆರ್ಯರು ಜಂಗಮರೆಂದು ಆಗಮಗಳಲ್ಲಿ ಗೌರವಿಸುತ್ತಿರುವುದು ಮೇಲಿನ ಪದ್ಯದಿಂದ ಅರಿಯಬಹುದಾಗಿದೆ. ಅಂದರೆ ಜಟನಗಳು, ಶಿಖಿನ್‌ಗಳೂ ಮತ್ತು ಕಾಷಾಯ ವಸ್ತ್ರ ಧಾರಿಗಳು ಪೂರ್ವದಿಂದ ಅಥವಾ ಅನಾದಿಕಾಲದಿಂದಲೂ ಪೂಜ್ಯರೆನಿಸಿರುವುದು ತಿಳಿಯುತ್ತದೆ. ಋಗ್ವೇದದ ಮುನಿಸೂಕ್ತದಲ್ಲಿ ಬರುವ ಜಾತಿ, ಮತ, ವಿಪ್ರಜಾತಿ ಎಂಬ ಮುಂತಾದ ಏಳು ಜನ ಋಷಿಗಳ ಬಗ್ಗೆ ವರ್ಣಿತವಾಗಿದೆ. ಹೀಗಾಗಿ ಈ ಮುನಿಸೂಕ್ತದ ಮುನಿಪದವು ಆರ್ಯೇತರ ಭಾಷೆಗೆ ಸೇರುವುದು ಎಂದು ವಿದ್ವಾಂಸರು ತರ್ಕಿಸಿದ್ದಾರೆ. ಕೇಶಿನ್‌ಗಳು ಮುಂಡಿನ್‌ಗಳು ಆಗಿದ್ದ ಮುನಿಗಳು ವಾತರಶನಾ : (ವಾತ ಆಶನಂಯೋಷಾಂತ) ಗಾಳಿಯೋ ಆಹಾರವಾಗಿ ಉಳ್ಳವರು ಪಿಶಗಾ : ಅಂದರೆ ಕಪಿಲ ವರ್ಣದ ಅರ್ಥಾತ್ ಮಾಸಿದ ವಸ್ತ್ರ ಧರಿಸಿರುವರು (ಕಾವಿಯ ವಸ್ತ್ರ ವಿರಬಹುದು) ಉನ್ಮಾದಿತಾ : ಅಂತರೀಕ್ಷದಲ್ಲಿ ಸಂಚರಿಸುವುದು ಮುಂತಾಗಿ ಬಣ್ಣಿಸಲಾಗಿದೆ. ಅತೀಂದ್ರಿಯಾರ್ಥ ದರ್ಶಿಗಳಾದ ಇವರು ಲೌಕಿಕ ವ್ಯವಹಾರವನ್ನು ಬಿಟ್ಟು ವಾಯುಮಾರ್ಗದಲ್ಲಿ ಸಂಚರಿಸುತ್ತಿದ್ದರು. ಅಲ್ಲದೆ ಗಗನಗಾಮಿಗಳು ಎಂದೆಲ್ಲಾ ಹೊಗಳಲಾಗಿರುವ ಮುನಿಗಳು ನಿರಂಜನ ನಿರಾಭಾರ ಪ್ರಣವ ಸ್ವರೂಪ ಮುಂತಾದ ವಿಶೇಷಣವುಳ್ಳ ಪಾಶುಪತ ಜಂಗಮರೇ ಆಗಿರುತ್ತಾರೆ. ಮೇಲಾಗಿ ಇವರು ವ್ರಾತ್ಯ ಪಾಶುಪತರು ಎಂಬುದನ್ನು ಸಮರ್ಥಿಸುವ ಅಂಶವನ್ನು ಶ್ರೀ ನರೇಂದ್ರನಾಥ್ ಘೋಷ್‌ರ 'ಕ್ಷೇತ್ರರಾಜ ಕಾಶಿ' (ಕಸ್ತೂರಿ ಮಾರ್ಚ ೧೯೫೭) ಎಂಬ ಲೇಖನದಿಂದ ವೇದ್ಯವಾಗುತ್ತದೆ (ನರೇಂದ್ರನಾಥ ಘೋಷ:೧೯೫೭:೯).

ಸಿಂಧೂ ಕಣಿವೆಯಲ್ಲಿ ವಾಸಿಸುತ್ತಿದ್ದ ಅನೇಕ ರಾಜ್ಯ ವಂಶಗಳಲ್ಲಿ ಕಾಶೀವಂಶಕ್ಕೆ ಸೇರಿದವರಲ್ಲಿ ಕೆಲವರು ಗಂಗಾಕಣಿವೆಯ ಈಗಿನ ವಾರಾಣಸಿ ಇರುವ ಸ್ಥಳಕ್ಕೆ ಬಂದು ನೆಲೆಸಿದ್ದರು. ಆಗ ಆ ಭಾಗವನ್ನು ಆಳುತ್ತಿದ್ದವರು ವ್ರಾತ್ಯ. ರಾಜವನ್ನು ಇವರು ಜೀವನದಲ್ಲಿಯು ಮತ್ತು ವಿಚಾರಗಳಲ್ಲಿಯು ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜ್ಯ ಭಾರ ಪದ್ಧತಿಯು ಅವರ ಬೌದ್ಧಿಕ ಹೆಚ್ಚಳಕ್ಕೆ ಸಾಕ್ಷಿಯಾಗಿತ್ತು. ಆರ್ಯ ಬ್ರಾಹ್ಮಣರು ವ್ರಾತ್ಯರಿಂದ ಹಲವಾರು ವಿಷಯ ಗಳನ್ನು ಉತ್ಸಾಹದಿಂದ ಕಲಿತರು(ಅವರೇ:೯). ಈ ನರೇಂದ್ರನಾಥ ಘೋಷರು ಅಭಿಪ್ರಾಯ ಪಡುವಂತೆ ಈ ವ್ರಾತ್ಯಾರಾಜರಿಗೆ ವ್ರಾತ್ಯಪಶುಪತ ಜಂಗಮರೆಂದು ಹೇಳಬಹುದು. ಈ ಕ್ರಿ.ಶ. ೬ನೇ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಪಾಶುಪತ ಜಂಗಮರು ಅನೇಕ ರಾಜಮಹಾರಾಜರುಗಳ ರಾಜಗುರುಗಳಾಗಿ ಸೇವೆ ಸಲ್ಲಿಸುತ್ತಿದರು ಎಂದು ಅನೇಕ ವಿದ್ವಾಂಸರ ಮತ, ಕಾಶೀವಂಶದ ರಾಜ್ಯರಲ್ಲಿ ಶಿವೋದಾಸ ಮತ್ತು ಅವನ ಮಗ ದಿವೋದಾಸ ಎಂಬುವರು ಕಾಶಿನಗರವನ್ನು ಸ್ಥಾಪಿಸಿದರು. ಇವರ ಕಾಲವನ್ನು ರಾಹುಲ ಸಾಕೃಂತ್ಯಯ ಅವರು ೧೦೦ ಎಂದಿದ್ದಾರೆ(ಶರ್ಮ ಬಿ. ಎಂ.:೯೮೧:೧೦) ಮುಂದೆ ಇದು ಕಾಶಿ ಎಂದೇ ಹೆಸರಾಯಿತು ವ್ರಾತ್ಯಜಂಗಮರು ಆರಾಧಿಸುತ್ತಿದ್ದ ಶಿವನು ಆರ್ಯರಿಗೆ ದೈವನಾದ ಆಗ ಈ ಅರಸರು ತಮ್ಮ ಗುರುಗಳಾದ ವ್ರಾತ್ಯ ಜಂಗಮಯತಿಗಳಿಗೆ ಕಾಶಿನಗರ ಬಳಿ ಸಾಕಷ್ಟು ಭೂದಾನವನ್ನು ನೀಡಿ ಅದಕ್ಕೆ 'ಜಂಗಮವಾಡಿ' ಎಂದು ನಾಮಕರಣ ಮಾಡಿದರು. ಮುಂದೆ ಇದು ಸ್ವಾತಂತ್ರ ನಗರವೆಂದು ಘೋಷಿಸಿದರು. ಇದೇ ಸ್ಥಳವನ್ನೇ ದಿ : ಮದನ ಮೋಹನ ಮಾಳವಿಯವರು ಜಂಗಮವಾಡಿ ಮಠಾಧೀಶರ ಅನುಮತಿಯಿಂದ ಹಿಂದೂ ವಿಶ್ವವಿದ್ಯಾಲಯ ಸ್ಥಾಪಿಸದ್ದು ಸರ್ವ ವಿಧಿತ. ಮುಂದೆ ಆ ಕ್ಷೇತ್ರ ಜಂಗಮರು ವಾಸಿಸುವ ವಾಡಿಯಾಗಿ ಇಂದಿಗೂ ಕಂಡುಬರುತ್ತದೆ. ಇದರ ಪ್ರಕಾರ ವ್ರಾತ್ಯರೇ ಪಶುಪತಿ ಇಂದಿನ ಜಂಗಮರ ಮೂಲ ಅಥವಾ ಪ್ರಾಚೀನರು ಎನ್ನಬಹುದು.

ಈ ಮೇಲಿನ ವ್ರಾತ್ಯ ಪಶುಪತ ಜಂಗಮರಿಗೂ ಮತ್ತು ಜಂಗಮವಾಡಿ ಮಠದವರಿಗೂ ಸಂಬಂಧವನ್ನು ಸೂಚಿಸಲಾಯಿತು. ಇದರಿಂದ ಆಗಮದಲ್ಲಾಗಲಿ, ಶಿವ ಸೌರಭದಲ್ಲಾಗಲಿ, ವೇದಗಳಾಗಲಿ ಇತರ ಮೇಲಿನ ಎಲ್ಲಾ ವಿಷಯಗಳಿಂದ ತಿಳಿಯುವುದರಿಂದ ಅಂದಿನ ವ್ರಾತ್ಯ ಜಂಗಮರು ಇಂದಿನ ಜಂಗಮರ ಮೂಲ ಪುರುಷರು ಎನ್ನಬಹುದಾಗಿದೆ. ಅಲ್ಲದೇ ಈ ಪಾಶುಪತ ವೈಶಿಷ್ಟ್ಯವನ್ನು ನೋಡಿದರೆ ಋಗ್ವೇದ ಕಾಲದಲ್ಲಿದ್ದ ಪಾಶುಪತರು ಕರಪೀಠಚಾರಕ ರೆಂದು ಶ್ರೀ ಕರಭಾಷ್ಯದಲ್ಲಿ ಶ್ರೀಪತಿ ಪಂಡಿತರಾಧ್ಯರು ಪ್ರತಿಪಾದಿಸಿದ್ದಾರೆ.

## 'ಅಯಂ ಮೇ ಹಸ್ತೋ ಭಗವಾನ್'

ಶಿವದೀಕ್ಷಿತನಾದ ಈ ಪಾಶುಪತ ಜಂಗಮನು ತನ್ನ ಎಡಗೈ ಹಸ್ತ ಪೀಠದಲ್ಲಿ ಇಷ್ಟ ಲಿಂಗವನ್ನಿಟ್ಟು ಪೂಜಿಸುವುದರಿಂದ ಎಡಹಸ್ತವು ಭಗವಾನ ಸ್ವರೂಪ ಪಡೆದಿದೆ. ಇಷ್ಟಲಿಂಗವನ್ನೂ ಗಂಧ ಪುಷ್ಪಾದಿಗಳಿಂದ ಭಕ್ತಿಯಿಂದ ಪೂಜಿಸುವ ಬಲಹಸ್ತವೂ ಕೂಡ ಲಿಂಗರೂಪ ಭಗವಂತನೇ ಆಗಿದೆ. ಈ ಜಂಗಮರ ಹಸ್ತಸ್ಪರ್ಶದಿಂದ ಮೃತರು ಜೀವಂತರಾಗುತ್ತಾರೆ ಎಂದು ಶಿವಯೋಗಿಗಳ ಗುಣಗಾನ ಮಾಡಲಾಗಿದೆ. ಈ ಮಾತನ್ನು ಋಗ್ವೇದ ಸ್ಮೃತಿಯಲ್ಲಿ ಅಯಂ ಮಾತಾ ಅಯಂ ಪಿತಾ ಅಯಂ ಜೀವಿತ. ಅಂದರೆ ಲಿಂಗಪೂಜೆ ಮಾಡುವುದರಿಂದ ಮಾನವರಿಗೆ ಎಲ್ಲಾ ಕಾಲದಲ್ಲಿ ಪಾಶುಪತ ರಕ್ಷಿಸುತ್ತದೆ. ಇದರಿಂದ ಅದು ತಂದೆ - ತಾಯಿಗಿಂತ ಮಿಗಿಲಾದದ್ದು ಎನ್ನಲಾಗಿದೆ. ಪಾಶುಪತಿಯನ್ನು ಲಿಂಗರೂಪದಲ್ಲಿ ಪೂಜಿಸಿ ಧರಿಸು ವ್ರತವೇ ಪಾಶುಪತ ವ್ರತ ಅಥವಾ ಶಿರೋವ್ರತವೆಂದು ಪೂರ್ವೋಕ್ತ ಸೂಕ್ತ ಸಂಹಿತೋಕ್ತಿಗಳಿಂದ ಸ್ಪಷ್ಟವಾಗುತ್ತದೆ.

'ಪಾಷಾಣ ಲಿಂಗಂ ಚ ಧಾರಿಣ: ಜಂಗಮಾ :
ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣ : ಪಾಶುಪತಾ :'

ಎಂದು ಶಂಕರ ವಿಜಯದಲ್ಲಿ ಹೇಳಲಾಗಿದೆ(ಜೋಶಿ ಶಂ.ಭಾ:೬೨೫). ಶಿರೋವ್ರತವೆಂದರೆ ತಲೆಯಲ್ಲಿ ಲಿಂಗವನ್ನು ಧರಿಸುವ ವ್ರತವೆಂದು ಸ್ಪಷ್ಟ ಜೊತೆಗೆ ಭುಜದಲ್ಲಿಯೂ ಲಿಂಗವನ್ನು ಕಟ್ಟಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ತಲೆ, ಕರ ಮತ್ತು ಭುಜಗಳಲ್ಲಿ ಇಷ್ಟಲಿಂಗ ಇಟ್ಟುಕೊಂಡು ಪೂಜೆ ಮಾಡುತ್ತಿದ್ದರು ಎಂದು ತಿಳಿದು ಬರುತ್ತದೆ. ಜೊತೆಗೆ ಅಂಗೈಯಲ್ಲಿ ಲಿಂಗವಿಟ್ಟು ಪೂಜೆ ಮಾಡುವುದು ಕೂಡ ಸ್ಕಂದ ಪುರಾಣದಿಂದ ತಿಳಿದು ಬರುತ್ತದೆ.

'ಯೋ ಹಸ್ತ ಪೀಠೇ ನಿಜಮಿಷ ಲಿಂಗಂ ವಿನ್ಯಸ್ಯ ತಲ್ಲೀನ ಮನ: ಪ್ರಸಾಕ :
ಬಾಹ ಕ್ರಿಯಾ ಸಂಕುಲ ನಿಸ್ಪೃಹಾತ್ಮಾ ಸಂಪೂಜಯತ್ಸಂಸ ವೀರಶೈವ :'
(ಅವರೇ:೬೨೦)

ಅಂದರೆ ಯಾವನು ತನ್ನ ವಾಮಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿಟ್ಟು ಅದರಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿ ಬಾಹ್ಯ ಕ್ರಿಯೆಗಳನ್ನು ದೂರ ಮಾಡಿ ಭಕ್ತಿ ಶ್ರದ್ಧೆಗಳಿಂದ ಪೂಜಿಸುವನೋ ಅವನೇ ವೀರಶೈವನೆಂದು ಹೇಳಲಾಗಿದೆ.

ಪಂಪ ಕವಿಯ (ಕ್ರಿ.ಶ. ೯೪೧) ಆದಿ ಪುರಾಣದಲ್ಲಿ 'ಕುಲಿಂಗಿಗಳಂ ಜಗಂ ಸೇವಿಸುಗುಂ' ಎನ್ನಲಾಗಿದೆ. ಜಿನ ಸೇನನ ಮಾಹಾಪುರಾಣದಲ್ಲಿಯೂ ಉಲ್ಲೇಖಗೊಂಡಿದೆ. ವಡ್ಡರಾಧನೆ

ಯಲ್ಲಿ 'ಪುಲಿಂಗಿಗಳ್ ಅರಸರ್ಕಳಿಂ ಪೂಜಿಸೆ ಪಡುವರ' ಎಂದು ಹೇಳಲಾಗಿದೆ. ಇಲ್ಲಿ ಹೀಗೆಲ್ಲಾ ಹೇಳುವುದಕ್ಕೆ ಲಿಂಗಧಾರಿ ಪಾಶುಪತ ಮಹೇಶ್ವರರು ರಾಜಗುರುಗಳಾಗಿದ್ದುದನ್ನು ಜೈನರು ಸಹಿಸದಿದ್ದುದೇ ಕಾರಣ ಎಂದು ಕಂಡುಬರುತ್ತದೆ.

ಆಮೇಲೆ ಮಹಾಭಾರತದಲ್ಲಿ ಪಂಪಕವಿಯು (ಅನುಪರ್ವ ಅಧ್ಯಯನ - ೨೨) ರಲ್ಲಿ ಎಲ್ಲೈ ಧರ್ಮರಾಜನೇ ತನ್ನ ಧರ್ಮದಲ್ಲಿ ನಿಷ್ಠೆಯುಳ್ಳ ಲಿಂಗ ಬ್ರಹ್ಮಣನಾಗಲಿ ಅಲಿಂಗಿ ಬ್ರಹ್ಮಣನಾಗಲಿ ಧಾನ ಮಾಡಬೇಕೆಂದು ಇವರಿಬ್ಬರೂ ತಪಸ್ವಿಗಳೆಂದು ಉತ್ತರ ನೀಡುತ್ತಾನೆ. ಅಂದರೆ ಇಲ್ಲಿ ಲಿಂಗಧಾರಿ ಮಹೇಶ್ವರ (ಜಂಗಮ) ಮತ್ತು ಬ್ರಹ್ಮಣರ ಪೂಜ್ಯತೆಯು ಸ್ಪಷ್ಟವಾಗುತ್ತದೆ. ಇದರಿಂದ ಮಹಾಭಾರತದ ಕಾಲದಲ್ಲಿಯ ಈ ಜಂಗಮರಿಗೆ ಕೊಡುವ ಗೌರವ ನೋಡಿದರೆ ಅನಾದಿಕಾಲದಿಂದಲೂ ಪೂಜನೀಯರಾಗಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಜಂಗಮರು ಮಹಾಭಾರತದ ಕಾಲದಲ್ಲಿಯು ನಿರಂತರ ಸಮಾಜ ಸೇವೆಯಲ್ಲಿ ತೊಡಗುತ್ತಿದ್ದರು ಎನ್ನಬಹುದು.

ತದನಂತರ ತೆಲುಗು ಗ್ರಂಥವಾದ 'ಕುಮಾರ ಸಂಭವಂ' ಎಂಬ ಚಂಪುಕಾವ್ಯದಲ್ಲಿ ನನ್ನ ಗುರು ಜಂಗಮ ಮಲ್ಲಿಕಾರ್ಜುನ ಶಿವಯೋಗಿಗೆ ಅಂಕಿತ ಮಾಡಿದ್ದೇನೆ ಎಂದು ನಿನ್ನೆ ಜೋಡು ಕವಿ ಹೇಳಿದ್ದಾನೆ(ವೀರಭದ್ರಶರ್ಮ ಎಚ್. ಎಂ.:೧೯೯೧:೬)'ಪರಿಯಾ ಪುರಾಣಂ' ಎಂಬ ಗ್ರಂಥದಲ್ಲಿ ಶೈವ ಜಂಗಮರು ಬಂದಾಗ ಭಕ್ತನಾದ ಅಮ್ಮೆಯರರು ಅವರಿಗೆ ಭಕ್ತಿಯಿಂದ ಆದರಿಸಿ ಸತ್ಕರಿಸಿದು ಉಲ್ಲೇಖವಾಗಿದೆ.

ಥರ್ಸ್ಟನ್ ಮತ್ತು ಜನಾಬ್ ಸಿರಾಜುಲ್ ಹಸನ್ ಎಂಬ ವಿದ್ವಾಂಸರು ಬರೆದ 'ಕಾಸ್ಟ್ ಆಂಡ್ ಟ್ರಾಯಬ್ಸ್ ಆಫ್ ಸದರದ್ ಇಂಡಿಯಾ' ಎಂಬ ಗ್ರಂಥದಲ್ಲಿ ಜಂಗಮರು ಲಿಂಗಾಯತರಿಗೆ ಮಾತ್ರವಲ್ಲದೆ ಇತರರಿಗೂ ಸಹ ಗುರುಗಳಾಗಿಯೂ ಪುರೋಹಿತರಾಗಿಯೂ ಭಕ್ತರು ಕೊಟ್ಟ ಭೀಕ್ಷೆಯಿಂದ ಜೀವನ ಸಾಗಿಸುತ್ತಿದ್ದಾರೆ ಎನ್ನಲಾಗಿದೆ(ಅವರೇ:೬೦) ಹೀಗೆ ಅನೇಕ ಪುರಾಣ ಕಥೆಗಳಲ್ಲಿ ಶಿವಭಕ್ತರ ಪರೀಕ್ಷೆಗಾಗಿ ಧರೆಗೆ ಬಂದಾಗಲ್ಲೆಲ್ಲಾ ಶಿವನು ಜಂಗಮ ವೇಷ ಧಾರಿಯಾಗಿ ಬಂದು ಅವರಿಗೆ ದರ್ಶನವನ್ನು ನೀಡಿದ್ದು ಕಂಡು ಬರುತ್ತದೆ. ಹೇಮರಡ್ಡಿ ಮಲ್ಲಮ್ಮನಿಗೆ ಒಲಿದ ಶಿವ ಜಂಗಮರೂಪಿ, ಅಕ್ಕಮಹಾದೇವಿಗೆ ಒಲಿದ ಜಂಗಮರೂಪಿ ಮತ್ತು ಭಕ್ತ ಸಿರಿಯಾಳನ ಮನೆಗೆ ಬಂದ ಜಂಗಮ ಹೀಗೆ ಅನೇಕ ಉದಾಹರಣೆಗಳುಂಟು.

ನಂತರ ೧೨ನೇ ಶತಮಾನದಲ್ಲಿ ಜಂಗಮರಿಗೆ ಬಸವಣ್ಣನವರು ಉನ್ನತ ಸ್ಥಾನಕ್ಕೆ ತಲುಪಿಸಿದರು ಎಂಬ ಉಲ್ಲೇಖಗಳು ಕಂಡುಬರುತ್ತವೆ. ಬಸವಣ್ಣನವರು ಕಾಶ್ಮೀರದಿಂದ

ಜಂಗಮರನ್ನು ಕರೆತಂದ ಲಕ್ಷದ ಮೇಲೆ ತೊಂಬತ್ತು ಸಾವಿರ ಜನ ಜಂಗಮರ ಆರಾಧನೆ ಮಾಡಿದ್ದು ಐತಿಹಾಸಿಕ ದಾಖಲೆಯಾಗಿದೆ. ಅಂತೆಯೇ ಕಲ್ಯಾಣದಲ್ಲಿ ಹತ್ತು ಹಲವಾರು ವಿಚಾರಗಳನ್ನು ತಿಳಿಸುವಲ್ಲಿ ಮತ್ತು ಸಮಾಭೋಧಕ ಕಾರ್ಯದಲ್ಲಿ ಬಸವಣ್ಣನವರಿಗೆ ಹೆಗಲಿಗೆ ಹೆಗಲು ಕೊಟ್ಟು ದುಡಿದವರು ಜಂಗಮರು. ಅದಕ್ಕಾಗಿಯೇ ಬಿಜ್ಜಳ ಅರಸನು ಬಸವಣ್ಣ ನವರಿಗೆ, ನೀವು ಜಂಗಮರ ಸಹವಾಸವನ್ನೇ ಬಿಡುವುದಾದರೆ ಮಂತ್ರಿಗಳಾಗಿ ಕೆಲಸ ಮಾಡಿರಿ ಇಲ್ಲದಿದ್ದರೆ ಮುದ್ರೆಯುಂಗರವನ್ನು ಕೊಟ್ಟು ಮಂತ್ರಿ ಪದವಿಯನ್ನು ಬಿಟ್ಟು ಬಿಡಿರಿ ಎನ್ನಲು ಮಂತ್ರಿ ಪದವಿಯನ್ನು ಬಿಟ್ಟರು ಎಂದು ಸಿಂಗಿ ರಾಜನ ಪುರಾಣದ ೩೫ನೇಯ ಸಂಧಿಯಲ್ಲಿ ಉಲ್ಲೇಖಿಸಲಾಗಿದೆ. ಅಂದರೆ ಜಂಗಮರ ಸಂಸ್ಕೃತಿ ತುಂಬ ಬಲಿಷ್ಟ ವಾಗಿರಬೇಕಾದರೆ ಬಸವಣ್ಣನವರಗಿಂತಲೂ ಪೂರ್ವದಲ್ಲಿ ವೀರಶೈವರ ಗುರುಗಳಾದ ಜಂಗಮರ ಸಂಸ್ಕೃತಿ ಪ್ರಬಲವಾಗಿತ್ತು ಎನ್ನುವಲ್ಲಿ ಸಂದೇಹವಿಲ್ಲ. ಅದಕ್ಕಾಗಿಯೇ ವಚನ ಸಾಹಿತ್ಯ ಪಿತಾಮಹ ಎಂದು ಕರೆಯುವ ದಿ : ಡಾ. ಫ.ಗು. ಹಳಕಟ್ಟಿಯವರು ಜಂಗಮರ ಪ್ರಾಚೀನತೆ ಕುರಿತು ಜಂಗಮರೆಂಬ ಕೆಲವೊಂದು ವರ್ಗವು ಬಸವೇಶ್ವರಗಿಂತಲೂ ಮೊದಲು ಸಹ ಇತ್ತೇಂದು ಹೇಳುತ್ತಾರೆ. ಅಲ್ಲದೇ ಶಿವ ಶರಣರ ಚರಿತ್ರೆಯಿಂದ ತಿಳಿಯುತ್ತದಲ್ಲದೇ ಹಿಂದುಸ್ಥಾನದಲ್ಲಿ ಬೇರೆ ಬೇರೆ ಪಂಥಗಳಲ್ಲಿ ಹೇಗೆ ಧಾರ್ಮಿಕ ವರ್ಗಗಳು ಕಂಡು ಬರುತ್ತವೆಯೇ ಹಾಗೆಯೇ ವೀರಶೈವರಲ್ಲಿ ಜಂಗಮರೆಂಬ ಮಹತ್ವದ ವರ್ಗವು ಪುರಾತನ ಕಾಲದಿಂದಲೂ ಇತ್ತೆಂದೂ ಕಂಡು ಬರುತ್ತದೆ. ಡಾ : ಪಿ.ವಿ. ನಾರಾಯಣ ಅವರು ವಚನ ಸಾಹಿತ್ಯ ಸಾಂಸ್ಕೃತಿಕ ಅಧ್ಯಯನ ಪುಟ - ೮೩ರಲ್ಲಿ ಜಂಗಮರ ಪ್ರಾಚೀನತೆಯನ್ನು ಕುರಿತು ಹೇಳುತ್ತಾರೆ. ಬಸವಾದಿಗಳ ಕಾಲದಲ್ಲಿಯೇ ಜಂಗಮರು ಗೌರವಕ್ಕೆ ಪಾತ್ರರಾಗಿದ್ದೀರಬೇಕಾದರೆ ಇವರು ಪ್ರಾಚೀನ ವರ್ಗವೆಂಬುದರಲ್ಲಿ ಸಂದೇಹವಿಲ್ಲ ಎಂದು ಹೇಳುತ್ತಾರೆ(ಷಣ್ಮುಖಯ್ಯ ಅಕ್ಕರಮಠ: ೨೦೦೧:೧೦). ಇಷ್ಟೇ ಅಲ್ಲದೆ ಶರಣ ವಚನಗಳಲ್ಲಿ ಜಾನಪದಗಳಲ್ಲಿ ಜಂಗಮರು ಸಮಾಜದಲ್ಲಿ ನಿರ್ವಹಿಸುತ್ತಿರುವ ಕಾರ್ಯಗಳ ಕುರಿತು ಹೇಳುತ್ತೇವೆ.

'ಅಗ್ನಿಯಾಧಾರದಲ್ಲಿ ಕಬ್ಬಿಣ ನೀರುಂಬುದಯ್ಯಾ
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ
ಜಂಗಮಕ್ಕೆ ಅಪ್ಯಾನವಾದರೆ ಲಿಂಗ ಸಂತುಷ್ಠಿಯಹುದಯ್ಯಾ
ಇದು ಕಾರಣ ಕೂಡಲ ಸಂಗಮ ದೇವರಲ್ಲಿ
ಜಂಗಮಕ್ಕೆ ಅಪ್ಯಾನವಾದರೆ ಲಿಂಗ ಸಂತುಷ್ಟಿ'(ಸ.ವ.ಪು - ೧೧೮)

ಹೀಗೆ ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿರುವ ರೀತಿಯಲ್ಲಿಯೇ ಜಂಗಮರ ಮಾನ್ಯತೆಯನ್ನು ವಚನಕಾರರು ಸರ್ವರೀತಿಯಲ್ಲೂ ಒಪ್ಪಿಕೊಂಡ ಬಸವಣ್ಣನವರ ಮೇಲಿನ

ವಚನದಿಂದ ಕಂಡುಕೊಳ್ಳಬಹುದಾಗಿದೆ. ಲಿಂಗ ಮುಖ ಜಂಗಮ ಎಂಬ ಅಭಿಪ್ರಾಯವಾಗಿದೆ. ಆದ್ದರಿಂದ ಲಿಂಗ ಸಂತೋಷವಾಗಬೇಕಾದರೆ ಜಂಗಮ ಸಂತೋಷ ಹೊಂದಬೇಕೆಂಬ ನಿಲುವು ಇದೆ. ಆದ್ದರಿಂದಲೇ ಬಸವಣ್ಣನವರು ಹೇಳುವ ಮಾತು ನೋಡಿದರೆ ಮೇಲಿನ ಅರ್ಥಕ್ಕೆ ಧ್ವನಿ ನೀಡುತ್ತದೆ. 'ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ' ಎಂದು 'ಬೇಡುವಾತ ಜಂಗಮ ನಲ್ಲ ಬೇಡಿಸಿಕೊಂಬಾತ ಭಕ್ತನಲ್ಲ' ಎಂಬ ಮಾತು ಕೂಡಾ ಗಮನಿಸಬೇಕಾದುದ್ದಾಗಿದೆ. ಅಂದರೆ ತಮಗೆ ಭಕ್ತರು ಅರ್ಪಿಸಿದ ಧನಕನಕಾದಿಗಳನ್ನು ಭಕ್ತರ ಕಲ್ಯಾಣಕ್ಕಾಗಿಯೇ ಉಪಯೋಗಿಸು ವುದನ್ನು ನೋಡಬಹುದಾಗಿದೆ.

'ಚಲಿಸಿ ಜಂಗಮವೆನಿಸಿತಯ್ಯ ಲಿಂಗವು
ನೆಲೆಸಿ ಲಿಂಗವೆನಿಸತಯ್ಯಾ ಲಿಂಗವು'

ಇಲ್ಲಿ ಜಂಗಮನ ಚಲನ ಶೀಲತೆಯನ್ನು ತೋರಿಸುವಂತಹುದಾಗಿದೆ. 'ಜಂಗಮ ಜಂಗುಕಟ್ಟಿ ಉಣಬಡಿಸಲೊಲ್ಲದೆ' ಎಂಬ ಮಾತು ಸರ್ವಜ್ಞನ ವಚನದಿಂದ ಇವರ ವೈಶಿಷ್ಟ ತಿಳಿಯುತ್ತದೆ.

'ಜಂಗಮ ಜಂಗುಕಟ್ಟಿ ಹಿಂಗದೆ ತಿರುಗಲು ಸಂಗನ ಶರಣರಿಗೇನು ಫಲ ಲಿಂಗದ ಮಹಿಮೆಯನ್ನು ತಿಳಿಯಲಾಗದ ಜಂಗಮ ಕಾಲಿಗೆ ಜಂಗುಕಟ್ಟಿ ತಿರುಗುವುದರಿಂದ ಜನರಿಗೆ ಯಾವ ಫಲ' ಎಂದು ಶಿಶುನಾಳ ಶರೀಫರ ತತ್ವಪದದಿಂದ ತಿಳಿಯಬಹುದಾಗಿದೆ. ಕಾಯಕವನ್ನು ಬಿಟ್ಟು ಕೇವಲ ಭಿಕ್ಷೆಗಾಗಿ ತಿರುಗುವ ಜಂಗಮರನ್ನು ಎಚ್ಚರಿಸಿರುವುದು ಗಮನಿಸಬಹುದಾಗಿದೆ. ಮತ್ತೆ 'ಜೋಗಿ ಜಂಗಮರೆ ಹೋಗಿ ನನ್ನಂತವರಿಗೆ ಸೆಲ್ಲಕಿದಾನ ಕೊಡುತ್ತಾರೆ ..............' ಇದು ಜಾನಪದ ಸಾಹಿತ್ಯದಲ್ಲಿ ಜಂಗಮನ ಧರ್ಮ ಪ್ರಸಾರಕ್ಕೆ ಒಂದು ಊರಿನಿಂದ ಇನ್ನೊಂದು ಊರಿಗೆ ತತ್ವಗಳನ್ನು ತಿಳಿಸಿ ಭೀಕ್ಷೆ ತೆಗೆದುಕೊಳ್ಳುತ್ತಾ ಮನೆಗೆ ಹೋದಾಗ ಹೆಣ್ಣು ಮಕ್ಕಳು ತಮ್ಮ ತವರಿಗೆ ಸುದ್ದಿ ಮುಟ್ಟಿಸುವ ಕೆಲಸ ಜಂಗಮರಿಂದ ಮಾಡುತ್ತಿದುದ್ದಕ್ಕೆ ನಿರ್ದೇಶನವಾಗಿದೆ. ಇದು ಅಂದು ತುಂಬ ಉಪಯುಕ್ತವಾದ ಮಾರ್ಗ ಎಂಬುದು ಮನಗಾಣಬೇಕಾಗಿದೆ.

## ೩. ಶಾಸನಗಳಲ್ಲಿ ಜಂಗಮರು

ಶೈವಧರ್ಮದ ಉಗಮದೊಂದಿಗೆ ಜಂಗಮರ ಉಗಮ ಎಂದು ಗಮನಿಸಬಹುದು ಪ್ರಾಚೀನ ಸಾಹಿತ್ಯ ಕೃತಿಗಳಾದ ಶಿವಾಗಮುಗಳು ಶ್ರೀ ಸಿದ್ಧಾಂತ ಶಿಖಾಮಣಿ, ವಚನ ವಾಙ್ಮಯ ಮತ್ತು ವೀರಶೈವ ಸಿದ್ಧಾಂತ ಪರವಿರುವ ಅನೇಕ ಕಾವ್ಯ, ಪುರಾಣ, ಚರಿತ್ರ ಗ್ರಂಥಗಳಲ್ಲಿ ಜಂಗಮರ ಕುರಿತು ವಿಪುಲ ಮಾಹಿತಿ ಸಿಗುತ್ತದೆ. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಹೇಳುವ

ಶಿವಾಗಮಗಳು ಸಿದ್ಧಾಂತ ಶಿಖಾಮಣಿ ಮತ್ತು ವಚನ ವಾಙ್ಮಯಗಳು ಜಂಗಮರ (ವೀರಶೈವ) ಸಿದ್ಧಾಂತದ ಸಾರ ಸಂಗ್ರಹಗಳಾಗಿವೆ. ಆದ್ದರಿಂದ ಪ್ರಾಚೀನ ಸಾಹಿತ್ಯವಲ್ಲದೆ ಪುರಾತತ್ವ ಅವಶೇಷಗಳು ಜಂಗಮರ ಐತಿಹಾಸಿಕತೆಯ ಮೇಲೆ ಹೊಸ ಬೆಳಕನ್ನೆ ಮೂಡಿಸುತ್ತವೆ. ಇವುಗಳಲ್ಲಿ ಬಹುಮುಖ್ಯ ಎನ್ನಿಸಿರುವ ಶಾಸನಗಳು ಚರಿತ್ರೆಯನ್ನ ಅರಿಯಲಿಕ್ಕೆ ಶಾಸನಗಳು ನಿಖರವಾದ ದಾಖಲೆಗಳು ತೋರಿಸಿ ಕೊಡುತ್ತವೆ. ಹೀಗಾಗಿ ಜಂಗಮರ ಪ್ರಾಚೀನತೆ ಮತ್ತು ಸಮಾಜದಲ್ಲಿ ಕೈಗೊಂಡ ಕಾಯಕದ ಕುರಿತು ಅನೇಕ ಶಾಸನಗಳು ಅವರ ವೈಶಿಷ್ಟತೆಯನ್ನು ತಿಳಿಸುವಲ್ಲಿ ತುಂಬ ಸಹಕಾರಿಗಳಾಗಿವೆ.

**೩.೧.ಜನಮೇಜಯನ ದಾನ ಶಾಸನ :** ಸಮಾಜದ ಸೇವೆಗಾಗಿ ಕೇದಾರ ಜಂಗಮ ಪೀಠಕ್ಕೆ ನೀಡಿದ ದಾನ ಶಾಸನವು ಜಂಗಮರನ್ನು ಗುರುತಿಸುವಲ್ಲಿ ಅತ್ಯಂತ ಪ್ರಾಚೀನವಾಗಿದೆ. ಇದರ ಪಾಠಕ್ರಮವನ್ನು ಕೆಳಗಿನಂತೆ ನೋಡಬಹುದಾಗಿದೆ.

ಶ್ರೀ ಕೇದಾರೇಶ್ವರಾಯ ನಮಃ
ಸ್ವಸ್ತಿಶ್ರೀ ವಿಜಯಾಭ್ಯುಧಯ ಯುದಿಷ್ಠಿರ ಶಕೇ ಪ್ಲವಂಗಾಖ್ಯೆ
ಏಕೋನನವತಿತಮವತ್ಸರೇ ಸಾಹಸಿ ಮಾಸೇ ಅಮಾವಾಸ್ಯಯಾಂ ಸೋಮ
ಮಾಸರೇ ಶ್ರೀ ಮನ್ಮಹಾರಾಜಾಧಿರಾಜ ಪರಮೇಶ್ವರ ವೈಯಾಘ್ರು ಪದಗೋತ್ರಜ
ಶ್ರೀ ಜನಮೇಜಯ ಭೂಪಾಲ : ( ಉತ್ತರ ಹಿಮಾಲಯೇ ) ಇಂದ್ರ ಪ್ರಸ್ಥನಗರೀ
ಸಿಂಹಾಸನಸ್ಥ : ಸಕಲ ಆನಂದ ಲಿಂಗ ಜಂಗಮ ..........................
..........................................................................
ಷಷ್ಠಿ ವರ್ಷಾಣಿ ಸಹಸ್ರಾಣಿ ವಷ್ಟಾಯಾಂ ಜಾಯತೇ ಕ್ರಿಮಿ :

ಪಾಂಡವರ ವಂಶಜನಾದ ಹಸ್ತಿನಾವತೀ ಸಿಂಹಾಸನಾಧೀಶ್ವರ ಜನಮೇಜಯ ಮಹಾರಾಜನು ಯುಧಿಷ್ಠರ ಶಕೆ ೮೯ನೇಯ ಪ್ಲವಂಗನಾಮ ಸಂವತ್ಸರದ ಮಾರ್ಗ ಶೀರ್ಷ ಮಾಸ ಅಮಾವಾಸ್ಸೆಯ ದಿನ ಸೂರ್ಯಗ್ರಹಣ ಸಮಯದಲ್ಲಿ ತನ್ನ ಮಾತಾ - ಪಿತೃಗಳಿಗೆ ಪುಣ್ಯ ಪ್ರಾಪ್ತಿಯಾಗಲೆಂಬ ಉದ್ದೇಶದಿಂದ ಶ್ರೀ ಕೇದಾರೇಶ್ವರ ಸ್ವಾಮಿ ನಿತ್ಯಸೇವೆಗೆಂದು ಶ್ರೀ ಕೇದಾರೇಶ್ವರ ಕ್ಷೇತ್ರಾಧಿಪತಿ ಅಥವಾ ಸ್ಥಾನಾಧಿಪತಿಯಾದ ಉಷಾಮಠದ ಅಧಿಪತಿ ಶ್ರೀ ಗೋಸ್ವಾಮಿ ಆನಂದಲಿಂಗ ಜಂಗಮ ಜಗದ್ಗುರುಗಳು ಅವರ ಶಿಷ್ಯ ಜ್ಞಾನಲಿಂಗ ಜಂಗಮರಿಂದ ಶ್ರೀ ಸ್ವಾಮಿಗೆ ನಿತ್ಯ ಅರ್ಚನೆಗೈಯುದಕ್ಕಾಗಿ - ಮಂದಾಕಿನಿ, ಕ್ಷೀರಗಂಗಾ, ಮಧುಗಂಗಾ, ಸ್ವರ್ಗದ್ವಾರ ಗಂಗಾ ಮತ್ತು ಸರಸ್ವತಿ, ಮಂದಾಕಿನಿ ನದಿಗಳ ಸಂಗಮ ಕ್ಷೇತ್ರದ ಮಧ್ಯದ

ವಿಶಾಲ ಭೂಮಿಯನ್ನು ಶ್ರೀ ಆನಂದ ಲಿಂಗ ಜಂಗಮ ಜಗದ್ಗುರುಗಳಿಗೆ ಹಿರಣ್ಯ ಸಹಿತ ಗಂದೋದಕವನ್ನು ಧಾರಾಪೂರ್ವಕವಾಗಿ ಸಮರ್ಪಿಸಿದ ವಿಷಯವು ಈ ಶಾಸನದಲ್ಲಿ ಉಕ್ತವಾಗಿದೆ(ಶಿವಾಚಾರ್ಯ ಚಂದ್ರಶೇಖರ:೧೯೮೮:೭೧,೭೨). ತಾನು ನೀಡಿದ ದಾನಕ್ಕೆ ಸೂರ್ಯ, ಚಂದ್ರ, ಅಗ್ನಿ, ವಾಯು, ಆಕಾಶ, ನೆಲ, ಜಲ, ಮನಸ್ಸು, ಹಗಲು, ರಾತ್ರಿ, ಎರಡು ಸಂಧ್ಯೆಗಳು ಮತ್ತು ಧರ್ಮಗಳು ಸಾಕ್ಷಿ ಎಂದು ಹೇಳಿ ಕೊನೆಗೆ ಇದಕ್ಕೆ ತಪ್ಪಿನಡೆದರೆ ಅಥವಾ ಅದನ್ನು ನಾಶಮಾಡಿದರೆ ಅಂಥವರಿಗೆ ನರಕ ಸಿಗುತ್ತದೆಂದು ಶಾಪಾಶಯಗಳು ಬರೆಯಲಾಗಿದೆ. ಇದು ಜಂಗಮ ಪದವನ್ನು ಕಾಣಿಸಿಕೊಳ್ಳುವ ಶಾಸನಗಳಲ್ಲಿ ತುಂಬ ಪ್ರಾಚೀನ ಶಾಸನ. ಇದರ ಕಾಲದ ಬಗೆಗೆ ವಿದ್ವಾಂಸರಲ್ಲಿ ಸಂಮತವಿಲ್ಲ. ಮತ್ತು ಯುದಿಷ್ಠಿರ ಶಕೆ. ೮೬ ನೇಯ ಪ್ಲವಂಗನಾಮ ಸಂವತ್ಸರದ ಮಾರ್ಗಶೀರ್ಷ ಮಾಸದ ಅಮಾವಾಸ್ಯೆಯ ದಿನ ಸೂರ್ಯ ಗ್ರಹಣ ಸಮಯದಲ್ಲಿ ದಾನ ನೀಡದ ವಿಷಯ ಶಾಸನದಲ್ಲಿ ಉಕ್ತವಾಗಿದೆ.

ಯುದಿಷ್ಠರ ಅಥವಾ ಧರ್ಮರಾಯನು ಮಹಾಭಾರತ ಯುದ್ಧವಾದ ನಂತರ ಸಿಂಹಾಸನವನ್ನು ಆರೋಹಣ ಮಾಡಿದ ೮೬ ನೇಯ ವರ್ಷದಲ್ಲಿ ಜನಮೇಜಯನು ಈ ಶಾಸನವನ್ನು ಬರೆಸಿದ್ದಾನೆ. ಅಂದರೆ ಕ್ರಿ. ಪೂ. ೩೦೦೦ ದ ಪೂರ್ವದಲ್ಲಿ ಎಂದಂತಾಯಿತು. ಪಂ. ಕಾಶೀನಾಥ ಶಾಸ್ತ್ರಿಗಳು ಇದೇ ಕಾಲವನ್ನು ನಿಗದಿಪಡಿಸಿ ಇದು ಐದು ಸಾವಿರ ವರ್ಷಗಳ ಪ್ರಾಚೀನದ್ದು ಎಂದು ಹೇಳಿದ್ದಾರೆ(ಅವರೇ:೭೧). ಆದರೆ ಯಾರೂ ಯಾವುದೇ ಸಮರ್ಥನೆಗಳನ್ನು ಒದಗಿಸಿಲ್ಲ. ಕ್ರಿ.ಪೂ.೨೦೦೦ ವರ್ಷಗಳ ಹಿಂದೆ ಬರವಣಿಗೆ ಇದ್ದಿರಬಹುದಾದ ಸಂಗಿತಿಗೆ ಯಾವುದೇ ಪುರಾವೆಯ ಕಾಣಿಸುವುದಿಲ್ಲ. ಅದರಿಂದಾಗಿ ಸಹಜವಾಗಿಯೇ ಶಾಸನದ ಕಾಲದ ಬಗ್ಗೆ ಸ್ಪಷ್ಟವಾದ ಅಭಿಪ್ರಾಯವನ್ನು ನೀಡುವುದು ಸಾಧ್ಯವಾಗುವುದಿಲ್ಲ. ಆದರೆ ಶಾಸನದ ಕಾಲದ ಬಗ್ಗೆ ಡಾ ॥ ಆರ್. ಸಿ. ಹಿರೇಮಠರು ವೀರಶೈವದರ್ಶನ ಹಾಗೂ ಮಹಾ ಯಾತ್ರೆಯಲ್ಲಿ ಒಂದು ಸುಳಿವನ್ನು ತೋರಿಸಿಕೊಟ್ಟಿದ್ದಾರೆ(ಶಾಸ್ತ್ರಿ ಕಾಶಿನಾಥ:೧೯೬೪: ೯೧,೯೨). ಕ್ರಿ. ಶ. ೧೮೯೮ ಳ ರಲ್ಲಿ ಶ್ರೀ ಗಣೇಶಲಿಂಗ ಜಂಗಮರೆಂಬ ಜಗದ್ಗುರುಗಳ ಕಾಲದಲ್ಲಿ ಬ್ರಿಟಿಷ ಸರ್ಕಾರ ಪೀಠದ ಸ್ವಾಧೀನದಲ್ಲಿದ್ದ ಸಾವಿರಾರು ಹಳ್ಳಿಗಳ ಒಡೆತನಗಳನ್ನು ರದ್ದುಪಡಿಸಿ ತನ್ನ ಸ್ವಾಧೀನ ಪಡೆದುಕೊಂಡು ಕೇವಲ ೧೪೩ ಗ್ರಾಮುಗಳನ್ನು ಮಾತ್ರ ಪೀಠದ ಒಡೆತನಕ್ಕೆ ಬಿಟ್ಟು ಕೊಟ್ಟಿತು. ೧೯೩೦ರಲ್ಲಿ ಈ ಮಠಕ್ಕೆ ಜಗದ್ಗುರುಗಳನ್ನು ನಿಯಮಿಸುವ ಸಂಬಂಧ ಲಖನೌ ಹೈಕೋರ್ಟಿನಲ್ಲಿ ವ್ಯಾಜ್ಯ ನಡೆದಾಗ ಸಾಕ್ಷಿಯ ಸಂಬಂಧ ಮಠದ ಕಾಗದ ಪತ್ರಗಳನ್ನು ಪರಿಶೀಲಿಸುವ ಕಾಲ ಒದಗಿಸಿತು. ಗಣೇಶಲಿಂಗಂ ಅವರ ಕಾಲದಲ್ಲಿಯೇ ಬ್ರಿಟಿಷ ಸರಕಾರವು ಎಲ್ಲ ಗ್ರಾಮಗಳ

ಸ್ವಾಮಿತ್ವವನ್ನು ತೆಗೆದು ಕೊಂಡು ಕೇವಲ ೧೫೦ ಹಳ್ಳಿಗಳ ಒಡೆತನವನ್ನು ಮಾತ್ರ ಬಿಟ್ಟುಕೊಟ್ಟಿರುವ ವಿಷಯ ಅಲ್ಲಿಯ ಕಾಗದ ಪತ್ರಗಳಿಂದ ತಿಳಿದು ಬಂದಿತು. ಇದರಿಂದ ಒಂದು ಸಾವಿರ ಹಳ್ಳಿಯ ಸಂಪೂರ್ಣ ಸ್ವಾಮಿತ್ವವನ್ನು ಈ ಮಠಕ್ಕೆ ಕೊಟ್ಟವರಾರು ಎಂಬ ಸಮಸ್ಯೆ ಬಂದಾಗ ಅಲ್ಲಿಯ ಒಂದು ಶಾಸನದ ಪ್ರತಿದ್ಯೋತಕವಾಯಿತು. ಜನಮೇಜಯನೆಂಬ ದೊರೆ ಸಾವಿರ ಗ್ರಾಮಗಳ ಭೂಮಿ-ಸೀಮೆಗಳ ಒಡೆತನವನ್ನು ಉಷಾಮಠಕ್ಕೆ ಬಿಟ್ಟುಕೊಟ್ಟಿರುವುದಾಗಿ ಈ ಶಾಸನದಿಂದ ತಿಳಿದು ಬರುತ್ತದೆ(ಗೋಟ್ಠಾ ರಾಜಶೇಖರ ಸ್ವಾಮಿ:೧೯೯:೫) ಎಂದು ಹೇಳಿದ್ದಾರೆ. ಇದರಿಂದ ಹೈಕೋರ್ಟಿನಲ್ಲಿ ಈ ದಾನ ಶಾಸನ ಅತಿ ಮಹತ್ವದ್ದು ಎಂದು ತಿರ್ಮಾನಿಸಿತ್ತು. ಇದರಿಂದ ಇಲ್ಲಿವರೆಗೆ ಇದ್ದ ಸಮಸ್ಯೆಗಳ ಪರಿಹಾರವಾಗಿ ಇದು ಅತ್ಯಂತ ಪ್ರಾಚೀನ ಶಾಸನವೆಂದು ತಿಳಿದು ಬಂತು. ಇದರಿಂದ ಜಂಗಮ ಪ್ರಾಚೀನತೆ ಹಿಂದಕ್ಕೆ ಹೋಗುವದರಲ್ಲಿ ಎರಡು ಮಾತಿಲ್ಲ. ರಾಮದಾಸಗೌಡರು ಹಿಂದುತ್ವ ಎಂಬ ಗ್ರಂಥದಲ್ಲಿ ಅತಿ ಪ್ರಾಚೀನವಾದದೆಂದು ಒಪ್ಪಿಕೊಂಡಿದ್ದಾರೆ.

**೩.೨. ಜಯನಂದ ದೇವನ ತಾಮ್ರ ಶಾಸನ :** ಇದು ಕಾಶಿ ಪೀಠದ ಜಂಗಮರ ಪ್ರಾಚೀನತೆಗೆ ಅತ್ಯಂತ ಪುರಾತನ ಶಾಸನವಾಗಿದೆ. ಜಯನಂದದೇವ ಕಾಶೀಯ ನರೇಶ ರಾಜನಾಗಿದ್ದನು. ಇವನು ಪೀಠದಲ್ಲಿ ಕ್ರಿ. ಶ. ೫೫೩ ರಿಂದ ೬೭೪ರ ವರೆಗೆ ಅಧಿಪತಿಯಾಗಿದ್ದ ಶ್ರೀ ಮಲ್ಲಿಕಾರ್ಜುನ ಜಂಗಮ ಜಗದ್ಗುರುಗಳಿಗೆ ಕ್ರಿ. ಶ. ೫೭೪ರಲ್ಲಿ ವಿಶಾಲವಾದ ಭೂಮಿಯನ್ನು ದಾನ ಮಾಡಿದ ವಿಷಯವನ್ನು ಉಲ್ಲೇಖಿಸುವ ದಾನ ಶಾಸನ ಅತ್ಯಂತ ಮಹತ್ವದ ಚಾರಿತ್ರಿಕ ದಾಖಲೆಯಾಗಿದೆ (ಅವರೇ:೧೯೯:೮). ಇಂದಿಗೂ ಇದನ್ನು ಪೀಠದಲ್ಲಿ ನೋಡಬಹುದು ಹಿಂದಿ ಭಾಷಿಯ ದೇವನಾಗರಿ ಲಿಪಿಯ ಶಾಸನವು ಒಳಗೊಂಡಿದೆ ಈ ಕೆಳಗಿನಂತೆ ಉಲ್ಲೇಖಿಸಬಹುದು.

ಶ್ರೀ ಗಣೇಶಾಯ ನಮ ಃ

ಶ್ರೀ ವಿಶ್ವೇಶ್ವರ<br>
॥ ಸ್ವಸ್ತಿಶ್ರೀ ಮಹಾರಾಜಾದಿರಾಜ ಶ್ರೀ ಶ್ರೀ ಶ್ರೀ ಮಹಾರಾಜ ಜೈನಂದದೇವ ಕಾಶಿನ<br>
॥ ರೇಶ ಅದೇ ಸಾತಿ ಶ್ರೀ ಶ್ರೀ ಶ್ರೀ ವಿಶ್ವಾರಾಧ್ಯ ಸಿಂಹಾಸನ ಕಂಹ ಗೋಸಾಯೀ<br>
॥ ಮಲ್ಲಿಕಾರ್ಜುನ ಜಂಗಮ ಕಂಹ ಭೂಮಿದೀನ್ಹ-----------------

ಹೀಗೆ ಈ ಶಾಸನವು ಕಾಶೀಯ ಕರ್ದಮೇಶ್ವರ ದೇವಾಲಯದಿಂದ ಗಂಗಾನದಿಯ ದಂಡೆಯವರೆಗೆ ಗೋವುಗಳು ಸಂಚರಿಸುವ ವಿಶಾಲ ಭೂ-ಭಾಗವನ್ನು ದಾನಕೊಟ್ಟು ಅಂಶವನ್ನು ನೋಡುತ್ತಿವೆ. ಶಾಸನೋಕ್ತ ಜಯನಂದದೇವ ಕನೋಜ ಮಹಾರಾಜರ ಮಾಂಡಲಿಕ ಅರಸನಾಗಿ ಕಾಶೀಯನು ಆಳುತ್ತಿದ್ದನೆಂದು ಚಾರಿತ್ರಿಕ ಗ್ರಂಥಗಳಿಂದ ತಿಳಿದು ಬರುತ್ತದೆ(ಶಿವಾನಂದ

ವಿ.:೧೯೯೨:೫೨). ಕಾಶೀಯ ಪೀಠದ ಹಿಂದೆ ಈ ಜಂಗಮಪುರ ವೆಂದು ಆ ದಾನ ಕೊಟ್ಟ ಸ್ಥಳಕ್ಕೆ ಕರೆಯುತ್ತಾರೆ.

೧೯೧೬ರ ವರೆಗೆ ಒಂದು ಸಾವಿರ ಎಕರೆಯ ಈ ವಿಶಾಲ ಭೂಮಿಯ ಪೀಠದ ಇತ್ತು. ದಿ.ಮದನ್ ಮೋಹನ್ ಮಾಳಿವಿಯವರ ಕೋರಿಕೆಯ ಮೇರೆಗೆ ೧೯೧೬ರಲ್ಲಿ ಅಂದಿನ ಪೀಠಾಧಿಪತಿಗಳಾಗಿದ್ದ ಜಗದ್ಗುರು ಶ್ರೀ ಶಿವಲಿಂಗ ಶಿವಾಚಾರ್ಯರು ಉದಾರವಾಗಿ ಬನಾರಸ್ ಹಿಂದೂ ವಿಶ್ವವಿದ್ಯಾಲಯಕ್ಕೆ ಇದನ್ನು ದಾನವಾಗಿ ನೀಡಿದ್ದಾರೆ. ಈಗಲೂ ವಿಶ್ವವಿದ್ಯಾಲಯದ ಹಿಂದೆ ಜಂಗಮಪುರ ಎಂಬ ಹಳ್ಳಿ ಇದೆ. ಅಲ್ಲದೆ ವಿಶ್ವವಿದ್ಯಾಲಯದ ಆವರಣದಲ್ಲಿ ಜಗದ್ಗುರುಗಳವರ ಒಂದೆರಡು ಸಮಾಧಿಗಳಿವೆ. ಅವುಗಳನ್ನು ಇಂದಿಗೂ ಜಂಗಮ ಬಾಬಾ ಸಮಾಧಿ ಎಂಬ ಹೆಸರಿನಿಂದ ಕರೆಯುತ್ತಾರೆ(ರಾಜಶೇಖರ ಸ್ವಾಮಿ:೧೯೯:೧೦). ಮೇಲಿನ ಶಾಸನದಿಂದ ಗಮನಿಸವುದೆನೆಂದರೆ ಅಂದಿನ ಜಂಗಮ ಗುರುಗಳು ಸಮಾಜ ಕಾರ್ಯಗಳಲ್ಲಿ ತುಂಬ ಮಹತ್ವದ ಪವಾಡಗಳನ್ನು ಮಾಡಿ ಜನಸಾಮಾನ್ಯ ಸೇವೆಯಲ್ಲಿ ತಮ್ಮ ಜೀವನ ತೊಡಗಿಸಿಕೊಂಡಿರುವುದು ತಿಳಿದುಬರುತ್ತದೆ. ಅಲ್ಲದೇ ಜಂಗಮ ಸಮಾಧಿಗೆ ವಂದನೆಗೈಯದೆ ಹೋದಲ್ಲಿ ಅವರು ಅಪಘಾತಕ್ಕೊಳ್ಳಗಾಗುವುದಾಗಿ ಶಾಪಾಶಯದ ಉಕ್ತಿ ಇದೆ. ಇದರಲ್ಲಿ ಮಲ್ಲಿಕಾರ್ಜುನ ಮಹಾಂತ ಗೋಸಾಹಿಗಳ ಹೆಸರಿದೆ. ಈ ಶಾಸನದ ಕಾಲ ಕ್ರಿ. ಶ. ೬೩೧ ಇದೆ. ಇನ್ನೊಂದು ಶಾಸನ ಶಾಪಾಶಯವಲ್ಲದೆ ಜಂಗಮ ಜಮಾಯಸ್. ಹಾಗೂ ಜಯನಂದದೇವ ನರೇಶ ಎಂಬ ನಾಮೋಲ್ಲೇಖಗಳಿವೆ. ಇದರ ಕಾಲ ಕ್ರಿ.ಶ. ೬೧೧ ಎಂದು ತಿಳಿಸಲಾಗಿದೆ (ಶಿವಾಚಾರ್ಯ ಚಂದ್ರಶೇಖರ:೧೯೮೮:೧೨೨). ಇಷ್ಟೇ ಅಲ್ಲದೆ ಅನೇಕ ರಾಜರು ಈ ಜಂಗಮರಿಗೆ ದಾನ ನೀಡಿ ರಾಜಾಜ್ಞಾ ಪತ್ರಗಳು ನೀಡಿರುವುದು ಇಂದಿಗೂ ಜಂಗಮ ಪೀಠದಲ್ಲಿ ಕಂಡು ಬರುತ್ತದೆ. ಮೊಗಲ ಚಕ್ರವರ್ತಿಗಳಾದ ಹುಮಾಯೂನ್‌ನಿಮದ ಔರಂಗಜೇಬನವರೆಗೆ ಎಲ್ಲಾ ಬಾದಶಾಹರು ಕಾಶೀ ಪೀಠಕ್ಕೆ ವಿವಿಧ ರೀತಿಯ ದಾನಗಳನ್ನು ಸಮರ್ಪಿಸಿದುದ್ದನ್ನು ಕಂಡುಬರುವದು.

ಕಾಶೀ ಜಂಗಮ ಪೀಠದ ಎಲ್ಲಾ ಶಾಸನಗಳನ್ನು ಪರಿಶೀಲನ ಮಾಡಿದ ಪ್ರಸಿದ್ಧ ಶಾಸನತಜ್ಞ ಡಾ : ಅಳವೇಕರ್ ಅವರು ಇವುಗಳಲ್ಲಿ ಯಾವುದೂ ಕೂಟ ಶಾಸನವಲ್ಲ ಎಲ್ಲವೂ ನೈಜವಾಗಿವೆ ಎಂದು ಸಹಿ ಮಾಡಿದ ಪತ್ರವನ್ನು ಮಠದ ದಾಖಲೆಗಳಲ್ಲಿ ಕಣ್ಣಾರೆ ಕಂಡುದ್ದನ್ನು ಡಾ : ಆರ್. ಸಿ. ಹಿರೇಮಠರು ಉಲ್ಲೇಖಿಸಿದ್ದಾರೆ(ಶಿವಾನಂದ ವಿ.:೧೯೯೨:೫೨). ಅಂದರೆ ಜಂಗಮರ ಪ್ರಾಚೀನತೆ ತುಂಬ ಪುರಾತನವಾದದ್ದು ಎನ್ನುವಲ್ಲಿ ಯಾವುದೇ ವಾದಗಳು ಇಲ್ಲವೆಂದು ತಿಳಿದುಕೊಳ್ಳಬಹುದು.

**೩.೩.ನೇಪಾಳದ ವೀರಶೈವ ಶಾಸನ :** ಈ ಶಾಸನವು ಕ್ರಿ. ಶ. ೫ನೇಯ ಶತಮಾನದಿಂದ ೭ನೇಯ ಶತಮಾನದವರೆಗೂ ನೇಪಾಳವನ್ನು ಆಳಿದ ಮಲ್ಲಮನೆತನದಿಂದ ಮಹಾರಾಜ ಜಯ ರುದ್ರಮಲ್ಲದೇವನು ದುರ್ಮರಣಕ್ಕೀಡಾದ ತನ್ನ ಪುತ್ರ ವೀರಜಿತೆ ತ್ರೈಲೋಕ್ಯಮಲ್ಲನಿಗೆ ಶಿವಲೋಕ ಪ್ರಾಪ್ತಿಯಾಗಲೆಂದು ಶ್ರೀ ಮಹಾಂತ ಮಲ್ಲಿಕಾರ್ಜುನ ಜಂಗಮರಿಗೆ ಶ್ರೀ ಮಠದಲ್ಲಿರುವ ಕರ್ತೃಗದ್ದುಗೆಯ ನಿತ್ಯಸೇವೆಗೆಂದು ಭೂದಾನ ಮಾಡಿದ ವಿಷಯವು ಶಾಸನದಲ್ಲಿ ಉಲ್ಲೇಖಿತವಾಗಿದೆ. ಮಲ್ಲ ಮನೆತನವು ವೀರಶೈವ ಜಂಗಮರಾಗಿತ್ತು ಎನ್ನುವಲ್ಲಿ ಈ ಶಾಸನ ಸೂಚಿಸುತ್ತದೆ. ಇದರ ಕಾಲವನ್ನು ೬೯೨ರಲ್ಲಿ ಜಯರುದ್ರ ಮಲ್ಲದೇವ ಮಹಾರಾಜನು ವಿಕ್ರಮ ಸಂವತ್ ೬೯೨ರಲ್ಲಿ (ಕ್ರಿ. ಶ. ೬೩೫) ದಾನ ನೀಡಿದ ಈ ಶಾಸನವು ದೇವನಾಗರಿ ಲಿಪಿಯಲ್ಲಿ ನೇಪಾಳಿ ಮಿಶ್ರಿತ ಸಂಸ್ಕೃತ ಭಾಷೆಯಲ್ಲಿದೆ(ರಾಜಶೇಖರ ಸ್ವಾಮಿ :೧೯೯:೧೨). ಈ ಶಾಸನದ ಕಾಲವನ್ನೇ ವಿಶಿಷ್ಟವಿರು ವುದರಿಂದ ಇದು ಜಂಗಮರ ಪ್ರಾಚೀನತೆಗೆ ಮೈಲುಗಲ್ಲಾಗಿದೆ. ನೇಪಾಳದಲ್ಲಿ ಕ್ರಿ. ಶ. ೬೩೧ದ ಕಾಲದಲ್ಲೇ ಜಂಗಮ ಮಠ ಇರುವುದನ್ನು ನೋಡಿದರೆ ಇದಕ್ಕೆ ಹಿಂದಕ್ಕೆ ಜಂಗಮರ ಪ್ರಾಚೀನತೆಯನ್ನು ತೆಗೆದುಕೊಂಡು ಹೋಗಬಹುದಾಗಿದೆ. ಹಿಂದಿನಿಂದಲೂ ಜಂಗಮರುಮತ್ತು ಜಂಗಮ ಮಠಗಳು ಅಲ್ಲಿ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದವು ಎಂಬುದು ಖಚಿತವಾಗುತ್ತದೆ.

ಶ್ರೀಶೈಲದಲ್ಲಿರುವ ಜಂಗಮ ಪೀಠವು ಕ್ರಿ. ಶ. ೧ನೇಯ ಶತಮಾನದಷ್ಟು ಪ್ರಾಚೀನದ್ದೆಂದು ಚಿಲಕೂರಿ ನಾರಾಯಣರು ಹೇಳುತ್ತಾರೆ(ಅವರೇ:೧೫). ಕ್ರಿ. ಶ. ೪೦೫ರಲ್ಲಿ ಭಾರತಕ್ಕೆ ಭೇಟಿ ನೀಡಿದ ಚೀನಿ ಯಾತ್ರಿಕ ಫಾಹಿಯಾನ್ ಶ್ರೀಶೈಲ್ಯದ ಈ ಮಠವನ್ನು ಪಾರಾವತ ಮಠವೆಂದು, ಇನ್ನೊಬ್ಬ ಚೀನಿ ಸಂತ ಈ ಮಠವನ್ನು ಸ್ಕಂದೋಕಿಯಾ ಎಂಬುವನಿಂದ ನಿರ್ಮಾಣವಾಗಿದೆ ಎಂದು ಹೇಳಿದ್ದಾನೆ. ಟಿಬೇಟ್ ಭಾಷಯಲ್ಲಿ ಸ್ಕಂದೋಕಿಯಾ ಎಂದರೆ ಶಂಕರ ಎಂದು ಅರ್ಥವಾಗುತ್ತದೆ(ಅವರೇ:೧೫). ಅಂದರೆ ಪ್ರಾಚೀನ ದಿನಮಾನಗಳಿಂದಲೂ ಶ್ರೀಶೈಲ್ಯ ಮಠ ಜೊತೆಗೆ ಮಠದ ಜಗದ್ಗುರು ಜಂಗಮವರಾದ ಶ್ರೀ ಪಂಡಿತಾರಾಧ್ಯರ ಕಾಲದ ಬಗ್ಗೆ ಮತ್ತು ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ.

**೩.೪.ಶಿಕಾರಿಪೂರ ಶಾಸನ :** ಈ ಶಾಸನವು ಬೆಳಗಾವಿ ತಾಲೂಕಿನ ಶಿಕಾರಿಪೂರ ಗ್ರಾಮದಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಶಾಸನವಿದೆ. ಉದಯಾದಿತ್ಯ ದೇವನೆಂಬ ರಾಜನ ಶಾಸನ ಇದ್ದಾಗಿದೆ. ಈ ಶಾಸನದಲ್ಲಿ ಉದಯಾದಿತ್ಯ ದೇವನ ಧರ್ಮ ಪತ್ನಿಯಾದ ಲಚ್ಚೆದೇವಿಯ ವರ್ಣನೆಯಲ್ಲಿ ಅವಳಿಗೆ ಯಾಚಕ ಜನ ಜಂಗಮ ನಿಧಾನ ಕಳಸ ಎಂಬ ವಿಶೇಷಣವು

ಕೊಡಲ್ಪಟ್ಟಿದೆ(ಎಚ್. ಎಂ.ವೀರಭದ್ರ ಶರ್ಮ:೧೯೯೧:೬೦) ಅಂದರೆ ಈ ರಾಣಿಯ ಯಾಚಕ ಜನರಿಗೆ ಮತ್ತು ಜಂಗಮರಿಗೂ ಕಲಶದಂತಿದ್ದಳು. ಜೊತೆಗೆ ಮಹಾದಾನಿಯಾಗಿದ್ದಳು ಎಂಬುದನ್ನು ತಿಳಿಯುವುದಲ್ಲದೇ ಈ ರಾಣಿಯು ಕ್ರಿ. ಶ. ೧೦೭೦ರಲ್ಲಿ ಇದ್ದಳೆಂದು ಶಾಸನದಿಂದ ಕಂಡುಬರುತ್ತದೆ.

ಮುಂಬಾಯಿ ರಾಯಲ್ ಏಷಿಯಾಟಿಕ್ ಸೂಸೈಟಿ ಬ್ರ್ಯಾಂಚಿನ ೧೧ನೇಯ ರಿಪೋರ್ಟಿನಲ್ಲಿ ೧೮೫೭ರಲ್ಲಿ ಪ್ರಕಟವಾಗಿರುವ ಹಾಗೂ ಮುದ್ರಿತವಾಗಿರುವ ಕನ್ನಡ ಶಾಸನದಲ್ಲಿನ ಉಲ್ಲೇಖಗೊಂಡ ಜಂಗಮರ ವೈಶಿಷ್ಟ್ಯತೆಯನ್ನು ಗಮನಿಸಬಹುದು.

ಭಸ್ಮೋದ್ಧೂಳಿತ ಗಾತ್ರರಂ ಕೌಪೀನಾಜಿನರುಂ !!
ರುದ್ರಾಕ್ಷ ಮಾಲಾಧಾರರುಂ ॥
ವಾತುಲಾಗಮ ಸಮಯ ಸಮುದ್ಧಾರರುಂ !
ಜಂಗಮ ಲಿಂಗವತಾರರುಂ !! (ಅವರೇ:೬೦)

ಇದನ್ನು ವಿವರಿಸಿದಂತೆ ಜಂಗಮನ ವಿಶೇಷತೆಯನ್ನು ಮತ್ತು ಅವನ ವೇಷ - ಭೂಷಣದ ವಿವರಣೆಯನ್ನು ನೀಡಿ ಅವರ ವೈಶಿಷ್ಟ್ಯತೆಯನ್ನು ಹೆಚ್ಚಿಸಿರುವುದು ತಿಳಿದುಬರುತ್ತದೆ.

**೩.೫.ಲಕ್ಷ್ಮೇಶ್ವರನ ಶಾಸನ :** ಜಂಗಮರ ಮೂಲ ಗುರುಗಳಾದ ರೇಣುಕಾ, ರೇವಣಸಿದ್ದ, ಮರುಳಸಿದ್ಧರ ಲಿಂಗೋದ್ಭವ ಲೀಲೆಯನ್ನು ತಿಳಿಸುತ್ತದೆ. ಇದು ವಿಚಾರವಾದಿಗಳಾಗಲಿ, ಇದು ಕೇವಲ ಕಾಲ್ಪನಿಕವೆಂದು ಹೇಳಿದರೆ ಪರಂಪರಾಗತವಾಗಿ ಬಂದ ಸಂಪ್ರದಾಯಿಗಳು, ಇದು ಚಾರಿತ್ರಿಕ ಘಟನೆಯೆಂದು ಗುರುತಿಸುತ್ತಾರೆ. ಹೀಗಾಗಿ ಈ ವಿಚಾರದ ಮೇಲೆ ಇಂದಿಗೂ ಸಾಕಷ್ಟು ಚರ್ಚೆಗಳು ಮುಂದುವರೆದಿವೆ. ಇದಮಿತ್ಥಂ ಎಂದು ಹೇಳಬಾರದೆನ್ನುತ್ತಾರೆ ವಿದ್ವಾಂಸರು. ಮುಂದೆ ಹೋದಂತೆ ಇದು ವಿಜ್ಞಾನ, ಭಾವನೆ ಮತ್ತು ಕಲ್ಪನೆಗಳಿಂದ ಅತೀತವಾಗಿರುವುದರಿಂದ ಲಿಂಗೋದ್ಭವ ಕಲ್ಪನೆ ಸಾಧ್ಯವೆಂಬುದು ವಿದ್ವಾಂಸರ ಅಭಿಪ್ರಾಯ. ವೀರಶೈವ ಪಂಚಪೀಠದಿಂದ ತಿಳಿದುಬರುತ್ತದೆ. ಹೀಗಾಗಿ ಈ ಲಿಂಗೋದ್ಭವ ಕಲ್ಪನೆ ಶಾಸನೋಕ್ತವಾಗಿರುವುದು ಸತ್ಯವಾಗಿರುವುದರಿಂದ ಇದು ಚಾರಿತ್ರಿಕ ದೃಷ್ಟಿಯಿಂದ ಮಹತ್ವವಾದದ್ದು ಎನ್ನಬಹುದು. ಈ ಶಾಸನದ ಪಾಠ ಕೆಳಗಿನಂತೆ ಅವಲೋಕಿಸಿದರೆ ತಿಳಿಯುವುದುಂಟು.

ಶ್ರೀ ಮುರುಳಸಿದ್ದೇಶ್ವರಾಯ ನಮ :

ಉಕ್ತಿ :ಶ್ರೀ ಮದು ಮಾಮನೋಹರನೆನಿಪ್ಪ ಸದಾಶಿವನಾ ಮಹಾಗಣ

ಸಿದ್ದೇಶ್ವರನೆನೆ ಪೆಸರಿಂ ಜಂಗಮಾಕಾರದಿಂ ಭ ...............

ಇದರಲ್ಲಿ ರೇವಣಸಿದ್ದರು ಅನೇಕ ಪವಾಡಗಲನ್ನು ಮಾಡಿ ದೀನದಲಿತರಿಗೆ ಉದ್ಧರಿಸಿ ಎಲ್ಲಾ ಕಡೆ ಸಂಚರಿಸಿ ಕೊನೆಗೆ ಸಗುಣ ಲೀಲೆ ಸಾಕೆಂದು ಶಾಲಿವಾಹನ ಶಕೆ ೧೪೩೫ (ಕ್ರಿ. ಶ. ೧೫೧೩)ರಲ್ಲಿ ಪುಲಿಗೆರೆಯಲ್ಲಿ ಐಕ್ಯರಾದರೆಂದು ಈ ಶಾಸನವು ಉಲ್ಲೇಖಿಸುತ್ತದೆ(E.C.V.IX-10:123) . ಒಟ್ಟಿನಲ್ಲಿ ಜಂಗಮರ ಜನಸೇವೆಯು ಕಾಯಕ, ವೀರಶೈವ ಧರ್ಮ ಪ್ರಚಾರ, ತತ್ವಭೋಧನೆಯನ್ನು ವಿವರಿಸುತ್ತಾ, ದೇಶ ಸಂಚಾರ ಮಾಡಿದ ಜಂಗಮನ ವೈಶಿಷ್ಟ್ಯತೆಗೆ ಶಾಸನ ಸಾಕ್ಷಿಯಾಗಿದೆ.

ಗುಲಬರ್ಗಾ ಜಿಲ್ಲೆಯ ಮಳಖೇಡದ ೧೬ನೇಯ ಶತಮಾನದ ಶಾಸನವೊಂದರಲ್ಲಿ ರುದ್ರಜಂಗಮ ಮಠಪತಿ ಎನ್ನುವ ಉಲ್ಲೇಖವಿರುವುದು ಕಂಡು ಬರುತ್ತದೆ. ರುದ್ರ ಜಂಗಮ-ಮಠಪತಿ ದೇವರು ವೀರಮಳೆದವರುಗಗಬ ( ಕರ್ನಾಟಕ ಇನ್‌ಸಸ್ಕಿಪ್ಸನ್ಸ್ ಸಂ. ೧, ವಿ ಇಡಿ-ಬಿಕೆ, ಗೋಪಾಲ ಪಿ. ೩೨೯/೯) ಎಂಬುದರಲ್ಲಿ ಉಲ್ಲೇಖಿತವಾಗಿದೆ. ಎಂದರೆ ಜಂಗಮರಲ್ಲಿ ಉಪಪಂಗಡದ ಜಂಗಮನಾದ ಮಠಪತಿಯನ್ನು ಗಮನಿಸಿದರೆ ಪೀಠದ ಜಂಗಮರಿಗೆ ಮಠಪತಿ ಜಂಗಮ ಪ್ರತಿಯೊಂದು ಧಾರ್ಮಿಕ ಕ್ರಿಯೆಗಳಲ್ಲಿ ಸಹಾಯ ಮಾಡುತ್ತಿರುವುದು ಗಮನಿಸಬಹುದಾಗಿದೆ.

**೩.೬. ಮೈಸೂರು ಕ್ರಾಂತಿಯಾದಲ್ಲಿ ಜಂಗಮರ ಸ್ಥಿತಿ :** ೧೮ನೇ ಶತಮಾನದಲ್ಲಿ ಮೈಸೂರು ಕ್ರಾಂತಿ ಆಗುವುದಕ್ಕಿಂತ ಪೂರ್ವದಲ್ಲಿ ಅಂದರೆ ೧೨ನೇಯ ಶತಮಾನದಲ್ಲಿ ಕಲ್ಯಾಣ ಕ್ರಾಂತಿಯಾದಾಗ ಅನೇಕ ಜಂಗಮರು ಪ್ರಾಣಭಯದಿಂದ ದೇಶದ ಮೂಲೆ ಮೂಲೆಗೆ ಓಡಿ ಹೋಗಿ ನೆಲೆಸಿದರು. ಅಂತೆಯೇ ಅಖಂಡ ಕರ್ನಾಟಕದ ತುಂಬ ಜಂಗಮರು ಒಂದೆಯಾಗಿ ನೆಲೆಸಿದ್ದರು. ಇಂದು ಅವರವರ ಪ್ರಾದೇಶಿಕತೆಯನೆಲೆಯಲ್ಲಿ ವಾಸಿಸುತ್ತಿರುವುದು ನೋಡುತ್ತೇವೆ. ಆಮೇಲೆ ೧೭೦೪- ೧೭೧೪ರಲ್ಲಿ ಮೈಸೂರು ಸಂಸ್ಥಾನವನ್ನು ಕಂಠೀವ ಒಡೆಯರು ಆಳುತ್ತಿದ್ದರು. ಆಗ ಇಲ್ಲಿಯವರೆಗೂ ವೀರಶೈವಧರ್ಮ ಪಾಲಿಸುತ್ತಿದ್ದ ಅರಸ ಪರಿವಾರದವರು ಶ್ರಿ ವೈಷ್ಣವ ಧರ್ಮಕ್ಕೆ ತಿರುಗಿತ್ತು. ಆಗ ವೈಷ್ಣವ ಸಾಹಿತ್ಯ ಪ್ರಚಲಿತಕ್ಕೆ ಬಂದಿದ್ದು ಗಮನಿಸತಕ್ಕದ್ದು. ಚಿಕ್ಕದೇವರಾಯನ ಕಾಲದಲ್ಲಿ ಷಡಕ್ಷರಯ್ಯಾ ಎಂಬ ಜಂಗಮನು ಆಸ್ಥಾನ ಮಂತ್ರಿ ಇದ್ದರೂ, ರಾಜನ ಆಪ್ತನಾದ ವಿಶಾಲಕ್ಷ ಪಂಡಿತನು ವೈಷ್ಣವನಾಗಿದ್ದನು. ಇವನ ಮಾತೇ ವೇದವಾಕ್ಯವಾಗಿತ್ತು.

ಒಮ್ಮೆ ಮಳೆ, ಬೆಳೆ, ಇಲ್ಲದೆ ಜನರು ತತ್ತರಿಸುತ್ತಿರುವಾಗ ಜನರು ಹಾಹಾಕಾರ ಎದ್ದರು. ಇದು ಅವರ ನೈಜ ಕಾರ್ಯವಾದರೂ ಇದಕ್ಕೆ ಲಿಂಗವಂತ ಜಂಗಮರೇ ಕಾರಣರೆಂದು

ವಿಶಾಲಕ್ಷ ಪಂಡಿತ ಜನನಂಬುವಂತೆ ರಾಜಗೆ ತಲೆದೂಗುವಂತೆ ಹೇಳಿದ. ಹೀಗಾಗಿ ಜಂಗಮರನ್ನು ನಾಶಗೊಳಿಸಬೇಕೆಂದು ಕುತಂತ್ರದಿಂದ ನಂಜನಗೂಡಿನಲ್ಲಿ ದಾಸೋಹ ಜಂಗಮರಾಧನೆ ಮಾಡಿದರೆ ಮಳೆ, ಬೆಳೆ ಇದ್ದ ಬರಗಾಲವನ್ನು ಹೋಗಿ ಸುಧಾರಿತ ಸ್ಥಿತಿಗೆ ಬರುತ್ತದೆಂದು ನೆಪದಲ್ಲಿ ಜಂಗಮರ ಸಮೂಹವೆ ಸೇರುವಂತೆ ಮಾಡಿದರು.

ಜಂಗಮ ಜಗಭರಿತನು ಎನ್ನುವಂತೆ ಕರೆದ ಭಕ್ತರ ಮನೆಗೆ ಹೋಗುವುದು ಧರ್ಮ ತತ್ವಗಳನ್ನು ಪ್ರಸಾರ ಮಾಡುವುದೇ ಇವನ ಕಾಯಕವಾಗಿದ್ದರಿಂದ ಎಲ್ಲಾ ಜಂಗಮರು ರಾಜ ಭವನದಲ್ಲಿ ಭೋಜನವನ್ನು ಮುಗಿಸಿಕೊಂಡು ದಕ್ಷಿಣೆಗಳನ್ನು ಪಡೆದು ಹೋರಬರುತ್ತಿರುವಾಗ ಇದಕ್ಕೆ ತಡೆದು ಹಿಂದಿನ ಬಾಗಿಲಿನಿಂದ ಹೊರಗೆ ಹೋಗಬೇಕೆಂದು ಹೇಳಿದರು. ಆಗ ಒಬ್ಬರೂ ಹಿಂದಿನ ಬಾಗಿಲಿನಿಂದ ಹೋಗಬೇಕಾದರೆ ಹೊರ ಬಾಗಿಲಲ್ಲಿ ಕಟುಕ ಜಟ್ಟಿಗಳು ಜಂಗಮರನ್ನು ಹಿಡಿದು ಅವರ ತಲೆಯನ್ನು ಕತ್ತರಿಸಿ ತೋಡಿದ ಕಂದಕದಲ್ಲಿ ಹಾಕಿದರು. ಇಂತಹ ಒಂದು ಮೋಸತನ ಯಾವ ಧರ್ಮದಲ್ಲಿ ನಡೆದಿಲ್ಲವೆಂದು ಹೇಳಬೇಕಾಗುತ್ತದೆ. ಅಂದಿನ ಕಾಲದಲ್ಲಿ ಸುಮಾರು ೪೦೦ ಜಂಗಮರು ಕೊಲೆಯಾಗಿದ್ದು ಅಲ್ಲದೆ ಮೈಸೂರ ಪ್ರಾಂತದಲ್ಲಿರುವ ೭೦೦ ಮಠಗಳು ನಾಶಗೊಳಿಸಿದರು ಎಂದು ಚರಿತ್ರೆ ದಾಖಲಿಸಿದೆ(ಎಚ್. ಎಂ.ವೀರಭದ್ರಶರ್ಮ:೧೯೯೧:೬೦). ಸಮಾಜದಲ್ಲಿ ಇನ್ನೊಬ್ಬರ ಉದ್ಧಾರಕ್ಕಾಗಿ, ಬೆಳವಣಿಗೆಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟ ಜಂಗಮರನ್ನು ಕೊಲೆ ಮಾಡಿಸಿದ ಘಟನೆ ನೆನೆಸಿಕೊಂಡರೆ ಅರ್ಥವಾಗುವುದು. ಆದರೆ ವೈರಿಗಳೆಲ್ಲರೂ ನಮ್ಮವರೆಂದು ತಿಳಿದು ಯಾವ ಭಕ್ತರು ಎಲ್ಲಿ ಕರೆದರೂ ಬಂದು ತಮ್ಮ ಪೂಜಾದಿಗಳನ್ನು ಮುಗಿಸಿ ಭಕ್ತರಿಗೆ ಬೋಧನೆ ಮಾಡಿ ಬರುತ್ತಿದ್ದರು. ಹಿಂದಿನಂತೆಯೇ ಇಂದಿಗೂ ಎಷ್ಟೋ ಭಕ್ತರು ನೂರು, ಸಾವಿರ ಜಂಗಮರಿಗೆ ಭಿನ್ನಕ್ಕೆ ಕರೆಯುತ್ತಾರೆ. ಇವರು ಏಕೆ? ಕರೆಯುತ್ತಿದ್ದಾರೆ ಎಂದು ಪ್ರಶ್ನಿಸುವುದಿಲ್ಲ. ಮತ್ತೆ ಮುಗ್ಧ ಮನಸ್ಸಿನಿಂದ ಹೋಗುತ್ತಾರೆ. ಅಂದಿನಂತೆಯೂ ಇಂದೆಯೂ ಕೆಲವರು ಜಂಗಮರನ್ನು ಟೀಕಿಸುವುದು, ಹೀಯಾಳಿಸುವುದು ಮಾಡುವುದುಂಟು. ಹೀಗೆ ಮಾಡುವುದರಿಂದ ಜಂಗಮರಲ್ಲಿಯೇ ಜಂಗಮ ಕಾಯಕ ಮಾಡಬಾರದೆಂಬ ಭಾವನೆಗಳು ಬಂದು ಹಂತ ಹಂತವಾಗಿ ಕಾಯಕದಲ್ಲಿ ಪರಿವರ್ತೆಯಾಗು ತ್ತಿರುವುದು ಕಾಣುತ್ತಿದ್ದೇವೆ.

ಚಾಲುಕ್ಯ ವಿಕ್ರಮಶಕ ೪೬ ಕ್ರಿ. ಶ. ೧೧೨೧ರಲ್ಲಿ ಬರೆಯಲ್ಪಟ್ಟ ಚಾಲುಕ್ಯರ ಶಾಸನವೊಂದರಲ್ಲಿ ಶ್ರೀ ಸ್ವಾಮಿಯ ಕುರಿತು ಅಂದರೆ ಜಂಗಮರನ್ನೆ ಕುರಿತು ಮತ್ತು ಅವರ ವೈಶಿಷ್ಟ್ಯತೆಯನ್ನು

ಗುರುತಿಸಲಾಗಿದೆ. ಶ್ರೀ ಸ್ವಾಮಿಯ ತೀರ್ಥವೇ ಇಂದಿನ ಜಂಗಮತೀರ್ಥ ವಾಗಿರುವುದು. ಆ ಕಾಲದಲ್ಲಿ ಜಂಗಮರನ್ನು ಸಾಕ್ಷತ್ ಶಿವನನ್ನಾಗಿ ತಿಳಿದಿದ್ದರಿಂದ ಅವರಿಗೆ ಭೂದಾನ, ಧನ-ಕನಕ ಇತ್ಯಾದಿ ಕೊಟ್ಟು ಸಂತೃಪ್ತಪಡಿಸಿ ಗೌರವಿಸುತ್ತಿರುವುದು ಮದ್ರಾಸ್ ಗವರ್ನಮೆಂಟಿನವರು ೧೯೩೯ರಲ್ಲಿ ಪ್ರಕಟಿಸಿರುವ ಸೌಥ ಇಂಡಿಯನ್ ಇನಸ್ಕಿಪ್ಸೆನ್ಸ್, ಸಂ.೯, ಭಾ-೧ ಪುಸ್ತಕದಲ್ಲಿ ೧೯೮ನೇ ಪುಟದಲ್ಲಿ ಬಳ್ಳಾರಿ ಜಿ : ಹುವಿನಹಡಗಲಿ ತಾ : ಸೋಗಿ ಗ್ರಾಮದಲ್ಲಿ ಸಿಕ್ಕ ಶಾಸನದಲ್ಲಿರುವ ಉಲ್ಲೇಖ ಗಮನಿಸಬಹುದಾಗಿದೆ.

ಹೀಗೆ ಇನ್ನು ಅನೇಕ ಶಾಸನಗಳಾದ ಅವ್ವೆರಹಳ್ಳಿಯ (ಕ್ರಿ. ಶ. ೧೧೯೩) ಮಸೂತಿ (ಕ್ರಿ. ಶ. ೧೧೫೨) ನರೇಗಲ್ಲ (ಕ್ರಿ.ಶ. ೧೧೧೨) ಇಂಗಳಗಿ-(ಕ್ರಿ. ಶ. ೧೨೧೦) ಚೌಡದಾನಪುರದ ಶಾಸನ (ಕ್ರಿ. ಶ. ೧೨೬೩) ಯಡ್ರಮಿ ಶಾಸನ(೧೧೮೦). ಹೀಗೆ ಹಲವಾರು ಶಾಸನಗಳಿಂದ ಮತ್ತು ಪುರಾತನ ಪುರಾಣಗಳಿಂದ ಜನಪದರ ಹಾಡುಗಳ ಮೂಲಕ ಜಂಗಮರು ಸಮಾಜದಲ್ಲಿ ಮಾಡಿಕೊಂಡು ಬರುವ ಸೇವೆಯ ಕುರಿತುಕೊಂಡಾಡಿದ ಅವರ ವೈಶಿಷ್ಟ್ಯ, ವಿಶೇಷತೆಯನ್ನು ಅವಲೋಕಿಸಿದಾಗ ಸಿಂಧು ನದಿಯ ನಾಗರೀಕತೆಯ ಪೂರ್ವದ ಕಾಲದಿಂದಲೂ ಒಂದಲ್ಲ ಒಂದು ಹೆಸರಿನಿಂದ ವೀರಶೈವ ಧರ್ಮ ಪ್ರಸಾರ ಮತ್ತು ಜನ ಸೇವೆಯನ್ನು ಮಾಡುತ್ತಾ ಎಲ್ಲಾ ಕಡೆ ಸಂಚರಿಸುವುದು ನೋಡಬಹುದಾಗಿದೆ. ಅಂದರೆ ವೀರಶೈವ (ಶೈವ) ಧರ್ಮವು ಹುಟ್ಟಿನಿಂದಲೇ ಪ್ರಾಚೀನತೆ ಗುರುತಿಸುವಂತೆ ಜಂಗಮರ ಪ್ರಾಚೀನತೆಯುಂಟು. ಜಂಗಮರ ಗುರುಗಳಾದ ಪಂಚಾಚಾರ್ಯರು ನೂರಾರು ಶಾಸನಗಳಲ್ಲಿ ಕಂಡು ಬರುವುದರಿಂದ ಈ ಪಂಚಾಚಾರ್ಯ ಜಂಗಮರು ಕೇವಲ ಪೌರಾಣಿಕ ವ್ಯಕ್ತಿಗಳಾಗಿರದೆ ಐತಿಹಾಸಿಕ ವ್ಯಕ್ತಿಗಳೆಂದು ಖಚಿತವಾಗಿ ತಿಳಿಯುತ್ತದೆ. ಆದ್ದರಿಂದ ಪಂಚಾಚಾರ್ಯ ಜಂಗಮರು ಪ್ರಾಚೀನ ಕಾಲದಲ್ಲಿ ಶಕ್ತಿ ವಿಸಿಷ್ಟಾದ್ವೆತ ಸಿದ್ದಾಂತ ವನ್ನು ಮೊಟ್ಟಮೊದಲು ಭೂಲೋಕದಲ್ಲಿ ಪ್ರಚಾರ ಮಾಡಿ ವೀರಶೈವ ಧರ್ಮವನ್ನು ಹುಟ್ಟುಹಾಕಿದವರು ಪಂಚಾಚಾರ್ಯ ಜಂಗಮರೆಂದು(ವಿದ್ವಾಂಸರ ಮತವಾಗಿದೆ) ಒಪ್ಪಬಹುದಾಗಿದೆ. ಇಂದಿನ ವೀರಮಹೇಶ್ವರ ಜನಾಂಗಕ್ಕೆ ಅಥವಾ ಸಮುದಾಯಕ್ಕೆ ಇವರೇ ಮೂಲ ಜಂಗಮರು ಇವರೇ ಪ್ರಾಚೀನ ಕಾಲದಿಂದಲೂ ಈ ಸಮಾಜದಲ್ಲಿ ಹಲವಾರು ಹೆಸರುಗಳಿಂದ ಕರೆಯಿಸಿಕೊಂಡು ಬಂದಿರುವರೆ ಜಂಗಮರು.

## ೪. ಜಂಗಮರು ನಡೆದ ಬಂದ ದಾರಿ

ಸೃಷ್ಟಿಯ ಉತ್ಪತ್ತಿಯು ಶೂನ್ಯದಿಂದ ಅಂದರೆ ಪರಮಾತ್ಮನಿಂದ ಆಯಿತು. ಪ್ರಾಣ ಮತ್ತು ಆತ್ಮದ ಸ್ಪಂದನೆ ಹಾಗೂ ಗತಾಗತಿಯಾದ, ಧ್ವನಿಯು ಉತ್ಪತ್ತಿಯಾಯಿತು. ಅದೇ ಓಂ

ಎನ್ನುವ ಶಕ್ತಿ ಉತ್ಪತ್ತಿಯಾಯಿತು. ಶಕ್ತಿಯಿಂದ ಶಿವನ ಉತ್ಪತ್ತಿ, ಶಿವನಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಉತ್ಪತ್ತಿಯಾದರು. ಈ ದೇವತೆಗಳಿಂದ ಆಕಾಶವನ್ನು ಸೃಷ್ಟಿಸಿ, ಅದರಲ್ಲಿ ಬ್ರಹ್ಮಾಂಡವನ್ನು ಸೃಷ್ಟಿಸಲಾಯಿತು. ಆಗ ಅದರಲ್ಲಿ ವಾಯು, ಅಪ್ಪು, ಅಗ್ನಿ, ಸಸ್ಯಗಳು, ಪ್ರಾಣಿಗಳು, ಪಕ್ಷಿಗಳು ಹಾಗೂ ಎಲ್ಲಾ ಚರಾಚರ ಜೀವಿಗಳು, ವಿವಿಧ ಜನಾಂಗಗಳು ಬ್ರಹ್ಮನಿಂದ ಉತ್ಪತ್ತಿ ಮಾಡಲ್ಪಟ್ಟವು ಎನ್ನಲಾಗಿದೆ( ವೀರಭದ್ರಶರ್ಮ ಎಂ.ಎಲ್., ೧೯೯೧, ಪು.೯೧).

'ಯದಾಯದಾಹಿ ಧರ್ಮಸ್ಯ ಹಾನಿ ; ಶೈವಸ್ಯ ಜಾಯತೇ
ತದತದಾವ ತಾರೋಯಂ ಗಣೇಶಾನಾಂ ಮಹೀತತೇ'

ಎಂಬಂತೆ ಶೈವ ಧರ್ಮಕ್ಕೆ ಅಥವಾ ಧರ್ಮ ಪ್ರಸಾರಕ್ಕೆ ಯಾವಾಗ ಹಾನಿ ಸಂಭವಿಸುವುದೋ ಆಯಾ ಕಾಲಗಳಲ್ಲಿ ಈ ಭೂಮಿಯಲ್ಲಿ ಪ್ರಮಥಗಣರು ಅವತರಿಸುವರು ಎಂದು ಶಂಕರ ಸಂಹಿತೆ ಧರ್ಮೋದ್ಧಾರಕ್ಕಾಗಿ ಪ್ರಮಥರು ಆವಾಗ್ಗೆ ಅವತರಿಸುವರೆಂದು ತಿಳಿಸಿದೆ. ಹೀಗಾಗಿಯೇ ಲೋಕಕಲ್ಯಾಣಕ್ಕೂ ಪರಮಾತ್ಮನೇ ಯುಗ ಯುಗದಲ್ಲಿ ಅವತರಿಸಿ ಮಾನವನ ಸಮಾಜವನ್ನೆ ಕತ್ತೆಲೆಯಿಂದ ಬೆಳಕಿಗೆ ಒಯ್ಯುತ್ತಿರುವನು. ಲೋಕದಲ್ಲಿ ಅಧರ್ಮ ಹೆಚ್ಚಾದರೆ ಧರ್ಮಕ್ಕೆ ಗ್ಲಾನಿಯುಂಟಾಗುವುದನ್ನು ಅವನು ಎಂದೆಂದಿಗೂ ಸಹಿಸಲಾರನು. ಹಾಗೆಯೇ ಸಾಧುಗಳು ಸಂತಾಪ ಪಡುವುದನ್ನು ಪಾಪಿಗಳುದುರಹಂಕಾರದಿಂದ ಮೆರೆಯುವುದನ್ನು ಅವನು ಒಪ್ಪಲಾರನು. ಜಗತ್ತೆಲ್ಲವು ಅವನ ಲಿಂಲಾಂಗ ಸ್ಥಳವೇ ಆಗಿರುವುದರಿಂದ ಪ್ರತಿಯೊಬ್ಬ ಜೀವಿಯೂ ಅವನ ಚೇತನದ ನೇರವಾದ ಅಂಶವಾಗಿರುವುದರಿಂದ ಅವನಿಗೆ ನಮ್ಮ ಮೇಲೆ ಅಪಾರ ಕರುಣೆ ಕಾಳಜಿಯಿದೆ. ಜಗದ ಉದ್ಧಾರಕ್ಕಾಗಿ ಉದ್ಭವಿಸಿ ಬರುತ್ತಾನೆ. ಹಾಗೆಯೇ ಅವತರಿಸಿದ ಮಹಾ ಪುರುಷರೇ ರೇಣುಕಾಚಾರರ್ಯ ರೆಂದೂ ಬಸವಾದಿ ಪ್ರಮಥರೆಂದೂ ಮಿಶ್ರುತವಾಗಿರುವರು. ಸೃಷ್ಠಿಯಲ್ಲಿಯ ಎಲ್ಲಾ ಜನಾಂಗವನ್ನು ವ್ಯವಸ್ಥೆಗೊಳಿಸಲುಶಿವನ ಮುಖದಿಂದ

೧. ಸದ್ಯೋಜಾತ

೨. ವಾಮದೇವ

೩. ಅಘೋರ

೪. ತತ್ಪುರುಷ

೫. ಈಶಾನ

ಇವುಗಳು ಕ್ರಮವಾಗಿ ಪಂಚಾಚಾರ್ಯರು.

೧. ರೇವಣರಾಧ್ಯ

೨. ಮರುಳಾರಾಧ್ಯಯ

೩. ಏಕೋರಾಮಾರಾಧ್ಯ

೪. ಪಂಡಿತಾರಾಧ್ಯ

೫. ವಿಶ್ವರಾಧ್ಯ

೧. ರೇಣುಕಾಚಾರ್ಯರು ನಿಜಾಮ ರಾಜ್ಯಕ್ಕೆ ಸೇರಿದ ಕುಲ್ಯಪಾಕ ಕ್ಷೇತ್ರದಲ್ಲಿರುವ ಶ್ರೀ ಸೋಮೇಶ್ವರಲಿಂಗದಿಂದ ಅವತರಿಸಿ ಮಲಯಾಚಲವೆಂದು ಹೆಸರು ಪಡೆದಿರುವ ಮಲೆನಾಡಿನ ಇಂದಿನ ಚಿಕ್ಕಮಂಗಳೂರ ಜಿಲ್ಲೆಯಬಾಳೆಹೊನ್ನುರಿನಲ್ಲಿ ರಂಭಾಪೂರಿ ಪೀಠವನ್ನು ಸ್ಥಾಪಿಸಿದರು.

೨. ಶ್ರೀ ದಾರುಣಾಚಾರರ್ಯರು ಮಧ್ಯ ಪ್ರದೇಶದ ವಟಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗದಿಂದ ಅವಿರ್ಭಸಿ ಬಳ್ಳಾರಿ ಜಿಲ್ಲೆಯ ಉಜ್ಜಯಿನೀ ಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು.

೩. ಏಕೋರಾಮಾರಾಧ್ಯರು ಆಂಧ್ರದ ಸಪ್ರ ಗೋದಾವರಿ ತೀರದ ಕಾಶಿನಾಥ ಜಿಲ್ಲೆಯ ದ್ರಾಕ್ಷಾ ಗ್ರಾಮದ ರಾಮನಾಥ ಲಿಂಗದಿಂದ ಉದ್ಬವಿಸಿ ಉತ್ತರ ಭಾರತದ ಎತ್ತರದಲ್ಲಿರುವ ಹಿಮವತ್ಕೇದಾರ ಶ್ರಿ ಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು.

೪. ಶ್ರೀ ಜಗದ್ಗುರು ಪಂಡಿತರಾಧ್ಯರು ಆಂಧ್ರ ಪ್ರದೇಶದ ಕರ್ನೂಲ ಜಿಲ್ಲೆಯ ಶ್ರೀ ಶೈಲ್ಯ ಕ್ಷೇತ್ರದಲ್ಲಿ ಶ್ರೀಮಲ್ಲಿಕಾರ್ಜುನ ಲಿಂಗದಿಂದವತರಿಸಿ ಶ್ರೀ ಗಿರಿಯಾಲ್ಲಿಯೋ ಸೂರ್ಯ ಸಿಂಹಾಸನ ಶ್ರೀಶೈಲ್ಯ ಪೀಠವನ್ನು ಸ್ಥಾಪಿಸಿದರು.

೫. ಶ್ರೀ ಜಗದ್ಗುರು ವಿಶ್ವರಾಧ್ಯರು ಕಾಶೀಕ್ಷೇತ್ರದಲ್ಲಿರುವ (ಉತ್ತರ ಪ್ರದೇಶ) ಕಾಶೀ ವಿಶ್ವನಾಥ ಲಿಂಗದಿಂದವತರಿಸಿ ಅಲ್ಲಿಯೇ ಜ್ಞಾನ ಸಿಂಹಾಸನ ಪೀಠವನ್ನು ಸ್ಥಾಪಿಸಿದರು.

ಹೀಗೆ ಶಿವನ ಮುಖಗಳಿಂದ ಹುಟ್ಟಿದರೆಂದು ನಂಬಲಾದ ಐವರು ಪಂಚಚಾರ್ಯ ಇಂದಿಗೂ ಜಂಗಮ ಮೂಲಸ್ಥರು. ಕಲಿಯುಗದಲ್ಲಿ ಈ ಐದು ಪೀಠಗಳನ್ನು ಸ್ಥಾಪಿಸಿದರು. ಇವರ ಮೂಲ ವೀರಶೈವ ಮತದ ಉದ್ಧಾರವಾಗಿತು ಮತ್ತು ಈ ಒಬ್ಬೊಬ ಪಂಚಾಚಾರ್ಯರಿಗೂ ಪ್ರತ್ಯೆಕ ಗೋತ್ರ, ಸೂತ್ರ, ವರ್ಣ, ಮಂತ್ರಗಳುಂಟು, ಅವುಗಳು ಈ ಕೆಳಗಿನ ಪಟ್ಟಿಯಲ್ಲಿ ಕಂಡುಕೊಳ್ಳಬಹುದು(ಇದು ವೀರಶೈವ ಪಂಚಪೀಠ ಪರಂಪರೆ ಉಜ್ಜಯನಿ ಪೀಠದಿಂದ ಪ್ರಕಟವಾದ ಪುಸ್ತಕದಲ್ಲಿ ನೋಡಬಹುದು. ಸಂ:ಅ.ಸಿ.ಹಿರೇಮಠ: ೧೯೯೧).

# ಕೋಷ್ಟಕ-೧. ವೀರಶೈವರ ಧರ್ಮದರ್ಶಿಕೆ

(ವೀರಶೈವರ ಗೋತ್ರ-ಸೂತ್ರಾದಿ ವಿವರಣೆ)

| | ಶ್ರೀ ರಂಭಾಪುರಿ | ಶ್ರೀ ಉಜ್ಜಯಿನಿ | ಶ್ರೀ ಕೇದಾರ | ಶ್ರೀ ಶ್ರೀಶೈಲ | ಶ್ರೀ ಕಾಶಿ |
|---|---|---|---|---|---|
| ೧. ಪರಶಿವನ ಪಂಚಮುಖಗಳು | ಸದ್ಯೋಜಾತ | ವಾಮದೇವ | ಅಘೋರ | ತತ್ಪುರುಷ | ಈಶನ |
| ೨. ಪಂಚಾಚಾರ್ಯರು | ರೇವಣಾರಾಧ್ಯ | ಮರುಳಾರಾಧ್ಯ | ಏಕೋರಾಮರಾಧ್ಯ | ಪಂಡಿತಾರಾಧ್ಯ | ವಿಶ್ವಾರಾಧ್ಯ |
| ಅವರ ಅವತಾರ ಕ್ಷೇತ್ರ | ಕೊಲ್ಲಿಪಾಕಿ | ವಟಕ್ಷೇತ್ರ | ದ್ರಾಕ್ಷಾ ರಾಮಕ್ಷೇತ್ರ | ಶ್ರೀಶೈಲಕ್ಷೇತ್ರ | |
| ಮತ್ತು ಲಿಂಗ | ಸೋಮೇಶ್ವರಲಿಂಗ | ಸಿದ್ಧೇಶ್ವರಲಿಂಗ | ರಾಮನಾಥಲಿಂಗ | ಮಲ್ಲಿಕಾರ್ಜುನಲಿಂಗ | ವಿಶ್ವನಾಥಲಿಂಗ |
| ೩. ಸಿಂಹಾಸನದ ಹೆಸರು | ವೀರಸಿಂಹಾಸನ | ಸದ್ಧರ್ಮಸಿಂಹಾಸನ | ವೈರಾಗ್ಯಸಿಂಹಾಸನ | ಸೂರ್ಯಸಿಂಹಾಸನ | ಜ್ಞಾನಸಿಂಹಾಸನ |
| ೪. ಸಿಂಹಾಸನದ ಸ್ಥಾನ | ಬಾಳೇಹೊನ್ನೂರು | ಉಜ್ಜಯಿನಿ | ಕೇದಾರ | ಶ್ರೀಶೈಲ | ಕಾಶೀ |
| ೫. ಗೋತ್ರಪುರುಷರು | ವೀರ | ನಂದಿ | ಭೃಂಗಿ | ವೃಷಭ | ಸ್ಕಂದ |
| ೬. ಗೋತ್ರ ಪುರುಷರ ಶಕ್ತಿಯರು | ಭದ್ರಕಾಳಿ | ಕುಂಡಲಿನೀ | ಹ್ಲಾದಿನೀ | ಭದ್ರಾ | ದೇವಯಾನೀ |
| ೭. ಮಹಾಸೂತ್ರಗಳು | ಪಡ್ವಿಡಿ | ವೃಷ್ಟಿ | ಲಂಬನ | ಮುಕ್ತಾಗುಚ್ಛ | ಪಂಚವರ್ಣ |
| ೮. ಶಾಖೆಗಳು | ರೇಣುಖ ಶಾಖಾ | ದಾರುಕ ಶಾಖಾ | ಘಂಟಾಕರ್ಣಶಾಖಾ | ಧೇನುಕರ್ಣ ಶಾಖಾ | ವಿಶ್ವಕರ್ಣ ಶಾಖಾ |
| ೯. ಪ್ರವರಗಳು | ಏಕೆಕ್ಷರಶಿವಾಚಾರ್ಯ | ದ್ವ್ಯಕ್ಷರಶಿವಾಚಾರ್ಯ | ತ್ರ್ಯಕ್ಷರಶಿವಾಚಾರ್ಯ | ಚತುರಕ್ಷರ ಶಿವಾಚಾರ್ಯ | ಪಂಚಾಕ್ಷರಶಿವಾಚಾರ್ಯ |
| ೧೦.ವೇದಗಳು | ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವಣವೇದ | ಅಜಪವೇಧ(ಶೈವಾಗಮ) |
| ೧೧.ದಂಡಗಳು | ಅಶ್ವತ್ಥ(ಅರಳಿದಂಡ) | ಪಲಾಶ(ಮುತ್ತಲದಂಡ) | ವೇಣು(ಬಿದಿರಿನದಂಡ) | ನ್ಯಗ್ರೋಧ(ಅಲದದಂಡ) | ಬಿಲ್ವ(ಪ್ರತಿದಂಡ) |
| ೧೨.ಕಮಂಡಲ ಧಾತುಗಳು | ಸುವರ್ಣ | ರಜತ | ತಾಮ್ರ | ಕಬ್ಬಿಣ | ಸೀಸ |

| | | | | | |
|---|---|---|---|---|---|
| ೧೩.ಕಂಥಾ ವರ್ಣಗಳು (ಧ್ವಜವರ್ಣಗಳು) | ಹಸಿರು | ಕೆಂಪು | ನೀಲಿ | ಬಿಳಿ | ಹಳದಿ |
| ೧೪.ತತ್ತ್ವಗಳು | ಪೃಥ್ವೀ | ಜಲ | ತೇಜಸ್ | ವಾಯು | ಆಕಾಶ |
| ೧೫.ಬೀಜ ಮಂತ್ರಗಳು | ನಕಾರ | ಮಕಾರ | ಶಿಕಾರ | ವಾಕಾರ | ಯಕಾರ |
| ೧೬.ಪಂಚಾಕ್ಷರಗಳು ಮೂಲಪಂಚಾಕ್ಷರ | ಪ್ರಸಾದಪಂಚಾಕ್ಷರ | ಮಾಯಾಪಂಚಾಕ್ಷರ | ಸೂಕ್ಷ್ಮಪಂಚಾಕ್ಷರ | ಸ್ಥೂಲಪಂಚಾಕ್ಷರ | |

ಈ ರೀತಿಯಾಗಿ ವೀರಶೈವ ಗೋತ್ರ-ಸೂತ್ರಗಳ ವಿವರಣೆಯನ್ನು ವೀರಶೈವ ಸದಾಚಾರ ಸಂಗ್ರಹ ಮತ್ತು ಪಂಚಾಚಾರ್ಯ ಪಂಚಾಮೋತ್ಪತ್ತಿ ಪ್ರಕರಣ (ಸೋಲಾಪುರ ವಾರದ ಪ್ರಕಾಶನ ೧೯೦೫) ಈ ಗ್ರಂಥಗಳ ಆಧಾರ ಹಾಗೂ ಕಾಶೀ ಪೀಠದಿಂದ ಪ್ರಕಾಶಿತವಾದ ಗೋತ್ರಸೂತ್ರ ಪಟದ ಆಧಾರದಿಂದ ರಚಿಸಲಾಗಿದೆ. ಈ ಪಟದಲ್ಲಿ ಪ್ರಕಟಿಸಲ್ಪಟ್ಟ ವೀರ ನಂದ್ಯಾದಿ ಶಿವಗಣರ ಶಕ್ತಿಯರ ಹೆಸರುಗಳನ್ನು ಕ್ರಿಯಾಸಾರ ಭಾಗ-೨, ಪು.೨೭೮-೨೭೯(ಮೈಸೂರು ಪ್ರಕಾಶನ ೧೯೫೭)ದ ಆಧಾರದಿಂದ ತೆಗೆದುಕೊಳ್ಳಲಾಗಿದೆ.

ಈ ರೀತಿಯಾಗಿ ಒಂದೊಂದು ಪೀಠಕ್ಕೆ ಒಂದೊಂದು ಸೂತ್ರ ಗೊತ್ರ ಬಣ್ಣ, ಮಂತ್ರಗಳುಂಟು. ದೇಶದ ಯಾವುದೇ ಮಠವಿರಲಿ ಜಂಗಮರ ಮನೆವಿರಲಿ ಅದು ಈ ಮೇಲಿನ ಐದು ಪೀಠದಲ್ಲಿ ಒಂದರ ಪೀಠಕ್ಕೆ ಅಂಟಿಕೊಂಡಿರುತ್ತದೆ. ಆ ಪೀಠದ ರೀತಿ ನೀತಿಗಳ ಪ್ರಕಾರಕ್ಕೆ ನಡೆದುಕೊಂಡು ಹೋಗುತ್ತದೆ ಇಂದಿಗೂ ಐದು ಪೀಠದ ಪ್ರಕಾರ ಜಂಗಮರು ನಡೆದುಕೊಂಡು ಸಾಗುತ್ತಿದ್ದಾರೆ. ಕೆಲವುಕಡೆ ಹೆಚ್ಚಿನ ಒತ್ತುಕೊಟ್ಟು ಸಾಗಿದರೆ ಕೆಲವು ಕಡೆ ನೇಮನೀತಿಗಳ ಸಡಿಲಾಗಿರುವುದು ಇಂದು ನೋಡುತ್ತೆವೆ.

ಮುಂದೆ ಈ ಜಂಗಮರು ತಮ್ಮ ಪೀಠದ ಕೆಳಗೆ ಮಠಗಳನ್ನು ನಿರ್ಮಿಸಿ ಅಲ್ಲಿ ಒಬ್ಬೊಬ್ಬರಿಗೆ ಒಂದು ಕೆಲಸಗಳಿಗೆ ಜಂಗಮರಿಗೆ ನೇಮಿಸಿ ಸಮಾಜದ ಆಗು ಹೋಗುಗಳಿಗೆ ವಿಕ್ಷೀಸಿ ಸಮಾಜದಲ್ಲಿ ಸುವ್ಯವಸ್ಥೆ ನಿರ್ಮಾಣ ಮಾಡಿಕೊಂಡು ಮುಂದುವರೆಯಲು ಪಟ್ಟಣ ಹಳ್ಳಿಗಳಿಗೆ ಒಬ್ಬರಿಗೆ ನೇಮಿಸಿದ್ದರು. ಇದುಕೆಳಗಿನ ಜಂಗಮ ವಂಶದ ಪಟ್ಟಿಯ ಮೂಲಕ ತಿಳಿಯಲು ಅನುಕೂಲವಾಗುತ್ತದೆ.

## ೫. ಜಂಗಮರ ವಂಶ ವೃಕ್ಷ




ಈ ರೀತಿಯಿಂದ ಜಂಗಮರು ಸಮಾಜದ ಕಾರ್ಯಗಳಿಗೆ ಮೇಲಿನ ರೀತಿಯಿಂದ ಬೇರೆ ಬೇರೆ ಮಾಡಿದ್ದು ಕಂಡುಬರುತ್ತದೆ. ಆದರೆ ಇವರೆಲ್ಲರು ಮೂಲತ: ಒಂದೇಯಾಗಿರುತ್ತಾರೆ. ಕ್ರಿಯೆಗಳಿಗೆ ಅನುಸಾರವಾಗಿ ಪಂಗಡಗಳು ಯಾಗಿರುವುದನ್ನು ಮಾತ್ರ ತಿಳಿದುಕೊಳ್ಳಬೇಕಾಗಿದೆ. ಆದರೆ ಬರಬರುತ್ತಾ ಜಂಗಮರು ಅವರವರ ಕೆಲಸ ಮಾಡಿಕೊಂಡು ಬರುತ್ತಿದ್ದಂತೆ ಎಲ್ಲಾ ಭಕ್ತ ವರ್ಗದವರು ಇವರು ಪಟ್ಟದೇವರು, ಮಠಪತಿ, ಗಣಾಚಾರಿ ಹೀಗೆ ಕರೆದುಕೊಂಡು ಬರುತ್ತಿದ್ದಂತೆ ಮುಂದೆ ಅವುಗಳು ಜಂಗಮರ ಉಪಪಂಗಡಗಳಾಗಿ ಕಾಣಬಂದವು. ಕೊಡುಕೊಳ್ಳುವಿಕೆಗಳಲ್ಲೂ ಬದಲಾವಣೆಯಾದವು. ಮೂಲ ಒಂದೇ ಆದರೂ ಇತ್ತಿತ್ತಲಾಗಿ ವರ್ಗಗಳಾದವು ಎನ್ನುವುದನ್ನು ತಿಳಿದುಕೊಳ್ಳಬೇಕಾಗಿದೆ.

ಈ ಪಂಚಾಚಾರ್ಯಗಳ ಪೀಠಗಳ ಪೀಠಾಧ್ಯಕ್ಷರು ಸಕಲ ವೀರಶೈವರ ಧಾರ್ಮಿಕ ಆಗು ಹೋಗುಗಳನ್ನು ನೋಡಿಕೊಂಡು ಬರುತ್ತಿರುವುದರ ಜೊತೆಗೆ ನಿರ್ಣಯಿಸುತ್ತಾರೆ. ಇವರಿಗೆ

ಪಂಚಚಾರ್ಯರು ಎಂದು ಕರೆಯುತ್ತಾರೆ. ವಿರಕ್ತ ಮಠಗಳು ಹೊರೆತುಪಡಿಸಿ ಇನ್ನುಳಿದ ಮಠಗಳು ಮೇಲಿನ ಐದು ಪೀಠಗಳಿಗೆ ಹೊಂದಿಕೊಂಡಿರುತ್ತವೆ. ಈ ಐದು ಪಂಚಚಾರ್ಯರು ಸಮಾನರು, ಸ್ವತಂತ್ರರು, ವೀರಶೈವ ಜನಸಮುದಾಯದ ಮೇಲೆ ಸಂಪೂರ್ಣ ಹತೋಟಿ ಮತ್ತು ಜವಾಬ್ದಾರಿಯುಳ್ಳವರು. ಇದರಿಂದ ಈ ಐದು ಪಂಚಚಾರ್ಯರು ಎಲ್ಲಾ ಕಡೆಗೂ ಹೋಗಲು ಸಾಧ್ಯವಿಲ್ಲವಾದ್ದರಿಂದ ಮೇಲಿನ ಜಂಗಮರನ್ನು ನೇಮಿಸಿಕೊಂಡಿದ್ದಾರೆ. ಇವರು ದೇಶಾದ್ಯಂತ ಅವರ ಪ್ರತಿನಿಧಿಯಾಗಿ ಹೊರಟು ಒಂದು ಪೀಠಕ್ಕೆ ಸೇರುತ್ತಾರೆ. ಆಯಾ ಪೀಠಕ್ಕೆ ಮೂಲವಾಗಿ ಉಪಸೂತ್ರಗಳಿರುತ್ತವೆ.

ರೇವಣರಾಧ್ಯರು ಪೀಠ ರಂಭಾಪೂರಿ - ಪಡುವಿಡಿ ಈ ಮಹಾಸೂತ್ರಕ್ಕೆ ೧೨ ಉಪ ಸೂತ್ರಗಳಿವೆ. ಪುರಾಣ, ಪಚ್ಚಕಂಥಾ, ಷಡಂಗ, ಸುರಗೀ, ಮಹರ್ಷೀ, ದಿಗಂಬರ, ವೇಣಿ, ಭಿತ್ತಿ, ಮೋರಟ, ನಾಟೀ, ಶೌರೀ, ಸಂತೂರಗಳಿವೆ.

**ಮರುಳಾರಾಧ್ಯರ : ಮಳೆ (ವೃಷ್ಟಿ) ಈ ಮಹಾಸೂತ್ರದಿಂದ ೧೨ ಸೂತ್ರಗಳು**

೧. ಲೋಹಕಂಥಾ
೨. ಸ್ವರ್ಣಕಂಥಾ
೩. ಶೃಂಗೀ
೪. ಮಸಣೀ
೫. ಕುಠಾರ
೬. ಭೈತ್ರೀ
೭. ಕಠಾರ
೮. ಚಾಮರಿ
೯. ಕವಾಟ
೧೦. ಕುಕ್ಷಕಂಥಾ
೧೧. ಜ್ವಲತ್ಕಂಥಾ
೧೨. ಶೃಂಗಿ

**ಏಕೋರಾಮಾರಾಧ್ಯರ ಲಂಬನ ಸೂತ್ರ ಇದಕ್ಕೆ ೧೨ ಉಪಸೂತ್ರಗಳು**

೧. ತ್ರಿಪುಟಿ
೨. ರಜ್ಜುಕಂಥಾ
೩. ಭಸ್ಮೀ
೪. ಕಾರ್ಪಾಸ (ಶಿಖರಿ)
೫. ರೌಪ್ಯ
೬. ಕೌಪೀ (ಕಾಫಕ)
೭. ಚಂದ್ರಗುಂಡ
೮. ಮೃತ ಕಂಥಾ
೯. ಅಲಕ (ರಾಮಗಿರಿ)
೧೦. ವಸನ (ಪವನ)
೧೧. ಮುಂಡಿ
೧೨. ಖಡ್ಗಿ

**ಪಂಡಿತಾರಾಧ್ಯರ ಮುಕ್ತಾಗುಚ್ಛ (ಮುತ್ತಿನ ಕಂತಿ) ಇದಕ್ಕೆ ೧೨ ಉಪ ಸೂತ್ರಗಳು**

೧. ಗೋಣಿಕಂಥಾ
೨. ದಂತೀ
೩. ಜಠರ
೪. ತ್ರಿಗುಣ
೫. ಕೇಶ ಕಂಥಾ
೬. ಲಲಾಟ
೭. ವಾಘ್ರಕಂಥಾ
೮. ಲೋಚನ
೯. ಭಗಿನೀ
೧೦. ಚಾಲಕಂಥಾ
೧೧. ನಟನ
೧೨. ಬೋದಡಿ

**ವಿಶ್ವಾರಾಧ್ಯರ : ಪಂಚವರ್ಣ ಇದಕ್ಕೆ ಹನ್ನೆರಡು ಉಪಸೂತ್ರಗಳು**

೧. ಕಂಬಾಳಿ
೨. ವೃಷಭ
೩. ಗೋಚರ
೪. ರಜ್ಜುಕಂಥಾ (ಜರತ್ಕಂಥಾ)
೫. ಪಂಚಮುಖ
೬. ವೀಟಿ (ಗುಹಾಗ್ರ)
೭. ದಶಮುಖ
೮. ಗಗನ
೯. ಮುಸಡೀ
೧೦. ಲಗುಡೀ
೧೧. ಶಿಥಿಲೀ
೧೨. ಪಶುಪತಿ

(ಅ.ಸಿ.ಹಿರೇಮಠ:೧೯೯೧:೩೧)

ಈ ಮುಖ್ಯ ಸೂತ್ರಕ್ಕೆ ಹನ್ನೆರಡು ಉಪ ಸೂತ್ರಗಳು ಇರುತ್ತವೆ. ಈ ಉಪಸೂತ್ರಗಳ ಪಟ್ಟದ್ದೇವರು, ಮಠಪತಿ, ಗಣಾಚಾರಿ, ಸ್ಥಾವರಾರ್ಯ ಇವರುಗಳು ಪಂಚಾಚಾರ್ಯರ ಕೆಳಗಿನವರು ಸ್ವಾತಂತ್ರರಾಗಿರುತ್ತಾರೆ. ಇವರು ವೀರಶೈವರಿಗೆ ಹುಟ್ಟಿನಿಂದ ಸಾವಿನವರೆಗೂ ನಡೆಯುವ ಸಂಸ್ಕಾರಾಧಿ ಕ್ರಿಯೆಗಳನ್ನು ಮಾಡುತ್ತ ಜಂಗಮ, ಗುರುಗಳು, ಅಯ್ಯನವರು ಎಂದು ಕರೆಯುತ್ತಾರೆ. ವೀರಶೈವರ ಪ್ರತಿಯೊಂದು ಕಾರ್ಯಗಳಲ್ಲಿ ಪಂಚಚಾರ್ಯರ ಪರವಾಗಿ ಭಕ್ತರನ್ನು ಶಿಕ್ಷಿಸುವ, ರಕ್ಷಿಸುವ ಹೊಣೆ ಇವರದಾಗಿರುತ್ತದೆ. ಅಲ್ಲದೆ ಇತರ ಯಾವುದೇ ಸಂಸ್ಕಾರಗಳಲ್ಲಿ ಪಂಚಚಾರ್ಯರ ಪ್ರತಿರೂಪ ಪಂಚಕಲಶವನ್ನು ಹೂಡಿ ಕ್ರಿಯೆಗಳನ್ನು ಮುಂದುವರೆಸುತ್ತಾರೆ. ಅಂದರೆ ಗೋಚರವಾಗಿ ಪಂಚಕಲಶಕ್ಕೆ ಪಂಚಚಾರ್ಯರೆಂದು ತಿಳಿಯುತ್ತಾರೆ. ಒಟ್ಟಿನಲ್ಲಿ ಪಂಚಪೀಠಜಂಗಮರಿಗೂ ಮತ್ತು ವೀರಶೈವ ಭಕ್ತರಿಗೂ ಮಧ್ಯ ಕೊಂಡಿಯಂತೆ ಕೆಲಸವನ್ನು ನಿರ್ವಹಿಸಿಕೊಂಡು ಸಾಗುತ್ತಾರೆ.

೧. ಪಟ್ಟದೇವರು (ಮಠಾರ್ಯಾ ಮತ್ತು ಮಠಸ್ಥ)

೨. ಮಠಪತಿ (ಮಾಲಾರ್ಯ)

೩. ಸುಕಾಸ್ಥಿ

೪. ಗಣಾಚಾರಿ

೫. ಸ್ಥಾವರಾರ್ಯ

೬. ಗಣಕುಮಾರ (ಕೌಮಾರ್ಯ)

ಮತ್ತೆ ಈ ಐವರಲ್ಲಿ ಕಲ್ಪನೆಯೆಂದರೆ ಪಟ್ಟದೇವರು ಶಿವನ ಹೃದಯದಿಂದಲೂ ಗಣಾಚಾರಿ-ಬಲಗಡೆ ಹೆಗಲಿನಿಂದಲೂ, ಮಠಪತಿ ಎಡದ ಹೆಗಲಿನಿಂದಲೂ, ಸ್ಥಾವರಾರ್ಯನು ಬಲಪಾದದಿಂದಲೂ, ಕೌಮಾರ್ಯನು ಎಡಪಾದದಿಂದಲೂ ಬಂದಿದ್ದರೆಂದು ಕಲ್ಪಿಸಿಕೊಳ್ಳಲಾಗಿದೆ. ಇವರು ಪಂಚಾಚಾರ್ಯರ ಆದೇಶದಂತೆ ನಡೆದುಕೊಳ್ಳುವರು ಅಂದರೆ ಒಂದು ರೀತಿಯಲ್ಲಿ ಸೇವಕರಿರುವಂತೆ. ಇವರಲ್ಲಿ ಪಟ್ಟದೇವರು(ಹಿರೇಮಠ) ಮಾತ್ರ ಪೂಜ್ಯನೆಂದು ಉಳಿದವರೆಲ್ಲರು ಅಪೂಜ್ಯರೂ ಅಸ್ವತಂತ್ರ ಆಗಿದ್ದು ಪಟ್ಟದೇವರಿಗೆ ಒಂದೊಂದು ಸಂದರ್ಭದಲ್ಲಿ ಸಹಾಯಕರಾಗಿ ವ್ಯವಸ್ಥೆ ಮಾಡುತ್ತಾರೆ.

ದೇಶಾದ್ಯಂತ ಹಲವಾರು ಕಡೆ ಪಟ್ಟದೇವರು, ಗಣಾಚಾರಿ, ಮಠಪತಿ, ಸ್ಥಾವರಾರ್ಯ ಮತ್ತು ಗಣಕುಮಾರರು ಕಂಡು ಬರುವುದುಂಟು. ಆದರೆ ನಮ್ಮ ಜಿಲ್ಲೆಯಾದಂತ್ಯ ಪಟ್ಟದೇವರು ಗಣಾಚಾರಿ, ಸುಕಾಸ್ಥಿ ಮತ್ತು ಮಠಪತಿ ಇದ್ದಿರುವುದು ಕಾಣುತ್ತದೆ. ಇನ್ನುಳಿದವರು ಕಂಡು ಬರುವುದಿಲ್ಲ.

## ೬. ಜಂಗಮರಲ್ಲಿ ವರ್ಗಗಳು

**೬.೧. ಪಟ್ಟದೇವರು(ಮಠಸ್ಥ ಅಥವಾ ಪಟ್ಟದೇವರು):** ಪಟ್ಟದೇವರು ಹಿರೇಮಠದ ಗುರುಗಳಾಗಿರುತ್ತಾರೆ. ಇವರು ಉಳಿದವರಿಗಿಂತ ಶ್ರೇಷ್ಠರಾಗಿರುತ್ತಾರೆ. ಪಟ್ಟದೇವರುಗಳು ಹೆಚ್ಚಾಗಿ ಬ್ರಹ್ಮಚಾರಿಯಾಗಿರುತ್ತಾರೆ. ಕಾವಿಧರಿಸಿದ ಜಂಗಮರಾಗಿರುತ್ತಾರೆ. ಇವರಿಗೆ ಪಟ್ಟದೇವರು, ಪಟ್ಟಚಾರ್ಯ ಮತ್ತು ಪಟ್ಟಮೂರ್ತಿ ಎಂದು ಕರೆಯುವರು. ಇವರಲ್ಲೇ ಹಿರೇಮಠದವರು ಎಲ್ಲರಂತೆ ಸಂಸಾರಿಗಳಾಗಿದ್ದುಕೊಂಡು ಎಲ್ಲರಂತೆ ಬಟ್ಟೆಗಳನ್ನು ಧರಿಸುತ್ತ ವೀರಶೈವ ಭಕ್ತರ ಮನೆಯಲ್ಲಿ ಪೂಜ್ಯಗೊಳ್ಳುವವರನ್ನೆ ಹಿರೇಮಠದ ಆಯ್ಯರು ಎಂದು ಕರೆಯುವುದುಂಟು. ಮಠ, ಹಿರೇಮಠ, ಎಲ್ಲರೂ ಮಠಸ್ಥರೇಯಾಗಿರುತ್ತಾರೆ. ಹಿರೇಮಠದವರಿಗೂ ಮತ್ತು ಪಟ್ಟದೇವರಿಗೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಹಿರೇಮಠದವರು

ಗೃಹಸ್ಥರಾಗಿರುತ್ತಾರೆ, ಮಠಸ್ಥರು ವಿರಕ್ತರಾಗಿರುತ್ತಾರೆ. ಪಟ್ಟದೇವ ಕೂಡ ಹಿರೇಮಠದವರೆಯಾಗಿರುತ್ತಾರೆ. ಆದರೆ ಬ್ರಹ್ಮಚಾರಿಗಳಾಗಿರುವುದರಿಂದ ಹಗಲು ರಾತ್ರಿ ಮಠದಲ್ಲೇ ಇದ್ದು ಭಕ್ತವರ್ಗಕ್ಕೆ ಮಾರ್ಗದರ್ಶನ ಮಾಡುತ್ತಾರೆ. ಹೀಗಾಗಿ ಇವರ ಸ್ಥಾನ ದೊಡ್ಡದಾಗಿರುತ್ತದೆ.

ಪಟ್ಟದೇವರು ಸಂಪೂರ್ಣವಾಗಿ ಕಾವಿ ವಸ್ತ್ರವನ್ನು ಧರಿಸುತ್ತಾರೆ. ೨೦,೩೦ ಹಳ್ಳಿಗಳಿಗೆ ಒಂದು ಪಟ್ಟದೇವರ ಮಠವಿರುತ್ತದೆ. ಆದರೆ ಕೆಳಗೆ ಪ್ರತಿಯೊಂದು ಊರುಗಳಲ್ಲಿ ಹಿರೇಮಠದವರ ಒಂದು ಮನೆ ಅಥವಾ ಎರಡು ಮನೆಗಳಿರುತ್ತವೆ. ಅವುಗಳ ಮೂಲಕ ಪಟ್ಟದೇವರು ಸಮಾಜದಲ್ಲಿನ ಕಾಯಕಗಳು ನೇರವೇರಿಸಿಕೊಂಡು ಸಾಗುತ್ತಾರೆ. ಪಟ್ಟದೇವರ ಮಠಗಳಲ್ಲಿ ಎರಡು ಪ್ರಕಾರ ಕಾಣುತ್ತೇವೆ.

೧. ಪುತ್ರ ವರ್ಗದ ಮಠ
೨. ಶಿಷ್ಯ ವರ್ಗದ ಮಠಗಳಿರುತ್ತವೆ.

೧. ಪುತ್ರವರ್ಗದ ಮಠದ ಪಟ್ಟದೇವರು (ಬ್ರಹ್ಮಚಾರಿ) ತನ್ನ ಅಣ್ಣ ತಮ್ಮಂದಿರ ಮಕ್ಕಳನ್ನು ಕೊಂಡು ತನ್ನ ಸ್ಥಳಕ್ಕೆ ಉತ್ತರಾಧಿಕಾರಿಯಾಗಿ ಮಾಡಿಕೊಳ್ಳುವುದು.

೨. ಪಟ್ಟದೇವರ ಅಣ್ಣ - ತಮ್ಮನ ಮಕ್ಕಳು ಇರದೇ ಇದ್ದಾಗ ಪಕ್ಕದ ಊರಿನಿಂದಾಗಲಿ, ಅಥವಾ ಲಿಂಗಾಯತರ ಪುತ್ರನನ್ನೇ ಕರೆದುಕೊಂಡು ಹುಡುಗನಿಗೆ ಎಲ್ಲಾ ರೀತಿಯ ಜ್ಞಾನವನ್ನು ದಯಪಾಲಿಸಿ, ಲಿಂಗಧಾರಣೆ, ಅಯ್ಯಾಚಾರ ದೀಕ್ಷೆ ಎಲ್ಲಾ ನೀಡಿ ತನ್ನ ಉತ್ತರಾಧಿಕಾರಿಯಾಗಿ ಮಾಡಿಕೊಳ್ಳುವುದಕ್ಕೆ ಶಿಷ್ಯವರ್ಗವೆಂದು ಕರೆಯುತ್ತಾರೆ. ಕೆಲವು ಮಠಗಳಲ್ಲಿ ಲಿಂಗಾಯತ ಹುಡುಗರನ್ನೇ ಕರೆದುಕೊಂಡು ದೀಕ್ಷೆಯನ್ನು ನೀಡಿ ಉತ್ತರಾಧಿಕಾರಿಯಾಗಿ ಮಾಡಿಕೊಂಡಿರುವ ಉದಾಹರಣೆಗಳನ್ನು ಗಮನಿಸಬಹುದು. ಬ್ರಹ್ಮಚಾರಿ ಪಟ್ಟದೇವರು ತಮ್ಮ ಅಣ್ಣನವರ, ತಮ್ಮನವರ ಮನೆಯಲ್ಲಿ ಇದ್ದುಕೊಂಡು ತಮ್ಮ ಕಾರ್ಯಗಳನ್ನು ಮಾಡುತ್ತಿರುವುದು ಕೂಡ ಕಂಡು ಬರುತ್ತದೆ.

ಪಟ್ಟದ ಮಠದ ಪ್ರಾದೇಶಿಕ ವ್ಯಾಪ್ತಿ ದೊಡ್ಡದಾಗಿದ್ದರೆ, ಅಲ್ಲಿ ಪಟ್ಟ ಮತ್ತು ಚರ ಎಂಬ ಇಬ್ಬರು ಸ್ವಾಮಿಗಳ ವ್ಯವಸ್ಥೆ ಕೆಲವೆಡೆ ಇದೆ. ಇಬ್ಬರೂ ಬ್ರಹ್ಮಚಾರಿಗಳಾದರೂ ಪಟ್ಟದ ಸ್ವಾಮಿಗಳು ಮಠದಲ್ಲೇ ಇದ್ದುಕೊಂಡು ಎಲ್ಲ ಆಗುಹೋಗುಗಳನ್ನು ನೋಡಿಕೊಂಡರೆ ಚರದ ಸ್ವಾಮಿಗಳು ಹಳ್ಳಿಗಳಲ್ಲಿ ಸಂಚರಿಸಿ ಉಪದೇಶ ಕಾಣಿಕೆ ಸಂಗ್ರಹಗಳನ್ನು ಮಾಡುತ್ತಾರೆ. ಪಟ್ಟದೇವರು ತೀರಿದರೆ ಚರ ದೇವರು ಆ ಜಾಗಕ್ಕೆ ಬಂದಿರುವ ಉದಾಹರಣೆಗಳಿವೆ. ಚರದ ಸ್ಥಾನಕ್ಕೆ ಮಾತ್ರ ಸಂಸಾರಸ್ಥರನ್ನು ನೇಮಿಸಲು ಅವಕಾಶವಿದೆ. ಚರ ಜಂಗಮರು ಗಂಟೆ

ಕಾಯಕ, ಗದ್ದುಗೆ ಕಾಯಕ, ಮುಳ್ಳಾವಿಗೆ ಕಾಯಕವೇ ಹೀಗೆ ಮೊದಲಾದ ಕಾಯಕಗಳ ಮೂಲಕ ಹಳ್ಳಿ ಹಳ್ಳಿಗಳಲ್ಲಿ ಧರ್ಮ ಜಾಗೃತಿ ಮಾಡುತ್ತಾರೆ (ಹಿರೇಮಲ್ಲೂರ, ಈಶ್ವರನ, ೧೯೮೨, ಪು : ೧೬೯ - ೭೦).

'ಗುರುರ್ದೆವೋಯತ ಸ್ಸಾಕ್ಷಾತ್ತದ್ಗ್ರಹರಿ ದೇವ ಮಂದಿರಂ' ಗುರು ಮಠಗಳನ್ನು ಶಿವಾಲಯಗಳ ನ್ನಾಗಿಯೂ ಅಲ್ಲಿನ ಗುರುಗಳಿಗೆ ಸಾಕ್ಷತ್ ಶಿವನಂತೆ ತಿಳಿದುಕೊಳ್ಳುತ್ತಾರೆ. ಗುರು ಮಠದ ಜಂಗಮರಿಗೆ ಇಷ್ಟು ಪ್ರಾಶಸ್ತ್ಯ ಬರಬೇಕಾದರೆ ಎಷ್ಟು ಪರಿಶುದ್ಧವಾಗಿರ ಬೇಕೆಂಬುದನ್ನು ಗಮನಿಸತಕ್ಕದ್ದು. ಮಠಸ್ಥ ಕೂಡ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ರತ್ನತ್ರೇಯ ಗಳನ್ನು ಧರಿಸಿ ಶಿಷ್ಯೋದ್ಧಾರದ ವೃತ್ತಿಯನ್ನೇ ಕೈಗೊಂಡಿದ್ದರು. ಭಕ್ತರು ಇಡೀ ದಿನ ವ್ಯವಸಾಯ, ವ್ಯಾಪಾರ ಮುಂತಾದ ಕೆಲಸಗಳಲ್ಲಿ ಲೌಕಿಕ ಕಸುಬುಗಳಲ್ಲಿ ಆಯಾಸ ಪಟ್ಟು ಸಾಯಂಕಾಲದಲ್ಲಿ ವಿಶ್ರಾಂತಿಗೋಸ್ಕರ ಜಂಗಮ ಮಠಗಳಿಗೆ ಹೋಗಿ ಜಂಗಮರ ದರ್ಶನವನ್ನು ಮಾಡಿ ಬೋಧಾಮೃತ ಪಾನದಿಂದ ತೃಪ್ತರಾಗಿ ಸಂತೋಷದಿಂದ ಮನಸ್ಸಿನ ದಣಿವಾರಿಸಿಕೊಂಡು ತಮ್ಮ ಮನೆಗೆ ಹೋಗುತ್ತಿದ್ದರು. ಅಲ್ಲದೆ ಶಿಷ್ಯರ ನಿತ್ಯವ್ಯವಹಾರಗಳಲ್ಲಿ ಒದಗುವ ಸುಖ - ದು:ಖಗಳನ್ನು ಕೇಳಿ ಅವುಗಳಿಗೆ ತಕ್ಕಂತೆ ಪರಿಹರಿಸುತ್ತಾ ಸಕಲ ಭಕ್ತರ ಕುಟುಂಬನ್ನೊಳಗೊಂಡ ವಿಶ್ವ ಕುಟುಂಬವೇ ತಮ್ಮದೆಂದು ಭಾವಿಸಿ ಅವರ ಭವತಾಪವನ್ನು ಪರಿಹರಿಸುವುದರ ಮೂಲಕ ಪ್ರೇರಣೆ ನೀಡುತ್ತಿದ್ದರು. ಹೀಗೆ ಗುರು ಶಿಷ್ಯರಲ್ಲಿ ಪೂಜ್ಯ ಪೂಜಕ ಭಾವವು ಅನ್ಯೋನ್ಯವಾಗಿ ಬೆಳೆದು ಬಂದಿದೆ.

ಭಕ್ತರು ಊರಿನಲ್ಲಿ ಮಠಕ್ಕೆ ಬಿಟ್ಟ ಆಸ್ತಿಯಿರುವುದಲ್ಲದೆ ಊರಿನ ಜನ ಸುಗ್ಗಿಯಲ್ಲಿ ಆಯವನ್ನೂ (ದಾನ ನೀಡುವುದು) ಹೊಸದಾಗಿ ಏನು ಬೆಳೆದರೂ ಮಠಕ್ಕೆ ಮೊದಲು ತಂದು ಕೊಡುತ್ತಿದ್ದರು. ಉದಾಹರಣೆಗೆ ತರಕಾರಿ, ಕರು ಹಾಕಿದ ಹಸುವಿನ ಮೊದಲ ಹಾಲು, ಬೆಣ್ಣೆ ತಂದು ಹಿರೇಮಠಕ್ಕೆ ನೀಡುತ್ತಾರೆ. ಪಟ್ಟದೇವರಿಗೂ ಮತ್ತು ಹಿರೇಮಠದವರಿಗೂ ಮಾತ್ರ ಜಂಗು ಮತ್ತು ಗಂಟೆ ಹಿಡಿದುಕೊಂಡು ಭೀಕ್ಷೆಗೆ ಹೊಗುವ ಹಕ್ಕುಂಟು. ಇನ್ನು ಕೆಲವು ಜಂಗಮರಾದ ಗಣಾಚಾರಿ, ಮಠಪತಿ ಘಂಟೆ ಹಿಡಿದುಕೊಂಡು ಭೀಕ್ಷೆ ಎತ್ತುವುದಿಲ್ಲ. ಆದರೆ ಗೃಹಸ್ಥನಾದ ಹಿರೇಮಠದವರು ಭೀಕ್ಷೆಗೆ ಹೋಗುತ್ತಾರೆ. ಒಂದೊಂದು ಪಟ್ಟದೇವರ ಮಠಕ್ಕೆ ಇಷ್ಟು ಹಳ್ಳಿಗಳೆಂದು ನಿಗದಿತಯಾಗಿರುತ್ತವೆ. ಅಷ್ಟೂ ಹಳ್ಳಿಗಳ ಧಾರ್ಮಿಕ ಕಾರ್ಯಗಳಿಗೆ ಅವರು ಬಾಧ್ಯರಾಗಿರುತ್ತಾರೆ. ಹುಣ್ಣಿಮೆ - ಅಮಾವಾಸ್ಯೆ ಹಬ್ಬಹರಿದಿನಗಳಲ್ಲಿ ಪಟ್ಟದೇವರು ಶಿಷ್ಯರ ಮನೆಗೆ ಬಿನ್ನಹಕ್ಕೆ ಹೋಗಿ ಪಾದತೀರ್ಥವನ್ನು ಅನುಗ್ರಹಿಸಿ ಬರುವುದುಂಟು. ಭಕ್ತರು

ವಿವಾಹದ ಮಾತುಕತೆಯಲ್ಲಿ ಲಗ್ನ ಪತ್ರ ಬರೆಯುವಲ್ಲಿ, ಇವರ ಸನ್ನಿಧಿಯಲ್ಲಿ ನಡೆಯುತ್ತವೆ. ಜೊತೆಗೆ ಪಂಚಾಂಗ ನೋಡುವುದು ವಿಶೇಷವಾಗಿರುತ್ತದೆ. ಮದುವೆ ಮಾಡಿಸುವುದು, ಶವದ ಮೇಲೆ ಪಾದವಿಟ್ಟು ಅದನ್ನು ಪವಿತ್ರ ಗೊಳಿಸುವುದು, ಮಣ್ಣು ಕೊಡುವುದು, ಗೃಹ ಪ್ರವೇಶದಲ್ಲಿ ರುದ್ರಾಭಿಷೇಕ, ನವಗ್ರಹ ಶಾಂತಿ ಮುಂತಾದವುಗಳು ಇವರಿಂದಲೇ ನೇರವೇರುತ್ತವೆ. ಭಕ್ತರಲ್ಲಿಯೇ ಕಲಹಗಳು ಆರೋಪಗಳು, ವ್ಯಭಿಚಾರದ ಮಾತುಗಳು ಬಂದಾಗ ವಿಚಾರಣೆ ನಡೆಸಿ ದಂಡ ತೆಗೆದುಕೊಳ್ಳುವ ಹಕ್ಕು ಪಟ್ಟದೇವರಿಗಿದೆ. ಎಲ್ಲ ಜಂಗಮರಿಗೂ ವೀರಶೈವ ಭಕ್ತರಿಗೂ ಲಿಂಗ ದೀಕ್ಷೆ ಕೊಡುವುದು ಇವರೆ. ಒಟ್ಟಿನಲ್ಲಿ ಭಕ್ತರ ನೋವು ನಲಿವಿನಲ್ಲಿ ಭಾಗವಹಿಸಿ ಹುಟ್ಟಿನಿಂದ - ಸಾಯುವವರೆಗೂ ಎಲ್ಲಾ ಸಂಸ್ಕಾರಗಳನ್ನು ನೆರವೇರಿಸುತ್ತಾ ಕಾಣಿಕೆಯನ್ನು ಪಡೆಯುತ್ತಾ ಸರ್ವ ಜಂಗಮರ ಕಾರ್ಯಗಳನ್ನು ಅವಲೋಕಿಸುತ್ತಾ ಸರ್ವರನ್ನು ಸನ್‌ಮಾರ್ಗದತ್ತ ತೆಗೆದುಕೊಂಡು ಹೋಗುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇಂದಿನ ದಿನಮಾನಗಳಲ್ಲಿ ಅಷ್ಟು ಗಮನಹರಿಸದಿರುವುದು ನೋಡುತ್ತೇವೆ. ಇದಕ್ಕೆ ಭಕ್ತರೂಕಾರಣವೇ ಅಥವಾ ಜಂಗಮರು ಕಾರಣವೇ? (ಎನ್ನುವುದನ್ನೆ ಮುಂದಿನ ಅಧ್ಯಯನದಲ್ಲಿ ನೋಡಬಹುದು) ಎಂದು ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಪಟ್ಟದೇವರು ಆ ಹಳ್ಳಿಗಳ ಸುವ್ಯವಸ್ಥೆಗೆ ಸಂಪೂರ್ಣ ಅಧಿಕಾರ ಹೊಂದಿದ್ದರು. ಅಂತೆಯೇ ಇಂದಿನ ಸರಕಾರದ ಮುಖಂಡರಂತೆ ಕೆಲಸ ಮಾಡಿಕೊಂಡು ಬರುತ್ತಿದ್ದು, ಬರುತ್ತಿರುವುದು ಗಮನಿಸಬೇಕಾಗಿದೆ. ಈ ಪಟ್ಟದೇವರ ಮೇಲೆ ಅಂದರೆ ಮಠಗಳ ಮೇಲೆ ಪಂಚಪೀಠಗಳ ನೈತಿಕ ಅಧಿಕಾರವನ್ನು ಹೊಂದಿರುತ್ತಾರೆ. ಇದನ್ನು ಬಿಟ್ಟರೆ ಯಾವುದೇ ಕಾನೂನಿನ ಹತೋಟಿ ಇರುವುದಿಲ್ಲ. ಅವ್ಯವಹಾರದಿಂದ ಪಟ್ಟದೇವರು ವ್ಯವಹರಿಸಿದರೆ ತೆಗೆದು ಹಾಕುವ ಮುತ್ತು ತೆಗೆದುಕೊಳ್ಳುವ ಅಧಿಕಾರ ಪೀಠಗಳ ಜವಾಬ್ದಾರಿಯಾಗಿರುತ್ತದೆ. ಒಟ್ಟಿನಲ್ಲಿ ಪಟ್ಟದೇವರ ಮಠಗಳು ಪಂಚಪೀಠ ಜಂಗಮರ ರೀತಿ ನೀತಿಗೆ ಮತ್ತು ಯಜಮಾನವನ್ನು ಒಪ್ಪಿ ಎಲ್ಲಾ ಮಠಸ್ಥರು ನಡೆದುಕೊಡು ಹೋಗುತ್ತಾರೆ. ಆದರೆ ಇಂದು ಪೀಠದ ಜಂಗಮರ ಮಾತುಗಳು ಕೇಳದೆ ಸ್ವಾತಂತ್ರ್ಯವಾಗಿ ವರ್ತಿಸುತ್ತಾ ಸಮಾಜ ಸೇವೆ ಮಾಡುತ್ತಿರುವುದು ಜಿಲ್ಲೆಯಾದ್ಯಂತ ಕಾಣಸಿಗುತ್ತದೆ.

**೬.೨. ಹಿರೇಮಠದವರು :** ಇವುಗಳು ಪೂರ್ವಕಾಲದಲ್ಲಿ ಗ್ರಾಮಕ್ಕೊಂದರಂತೆ ಸ್ಥಾಪಿತವಾಗಿದ್ದರೂ ಮುಂದೆ ಆಯಾ ಗ್ರಾಮಗಳ ವೀರಶೈವರ ಸಂಖ್ಯೆಯು ಹೆಚ್ಚಾದಂತೆ ನಿತ್ಯ ಧರ್ಮದ ಕಾರ್ಯಗಳಲ್ಲಿ ಭಾಗವಹಿಸಲು ಈ ಒಂದೇ ಮಠಕ್ಕೆ ಅವಕಾಶ ದೊರೆಯದಿದ್ದರಿಂದ ಈ ಮಠಗಳು ಉದಯವಾದವು. ಇವುಗಳು ಧರ್ಮಪೀಠಕ್ಕೆ ಧರ್ಮ ಪಾಲನೆಗೆ ಚ್ಯುತಿಬರದಂತೆ ನಡೆದುಕೊಂಡು ಬರುತ್ತಿರುವುದಕ್ಕೆ ಶಾಸ್ತ್ರವು ಹೇಳುತ್ತದೆ.

ಪಟ್ಟದೇವರು ಮತ್ತು ಹಿರೇಮಠದವರು ಒಂದೇ ಜಾತಿಯವರು. ಪಟ್ಟದೇವರು ಹೇಳಿದ ಕಾರ್ಯಗಳನ್ನು ನಡೆಸಿಕೊಂಡು ಸಾಗುತ್ತಾರೆ. ಬಹುತೇಕ ಎಲ್ಲಾ ಊರುಗಳಲ್ಲಿ ಸಿಗುತ್ತಾರೆ. ಇವರು ಭಕ್ತರ ವಿವಾಹ, ನಾಮಕರಣ, ಗೃಹಪ್ರವೇಶ, ಹಬ್ಬ ಮರಣ ಸಂದರ್ಭಗಳಲ್ಲಿ ಪೌರೋಹಿತ್ಯ ನಡೆಸುತ್ತಾರೆ. ಅಂದರೆ ಪಂಚಪೀಠಗಳ ಜಂಗಮರಂತೆ ವರ್ತಿಸುತ್ತಾರೆ. ಪೀಠದವರು ಮೂಲತಃ ಹಿರೇಮಠದವರಾಗಿರುತ್ತಾರೆ. ಜೊತೆಗೆ ಹಿರೇಮಠದ ಜಂಗಮ ಮಕ್ಕಳಿಗೂ ಎಲ್ಲಾ ವಿದ್ಯೆಯನ್ನು ದಯಪಾಲಿಸಿ ಯೋಗ್ಯನಾದಾಗ ಪೀಠದ ಜಂಗಮನನ್ನಾಗಿಯೂ ಮಾಡಬಹುದು. ಅಥವಾ ಪಟ್ಟದೇವರಲ್ಲಿ ಯೋಗ್ಯರಾದವರನ್ನೆ ಪೀಠಾಧಿಕಾರಿಯಾಗಿ ಮಾಡಬಹುದು. ಪಟ್ಟದೇವರು ಹಲವು ಊರಿನ ನಾಯಕರಾದರೆ ಹಿರೇಮಠದವರು ಆಯಾ ಊರಿನ ನಾಯಕರಾಗಿ ಕ್ರಿಯೆಗಳಲ್ಲಿ ತೊಡಗಿರುತ್ತಾರೆ. ಹಿರೇಮಠದವರಿಗೆ ಆಶೀರ್ವಾದದ ಹಕ್ಕು ಇದೆ. ಅವರು ಮದುವೆ, ಮರಣ ಕಾರ್ಯಗಳಲ್ಲಿ ಗದ್ದುಗೆಯ ಮೇಲೆ ಕುಳಿತು ಅವರ ಅನುಚರರಾಗಿ ಅಥವಾ ಸೇವಕರಾಗಿ ಮಠಪತಿ, ಗಾಣಾಚಾರಿಗಳು ಕೆಲಸ ಮಾಡುತ್ತಾರೆ. ಒಟ್ಟಿನಲ್ಲಿ ಇವರು ಧರ್ಮದರ್ಶಿಯಾಗಿ ನಡೆದುಕೊಳ್ಳುತ್ತಾನೆ. ಈ ಹಿರೇಮಠದ ಹೆಣ್ಣು (ಮಹಿಳೆಯರಿಗೆ)ಗಳಿಗೆ ಯಾವುದೇ ಪೌರೋಹಿತ್ಯದ ಹಕ್ಕು ಇಲ್ಲ. ಹೀಗೆ ಕಾರ್ಯಗಳು ನಡೆಸಿಕೊಂಡಿರುವುದರಿಂದ ಭಕ್ತರಿಂದ ಆಯಾ ಪಡೆದುಕೊಳ್ಳುತ್ತಾರೆ.

**೬.೩ಮಠಪತಿ ಜಂಗಮರು :** ಈ ಮಠಪತಿ ಜಂಗಮರು ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿ ಕಂಡುಬರುತ್ತಾರೆ. ಮಠಪತಿ ಎಂದು ಹೆಸರಿಲ್ಲ, 'ಮಠಪತ್ತಿ' ನಿಜವಾದ ಹೆಸರು, 'ಪತ್ತಿ' ಎಂದರೆ ಕಾಲಾಳು, ಸೇವಕ ಅರ್ಥವನ್ನು ಗಮನಿಸಬೇಕು. ಹಿರೇಮಠದವರಿಗೆ ಸೇವಕರು. ಇವರು ಹಿರೇಮಠದವರು ಹೇಳಿರುವ ಪ್ರತಿಯೊಂದು ಕೆಲಸ ಮಾಡುವವರು. ಸಮಾಜದಲ್ಲಿ ಗಣಾಚಾರಿಗಿಂತ ಕೆಳಗಿನ ಸ್ಥಾನಕ್ಕೆ ಬರುವರು. ಆದರೆ ನನಗೆ ಇಬ್ಬರು ಸಮಾನರು ಎಂದು ತೋರುತ್ತಾರೆ. ಇಬ್ಬರು ಹಿರೇಮಠದವರಿಗೆ ಸೇವಕರೆ ಕೆಲವು ಕ್ರಿಯೆಗಳಲ್ಲಿ ಸ್ವಲ್ಪ ವ್ಯತ್ಯಾಸವಿರುವುದನ್ನು ಬಿಟ್ಟರೆ ಹಿರೇಮಠದವರು ಇವರ ಜೊತೆ ಲಗ್ನ ಸಂಬಂಧವಿರು ವುದಿಲ್ಲ. ಮಠಪತಿಯು ಮುಖ್ಯ ಕೆಲಸವೇನೆಂದರೆ ವಿವಾಹ ಸಂದರ್ಭದಲ್ಲಿ ಮತ್ತು ಶವ ಸಂಸ್ಕಾರ ಸಮಯದಲ್ಲಿ ಹಿರೇಮಠದವರಿಗೆ ಸಹಾಯಕರಾಗಿರುತ್ತಾರೆ. ಹಿರೇಮಠದವರು ಮಾತ್ರ ಗದ್ದುಗೆಯ ಮೇಲೆ ಕುಳಿತು ಇಡೀ ಕ್ರಿಯೆಗೆ ಮುಖ್ಯಸ್ಥರಂತೆ ಕುಳಿತುಕೊಳ್ಳುತ್ತಾರೆ (ಅವರೇ:೪೬೦). ಮಠಪತಿ ಇಡೀ ಕ್ರಿಯೆಗೆ ನಿರ್ದೇಶನದಂತೆ ಎಲ್ಲಾ ದೈಹಿಕ ಶ್ರಮದ ಕೆಲಸ ಮಾಡುತ್ತಾನೆ. ಉದಾ : ಹಿರೇಮಠದ ಜಂಗಮ ಮುಖ್ಯಸ್ಥನಾಗಿ ಗದ್ದುಗಿ ಮೇಲೆ ಕುಳಿತುಕೊಂಡರೆ ಹೂವ, ಪತ್ರೆ

ಕುಳಿತುಕೊಂಡರೆ ಹೂವ, ಪತ್ರೆ ತರುವುದು, ಲಿಂಗಕಟ್ಟುವಲ್ಲಿ ರಂಗೋಲಿ ಹಾಕುವುದು, ಪಂಚ ಕಳಶ್ ಹೂಡುವುದು, ಮಂತ್ರ ಹೇಳುವುದು ಈ ಮೊದಲಾದ ಆಚಾರಣಗಳನ್ನು ನೆರವೇರಿಸುತ್ತಾನೆ. ಇನ್ನೊಂದು ಶವ ಸಂಸ್ಕಾರಗಳಲ್ಲಿ ಹೆಣದ ಮೇಲೆ ಅಂದರೆ ತಲೆಯ ಮೇಲೆ ಹಿರೇಮಠದವರು ತನ್ನ ಪಾದವನ್ನು ಇಟ್ಟು ಆಶೀರ್ವಾದಿಸುವ ಕಾರ್ಯವನ್ನು ಮಾಡಿದರೆ ಮಠಪತಿ ಹಣೆಗೆ ರೂಪಾಯಿ ಅಂಟಿಸುವುದು, ಶಂಖಾ ಊದುವುದು, ಸಮಾಧಿ ಪೂಜೆ ಮಾಡುವುದು ಮುಂತಾದ ಕ್ರಿಯೆಗಳು ಉದಾರಿಸ ಬಹುದು. ಇಂಥ ಕ್ರಿಯೆಗಳು ಮಾಡುವುದರಿಂದ ಭಕ್ತರಿಂದ ಕಾಣಿಕಸಗಳು ಬರುತ್ತಿದ್ದವು. ಸತ್ತ ವ್ಯಕ್ತಿಯ ಬಟ್ಟೆ ಜಮಖಾನೆಗಳು, ಊಟ ಮಾಡುವ ತಾಟು, ತಂಬಿಗೆ ಮಠಪತಿ ತೆಗೆದುಕೊಂಡು ಹಿರೇಮಠದವರು ಕೊರಳಿನ ಕರಡಿಗೆ ಹಿರೇಮಠದವರಿಗೆ ಸಲ್ಲುತ್ತದೆ. ಮದುವೆಯ ಸಂದರ್ಭದಲ್ಲಿ ಕಟ್ಟಿದ ಪಂಚಕಳಸದ ಮೇಲಿನ ತೆಂಗಿನಕಾಯಿ, ಕುಬಸ, ಮತ್ತು ಇಟ್ಟ ಅಕ್ಕಿ ಹಿರೇಮಠದವನಿಗೂ, ಕೆಳಗೆ ಹರಡಿರುವ ಜೋಳ ಮಠಪತಿಗೂ ಸಲ್ಲುತ್ತದೆ. ಕೆಲವೊಂದು ಸಂದರ್ಭದಲ್ಲಿ ಮೇಲಿನ ರೀತಿಯಲ್ಲಿ ಭಾಗವನ್ನು ಮಾಡಿಕೊಳ್ಳುವಾಗ ಹಿರೇಮಠದಯ್ಯಾನಿಗೂ ಮತ್ತು ಮಠಪತಿಗೂ ಜಗಳವಾಗುವುದು ತಿಳಿದುಬರುತ್ತದೆ. ಜಗಳವಾದಾಗ ಒಮ್ಮೊಮ್ಮೆ ಕೆಲವೊಂದು ಕ್ರಿಯೆಗಳಿಗೆ ಬರುವುದಿಲ್ಲ. ಇದರಿಂದ ಅವರು ಸಂಪೂರ್ಣ ತಮ್ಮ ಕಾಯಕವನ್ನು ಬಿಟ್ಟು ಇತರ ಕೆಲಸಗಳಲ್ಲಿ ಭಾಗಿಯಾಗಿರುವುದು ಇಂತಹ ಉದಾಹರಣೆಗಳು ಬೀದರ ಜಿಲ್ಲೆಯಲ್ಲಿ ಕಂಡುಬರುತ್ತದೆ.

ಉಡುಕೀ ಲಗ್ನಕ್ಕೆ ಮಾತ್ರ ಮಠಪತಿ ಒಬ್ಬರೆ ಹೋಗಿ ಮದುವೆ ಮಾಡಿಸುತ್ತಾರೆ. ಇಲ್ಲಿ ಹಿರೇಮಠದವರು ಹೋಗುವುದಿಲ್ಲ. ಇಂದು ಎಲ್ಲಾ ಮದುವೆಗಳಿಗೆ ಹೋಗುತ್ತಾರೆ. ಆದರೂ ತಮಗೆ ಬೇಕಾದವರ ಮದುವೆ ಹೋಗು ವುದುಂಟು. ಇಲ್ಲಿ ಬರುವ ದಾನವು ಮಠಪತಿಯದಾಗಿರುತ್ತದೆ. ಇಂತಹ ಕ್ರಿಯೆಗಳು ಸಮಾಜದಲ್ಲಿ ನಡೆಸಿಕೊಂಡು ಬರುವುದರಿಂದ ಭಕ್ತರು ದಾನ - ನೀಡುವುದರ ಮೂಲಕ ಗೌರವಿಸುತ್ತಾರೆ. ಇಲ್ಲಿ ಹಿರೇಮಠ ಮತ್ತು ಗಣಾಚಾರಿಗಳಿಗಿಂತ ಮಠಪತಿಯ ದೈಹಿಕ ಶ್ರಮ ಹೆಚ್ಚಾಗಿರುತ್ತದೆ. ಇನ್ನೊಂದು ಮಾತು ಹೇಳುವುದಾದರೆ ಗಣಾಚಾರಿ ಮತ್ತು ಮಠಪತಿಗಳ ಕೆಲಸವು ಒಂದೆಯಾಗಿ ಇಂದು ಅಷ್ಟಾಗಿ ಮಾಡಿಕೊಂಡು ಬರುವುದ ಕಡಿಮೆಯಾಗಿದೆ. ಇದರಿಂದ ಇವರಿಬ್ಬರೂ ಇಲ್ಲದೆ ಇರುವಾಗ ಅವರ ಕೆಲಸವನ್ನು ಹಿರೇಮಠದವರೇ ಮಾಡುತ್ತಿರುವುದು ನೋಡುತ್ತೇವೆ. ಬಹುತೇಕ ಊರುಗಳಲ್ಲಿ ಹಿರೇಮಠದವರು ಇದ್ದೇ ಇರುತ್ತಾರೆ. ಭಕ್ತರ ಮನೆಗಳಿಗೆ ಮಠಪತಿಗಳು ಹೋಗುವುದಿಲ್ಲವಾದರೂ ನಡೆಯುತ್ತದೆ. ಆದರೆ ಹಿರೇಮಠದವರು ಹೋಗಲಿಲ್ಲವಾದರೆ

ಯಾವುದೂ ಕ್ರಿಯೆಗಳು ಇಂದಿಗೂ ನಡೆಯುವುದಿಲ್ಲ. ಆದರೂ ಇಂದು ಯಾವ ಜಂಗಮ ಸಿಕ್ಕಿದರೂ ಅವರನ್ನು ಕರೆದುಕೊಂಡು ಹೋಗಿ ಪೂಜೆ ಮಾಡಿಸಿಕೊಳ್ಳುವ ಭಕ್ತರನ್ನೆ ನೋಡಬಹುದಾಗಿದೆ.

**೬.೪.ಸುಕಾಸ್ಥಿ ಜಂಗಮರು :** ಇವರು ಬೀದರ ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿ ಕಂಡುಬರುತ್ತಾರೆ. ಇವರು ಕೂಡ ಪಂಚಾಪೀಠದವರೆಯಾಗಿರುತ್ತಾರೆ. ಸುಕಾಕ್ಷಿಯೆಂದು ಇವರಿಗೆ ಕರಿಯಲು ಕಾರಣವೇನೆಂದರೆ ಇವರು ತಮ್ಮ ಸ್ವಂತ ಊರನ್ನು ಬಿಟ್ಟು ಬದುಕುವ ಸಲುವಾಗಿ ಇನ್ನೊಂದು ಊರಿನಲ್ಲಿ ಬಂದು ನೆಲೆಸಿ ಆ ಊರಿನ ಜಂಗಮ ಕಾಯಕವನ್ನು ಮಾಡುವರಿಗೆ ಸುಕಾಕ್ಷಿ ಎಂದು ಕರೆಯುತ್ತಾರೆ. ತಾನೇ ತಾನು ಬಂದುದಕ್ಕೆ ಸುಕಾಕ್ಷಿ(ಸುಖದ ಆಸ್ತಿ) ಎನ್ನಬಹುದು. ಇವರಿಗೂ ಮಠಪತಿಗಳಿಗೂ ಬೇದ ಕಂಡುಬರುವುದಿಲ್ಲ. ಮಠಪತಿಗಳಂತೆ ಜಂಗಮ ಕಾಯಕ ಮಾಡುತ್ತಾರೆ. ಕೆಲವು ಊರಿನಲ್ಲಿ ಇದ್ದ ಮಠಪತಿಗಳು ಇವರಿಗೆ ನೀವು ಜಂಗಮ ಕಾಯಕ (ಈ ಊರನ್ನು ನೀವು ನೋಡಿಕೊಳ್ಳಬಹುದು) ಮಾಡಬಹುದೆಂದು ಹೇಳಿದರೆ ಮಾತ್ರ ಅವರು ಮಠಪತಿಯ ಕೆಲಸ ಮಾಡಬಹುದು. ಆದರೆ ಇಂದಿನ ದಿನಮಾನಗಳಲ್ಲಿ ಜಂಗಮರು ಇತರ ಕೆಲಸಗಳಲ್ಲಿ ತೊಡಗಿರುವುದರಿಂದ ಸಮಯಕ್ಕೆ ಸರಿಯಾಗಿ ಭಕ್ತರ ಮನೆಗೆ ಹೋಗಲು ಆಗದ ಕಾರಣಕ್ಕಾಗಿ ಇಂತಹ ಸುಕಾಕ್ಷಿ ಜಂಗಮರನ್ನು ಕರೆದುಕೊಂಡು ಭಕ್ತರು ತಮ್ಮ ಕಾರ್ಯವನ್ನು ಮುಂದುವರಿಸುತ್ತಿದ್ದಾರೆ. ಇದರಿಂದ ಮಠಪತಿ, ಸುಕಾಸ್ಥಿಗಳಲ್ಲಿ ಆಯಾಗಾರಿಕೆ ಸಲುವಾಗಿ ಎಷ್ಟೊ ಸಾರಿ ಜಗಳಗಳು, ಮವಸ್ಥಾಪಗಳು ಆಗಿರುವುದು ಜಿಲ್ಲೆಯಲ್ಲಿ ಕಂಡುಬರುತ್ತವೆ.

ಸುಕಾಸ್ಥಿ ಜಂಗಮರು ತಮ್ಮ ಊರಿನಲ್ಲಿ ಮಠಪತಿಯ ಅಥವಾ ಮಠದವರ ಹಕ್ಕಿನವರಾಗಿರುತ್ತಾರೆ ಹೊರತು ಬೇರೆಯಾಗಿರುವುದಿಲ್ಲ. ಬೇರೆ ಊರಲ್ಲಿ ಬಂದು ನೆಲೆಸಿದರಿಂದ ಮಾತ್ರ ಇವರು ಸುಕಾಸ್ಥಿಯಾಗುತ್ತಾರೆ. ಮುಂದೆ ಇದು ಜಂಗಮರಲ್ಲಿ ಒಂದು ಪಂಗಡವಾಗಿ ಪರಿಣಾಮಿಸಿದೆ.

**೬.೫.ಗಣಾಚಾರಿ ಜಂಗಮರು :** ಹಿರೇಮಠದವರ ನಂತರ ಗಣಾಚಾರಿಗಳು ಪಾರಮುಖ್ಯತೆಯನ್ನು ಪಡೆಯುತ್ತಾರೆ. ಇವನ್ನು ಹಿರೇಮಠದ ಅಯ್ಯಾನಕ್ಕಿಂತ ಕೆಳಗಿನವರಾಗಿದ್ದು ಜೊತೆಗೆ ಹಿರೇಮಠದವರಿಗೂ ಗಣಾಚಾರಿಗಳಿಗೂ ರಕ್ತ ಸಂಬಂಧ ಸಾಧ್ಯವೇ ಇಲ್ಲ. ಆದರೂ ಇಂದು ಈ ಸಂಬಂಧಗಳು ನಡೆಯುತ್ತಿರುವುದು ಕಾಣುತ್ತೇವೆ. ಪಟ್ಟದ್ದೇವರು ಇಲ್ಲದ ಕಡೆ ಹಿರೇಮಠದವರು ಆಜ್ಞೆಯಂತೆ ಊರಿನ ಜಂಗಮ ಮತ್ತು ಭಕ್ತರಿಗೆ ಭಕ್ತರ ಮನೆಯಲ್ಲಿ

ನಡೆಯುವ ಶುಭ ಕಾರ್ಯಗಳಿಗೆ ಭಿನ್ನಹ ಹೇಳುವ ಮುಖ್ಯ ಕೆಲಸ. ಇದು ಹೆಚ್ಚಾಗಿ ಬೀದರ ಭಾಗಕ್ಕೆ ಮಠಪತಿ ಜಂಗಮ ಮಾಡುತ್ತಿರುವ ಕ್ರಿಯೆಯಾಗಿದೆ. ಕೆಲವೊಂದು ಕಡೆ ಗಣಾಚಾರಿ ಮಾಡುವ ಕ್ರಿಯೆಯೆಂದು ತೋರುತ್ತದೆ. ಊರಿನಲ್ಲಿ ನಡೆಯುವ ಮದುವೆ ವಿಷಯವನ್ನು ಹಿರೇಮಠದವರಿಗೂ, ಮಠಪತಿಗಳಿಗೂ ಇತರ ಭಕ್ತರಿಗೂ ಇವರೇ ತಿಳಿಸಬೇಕು. ಅಂದರೆ ಹಿರೇಮಠದ ವಾರ್ತಾವಾಹಕನಾಗಿ ಕೆಲಸ ಮಾಡುತ್ತಿರುತ್ತಾರೆ. ಹೊರತು ಭಕ್ತರ ಮದುವಿಗೆ ಅಥವಾ ಜಂಗ ಕಟ್ಟಿ ಭೀಕ್ಷೆ ಬೇಡಲು ಅರ್ಹನಾಗುವುದಿಲ್ಲ. ಊರಿನಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗಳನ್ನು ಹಿರೇಮಠದವರಿಗೆ ತಿಳಿಸಬೇಕು. ಉತ್ಸವಗಳಲ್ಲಿ ಮದುವೆಗಳಲ್ಲಿ ಗುಗ್ಗುಳವನ್ನು ಸಿದ್ಧಪಡಿಸಿ ಪುರವಂತರ ಕೈಯಲ್ಲಿ ಕೊಡುವದು ಇವರ ಕೆಲಸ. ಲಿಂಗಾಯತ ಜನಗಳ ಮದುವೆ ಮಾಡಿಸಿ ಅವರ ಮನೆಗಳಿಂದ ಅಕ್ಕಿ, ಬೇಳೆ, ಬೆಲ್ಲ, ಸಕ್ಕರೆ ಇತ್ಯಾದಿ ವಸ್ತುಗಳು ಉಲುಪಿ(ಕಾಣಿಕೆ)ಯಾಗಿ ತರುತ್ತಾನೆ(ಚಿದಾನಂದಮೂರ್ತಿ ಎಂ.:೧೯೮೯:೪೬೯). ಏಕೆ? ಹೀಗೆ ಮಾಡುತ್ತಿದ್ದರು ಎನ್ನುವುದನ್ನು ಗಮನಿಸಿದರೆ, ವೀರಶೈವೇತರ ಜನರು ಜಂಗಮರಿಗೆ ತುಂಬ ಪವಿತ್ರರಾದವರು ನಾವು ಅಷ್ಟು ಪವಿತ್ರರಾದವರಲ್ಲಿ ನಾವು ಮಾಂಸಹಾರಿಗಳಾಗಿದ್ದೇವೆ. ನಾವು ಮಾಡುವ ಪಾತ್ರೆಗಳಲ್ಲಿ ಅಡಿಗೆಯನ್ನು ತಯಾರಿಸಿ ನೀಡಿದರೆ ಪಾಪ ಹತ್ತುತದೆಂದು ತಿಳಿದುಕೊಳ್ಳುತ್ತಿದ್ದರು. ಹೀಗಾಗಿ ಉಲುಪಿಯಾಗಿ ಖಾದ್ಯ ಪದಾರ್ಥಗಳು ನೀಡುತ್ತಿದ್ದರು ಎನ್ನುವುದನ್ನು ತಿಳಿಯಬಹುದು. ಹಾಗಾದರೆ ಪೂಜಾದಿಗಳಿಗೆ ಹೋಗಿ ಊಟವನ್ನು ಏಕೆ ಮಾಡಲಾರರು ಎಂಬ ಪ್ರಶ್ನೆಗಳು ಬರುತ್ತವೆ. ಆದರೆ ಊರಿಗೆ ಬಂದವಳು ನೀರಿಗೆ ಬರುವಳು ಎನ್ನುವಂತೆ ಪೂಜ್ಯಕ್ಕೆ ಬಂದ ಜಂಗಮರು ಊಟ ಮಾಡದೆ ಅಥವಾ ಫಳಹಾರ ಸೇವನೆ ಮಾಡದೆ ಇರುತ್ತಾರೆಯೇ ಮಾಡುತ್ತಾರೆ. ಆದರೂ ಮೇಲಿನ ಕಾರಣದಿಂದ ಮನೆಯವರು ಉಲುಪಿ ನೀಡುತ್ತಿದ್ದರು ಎಂದು ಗಮನಿಸಬಹುದಾಗಿದೆ.

ಗಣಾಚಾರಿಗಳಿಗೆ ಉತ್ತರ ಕರ್ನಾಟಕದಲ್ಲಿ ಗಣಮುಖಿ ಜಂಗಮರೆಂದು ಕರೆಯುವರು. ಇವನು ಜನರನ್ನು ಕರೆದು ಸಭೆ ಸೇರಿಸುವ ಕೆಲಸದವನೆಂದು ಗಣಾಚಾರಿಯು ಹೆಣ ಹೂಳುವ ಮುನ್ನ ಹೆಣದ ಮುಖಕ್ಕೆ ಕಟ್ಟಿದ ಬಟ್ಟೆ ಹರಿದು ಹಾಕುವನೆಂದು ಹೇಳುವವರಿದ್ದಾರೆ ಮತ್ತು ಸಂಗಣಾಚಾರಿ ಎಂಬ ಇನ್ನೊಂದು ಗುಂಪು ಇದೆಯೆಂದೂ ಅವರ ಜೊತೆ ಹಿರೇಮಠದವರು ಸಂಬಂಧ ಬೆಳೆಸಬಹುದೆಂದೂ ಹೇಳುವವರಿದ್ದಾರೆ. (ಅಂದರೆ ಹೆಣ್ಣು ತರಬಹುದೇ ಹೊರೆತು ಕೊಡುವುದಿಲ್ಲ). ಆದರೆ ಸಂಗಣಾಚಾರಿಗಳು ಗಣಾಚಾರಿಗಳಿಗಿಂತ ಮೇಲಿನವರೆಂದೂ ಪೂಜಾ ಕ್ರಿಯಾ ವಿಧಿ ಜಾಗದಲ್ಲಿ ವಸ್ತುಗಳು ಕಾರ್ಯ ಇವರದೆಂದೂ, ವೀರಶೈವರ ನೀತಿ, ಅನೀತಿ,

ಕಲಹಗಳನ್ನು ಹಿರೇಮಠದವರ ಗಮನಕ್ಕೆ ತರುವ ಕಾರ್ಯವು ಇವರದ್ದೆಂದು ಹುನಗುಂದದ ಶ್ರೀ ಮಹೇಶ ತಿಪ್ಪಶೆಟ್ಟಿ ತಿಳಿಸುತ್ತಾರೆ (ಲಿಂಗಾಯತ ಅಧ್ಯಾಯನಗಳು, ಡಾ: ಎಂ. ಚಿದಾನಂದಮೂರ್ತಿ, ಪು: ೪೮೦). ಬೀದರ ಜಿಲ್ಲೆಯಲ್ಲಿ ಗಣಾಚಾರಿಗಳುಂಟು. ಆದರೆ ಗಣಮುಖಿ, ಸಂಗಣಾಚಾರಿ ಜಂಗಮರು ಕಂಡು ಬರುವುದಿಲ್ಲ. ಇದು ಪ್ರಾದೇಶಿಕತೆಯಲ್ಲಿ ಭಿನ್ನ ಭಿನ್ನ ಇರುವುದು ಗಮನಿಸತಕ್ಕದ್ದಾಗಿದೆ. ಆದರೆ ಗಣಾಚಾರಿ ಮತ್ತು ಮಠಪತಿಯ ಹೆಣ್ಣು ಮಕ್ಕಳು ಹಿರೇಮಠದವರ ತೆಗೆದುಕೊಳ್ಳಬಹುದು ಕೊಡುವುದಿಲ್ಲ ಎಂಬುದು ನಿಜವಿದೆ. ಅಲ್ಲದೆ ಗಣಾಚಾರಿಗಳ ಕೆಲಸ ಮತ್ತು ಅವರ ಬಗ್ಗೆ ಕೆಲವು ಎಪಿಗ್ರಾಫಿಯ ಕರ್ನಾಟಕ ಐ.ಐ. ಮೈಸೂರು ಆವೃತ್ತಿ, ಗುಂಡ್ಲುಪೇಟೆ - ೨೧೬ ಎಂಬುದರಲ್ಲಿ ಹೊನ್ನಪ್ಪ ಗಣಾಚಾರಿ ಅದೇ ಗುಂಡ್ಲುಪೇಟೆ - ೨೬, ಗಣಾಚಾರಿ ತೆರಿಗೆ, (ಅದೇ ನಂಜನಗೂಡು - ೯೧) ಗಣಾಚಾರಿ ಹರಿಯಾಣ, ತೆರಿಗೆಯು ಕುರಿತು ಮಾತುಗಳು ಬಂದಿರುವುದು ಉಲ್ಲೇಖಿತಗೊಂಡಿವೆ. ಆದರೆ ಗಣಾಚಾರಿಗಳಿಗೆ ಯಾವುದೇ ಆಸ್ತಿ ಇರುವುದಿಲ್ಲ. ಇವರಿಗೆ ಭಕ್ತಿಯೇ ಬಂಡವಾಳವಾಗಿರುತ್ತದೆ. ಇದನ್ನು ಬಿಟ್ಟರೆ ಇವರಿಗೆ ಗತಿಯೇ ಇಲ್ಲ, ಆದರೂ ಶಾಸನಗಳಲ್ಲಿ ಇವರಿಗೆ ತೆರಿಗೆ ಹಾಕುವುದು ಪದ ಬಂದಿರುವುದು ಗಮನಿಸಿದರೆ ಜಂಗಮರ ಕಾರ್ಯಗಳ ಮೇಲೆ ತೆರಿಗೆ ತೆಗೆದುಕೊಳ್ಳುತ್ತಿದ್ದರು ಎಂಬುದು ಮನಗಾಣಬಹುದು. ಶಾಸನದಲ್ಲಿ ಗಣಾಚಾರಿ ಪದಕ್ಕೆ ದೇವಾಲಯದ ಮೇಲ್ವಿಚಾರಕ ಅಥವಾ ಅರ್ಚಕ ಎಂಬುದೇ ಅರ್ಥ. ಇಂದಿಗೂ ದಕ್ಷಿಣ ಕರ್ನಾಟಕದ ಕಡೆ ಪದ ಪ್ರಯೋಗ ಇದೆ. ಆದರೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ( ಎಪಿಗ್ರಾಫಿ ಕರ್ನಾಟಕ ಮೈಸೂರು, ಐ.ಐ., ಪು : ೨೪೦೪) ಮತ್ತು ಶಾಸನದಲ್ಲಿ ಬರುವ ಪದಗಳು ಈ ಗಣಾಚಾರಿ ಪದಕ್ಕೆ ಜಂಗಮರಲ್ಲಿ ಒಂದುಜಾತಿ ಎಂದು ಕೊಟ್ಟಿರುವುದು ಕಾಣುತ್ತೇವೆ. ಆದರೆ ಮೊದಲು ಜಂಗಮರಲ್ಲಿ ಯಾವುದೇ ಜಾತಿಗಳಿರಲಿಲ್ಲ. ಬರಬರುತ್ತಾ ಅವರ ಕ್ರಿಯೇಗಳ ಮೇಲೆ ಸಮಾಜದಲ್ಲಿ ಪಂಗಡಗಳಾಗಿರುವುದು ನೋಡುತ್ತೇವೆ.

**೬.೬.ಸ್ಥಾವರಾರ್ಯ ಮತ್ತು ಗಣಕುಮಾರ ಜಂಗಮರು :** ಇವರು ಜಿಲ್ಲೆಯಾದ್ಯಂತ ಕಂಡು ಬರುವುದಿಲ್ಲ. ಇವರಿಗೂ ಕೂಡ ಪೀಠದವರೇ ದೀಕ್ಷೆ ಮಾಡಿರುತ್ತಾರೆ. ಇವರು ಮೇಲಿನವರಿಗಿಂತ ಕೆಳಗಿನವರು. ಇವರು ಪಟ್ಟದೇವರಿಗೂ ಮತ್ತು ಹಿರೇಮಠದವರಿಗೂ ಧಾರ್ಮಿಕ ಕ್ರಿಯೆಗಳಲ್ಲಿ ಸಹಕಾರಿಯಾಗುತ್ತಾರೆ. ಇವರಲ್ಲಿ ಮತ್ತು ಹಿರೇಮಠದವರಿಗೂ ಕೊಡುಕೊಳ್ಳುವಿಕೆ ಏರ್ಪಡುವುದಿಲ್ಲ.

ಹೀಗೆ ಪಂಚಚಾರ್ಯರು ಎಲ್ಲಾ ಕಡೆ ಹೋಗಲು ಆಗುವುದಿಲ್ಲದಿರುವುದರಿಂದ ತಮ್ಮ ಸಹಾಯಕ್ಕಾಗಿ ಮೇಲಿನ ರೀತಿಯಲ್ಲಿ ಜಂಗಮರನ್ನೇ ರಚಿಸಿ ಇವರ ಮೂಲಕ ಸಮಾಜವನ್ನ ಸುವ್ಯವಸ್ಥೆಯಡೆಗೆ ಕರೆತರುವಲ್ಲಿ ಸಾಕ್ಷಿಯಾಗಿದ್ದಾರೆ. ಇವರ ಅಷ್ಟೇ ಅಲ್ಲದೇ ಇನ್ನೂ ಅನೇಕ ಜಂಗಮರು ಹಲವಾರು ಕಾಯಕಗಳನ್ನು ಮಾಡುತ್ತಾರೆ. ಹೀಗಾಗಿ ಅವರಿಗೆ ಆ ಕಾಯಕದ ಜಂಗಮರೆಂದೇ ಜಿಲ್ಲೆಯಾದ್ಯಂತ ಕರೆಯುತ್ತಾರೆ. ಇವರು ಮೂಲ ಯಾವದೊಂದು ಪೀಠಕ್ಕೆ ಸೇರಿದವರಾಗಿರುತ್ತಾರೆ. ಬರಬರುತ್ತಾ ಅವರ ವೃತ್ತಿಯಂತೆ ಸಮಾಜದಲ್ಲಿ ಕರೆಯಿದ್ದುದನ್ನು ಕಾಣಬರುತ್ತದೆ. ವಿಭೂತಿ ತಯಾರಿಸುವುವರನ್ನು ಭಸ್ಮದಯ್ಯಾ, ಚಿಕ್ಕ ಶಿವಲಿಂಗ ತಯಾರಿಸುವ ಮತ್ತು ಅದಕ್ಕೆ ಕಂತೆ ಕುಡಿಸುವ ಕಂತೆ ಐಗಳು, ಶಿವದಾರ ಮತ್ತು ಪೂಜಾ ವಸ್ತ್ರ ತಯಾರಿಸುವ ವಸ್ತ್ರೈದೈಗಳು, ರುದ್ರಾಕ್ಷಿ ಐಯ್ಯಾಗಳು, ಕೋರುಧಾನ್ಯದ ಐಯ್ಯಾಗಳು ಹೀಗೆ ಕಂಡು ಬರುತ್ತದೆ. ಇವರಿಗೂ ಎಂದೂ ಮಠಸ್ಥರಂತೆ ಇವರಿಗೆ ಆಶೀರ್ವಾದಿಸಲು ಹಕ್ಕಿಲ್ಲ. ಜೊತೆಗೆ ಮಠ ಎಂದು ಹೇಳಿಕೊಳ್ಳಲು ಬರುವುದಿಲ್ಲ. ಒಟ್ಟಿನಲ್ಲಿ ಅವರವರು ವೀರಶೈವ ಸಂಸ್ಕೃತಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಒದಗಿಸಬಲ್ಲವರು. ಭಕ್ತರು ಇವರಿಗೂ ಕೆಲವು ಸಂದರ್ಭದಲ್ಲಿ ಊಟಕ್ಕೆ ಕರೆದು ಗೌರವಿಸುತ್ತಾರೆ. ಆದರೆ ನಮಗೆ ಹಿರೇಮಠ, ಗಣಾಚಾರಿ, ಮಠಪತಿಗಳ ವಿಷಯ ಕುರಿತು ಅಲ್ಲಲ್ಲಿ ಉಲ್ಲೇಖಗೊಂಡಿರುವುದುಂಟು. ಆದರೆ ಸ್ಥಾವರಾರ್ಯ ಮತ್ತು ಗಣಕುಮಾರರ ಬಗ್ಗೆ ಹೆಚ್ಚಿನ ಮಾಹಿತಿ ಕಂಡುಬರುವುದಿಲ್ಲ. ಬಿ. ಎಸ್. ಗದ್ದಗಿಮಠ ಅವರ (ಲೋಕಗೀತೆಗಳು ಪು : ೧೬-೧೮ರಲ್ಲಿ) ಜಂಗಮ ಮಠಯ್ಯನ ವಿಶೇಷತೆಯನ್ನು ವರ್ಣಿತವಾಗಿದೆ.

ಆಯುಳ್ಳ ಮಠಪತಿ ! ಚಾಯುಳ್ಳ ಗಣಾಚಾರಿ
ಮೇಲಾದ ನನ್ನೂರ ಮಠದಯ್ಯಾ ................

ಮತ್ತು ಗುಲಬರ್ಗಾ ಜಿಲ್ಲೆಯ ಮಳಖೇಡದ ೧೬ನೆಯ ಶತಮಾನದ ಶಾಸನವೊಂದರಲ್ಲಿ ರುದ್ರ : ಜಂಗಮ : ಮಠಪತಿ : ದೇವರು : ಮಳೆದವರು :ಗಗಬ ಎಂದು (ಕರ್ನಾಟಕ ಇನ್‌ಸ್ಕ್ರಿಪಸೆನಸ್, ಸಂ ವೊ : ವಿ. ಎಡ್., ಬಿ. ಆರ್. ಗೋಪಾಲ್ ಪಿ.ಪಿ : ೩೨೮-೯) ರಲ್ಲಿ ಉಲ್ಲೇಖಗೊಂಡಿದೆ. ಜಂಗಮರಲ್ಲಿ ಹಿರೇಮಠ, ಮಠಪತಿ, ಸುಕಾಸ್ಥಿ ಮತ್ತು ಗಣಾಚಾರಿ ಪಂಗಡಗಳು, ಇವರು ವೀರಶೈವರಲ್ಲಿ ಪ್ರಮುಖರು. ಇದರಲ್ಲಿ ಹೆಚ್ಚಾಗಿ ಮಠ ಮತ್ತು ಮಠಪತಿ ಜಂಗಮರೇ ಹೆಚ್ಚಾಗಿ ಕಂಡು ಬರುತ್ತಾರೆ. ಬೀದರ ಜಿಲ್ಲೆಯಲ್ಲಿ ಈ ನಾಲ್ಕು ವರ್ಗದ ಜಂಗಮರನ್ನು ಕಾಣುತ್ತೇವೆ. ನನ್ನ ಅಧ್ಯಯನದ ಸರ್ವೆಯ ಪ್ರಕಾರ ೧೭೧ ಹಳ್ಳಿಯ ಜಂಗಮರ ಜನಸಂಖ್ಯೆ ಕೋಷ್ಟಕ ೧ ನೋಡಬಹುದು. ಮತ್ತು ಜನಸಂಖ್ಯೆಯ ನಂತರ ಜಂಗಮರ ಪಂಗಡಗಳ ಅಂಕಿ-ಸಂಖ್ಯೆಯನ್ನು ಕೋಷ್ಟಕ - ೨ ರಲ್ಲಿ ನೋಡಬಹುದು. ಜಿಲ್ಲೆಯಲ್ಲಿ ಯಾವ ಪೀಠಕ್ಕೆ ಎಷ್ಟು ಮನೆಗಳಿವೆ ಎಂಬುದನ್ನು ಕೋಷ್ಟಕ - ೩ ರಲ್ಲಿ ಕಾಣಬಹುದು.

## ಕೋಷ್ಟಕ ೨
## ಜಂಗಮರ ಜನಸಂಖ್ಯೆ

| ಕ್ರ. ಸಂ. | ತಾಲೂಕುಗಳು | ಕುಟುಂಬಗಳು | ಗಂಡು | ಹೆಣ್ಣು | ಒಟ್ಟು | ಕುಟುಂಬದ ಸರಾಸರಿ ಗಾತ್ರ ಶೇಕಡವಾರು |
|---|---|---|---|---|---|---|
| ೧ | ಔರಾದ | ೨೬೩ | ೯೦೬ | ೮೬೮ | ೧೭೭೪ | ೧೮% |
| ೨ | ಬಸವಕಲ್ಯಾಣ | ೨೬೧ | ೮೮೭ | ೮೨೬ | ೧೭೧೩ | ೧೭% |
| ೩ | ಭಾಲ್ಕಿ | ೪೨೬ | ೧೫೨೫ | ೧೩೯೬ | ೨೯೨೧ | ೨೯% |
| ೪ | ಬೀದರ | ೨೨೭ | ೭೬೮ | ೬೭೫ | ೧೪೪೩ | ೧೫% |
| ೫ | ಹುಮನಾಬಾದ್ | ೩೦೬ | ೧೦೩೪ | ೯೯೭ | ೨೦೩೧ | ೨೦% |
| | ಒಟ್ಟು | ೧೪೮೩ | ೫೧೨೦ | ೪೭೬೨ | ೯೮೮೨ | ೧೦೦% |

ಈ ಕೋಷ್ಟಕದ ಪ್ರಕಾರ ಬೀದರ ಜಿಲ್ಲೆಯ೭೫ ಹಳ್ಳಿಯ ಜಂಗಮರ ಜನಸಂಖ್ಯೆ ೯೮೮೨ (ಪುರುಷರು ೫೧೨೦, ಸ್ತ್ರೀಯರು ೪೭೬೨) ಇದೆ. ಈ ಐದು ತಾಲೂಕುಗಳ ಜನಸಂಖ್ಯೆ ಹೋಲಿಸಿದಾಗ ಭಾಲ್ಕಿ ಅತಿ ಹೆಚ್ಚು ಹಾಗೂ ಬೀದರ ಅತಿ ಕಡಿಮೆ ಜನಸಂಖ್ಯೆಯನ್ನು ಹೊಂದಿದ ತಾಲೂಕಗಳಾಗಿವೆ. ಒಂದು ಕುಟುಂಬದ ಸರಾಸರಿ ಗಾತ್ರ ಶೇ.೬.೬೭ ರಷ್ಟು ಇದೆ (ವೃತ್ತ ಚಿತ್ರ ೧).

ವೃತ್ತಚಿತ್ರ ೧. ಬೀದರ ಜಿಲ್ಲೆಯ ತಾಲೂಕುವಾರು ಜಂಗಮರ ಜನಸಂಖ್ಯೆ ಪ್ರಮಾಣ




## ಕೋಷ್ಟಕ ೩
## ಬೀದರ ಜಿಲ್ಲೆಯ ತಾಲೂಕುವಾರು ಜಂಗಮರ ಪಂಗಡಗಳ ಅಂಕಿ-ಸಂಖ್ಯೆಗಳು

| ಕ್ರ. ಸಂ. | ತಾಲೂಕುಗಳು | ಹಿರೇಮಠ/ ಮಠ | ಮಠಪತಿ | ಸುಕಾಸ್ಥಿ | ಗಣಾಚಾರಿ | ಒಟ್ಟು ಕುಟುಂಬಗಳು |
|---|---|---|---|---|---|---|
| ೧ | ಔರಾದ | ೧೦೧ | ೧೨೩ | ೨೫ | ---- | ೨೬೩ |
| ೨ | ಬಸವಕಲ್ಯಾಣ | ೮೬ | ೫೧ | ೨೪ | ---- | ೬೧ |
| ೩ | ಭಾಲ್ಕಿ | ೧೧೨ | ೨೩೭ | ೮೩ | ೭ | ೪೨೬ |
| ೪ | ಬೀದರ | ೭೬ | ೧೨೭ | ೨೩ | ೨ | ೨೨೭ |
| ೫ | ಹುಮನಾಬಾದ್ | ೧೧೩ | ೧೪೬ | ೪೭ | ---- | ೩೦೬ |
| | ಒಟ್ಟು | ೪೮೮ | ೬೮೪ | ೧೮೮ | ೯ | ೧೪೮೩ |

ಈ ಐದು ತಾಲೂಕುಗಳ ಮಠಗಳು ಹೋಲಿಸಿ ನೋಡಿದರೆ ಅತಿ ಹೆಚ್ಚು ಮಠಪತಿ, ಗಣಾಚಾರಿ ಅತಿ ಕಡಿಮೆ ಪಂಗಡಗಳು ಹೊಂದಿವೆ. ಬೀದರ ಜಿಲ್ಲೆಯಲ್ಲಿ ಹೆಚ್ಚಾಗಿ ಮಠಪತಿಗಳೇ ಕಂಡುಬರುತ್ತಾರೆ. ಹಿರೇಮಠ/ಮಠ ಇವರು ಊರಿಗೊಂದು ಮಾತ್ರ ಮನೆ ಇರುತ್ತದೆ. ಇವರ ನಂತರ ಸುಕಾಸ್ಥಿಗಳು ಇವರು ಒಂದೇ ರೀತಿಯಿಂದ ನೋಡಿದರೆ ಮಠಪತಿಗಳಂತೆ ಇರುತ್ತಾರೆ. ಮಠಪತಿಗಳು ಕಾಯಕವೇ ಇವರದಾಗಿವೆ(ವೃತ್ತ ಚಿತ್ರ ೨ ನೋಡಿ) ಗಣಾಚಾರಿ ಜಂಗಮರು ನೂರಕ್ಕೆ ಶೇ.೧ ಮಾತ್ರ ಹೊಂದಿದ್ದಾರೆ. ಶೇ.೪೯ ಮಠಪತಿಗಳೆ ಇದ್ದಾರೆ. ಶೇ.೩೬ರಷ್ಟು ಹಿರೇಮಠಗಳಿವೆ. ಸುಕಾಸ್ಥಿ ಶೇ.೧೪ರಷ್ಟು ಇದ್ದಾರೆ.(ವೃತ್ತ ಚಿತ್ರ ೨)

ವೃತ್ತಚಿತ್ರ ೨. ಬೀದರ ಜಿಲ್ಲೆಯ ಜಂಗಮರ ಪಂಗಡಗಳ ಪ್ರಮಾಣ




## ಕೋಷ್ಟಕ ೪

### ತಾಲೂಕುವಾರು ಜಂಗಮರ ಪೀಠವಾರು ಕುಟುಂಬಗಳು

| ಕ್ರ. ಸಂ. | ತಾಲೂಕುಗಳು | ಕಾಶಿ ಮಠ | ಕೇದಾರ | ರಂಭಾಪುರಿ | ಶ್ರೀಶೈಲ | ಉಜ್ಜನಿ | ಒಟ್ಟು ಕುಟುಂಬಗಳು |
|---|---|---|---|---|---|---|---|
| ೧ | ಔರಾದ | ೨೨ | ೧೬ | ೧೫೫ | ೧೧ | ೫೯ | ೨೬೩ |
| ೨ | ಬಸವಕಲ್ಯಾಣ | ೫ | ೭ | ೧೭೬ | ೨ | ೭೧ | ೨೬೧ |
| ೩ | ಭಾಲ್ಕಿ | ೫೭ | ೧೧ | ೩೦೨ | ೧೮ | ೩೮ | ೪೨೬ |
| ೪ | ಬೀದರ | ೧೫ | ೨೦ | ೭೦ | ೨೦ | ೧೦೨ | ೨೨೭ |
| ೫ | ಹುಮನಾಬಾದ್ | ೨ | ೨೨ | ೧೬೮ | ೧೭ | ೯೭ | ೩೦೬ |
| | ಒಟ್ಟು | ೧೦೧ | ೭೬ | ೮೭೧ | ೬೮ | ೩೬೭ | ೧೪೮೩ |

ಈ ಪಂಚ ಪೀಠಚಾರ್ಯರ ಪೀಠಗಳಲ್ಲಿ ರಂಭಾಪುರಿ ಪೀಠವು ಬೀದರ ಜಿಲ್ಲೆಯಲ್ಲಿ ಹೆಚ್ಚಾಗಿ ಕೆಲಸ ಮಾಡುವ ಪೀಠವಾಗಿ ಕಂಡುಬರುತ್ತದೆ. ಶ್ರೀಶೈಲ ಪೀಠದ ಕಾರ್ಯವ್ಯಾಪ್ತಿ ಕಡಿಮೆ ಇದೆ. ಏಕೆಂದರೆ ಈ ಭಾಗಗಕ್ಕೆ ರಂಭಾಪುರಿಯ ಉಜ್ಜನಿ ಪೀಠಗಳ ಕುಟುಂಬಗಳು

ಹೆಚ್ಚಾಗಿ ಇವೆ. ಈ ಪೀಠಗಳು ಕರ್ನಾಟಕದಲ್ಲಿ ಇರುವುದಿರಂದ ಹೆಚ್ಚಾಗಿ ಈ ಭಾಗದ ಭಕ್ತರಿಗೆ ನೋಡಿಕೊಳ್ಳುವ ಕಾರ್ಯ ಮೇಲಿಂದ ಮೇಲೆಯಾಗುವುದರಿಂದ ಭಕ್ತರ ಜೊತೆ ಹೆಚ್ಚಾಗಿ ಸ್ಪಂದಿಸುವುದರಿಂದ ಮೇಲಿನ ಪೀಠಗಳೆ ಹೆಚ್ಚಿನ ಕುಟುಂಬಗಳು ಇವೆ. ಇನ್ನುಳಿದ ಪೀಠಗಳು ಕರ್ನಾಟಕ ಬಿಟ್ಟು ದೂರವಿರುವುದರಿಂದ ಆವುಗಳು ಆ ಭಾಗದ ಕಡೆ ತಮ್ಮ ಕಾರ್ಯವ್ಯಾಪ್ತಿ ಹರಡಿರುವಂತೆ ಕಂಡುಬರುತ್ತದೆ. ಹೀಗಾಗಿ ಈ ಭಾಗಕ್ಕೆ ಕಾಶಿ, ಕೇದಾರ ಮತ್ತು ಶ್ರೀಶೈನ ಪೀಠಗಳ ಕುಟುಂಬಗಳು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಆದ್ದರಿಂದ ಮೇಲಿನ ಕೋಷ್ಟಕದಂತೆ ಕಾಶಿ ಶೇ.೭%, ಕೇದಾರ ಶೇ.೫%, ರಂಭಾಪುರಿ ಶೇ.೫೮%, ಶ್ರೀಶೈಲಾ ಶೇ.೫%, ಉಜ್ಜಿಯನಿ ಶೇ.೨೫ %ರಷ್ಟು ಶೇಕಡವಾರುಗಳಲ್ಲಿ ಕಂಡುಬರುತ್ತವೆ.(ಜಿಲ್ಲೆಯ೧೭೫ ಹಳ್ಳಿಗಳು ಮಾತ್ರ ಸೇರಿದಂತೆ) ಇನ್ನುಳಿದ ಹಳ್ಳಿಗಳಲ್ಲಿಯೂ ಎಲ್ಲಾ ಪೀಠದ ಜಂಗಮರ ಕುಟುಂಬಗಳು ಕಂಡುಬರುತ್ತವೆ(ವೃತ್ತ ಚಿತ್ರ ೩).

ವೃತ್ತಚಿತ್ರ ೩. ಬೀದರ ಜಿಲ್ಲೆಯ ಜಂಗಮರ ಪೀಠಗಳ ಪ್ರಮಾಣ




**ವಿರಕ್ತ ಮಠ :** ವಿರಕ್ತ ಪೀಠದ ಜಂಗಮರು ವರ್ಗದ ಮಠಗಳು ಹನ್ನೆರಡನೆಯ ಶತಮಾನದಲ್ಲಿ ಅಲ್ಲಮ ಪ್ರಭುದೇವರು, ಬಸವಣ್ಣ, ಅಕ್ಕಮಹಾದೇವಿ ಮುಂತಾದ ಶರಣರಿಂದ ಸ್ಥಾಪನೆ ಗೊಂಡಿದ್ದೇವು ಗಳೆನ್ನುತ್ತಾರೆ. ಆದರೆ ೧೨ನೇ ಶತಮಾನಕ್ಕಿಂತ ಪ್ರಾಚೀನವಾದವುಗಳ ನ್ನೆಬಹುದು. ವಿರಕ್ತ ಎಂದರೆ ಬ್ರಹ್ಮಚಾರಿ ಎನ್ನಲಾಗಿದೆ. ಸುಖ- ದು:ಖಗಳನ್ನು ಅನುಭವಿಸಿದ ಮನೆಯ ಬಂಧು ಬಳಗಗಳ ಸರಪಳಿಯಿಂದ ಹೊರ ಬಂದವರು. ಸದಾ ಕಾವಿ ಬಟ್ಟೆಯನ್ನು ಧರಿಸಿ ದೇಶ ಸಂಚಾರಗೈದು ಒಂದು ಸ್ಥಳದಲ್ಲಿ ಮಠವನ್ನು ಸ್ಥಾಪಿಸಿಕೊಂಡು ಧರ್ಮ ಪ್ರಚಾರ ಗೈಯುವುದೇ ಇವರ ಪರಮಕರ್ತವ್ಯವಾಗಿರುತ್ತದೆ. ವಿರಕ್ತ ಮಠದ ಜಂಗಮರು ಹುಟ್ಟು ಜಂಗಮರಾಗಿರು ವುದಿಲ್ಲ. ಇವರು ಪೀಠಜಂಗಮರಲ್ಲೆ ಹುಟ್ಟು ಜಂಗಮರಾಗಿರುವುದಿಲ್ಲ. ಇವರು ಪೀಠ ಜಂಗಮರಲ್ಲೇ ದೀಕ್ಷೆಯನ್ನು ಪಡೆದುಕೊಡು ಅಧಿಕಾರ ಸ್ವೀಕಾರ ಮಾಡುವವರು ಎಂಬ ವಿದ್ವಾಂಸರ ಮತ. ಇಲ್ಲಿ ಜಂಗಮ ಹೊಟ್ಟೆಯಲ್ಲಿ ಹುಟ್ಟಿ ಬಂದ ಜಂಗಮನಿರುವುದಿಲ್ಲ. ಹೆಚ್ಚಾಗಿ ಬೇರೆ ಜಾತಿಗಳಿಂದ ಬಂದವರು ಈ ವಿರಕ್ತ ಪೀಠದಲ್ಲಿ ಕಾಣುತ್ತೇವೆ. ಇವರು

ಕೇವಲ ಧರ್ಮ ಪ್ರಚಾರ, ಧರ್ಮ ಬೊಧನೆ, ಶರಣ ಸಾಹಿತ್ಯ ತತ್ವಶಾಸ್ತ್ರ ಮತ್ತು ವ್ಯವಹಾರಿಕ ಜ್ಞಾನವನ್ನು ನೀಡುವುದೇ ಇವರ ಆದ್ಯ ಕರ್ತವ್ಯವಾಗಿದೆ. ಹೀಗೆ ಜಂಗಮ ದೀಕ್ಷೆ ಪಡೆದುಕೊಂಡು ಸದಾ ವಿರಕ್ತರನ್ನಾಗಿ ಮಠದ ಆಗುಹೋಗುಗಳನ್ನೆ ಪರಿಗಣಿಸಿ ಸಮಾಜವು ಎಲ್ಲಾ ರೀತಿಯಿಂದ ಅಭಿವೃದ್ಧಿಪಡಿಸಿಕೊಂಡು ಸಾಗುತ್ತಿರುತ್ತಾರೆ. ಗುರುಪೀಠದ ಜಂಗಮ ಮತ್ತು ವಿರಕ್ತ ಪೀಠದ ಜಂಗಮರು ಒಂದೇ ಯಾಗಿದ್ದಾರೆ. ತಮ್ಮ ಸೇವೆಯಲ್ಲಿ ಮಾತ್ರ ಬದಲಾವಣೆಗಳು ಕಂಡು ಬರುತ್ತವೆ. ಕೆಲವು ವ್ಯತ್ಯಾಸವನ್ನು ಕೆಳಗಿನಂತೆ ಕಂಡುಬರುತ್ತದೆ.

೧. ಗುರುಪೀಠಕ್ಕೆ ಗುರುವರ್ಗದಲ್ಲೇ ಜಂಗಮ ಉಪಜಾತಿಯಲ್ಲಿ ಹುಟ್ಟಿದ ವ್ಯಕ್ತಿ ಮಾತ್ರ ಅರ್ಹ. ವಿರಕ್ತರಲ್ಲಿ ಲಿಂಗಾಯತರ ಉಪಜಾತಿಯ ಅಥವಾ ಹರಿಜನ ವ್ಯಕ್ತಿಯಾದರೂ ಜಂಗಮ ದೀಕ್ಷೆ ಪಡೆದು ಅಧ್ಯಕ್ಷನಾಗಬಹುದು.

೨. ಗುರುಗಳು ಶಾಭಾರಿಗಳು ಇವರ ಮುಖ್ಯ ಕರ್ತವ್ಯ, ಧಾರ್ಮಿಕ ವಿಧಿ ವಿಧಾನಗಳನ್ನು ನಡೆಸಿಕೊಂಡು ಹೋಗುವುದು. ವಿರಕ್ತ ಗುರುಗಳು, ನಿರಾಭಾರಿಗಳು, ನಿರಂಜನರು ಇವರಿಗೆ ಯಾವುದೇ ಧಾರ್ಮಿಕ ಕರ್ಮಗಳು ನಡೆಸಿಕೊಂಡು ಹೋಗುವ ಹಕ್ಕು ಇರುವುದಿಲ್ಲ.

೩. ಗುರುಮಠಗಳು ಸಾಮಾನ್ಯವಾಗಿ ಊರ ಹಳ್ಳಿಗಳಲ್ಲಿ ಒಳಗೆ ಕಂಡು ಬರುತ್ತವೆ. ಏಕೆಂದರೆ ಇವರ ಸೇವೆ ಸಾಮಾಜಿಕರಿಗೆ ಸದಾ ಅವಶ್ಯಕತೆಯಾಗಿರುವುದರಿಂದ ಜನರ ಮಧ್ಯೆ ಇರುವು ದುಂಟು. ವಿರಕ್ತ ಮಠಗಳು ಹೆಚ್ಚಾಗಿ ಊರ ಹೊರಗೆ ಸ್ಥಾಪನೆಗೊಳ್ಳುತ್ತವೆ. ಕಾರಣ ಜ್ಞಾನ ಸಾಧಕರಿಗೂ ಅಧ್ಯಾತ್ಮಿಗಳೂ ವೈರಾಗ್ಯಪರರೂ ಆದ ವಿರಕ್ತ ಗುರುಗಳಿಗೆ ಏಕಾಂತ ಅವಶ್ಯಕವಾಗಿರುತ್ತದೆ.

೪. ಗುರುಪೀಠದವರು ಪೌರೋಹಿತ್ಯ ಮಂತ್ರ ಜೊತೆಗೆ ಸಂಸ್ಕೃತ ಭಾಷೆ, ಪಾಂಡಿತ್ಯ ಹೊಂದಿರು ತ್ತಾರೆ. ಆದರೆ ವಿರಕ್ತರಲ್ಲಿ ಪಾಂಡಿತ್ಯಕ್ಕಿಂತ ಅನುಭವ ಮತ್ತು ಅಧ್ಯಾತ್ಮ ಮುಖ್ಯವಾಗಿರುತ್ತದೆ. ಹೆಚ್ಚಾಗಿ ಜನರ ಭಾಷೆಯ ಕಡೆ ಗಮನವಿರುತ್ತದೆ.

೫. ಗುರುವರ್ಗದಲ್ಲಿ ಕರ್ಮ ದೀಕ್ಷೆ ಕೊಡುವುದು, ಅಲ್ಲಿ ಗೋತ್ರ, ಸೂತ್ರ, ಬಗಿ ಉಂಟು. ವಿರಕ್ತರಲ್ಲಿ ಲಯ ದೀಕ್ಷೆ. ಇಲ್ಲಿ ಒಬ್ಬ ವ್ಯಕ್ತಿ ವಿರಕ್ತನಾದೊಡನೆ ಗೋತ್ರ, ಸೂತ್ರ ಬಗಿ ಎಲ್ಲಾವು ಹೊರಟು ಹೋಗುತ್ತವೆ. ಇವನ ಹಿಂದೆ ವಚನ ಸಾಹಿತ್ಯ, ಶೂನ್ಯ ಸಂಪಾದನೆ ಈ ಸಾಹಿತ್ಯದ ಕಟ್ಟು ಮಾತ್ರ ಬರುತ್ತದೆ.

೬. ಗುರುಗಳು ಸಾಮಾನ್ಯವಾಗಿ ಮದುವೆಯಾಗಿರುವರು. ಒಂದು ವೇಳೆ ಬ್ರಹ್ಮಚಾರಿಯಾದರೂ ತಂದೆ, ತಾಯಿ, ಅಣ್ಣ ಮತ್ತು ತಮ್ಮಂದಿರ ಕುಟುಂಬಗಳ ಜೊತೆ ನೆಲಸಬಹುದು. ಆದರೆ ವಿಕ್ತರಲ್ಲ, ಮದುವೆಗೆ ಇಲ್ಲಿ ಸಂಪೂರ್ಣವಾಗಿ ಬ್ರಹ್ಮಚಾರಿಗಳು. ತಂದೆ, ತಾಯಿ, ಬಂಧು ಮಿತ್ರರ ಸಂಪರ್ಕಗಳು ಇರುವುದಿಲ್ಲ.

೭. ಗುರು ವರ್ಗದವರ ಪೀಠ, ಪುತ್ರ ಸಂತಾನವಾಗಿರುತ್ತದೆ. ವಿರಕ್ತರದು ಶಿಷ್ಯ ಸಂತಾನವಾಗಿರುತ್ತದೆ.

೮. ಇವರಲ್ಲಿ ವೈಭವಕ್ಕೆ ನಿಷೇಧವಿಲ್ಲ. ವಿರಕ್ತರಲ್ಲಿ ನಿಷೇಧವಿದೆ.

ಹೀಗೆ ವ್ಯತ್ಯಾಸಗಳು ಕಂಡು ಬರುತ್ತವೆ. ಸದ್ಯ ವಿರಕ್ತ ಮಠಗಳು ತುಂಬ ಪ್ರಬಲವಾಗಿ ಮುಂದುವರೆದಿರುವುದು ಕಾಣುತ್ತೇವೆ. ಗುರುವರ್ಗದವರು ಕೇವಲ ಸಮಾಜ ಕ್ರಿಯೆಗಳನ್ನು ಮಾಡುವುದು ತಮ್ಮ ಜೀವನವನ್ನು ನಡೆಸುವುದರಿಂದ ತುಂಬ ಹಿಂದೆ ಸರಿದಿವೆ. ವಿರಕ್ತರ ಕೆಲಸ ಕೇವಲ ಜ್ಞಾನ ದಾಸೋಹವನ್ನು ಪ್ರಸಾರಪಡಿಸುವುದರಿಂದ ಶಿಕ್ಷಣ ರಂಗಗಳಲ್ಲಿ ಇಂದು ಗಣನೀಯ ಸೇವೆ ಮಾಡುತ್ತಿರುವರು.

ಇತ್ತೀಚೆಗೆ ಗುರುಮಠದವರಿಗೆ ಮತ್ತು ವಿರಕ್ತ ಪೀಠದವರಿಗೆ ಸ್ಪರ್ಧೆ ತಿಕ್ಕಾಟಗಳು ನಡೆದಿರುವುದರಿಂದ ಸಮಾಜದಲ್ಲಿ ಅನೇಕ ಬದಲಾಣವೆಯನ್ನು ಕಂಡು ಬಂದಿರುವುದು. ಅಧಿಕಾರದ ಸಲುವಾಗಿ, ಕರ್ತವ್ಯದ ಸಲುವಾಗಿ ನಾನು ಮೇಲು - ನೀನು ಮೇಲು ಎಂಬ ಮಾತುಗಳಿಂದ ತಮ್ಮ ತಮ್ಮಲ್ಲಿಯೇ ಮನಸ್ತಾಪಗಳು ಉಂಟಾಗಿ ತಿಕ್ಕಾಟಗಳು ಪತ್ರಿಕೆಯಲ್ಲಿ ಕಾಣುತ್ತಿದ್ದೇವೆ. ಎರಡು ಪೀಠಗಳ ಉದ್ದೇಶ ಜನ ಸೇವೆಯೆಯಾಗಿದೆ ಎಂಬುದನ್ನು ತಿಳಿದು ತಮ್ಮ ಕರ್ತವ್ಯ ಸಮಾಜಕ್ಕೆ ನೀಡುವುದು, ಸಮಾಜ ಜಾಗೃತಿ ಮಾಡುವುದು. ಇದು ವಿರಕ್ತ ಪೀಠ ಮತ್ತು ಗುರುಪೀಠಗಳ ಕರ್ತವ್ಯ ಅವಶ್ಯಕವಾಗಿರುವುದು.

ಹೀಗೆ ಜಂಗಮ ಪರಂಪರಾಗತವಾಗಿ ಬಂದ ಒಂದು ಭವ್ಯ ಪರಂಪರೆಯಾಗಿದೆ. ಇದು ಆದಿ ಜಗದ್ಗುರು ಪಂಚಾಚಾರ್ಯರಿಂದ ಪ್ರಾರಂಭವಾಗಿ ಅವರ ಸೂತ್ರಗೋತ್ರಾದಿಗಳನ್ನೇ ಹೊಂದಿರುತ್ತದೆ. ರೇಣುಕಾ, ದಾರುಕ, ಘಂಟಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣ ಇವರು ಪಂಚಾಚಾರ್ಯರು. ಇವರಿಂದ ವೀರಮಾಹೇಶ್ವರ (ಜಂಗಮ) ದೀಕ್ಷಾ ಬದ್ಧರಾದ ಐದು ಆರಾಧ್ಯ ಸಂಪ್ರದಾಯಿಗಳನ್ನೇ ವೀರ ಮಹೇಶ್ವರರು ಅಥವಾ ಜಂಗಮರು ಎಂದು ಗೌರವಿಸಲಾಗುತ್ತಿದೆ. ಹೀಗೆ ಈ ಜಂಗಮನನ್ನೆ ಪ್ರಾಚೀನತೆಯನ್ನು ಗಮನಿಸಿದಂತೆ. ಜಂಗಮರ ಪಾಶುಪಾತ, ಲಕುಲಿಶ, ಪಾಶುಪತ ವ್ರತ, ವೀರಮಾಹೇಶ್ವರ, ಜಂಗಮ ಎಂದು ಪ್ರಾಚೀನಕಾಲದಿಂದಲೂ ಕರೆಯುತ್ತಿದ್ದರು ಎನ್ನಲಾಯಿತು. ಜಂಗಮರ ಪ್ರಾಚೀನತೆ ಮತ್ತು ನಡೆದು ಬಂದ ದಾರಿ ಮತ್ತು ಜಂಗಮ ಪದದ ಅರ್ಥ ಎಲ್ಲವು ಗಮನಿಸಿದಂತೆ ಜಂಗಮ ಸಮುದಾಯವು ಸಮಾಜದ ಉನ್ನತ ಸ್ಥಾನದ ಸಮುದಾಯವೆಂದು, ಅತೀ ಪ್ರಾಚೀನ ಸಮುದಾಯವೆಂದು (ಇತಿಹಾಸದಲ್ಲಿ) ಸರ್ವ ವಿಧಿತ. ಹೀಗಾಗಿ ವೀರಶೈವ ಧರ್ಮದ ಸಾಂಸ್ಕೃತಿಕ ಇತಿಹಾಸವನ್ನು ಪರಿಗಣಿಸಿದಂತೆ ಸಾವಿರಾರು ವರ್ಷಗಳಿಂದ ಜಂಗಮರು ವೀರಶೈವ ಧರ್ಮದ ಉಪವರ್ಗವಾಗಿ, ಧಾರ್ಮಿಕ ವ್ಯವಸ್ಥೆಯ ಪ್ರಧಾನ ಅಂಶವಾಗಿ ಸಮಾಜಕ್ಕೆ ಸೇವೆ ಸಲ್ಲಿಸುವ ವರ್ಗವಾಗಿ ಬಂದಿದೆ. ಜಂಗಮರಲ್ಲಿ ಕೆಲವರು ಜಗದ್ಗುರುಗಳಾಗಿಯೂ ಮತ್ತೆ ಕೆಲವರು ವೈರಾಗ್ಯ ಮೂರ್ತಿಗಳಾಗಿಯೂ, ಮತ್ತೆ ಕೆಲವರು ವಿದ್ವಾಂಸರೂ, ಲೌಕಿಕರೂ, ಗೃಹಸ್ಥರೂ ಆಗಿ ಸಮಾಜದ ಹೊಸ ಸವಾಲುಗಳನ್ನು ಎದುರಿಸುತ್ತಾ ಧಾರ್ಮಿಕ

ಸಾಂಪ್ರದಾಯಗಳನ್ನು ಕಾಪಾಡಿಕೊಂಡು ಬದಲಾಗುತ್ತಿರುವ ಸಮಾಜದೊಂದಿ ಬಾಳುತ್ತಿರುವ ಸಮುದಾಯ ಜಂಗಮ ಸಮುದಾಯವಾಗಿದೆ.

## ಆಕಾರ ಗ್ರಂಥಗಳು


೧. ಬೃಹನ್ಮಠ ಪಂಡಿತ ಬಸವರಾಜ ಶಾಸ್ತ್ರಿ, ೧೯೬೪, **ವೀರಶೈವ ಸದಾಚಾರ ಸಂಗ್ರಹ,** ಶ್ರೀ ಜಗದ್ಗುರು ಗಂಗಾಧರ ಪ್ರಚಾರಕ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ, ಪು.೧೯೨, ೧೯೪-೧೯೫.

೨. ಅಕ್ಕುರಮಠ ಷಣ್ಮುಖಯ್ಯ(ಲೇ), ಸಿದ್ಧಲಿಂಗಸ್ವಾಮಿ ಎಚ್. ಎಸ್.(ಸಂ), ೨೦೦೧, **ಜಂಗಮಜ್ಯೋತಿ,** ವೀರಮಹೇಶ್ವರ(ಜಂಗಮ) ಕ್ಷೇಮಾಭಿವೃದ್ಧಿ ಸಂಘ(ರಿ), ದಾವಣಗೆರೆ ಪು.೭,೧೦.

೩. ದೇಮಡಹಳ್ಳಿ ನಂಜುಂಡ ದೀಕ್ಷಿತ(ಅನು), ೧೯೧೨, **ಶಿವಸಹಸ್ರ ನಾಮ ಭಾಷ್ಯ,** ಐರಿಷ್ ಪ್ರೆಸ್, ಬೆಂಗಳೂರು, ಪು.೨೩೨(ಶಿವಾಗಮ ಸೌರಭ ಪು.XXIV).

೪. ಶರ್ಮ ಜಯದೇವ, ೧೯೯೧, **ವಿದ್ಯಾಲಂಕಾರ ಅಥರ್ವ ಭಾಷ್ಯ,** ಅಜಮೇರ್ ಆರ್ಯ ಸಾಹಿತ್ಯ ಮಂಡಲ, ಪು.೫೮೫.

೫. ನಂಜುಂಡರಾಧ್ಯ ಎಂ.ಜಿ.(ಲೇ), **ವೇದಕಾಲದ ಜಂಗಮರು,** ಅಕ್ಕುರಮಠ ಷಣ್ಮುಖಯ್ಯ(ಸಂ), ೧೯೯೧, ರಂಭಾಪೂರಿ ಬೆಳಗು ದ್ವೈಮಾಸಿಕ, ಸಂಪುಟ ೫, ೧೯೯೬, ಡಿಸೆಂಬರ್-ಜನವರಿ ೧೯೯೭, ಶ್ರೀ ಜಗದ್ಗುರು ರಂಭಾಪೂರಿ ವೀರಸಿಂಹಾಸನ ಮಹಾಸಂಸ್ಥಾನ ಪೀಠ, ಬಾಳೆಹೊನ್ನೂರು, ಪು.೫.

೬. ನರೇಂದ್ರನಾಥ್, ಘೋಷ(ಲೇ), ೧೯೫೮, ಕ್ಷೇತ್ರರಾಜ ಕಾಶಿ, **ಕಸ್ತೂರಿ,** ಮಾರ್ಚ್, ಪು.೯.

೭. ಶರ್ಮ ಬಿ. ಎಂ.,೧೯೮೧, **ಪೋತ್ಗಾ-ಗಂಗಾ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು.೧೦.

೮. ಚಿದಾನಂದಮೂರ್ತಿ ಎಂ.(ಸಂ), ೧೯೮೦ **ಡಾ.ಶಂ.ಬಾ.ಜೋಶಿ ಅವರ ಅಭಿನಂದನ ಗ್ರಂಥ,** ಅಧ್ಯಯನ, ಡಾ.ಶಂ.ಬಾ.ಜೋಶಿ ಸನ್ಮಾನ ಸಮಿತಿ, ಬೆಂಗಳೂರು, ಪು.೬೨೦, ೬೨೫.

೯. ವೀರಭದ್ರ ಶರ್ಮ ಎಚ್. ಎಂ.(ಸಂ), ೧೯೯೧, **ಜಂಗಮರ ಶ್ರೀ ಜೋಳಿಗಿ,** ಬೇಡ ಜಂಗಮ ಸಮಾಜ, ಬಳ್ಳಾರಿ, ಪು.೬೦, ೬೨, ೬೩.

೧೦. ಅ.ಸಿ.ಹಿರೇಮಠ(ಸಂ), ೨೦೦೧, **ವೀರಶೈವ ಪಂಚಪೀಠ ಪರಂಪರೆ,** ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ ಜ್ಞಾನ ವಿದ್ಯಾಪೀಠ, ಉಜ್ಜಯನಿ, ಪು.೩೧

೧೧. ಶ್ರೀ ಕಾಶಿ ಜಗದ್ಗುರು ಶಿವಾಚಾರ್ಯ ಚಂದ್ರಶೇಖರ, ೧೯೯೪, **ವೀರಶೈವ ಪಂಚಪೀಠ ಪರಂಪರೆ,** ಶ್ರೀ ಚೆನ್ನಚೇತನ ಪ್ರಕಾಶನ, ಹೊನ್ನಳ್ಳಿ, ಪು.೭೧-೭೨, ೭೧, ೧೨೨.

೧೨. ಪಂ.ಕಾಶಿನಾಥ ಶಾಸ್ತ್ರಿಗಳು, ೧೯೬೪, **ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ,** ಮೈಸೂರು, ಪು.೯೧-೯೨.

೧೩. ಗೋರ್ಟಾ ರಾಜಶೇಖರ ಸ್ವಾಮಿ, ೧೯೯೯, **ಶಾಸನಗಳಲ್ಲಿ ಜಗದ್ಗುರು ಪಂಚಾ ಚಾರ್ಯರು,** ಶ್ರೀ ರಂಭಾಪೂರಿ ವೀರಸಿಂಹಾಸನ ಪೀಠ, ಬಾಳೆಹೊನ್ನೂರು, ಪು.೫, ೮, ೧೦, ೧೨, ೧೫, ೧೫.

೧೪. ಶಿವಾನಂದ ವಿ., ೧೯೯೨, **ಉತ್ತರ ಭಾರತದ ಕನ್ನಡ ಹಸ್ತಪ್ರತಿ ಇತರ ದಾಖಲೆ ಸೂಚಿ,** ಕನ್ನಡ ಪೀಠ, ಹಿಂದು ವಿಶ್ವವಿದ್ಯಾಲಯ, ವಾರಾಣಸಿ, ಬನಾರಸ, ಪು.೫೨.

೧೫. E.C.Volume IX-10, 123.

೧೬. ಚಿದಾನಂದಮೂರ್ತಿ ಎಂ., ೧೯೮೯, **ಲಿಂಗಾಯತ ಅಧ್ಯಯನವಗಳು,** ವಾಗ್ದೇವಿ ಪುಸ್ತಕಗಳು, ಮೈಸೂರು, ಪು.೪೭೯, ೪೮೦.

## ಅಧ್ಯಾಯ ೪

# ಜಂಗಮರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಜೀವನ

೧. ವಾಸಿಸುವ ರೀತಿ

೨. ಊಟ

೩. ಉಡಿಗೆ

೪. ತೊಡಿಗೆ

೫. ಕಸುಬು

೬. ಹಬ್ಬಗಳು

೭. ಆಚರಣೆಗಳು ಮತ್ತು ಸಂಸ್ಕಾರಗಳು

೭.೧. ಜನನ ಪೂರ್ವ-ಸೀಮಂತ ಕಾರ್ಯ

೭.೨. ಜಾತಕ ಕರ್ಮ-ಲಿಂಗ ಕಟ್ಟುವುದು

೭.೩. ಐದೇಶಿ

೭.೪. ತೊಟ್ಟಿಲು

೭.೫. ಮುರುವ ಚುಚ್ಚುವುದು

೭. ೬. ಜಾವಳ

೭.೭. ಅಕ್ಷರ ಆರಂಭ(ವಿದ್ಯಾರಂಭ)

೭.೮. ಐಯ್ಯಾಚಾರ ದೀಕ್ಷಾ

೭.೯. ಮಠದಯ್ಯ, ಉತ್ತರಾಧಿಕಾರ ಅಥವಾ ಪಟ್ಟಾಧಿಕಾರ

೭.೧೦. ಹೆಣ್ಣು ಋತುಮತಿಯಾದಾಗ ನಡೆಯುವ ವಿಧಿಗಳು

೭.೧೧. ಮದುವೆ ಸಂಸ್ಕಾರಗಳು

೭.೧೧.೧. ಪಂಚಕಳಸ ಸ್ಥಾಪನೆ

೭.೧೧.೨. ಮಧುಪರ್ಕ ವಿಧಾನ

೭.೧೧. ೩. ಮಾಂಗಲ್ಯಧಾರಣ ವಿಧಿ

ಭಾರತಾದ್ಯಾಂತ ಬಹುಸಂಖ್ಯಾತ ಸಮುದಾಯಗಳು, ಜಾತಿಗಳು ಮತ್ತು ಇವುಗಳಿಗೆ ಉಪಜಾತಿಗಳು ಹುಟ್ಟಿಕೊಂಡು ತಮ್ಮ ತಮ್ಮ ಸಾಮಾಜಿಕ ವ್ಯವಸ್ಥೆಯೊಳಗೆ, ಸಂಸ್ಕೃತಿಯೊಳಗೆ ಸಾಮಾಜಿಕ ಜೀವನ ನಡೆಸುತ್ತಿವೆ. ಹೀಗಾಗಿ ಅವುಗಳದೇ ಆದ ಸಾಮಾಜಿಕ ರೀತಿ-ನೀತಿ ನೇಮಗಳನ್ನು ರಚಿಸಿಕೊಂಡು ವ್ಯವಹರಿಸುತ್ತಿವೆ. ಇಂತಹ ಸಮುದಾಯಗಳಲ್ಲಿ ಜಂಗಮ ಸಮುದಾಯವೂ ಒಂದಾಗಿದೆ. ಇವರ ಸಾಮಾಜಿಕ ಜೀವನವನ್ನು ಇತರ ಸಮುದಾಯಗಳಕ್ಕಿಂತ ಭಿನ್ನವಾಗಿರುವುದನ್ನು ಕೆಳಗಿನಂತೆ ಕಂಡುಕೊಳ್ಳಬಹುದು.

## ೧. ವಾಸಿಸುವ ರೀತಿ

ಜಂಗಮರು ನಿಂತಲ್ಲೇ ನಿಲ್ಲುವವರಲ್ಲ, ಒಂದುಕಡೆಯಿಂದ ಇನ್ನೊಂದು ಕಡೆಗೆ ಧರ್ಮ ಪ್ರಚಾರ ಮಾಡುತ್ತಾ ಸಾಗುತ್ತಿದ್ದರು. ಜಿಲ್ಲೆಯಿಂದ ಜಿಲ್ಲೆಗೆ, ಊರಿನಿಂದ ಊರಿಗೆ ಸಂಚರಿಸುತ್ತಾ ಭಕ್ತಾದಿಗಳ ಯೋಗಕ್ಷೇಮವನ್ನು ನಿವಾರಿಸುತ್ತಾ ಮುಂದುವರಿ ಯುತ್ತಿದ್ದರು. ಪಂಚಾಪೀಠಧೀಶ್ವರ ಜಂಗಮರು ಎಲ್ಲಾ ಕಡೆ ಸಂಚರಿಸಲು ತಮಗೆ ಆಗದ ಕಾರಣಕ್ಕಾಗಿ ಅವರ ಕೆಳಗೆ ಮಠದಯ್ಯಾ, ಮಠಪತಿ, ಸುಕಾಸ್ತಿ, ಗಣಚಾರಿ ಅಥವಾ ಗಣಕುಮಾರರನ್ನು ನೇಮಿಸಿ ಅವರಿಗೆ ಒಂದೊಂದು ಕೆಲಸವನ್ನು ನೇಮಿಸಿಕೊಡುತ್ತಿದ್ದರು. ಅವರು ಅದರಂತೆ ಸಮಾಜದಲ್ಲಿ ನಡೆದುಕೊಂಡು ಬರುತ್ತಿದ್ದರು. ಧರ್ಮ ಪ್ರಚಾರ ಮಾಡುತ್ತಿರುವಾಗ ಯಾವುದೇ ಮನೆ ಮಠಗಳು ಕಟ್ಟಿಕೊಂಡು ಇರುತ್ತಿರಲಿಲ್ಲ. ಒಬ್ಬ ಜಂಗಮ ಒಂದು ಕ್ರಿಯೆಗೆ ಬಂದಂತೆ ಅವನು ಹೋದನಂತರ ಮತ್ತೊಬ್ಬ ಜಂಗಮ ಬಂದು ಮತ್ತೊಂದು ಸಂಸ್ಕಾರವನ್ನು ಮಾಡಿ ಸಾಗುತ್ತಿದ್ದರು. ಮುಂದೆ ಬರಬರುತ್ತಾ ಎಲ್ಲಾ ಊರಿನ ಭಕ್ತರು ಜಂಗಮರಿಗೆ ಊರಿನ ಹೊರಗಡೆ ಒಂದಿಷ್ಟು ಜಾಗವನ್ನು ಕೊಟ್ಟು ಒಂದು ಮನೆಯನ್ನು ಕಟ್ಟಿಕೊಟ್ಟು ಅದರ ಕೆಳಗಡೆ ಒಂದು ಅಥವಾ ಎರಡು ಎಕರೆ ಹೊಲವನ್ನು ನೀಡಿ ಅವರಿಗೆ ಅಲ್ಲಿಯೇ ನೆಲೆಸುವಂತೆ ಮಾಡಿದರು. ಜಂಗಮ ಸಮಾಜದ ಸೇವೆಯನ್ನು ಮಾಡುತ್ತಾ ಸಮಾಜದಲ್ಲಿ ಭೀಕ್ಷೆಯನ್ನು ಬೇಡಿ ತಂದ ಆಹಾರ ಪದಾರ್ಥಗಳನ್ನು ಈ ಮಠದಲ್ಲಿ ಇಡುತ್ತಿದ್ದರು. ಊರಿಗೆ ಯಾವ

ಜಾತಿಯವರು ಬಂದರೇ ಅಥವಾ ಪ್ರಯಾಣಿಕರು ಬಂದರೇ ಈ ಜಂಗಮರ ಮನೆಗೆ ಬಂದು ಊಟ ಮಾಡಿ ವಿಶ್ರಾಂತಿ ಪಡೆದುಕೊಂಡು ಸಾಗುತ್ತಿದ್ದರು. ಆಗ ಜಂಗಮ ಭಕ್ತರು ಕಟ್ಟಿಕೊಟ್ಟ ಮನೆಯಲ್ಲಿಯೇ ಶಿಕ್ಷಣ, ಧರ್ಮನೀತಿ, ಧರ್ಮಪ್ರಚಾರ ಮತ್ತು ವ್ಯವಹಾರಿಕ ಜ್ಞಾನ ಜೊತೆಗೆ ಹಲವಾರು ರೋಗಿಗಳಿಗೆ ಔಷಧ ನೀಡುವ ಹಂತ ಪ್ರಾರಂಭಿಸಿದರು. ಮುಂದೆ ಆ ಮನೆಯ ವ್ಯಾಪ್ತಿ ವಿಶಾಲಗೊಂಡಂತೆ ಅದು ಮಠ (ಆಶ್ರಮ) ಗುರುಮನೆ, ಜಂಗಮ ಮನೆ, ಕೊನೆಗೆ ಮಠವೆಂದು ಕರೆದಿರುವಂತೆ ತೋರುತ್ತದೆ.

ಜಂಗಮರ ಮಠ ಅಥವಾ ಮನೆ ಊರಿಗೊಂದು ಸಿಗುತ್ತವೆ. ಆದರೆ ಇಂದು ಒಂದು ಊರಿನಲ್ಲಿ ಒಂದರಿಂದ ಹದಿನೈದರವರೆಗೆ ಮನೆಗಳು ಕಂಡು ಬರುತ್ತಿವೆ. ಆರಂಭದ ಸಂದರ್ಭದಲ್ಲಿ ಇವರ ಮನೆಗಳು ದೊಡ್ಡದಾದ ಬಯಲು ಪ್ರದೇಶದಲ್ಲಿ ನಿರ್ಮಿಸಲಾಗುತ್ತಿತ್ತು. ಏಕೆಂದರೆ ಭಕ್ತರು ಬಂದು ಪ್ರವಚನವಾಗಲಿ, ನೀತಿ ತತ್ವಗಳನ್ನು ಕೇಳಲು ದೊಡ್ಡ ಆವರಣವನ್ನು ತೆಗೆದುಕೊಳ್ಳುತ್ತಿದ್ದರು. ಇದರ ಹೆಬ್ಬಾಗಿಲು ತುಂಬ ಚಿಕ್ಕದಾಗಿರುತ್ತದೆ. ಏಕೆಂದರೆ ಭಕ್ತರು ತನ್ನಲ್ಲಿದ್ದ ಎಲ್ಲಾ ಅಹಂಭಾವನೆಗಳು ನಾಶವಾಗಿಸಿಕೊಂಡು ಜಂಗಮನ ಮಠಕ್ಕೆ ಬರಬೇಕಾದರೆ ಶುದ್ಧ ಮನಸ್ಸಿನಿಂದ ಆ ಹೆಬ್ಬಾಗಿಲಿನಿಂದ ಬಾಗಿ ಬರಬೇಕಾಗುತ್ತದೆ. ಬಾಗಿ ಬರಬೇಕೆಂದರೆ ಅದು ಜಂಗಮಯ್ಯನಿಗೆ ಗೌರವವನ್ನು ನೀಡಿದಂತೆ ಕಂಡು ಬರುತ್ತದೆ. ಹೀಗೆ ಬಹುತೇಕ ಜಂಗಮರ ಮನೆ-ಮಠಗಳು ಚಿಕ್ಕ ಬಾಗಿಲುಗಳಿಂದ ಕೂಡಿದ ಮನೆಗಳು , ಮಠಗಳು ನೋಡಬಹುದಾಗಿದೆ.

ಹೆಬ್ಬಾಗಿಲಿನ ಎದುರುಗಡೆ ಒಂದು ಚೌಕಾಕಾರದ ಗದ್ದುಗೆಯನ್ನು ನಿರ್ಮಿಸಿ ಅದರ ಮೇಲೆ ಲಿಂಗ ಮತ್ತು ನಂದಿ ಮೂರ್ತಿಯನ್ನು ಸ್ಥಾಪಿಸಿರುತ್ತಾರೆ. ಹೆಬ್ಬಾಗಿಲಿನಿಂದ ನೇರವಾಗಿ ಬಂದವರು ಲಿಂಗ ಮತ್ತು ನಂದಿಗೆ ನಮಸ್ಕರಿಸಿ ಕುಳಿತುಕೊಳ್ಳುತ್ತಾರೆ. ಇದಕ್ಕೆ ಹೊಂದಿಕೊಂಡ ಭಾವಣಿ ಇರುತ್ತದೆ. ಇದು ಸಭೆ ಸಮಾರಂಭ ಇಲ್ಲವೆ ವಿಶ್ರಾಂತಿಗೆ ಉಪಯೋಗಿಸುತ್ತಾರೆ. ಪ್ರತಿ ದಿನ ಮುಂಜಾನೆ ಹೆಣ್ಣು ಮಕ್ಕಳು ಹೊಸ್ತಿಲು ತೊಳೆದು ಅದರ ಮುಂಭಾಗವನ್ನು ಎತ್ತಿನ ಇಲ್ಲವೆ ಆಕಳ ಸಗಣಿಯಿಂದ ಸಾರಿಸಿ ವಿಭೂತಿ ಕುಂಕಮ ಹಚ್ಚಿ ಹೂ ಪತ್ರಿಯನ್ನಿಟ್ಟು ಊದಿನ ಕಡ್ಡಿ ಬೆಳಗಿ ನಮಸ್ಕಾರ ಮಾಡುತ್ತಾರೆ. ಮನೆಯೊಳಗೆ ಪ್ರವೇಶಿಸಿದಂತೆ ಎದುರಿಗೆ ಗದ್ದುಗೆ ಕಂಡುಬರುತ್ತದೆ. ದಾನ ಧರ್ಮವನ್ನು ನೀಡಿದ ಅಥವಾ ಕೊಂಡುಕೊಂಡ ಆಕಳು ಎಮ್ಮೆಗಳ ಕೊಟ್ಟಿಗೆ ಕಾಣುತ್ತದೆ. ದನಗಳಿಗೆ ಸರಿಯಾಗಿ ಗಮಿಸಬಹುದುದೆಂದು ಸ್ಥಳಾವಕಾಶ ಎದುರಿಗೆ ಮಾಡಿಕೊಳ್ಳುತ್ತಾರೆ. ಎತ್ತರವಾದ ಪಡಸಾಲೆ ಅದರ ಬದಿಗೆ ದೇವರ ಕೋಣೆ ಹಾಗೂ ಬಚ್ಚಲು

ಒಳಗೊಂಡ ಅಡಿಗೆ ಮನೆ ಇರುತ್ತದೆ. ಮಲಗುವ ಪ್ರತೇಕವಾದ ಕೋಣೆಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಕೆಲಯೊಬ್ಬರು ಮನೆಗಳಲ್ಲಿ ಮಾತ್ರ ಸಿಗುತ್ತವೆ. ಪ್ರತಿ ಸೋಮವಾರ ಹುಣ್ಣಿಮೆ, ಅಮವಾಸ್ಯ ಹಾಗೂ ಹಬ್ಬಹರಿದಿನಗಳಲ್ಲಿ ಆಕಳ ಸಗಣೆಯಿಂದ ನೆಲ ಸಾರಿಸಿ ಸುಣ್ಣ ಜಾಜಗಳನ್ನೂ ಗೋಡೆಗೆ ಹಚ್ಚಿ ಶುದ್ಧಗೋಳಿಸುತ್ತಾರೆ. ಮನೆಯ ಹಿಂದೆ ಹಿತ್ತಲವನ್ನು ಕಂಡು ಬರುತ್ತದೆ. ಈ ಸ್ಥಳದಲ್ಲಿ ಮನೆಯ ಹಿರಿಯರ ಸಮಾಧಿಗಳು ಹೂವಿನಗಿಡಗಳು, ಬಿಲ್ವಪತ್ರಿ ಗಿಡಗಳು, ದನಗಳಿಗೆ ಹುಲ್ಲು ಹಚ್ಚಿಕೊಳ್ಳುವ ಮತ್ತು ಕಟ್ಟಿಗೆ, ಕುಳಬಾನ ಉರುವಲಿಗಾಗಿ ಕುಂಪಿ ಹಚ್ಚಿರುತ್ತಾರೆ. ಬದಿಗೆ ಸಗಣೆ, ಕಸಕಡ್ಡಿ ಹಾಕಲು ತಿಪ್ಪಿಗುಂಡಿ ಅಗಿಯುತ್ತಾರೆ. ಪಕ್ಕದಲ್ಲಿ ಬಟ್ಟೆ ಒಗೆಯಲು(ತೊಳೆಯಲು) ಬಂಡೆಕಲ್ಲು ಹಾಕಿರುತ್ತಾರೆ. ಏಕೆಂದರೆ ಬಟ್ಟೆ ತೊಳೆದ ನೀರುಗಳು ತಿಪ್ಪೆಯಲ್ಲಿ ಹೋಗಲು ಬಿಡುತ್ತಾರೆ ಇದರಿಂದ ಕಸಕಡ್ಡಿ ಕೊಳೆತು ಗೊಬ್ಬರ ಚೆನ್ನಾಗಿಯಾಗುತ್ತದೆಂದು ಹೀಗೆ ಮಾಡುತ್ತಾರೆ. ಇಂದಿನ ಜಂಗಮರು ತಮ್ಮ ಮೂಲ ಮಠಗಳಾಗಲಿ, ಮನೆಗಳಾಗಲಿ ಬಿಟ್ಟು ಆಧುನಿಕ ರೀತಿಯೊಳಗೆ ನೆಲಕ್ಕೆ ಸಿಮೆಂಟು ಗಿಲಾಯಿ ಅಲ್ಲದೆ ಅನುಕೂಲವಂತ ಜಂಗಮರು ಇಂತಹ ಮನೆಗಳು ನಿರ್ಮಿಸಿದ್ದು ಕಾಣುತ್ತೇವೆ. ಬಹುತೇಕ ಮನೆಗಳು ಟೀನಿನ ಮನೆಗಳು, ಹಚ್ಚಿನ ಮನೆಗಳು, ಧಾಬೆ ಮನೆಗಳು, ಕೊಚ್ಚಿತ್ತಾಗಿ ಆರ್.ಸಿ.ಸಿ. ಮನೆಗಳು ಜಿಲ್ಲೆಯ ಎಲ್ಲಾ ಹಳ್ಳಿ ಪಟ್ಟಣಗಳಲ್ಲಿ ಸಿಗುತ್ತವೆ. ಜಿಲ್ಲೆಯಲ್ಲಿ ಜಂಗಮರ ಮನೆ ಮಾದರಿಯನ್ನು ಕೋಷ್ಠಕ - ೧ರಲ್ಲಿ ಕಾಣಬಹುದು.

**ಕೋಷ್ಠಕ ೧**

**ತಾಲೂಕುವಾರು ಜಂಗಮರ ಮನೆಯ ಮಾದರಿ**

| ಮನೆಗಳು ಕುಟುಂಬಗಳು | ಔರಾದ | ಬ.ಕಲ್ಯಾಣ | ಭಾಲ್ಕಿ | ಬೀದರ | ಹುಮನಾಬಾದ | ಒಟ್ಟು ಶೇ.ವಾರು |
|---|---|---|---|---|---|---|
| ಗುಡಿಸಲು | ೩.೪೨ | ೩.೦೬ | ೦.೯೩ | --- | ೨.೯೪ | ೨.೦೨ |
| ಟೀನ ಮನೆ | ೫೩.೯೯ | ೭೫.೮೬ | ೭೨.೫೩ | ೬೭.೮೪ | ೭೮.೭೫ | ೭೦.೩೯ |
| ಧಾಬಾ | ೧೨.೯೨ | ೦೮.೦೪ | ೧೦.೫೬ | ೮.೮೧ | ೦೭.೧೮ | ೦೯.೫೬ |
| ಆರ್.ಸಿ.ಸಿ | ೧.೧೪ | ೬.೫೧ | ೧೦.೭೯ | ೪.೪೦ | ೭.೫೧ | ೬.೬೭ |
| ಹಂಚಿನ ಮನೆ | ೦೯.೫೪ | --- | ೨.೩೪ | --- | ೦.೯೮ | ೨.೫೬ |
| ಮಠ ಮನೆ | ೩.೪೨ | ೪.೨೧ | ೧.೬೪ | ೧೬.೭೪ | ೧.೯೬ | ೪.೭೮ |
| ಬಾಡಿಗೆ ಮನೆ | ೧೫.೫೩ | ೨.೨೯ | ೧.೧೭ | ೨.೨೦ | ೦.೬೫ | ೩.೯೭ |
| **ಒಟ್ಟು** | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ |

ತಾಲೂಕವಾರು ಜಂಗಮರ ಮನೆಯನ್ನು ಗಮನಿಸದರೆ ಶೇಕಡ ೭೦ರಷ್ಟು ಜನರು ಟೀನ ಮನೆಯಲ್ಲಿ ವಾಸಿಸುತ್ತಿದ್ದಾರೆ. ಏಕೆಂದರೆ ಮೊದಲು ಜಂಗಮರ ಮನೆಗಳು ಹೆಚ್ಚಾಗಿ ಧಾಬಾ ಮನೆಗಳು ಕಂಡುಬರುತ್ತಿದ್ದವರು. ನಂತರ ಅವುಗಳು ಪ್ರಕೃತಿ ವಿಕೋಪಕ್ಕೆ ಹಾಳಾಗಿರುವುದರಿಂದ ಮತ್ತೆ ಜಂಗಮರು ಧಾಬಾ ಮನೆಗಳು ಕಟ್ಟಿಕೊಳ್ಳಲ್ಲಿಕ್ಕೆ ಆರ್ಥಿಕ ಸಬಲತೆ ಇರದ ಕಾರಣಕ್ಕಾಗಿ ಅವುಗಳ ಮೇಲೆ ಟೀನ ಹಾಕಿರುವುದು ಕಂಡುಬರುತ್ತದೆ. ಇದರಿಂದ ಧಾಬಾ ಮನೆಗಳೇ ಬಹುತೇಕ ಟೀನ ಮನೆಗಳಾಗಿರುವುದು ಗಮನಿಸಬಹುದು. ಶೇ.೧೦ರಷ್ಟು ಜಂಗಮರು ಗುಡಿಸಲು, ಮಠ ಮತ್ತು ಬಾಡಿಗೆ ಮನೆಯಲ್ಲಿ ವಾಸಿಸುತ್ತಿರುವುದರನ್ನು ನೋಡಿದರೆ ಎಷ್ಟು ಜಂಗಮರಿಗೆ ಪರಿಪೂರ್ಣವಾಗಿ ವಾಸಿಸಲು ಮನೆಗಳಿಲ್ಲದ್ದು ಕಾಣುತ್ತದೆ. ಧಾಬಾ ಮನೆಗಳು ಶೇ.೯ರಷ್ಟು, ಹಂಚಿನ ಮನೆ ಶೇ.೨ರಷ್ಟು ನಂತರ ಶೇ.೬ರಷ್ಟು ಆರ್.ಸಿ.ಸಿ. ಮನೆಗಳು ಇರುವುದು ತಿಳಿಯುತ್ತದೆ. ಈ ಮನೆ ಮಾದರಿಯಿಂದ ಜಂಗಮರ ಆರ್ಥಿಕ ಸ್ಥಿತಿ ಅವರ ಅಂತಸ್ತು ಗೊತ್ತಾಗುತ್ತದೆ. ಜಂಗಮ ಸಮುದಾಯ ಆರ್ಥಿಕವಾಗಿ ಹಿಂದಿರುವುದು ಕೋಷ್ಟಕದಿಂದ ಕಂಡುಬರುತ್ತದೆ. ಇಂದಿನ ದಿನಮನಗಳಲ್ಲಿ ಈ ಸಮುದಾಯ ಅಭಿವೃದ್ಧಿ ಕಡೆ ಸಾಗುವುದು ಅತ್ಯವಶ್ಯಕವಾಗಿದೆ. ಆದಕ್ಕೆ ಸರ್ಕಾರದವರ ಸಹಕಾರ ಮುಖ್ಯವಾಗಿರುತ್ತದೆ.

## ೨. ಊಟ

ಇವರು ಮೂಲತಃ ಸಸ್ಯಾಹಾರಿಗಳು. ಆದರೆ ನಾಡಿನ ಬೇರೆ ಬೇರೆ ಭಾಗಗಳ ಜಂಗಮರು ಮೂಲತಃ ಸಸ್ಯಹಾರಿಗಳಾದರೂ ಅವರ ಊಟಮಾಡುತ್ತಿರುವ ಊಟದಲ್ಲಿ ಗಣನೀಯ ಪ್ರಮಾಣದ ವ್ಯತ್ಯಾಸ ಗುರುತಿಸಬಹುದಾಗಿದೆ. ಉತ್ತರ ಕರ್ನಾಟಕದ ಕಡೆ ಜೋಳದ ರೊಟ್ಟಿಯ ಜೊತೆಗೆ ಅನ್ನವನ್ನು ತೆಗೆದುಕೊಳ್ಳುವುದು ಸರ್ವಸಮಾನ್ಯ. ಆದರೆ ಹಳೆ ಮೈಸೂರು ರಾಜಧಾನಿಯಾದ ಬೆಂಗಳೂರು ಕಡೆ ಜೋಳದ ರೊಟ್ಟಿ ಬದಲಾಗಿ ರಾಗಿ ಮುದ್ದೆಯನ್ನು, ಅನ್ನವನ್ನು ಸೇವಿಸುತ್ತಾರೆ. ಹುಣ್ಣಿಮೆ-ಅಮಾವಾಸ್ಯೆ, ಹಬ್ಬಗಳಲ್ಲಿ ಮತ್ತು ಮದುವೆ ಇತರ ಕಾರ್ಯಕ್ರಮಗಳಲ್ಲಿ ವಿಶೇಷವಾದ ಊಟವನ್ನು ತಯಾರಿಸುತ್ತಾರೆ. ಶೆವಿಗೆ, ಹುಗ್ಗಿ, ಹೋಳಿಗೆ, ಕರದಿನ ಊಟ, ಕಡುಬು, ಲಾಡು, ಸೀರಾ, ಚಪಾತಿ ಮಾಡುವುದುಂಟು. ಇವರು ಊಟ ಮಾಡುವುದು ವಿಶೇಷವಾಗಿದೆ. ಸ್ನಾನವನ್ನು ಮಾಡಿ ಗುರುಗಳು ನೀಡಿದ ದೀಕ್ಷೆ ಲಿಂಗವನ್ನು ಪೂಜಿಸುತ್ತಾರೆ. ನಂತರ ಕಟ್ಟಿಗೆ ಮಣೆಯನ್ನು ಮಾಡಿರುತ್ತಾರೆ. ಅದರ ಮೇಲೆ ಕುಳಿತು ಅಡ್ಡಣಗಿ (ಕಬ್ಬಿಣದಿಂದ ತಯಾರಿಸಿದ್ದು)ಹಾಕಿಕೊಂಡು, ಅದರ ಮೇಲೆ ತಟ್ಟೆ ಇಟ್ಟು ಊಟ ಮಾಡುವ ಪೂರ್ವ ಎದೆಯ ಮೇಲಿನ ಲಿಂಗಕ್ಕೆ(ನೈವಿದ್ಯೆ) ಅನ್ನವನ್ನು ತೋರಿ ನೀರನ್ನು ಸಿಂಪಡಿಸಿ, ನಮಸ್ಕರಿಸಿ ಊಟ ಮಾಡುತ್ತಾರೆ. ಊಟದ ಜೊತೆ ಕಾಯಿಪಲ್ಯ, ಸಾರು, ಉಪ್ಪಿನಕಾಯಿ, ಚಟ್ನಿ, ಹಾಲು, ಮೊಸರು ಮತ್ತು ತುಪ್ಪ ಅವರವರ ಶಕ್ತಿಗನುಸಾರವಾಗಿ ಊಟ ಮಾಡುವುದುಂಟು. ಮಠಾಧೀಶ್ವರು ಊಟದಲ್ಲಿ ಉಪ್ಪು - ಖಾರ ಕಡಿಮೆ ಪ್ರಮಾಣದಲ್ಲಿ ಸೇವಿಸುವುದುಂಟು.

## ೩. ಉಡಿಗೆ

ಉಡಿಗೆಯಲ್ಲಿ ಅಷ್ಟು ಪ್ರಾದೇಶಿಕವಾಗಿ ಬದಲಾವಣೆ ಕಂಡು ಬರುವುದಿಲ್ಲ. ಇಲ್ಲಿನ ಜಂಗಮರು ಅದರಲ್ಲಿ ದೊಡ್ಡ ದೊಡ್ಡ ಮಠಾಧೀಶ್ವರು, ಸನ್ಯಾಸಿಗಳು, ಮಠಗಳಿಗೆ ಬಿಟ್ಟ ಜಂಗಮರು ಹೆಚ್ಚಾಗಿ ಕಾವಿ ಬಟ್ಟೆಯನ್ನು ಧರಿಸಿಕೊಳ್ಳುತ್ತಾರೆ. ಇವರುಗಳು ನೆಹರುಷರ್ಟ್ಸ ಕೆಳಗೆ ಲುಂಗಿ ಅಥವಾ ಮೇಲಿನಿಂದ ಕೆಳಗಿನವರೆಗೆ ಜುಬ್ಬಾ ಹಾಕಿಕೊಂಡು ತಲೆಗೆ ರುಮಾಲು ಕಟ್ಟಿಕೊಳ್ಳುತ್ತಾರೆ. ಕೆಲವು ಸಂಪೂರ್ಣವಾಗಿ ತಲೆ ಬೋಳಿಸಿಕೊಂಡು ಇದ್ದರೆ ಇನ್ನು ಕೆಲವರು ತಲೆ ಕೇಶವನ್ನು ಹಾಗೆಯೇ ಬಿಡುವರುಂಟು. ಕಾಲಲ್ಲಿ ಕಟ್ಟಿಗೆಯಿಂದ ತಯಾರಿಸಿದ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಾರೆ. ಆದರೆ ಸಾಮಾನ್ಯ ಜಂಗಮರು ಆಧುನಿಕಕ್ಕೆ ಹೊಂದಿಕೊಂಡು ಶಿಕ್ಷಣವನ್ನು ಪಡೆದು ನಗರದಲ್ಲಿ ವಾಸಿಸುವ ಜಂಗಮರು ಎಲ್ಲಾ ಜನಾಂಗಗಳಂತೆ ಪ್ಯಾಂಟು ಶರ್ಟ ಹಾಗೂ ಬೂಟು ಧರಿಸುತ್ತಾರೆ. ಇವರು ಭಕ್ತರ ಮನೆಗೆ ಯಾವುದೇ ಕ್ರಿಯೆಗೆ ಹೋದಾಗ ಅಥವಾ ಭಿಕ್ಷೆಗೆ ಹೋದಾಗ ಮಾತ್ರ ತಲೆಯ ಮೇಲೆ ಟೋಪಿಗೆ ಹಾಕಿ ಕೊರಳಲ್ಲಿ ಟಾವಲ್ (ಶಾಲು) ಹಾಕಿಕೊಂಡು ಹೋಗುತ್ತಾರೆ. ಹೆಂಗಸರು ಬ್ರಹ್ಮಚಾರಿಯಾಗಿ ಅಥವಾ ಶರಣಮ್ಮನಾಗಿ ಮಠಗಳಲ್ಲಿ ನೆಲೆಸಿದರೆ ಅವರು ಬಿಳಿ ಬಣ್ಣದ ಸೀರೆ, ಕುಪ್ಪಸ ತೊಡುವವರು. ಸಾಮಾನ್ಯ ಹೆಣ್ಣು ಮಕ್ಕಳು ಮಾತ್ರ ಇತರ ಜನಾಂಗಗಳಂತೆ ಸೀರೆ, ಕುಪ್ಪಸ ತೊಡುತ್ತಾರೆ. ಚಿಕ್ಕ ಮಕ್ಕಳು ಅರ್ಧ ಚಣ್ಣೆ, ಅಂಗಿ, ಹುಡಗಿಯರು ಲಂಗ, ಪೋಲಕ, ನೂರಿಗಳು ಹಾಕಿಕೊಳ್ಳುತ್ತಾರೆ. ಆದರೂ ಜಂಗಮ ಕಾಯಕ ನೇರವೇರಿಸುವ ಸಂದರ್ಭದಲ್ಲಿ ಸಂಪೂರ್ಣವಾಗಿ ಕಾವಿ, ಬಿಳಿ ಬಟ್ಟೆಗಳು ಧರಿಸಿಕೊಂಡು ಕಾರ್ಯ ಮುಂದುವರಿಸುತ್ತಾರೆ. ಆದರೆ ಇಂದಿನ ಯುವ ಪೀಳಿಗೆ ಆಧುನಿಕ ಉಡುಪುಗಳಿಗೆ ಮಾರು ಹೋಗಿ ಉಪಯೋಗಿಸುತ್ತಿರುವುದು ಕಾಣುತ್ತೇವೆ.

## ೪. ತೊಡಿಗೆ

ಇವರಲ್ಲಿ ಹೇಳಿಕೊಳ್ಳುವಂತಹ ತೊಡಿಗೆಗಳು ಕಂಡುಬರುವುದಿಲ್ಲ. ಪಟ್ಟದ್ದೇವರು, ಪಂಚಾ ಪೀಠಾಧೀಶ್ವರರು, ಮಠದ ಬ್ರಹ್ಮಚಾರಿಗಳು, ಬ್ರಹ್ಮಚಾರಿ ಹೆಣ್ಣು ಮಕ್ಕಳು ಅಥವಾ ಶರಣಮ್ಮನವರು ಸಾಮಾನ್ಯವಾಗಿ ಕೊರಳಿನಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಳ್ಳುತ್ತಾರೆ. ಹೆಣ್ಣು - ಗಂಡು, ಚಿಕ್ಕವರು - ದೊಡ್ಡವರು ಎಂಬ ಬೇಧವಿರಲಾರದೆ ಜಂಗಮರ ಪ್ರತಿಯೊಬ್ಬರ ಕೊರಳಲ್ಲಿ ಲಿಂಗವನ್ನು ಇಟ್ಟುಕೊಳ್ಳುವ ಲಿಂಗದಕಾಯಿ ಹಾಕಿಕೊಳ್ಳುತ್ತಾರೆ. ಇದು

ಕಟ್ಟಿಗೆಯಿಂದ, ಚಿನ್ನ ಬೆಳ್ಳಿ, ಅರಿವೆಯ ಚೀಲಗಳಲ್ಲಿ ತಯಾರಿಸಿದುದ್ದು ಹಾಕಿಕೊಳ್ಳುತ್ತಾರೆ. ಇದು ಅವರವರ ಆರ್ಥಿಕ ಪರಿಸ್ಥಿತಿಯಂತೆ ತಯಾರಿಸಿಕೊಳ್ಳುತ್ತಾರೆ. ಮೊಗ್ಗೈಯಿ, ರಟ್ಟೆ, ಮತ್ತು ಕಿವಿಗಳಲ್ಲಿ ರುದ್ರಾಕ್ಷಿಗಳನ್ನು ಕಟ್ಟಿಕೊಳ್ಳುವದುಂಟು ಕೆಲವು ಮಠದ ಜಂಗಮರು ಚಿನ್ನದ ಸರ ಉಂಗರ ತೊಡುವುದುಂಟು ಸಾಮಾನ್ಯರು ರುದ್ರಾಕ್ಷಿ ಕಟ್ಟಿಕೊಳ್ಳುವುದಿಲ್ಲ ಅನುಕೂಲವಂತರು ಚಿನ್ನದ ಸರ ಉಂಗರ ಧರಿಸುತ್ತಾರೆ. ಮತ್ತು ಹಣೆಯ ಮೇಲೆ ಮೂರು ಪಟ್ಟಿ ವಿಭೂತಿ ಹಚ್ಚಿಕೊಳ್ಳುತ್ತಾರೆ. ಹೆಂಗಸರು ಚಿನ್ನದ ತಾಳಿ, ಮೂಗಬಟ್ಟು, ಕಿವಿಯಲ್ಲಿ ಬುಗುಡಿಕಮಾಲು, ಹೂ ಬೆಂಡವಾಲಿ, ಕಾಲುಂಗರು, ಗುಂಡಿನಸರ, ಬೋರಮಾಳ ಸರ, ಚೈನು, ಕೈಯಲ್ಲಿ ಬಂಗಾರದ ಬಳೆ, ಸೊಂಟದಲ್ಲಿ ಬೆಳ್ಳಿಯ ಡಾಂಬು ಮುಗಿನಲ್ಲಿ ಸುಪಾನಿ ಹಾಕಿಕೊಳ್ಳುತ್ತಾರೆ. ಚಿಕ್ಕ ಮಕ್ಕಳಿಗೆ ಗಂಡು-ಹೆಣ್ಣು ಭೇದವಿಲ್ಲದೆ ಕಾಲಲ್ಲಿಹಾಲಗಡಗ (ಕಾಲಗಡಗ), ಕೊರಳಲ್ಲಿ ಲಿಂಗದಕಾಯಿ, ಬಂಗಾರದ ಸರ, ಕಿವಿಯಲ್ಲಿ ಚಿನ್ನದ ಲವಲಕ್, ಅಥವಾ ಮುರುವುಗಳು ಬಣ್ಣ ಬಣ್ಣದ ಹರಳುಗಳಿಂದ ಮಾಡಿಸುತ್ತಾರೆ. ಉಡುವಣೆ ಮಕ್ಕಳ ಸೊಂಟಕ್ಕೆ ಕಟ್ಟುತ್ತಾರೆ. ಹೀಗೆ ಇವರಲ್ಲಿ ಸಾಮಾನ್ಯವಾದ ತೊಡಿಗೆ ಕಂಡುಬರುತ್ತದೆ ಆದರೆ ವಿಶೇಷವಾಗಿ ಲಿಂಗದಕಾಯಿಗೆ ತುಂಬ ಮಹತ್ವಕೊಟ್ಟು ಜೀವಕ್ಕಿಂತಲೂ ಹೆಚ್ಚು ಪ್ರೀತಿಸಿ ರಕ್ಷಣೆ ಮಾಡಿ ಕೊಂಡು ಬರುತ್ತಾರೆ. ಆದರೆ ಇಂದಿನ ದಿನಮಾನಗಳಲ್ಲಿ ಕೆಲವು ಯುವಕ- ಯುವತಿಯರು, ದೊಡ್ಡವರು ಸೂಕ್ಷ್ಮವಾಗಿ ಗಮನಿಸಿದರೆ ಲಿಂಗದಕಾಯಿ ತೆಗೆದಿಟ್ಟು ಶಾಲಾ-ಕಾಲೇಜುಗಳಿಗೆ ಮತ್ತು ಕೆಲಸಗಳಿಗೆ ಹೋಗುವುದು ಗಮನಿಸಬಹುದುದಾಗಿದೆ.

### ೫. ಕಸುಬು

ಇವರ ಕಸುಬು ಅಥವಾ ಕಾಯಕ ಮೂಲತಃ ಧರ್ಮ ಪ್ರಚಾರ, ತತ್ವ ಪ್ರಚಾರ, ಧರ್ಮ ರಕ್ಷಣೆ ಇವುಗಳೇ ಅವರ ಮುಖ್ಯ ಕಸುಬು ಮಾಡಿಕೊಂಡು ಜೀವನ ಪರಿಯಂತೆ ನಡೆಯುವದೊಂದೆ ಗುರಿ. ಇವರಿಗೆ ಯಾವುದೇ ವಂಶಪರಂಪರೆಯಾಗಿ ಆಸ್ತಿ, ಅಂತಸ್ತುಗಳು ಇಲ್ಲವೇ ಇಲ್ಲ. ಆದರೆ ಇತ್ತಿಚಿಗೆ ಅನುಕೂಲಸ್ಥ ಕೆಲವೇ ಕೆಲವರಲ್ಲಿ ಆಸ್ತಿ ಅಂತಸ್ಥತು ಕಂಡುಬರುತ್ತದೆ. ವಿನಃ ಪೂರ್ವದ ಜಂಗಮರಲ್ಲಿ ಅದೇ ಜೋಳಗಿ ಮತ್ತು ಗಂಟೆ ಇವುಗಳೆರಡು ಬಿಟ್ಟರೆ ಬೇರೆ ಯಾವುದು ಸಿಗುವುದಿಲ್ಲ. ಇದರಿಂದ ಸಮಾಜ ಸೇವೆಯೇ ಸಾಮಾಜವೇ ಆಸ್ತಿ, ಭಕ್ತರು ಭಕ್ತಿಯೇ ಬಂಡವಾಳ ಹೀಗಾಗಿ ವೀರಶೈವರಲ್ಲಿ ಜಂಗಮಗುರುಗಳು ಹೇಳಿದ ಪ್ರತಿಯೊಂದು ಮಾರ್ಗದರ್ಶನದಲ್ಲಿ ನಡೆದುಕೊಳ್ಳುತ್ತಾರೆ ಇವರಲ್ಲಿನ ಹುಟ್ಟಿನಿಂದ ಸಾವಿನವರೆಗೂ ನಡೆಯುವ ಸರ್ವವಿಧವಾದ ಸಂಸ್ಕಾರಗಳು, ಆಚರಣೆಗಳು ಇವರಿಂದಲ್ಲೇ

ನಡೆಯುತ್ತವೆ. ಉದಾ: ಅವರಿಗೆ ಲಿಂಗಾಧಾರಣೆ ಮಾಡುವುದು, ದಿಕ್ಷಾ ನೀಡುವುದು. ಉಪದೇಶಕೊಡುವುದು, ಸಮಾಜದಲ್ಲಿ ನಡೆಯುವ ಕೆಟ್ಟ ಕಲಹಗಳನ್ನು ಮತ್ತು ಕುಟುಂಬಗಳಲ್ಲಿ ನಡೆಯುವ ಒಳಜಗಳಗಳನ್ನು ನಿರ್ವಾಹಣೆ ಮಾಡಿ ಅವರನ್ನು ಸನ್ಮಾರ್ಗದೆಡೆಗೆ ತಂದು ಸುಖವಾಗಿ ಜೀವಿಸುವದಕ್ಕೆ ಪ್ರೇರಣೆ ನೀಡುವದು ಇದು ಇವರ ಪರಮ ಕಸುಬುಯಾಗಿದೆ. ಹಸಿದು ಬಂದ ನೀರಿಡಿಸಿ ಬಂದ, ಭಕ್ತರನ್ನು ಕರೆದುಕೊಂಡು ಹೋಗಿ ತಾವು ಭೀಕ್ಷೆ ಬೇಡಿದ ಹಿಟ್ಟಿನಿಂದ ತಯಾರಿಸಿದ ಹುಳಿಸಾರು ರೊಟ್ಟಿ ಕೊಟ್ಟು ಅವನ ದಾಹವನ್ನು ಮುಕ್ತಗೊಳಿಸುವುದು ಜೊತೆಗೆ ಯಾವುದೇ ಜನಾಂಗವಿರಲ್ಲಿ ಅಥವಾ ಸಮುದಾಯವಿರಲ್ಲಿ ಭೇದಭಾವ ಮಾಡದಿರು ವುದು, ಶರಣರ ತತ್ವಗಳು ಪ್ರತಿಯೊಬ್ಬರ ಮನೆ ಮನೆಗಳಿಗೆ ಮುಟ್ಟಿಸುವುದು, ಜನನದಿಂದ ಮರಣದವರೆಗೂ ನಡೆಯುವ ಪ್ರತಿಯೊಂದು ಕ್ರಿಯಾ ಕ್ರಮುಗಳನ್ನು ನೇರವೇರಿಸಿಕೊಡುವದು ಇವರ ಆದ್ಯಕರ್ತವ್ಯವಾಗಿದೆ. ಇದರ ಪ್ರತಿಫಲವಾಗಿ ಭಕ್ತರು ಭಕ್ತಿಯಿಂದ ನೀಡಿದ ದವಸ, ದಾನ್ಯಗಳು, ದನಕರುಗಳು, ಹಣ ಇತ್ಯಾದಿ ಇದರಿಂದ ತಮ್ಮ ಸಂಸ್ಕಾರಿಕ ಜೀವನ ನಡೆಸುವುದು ಅವರ ದಿನ ನಿತ್ಯದ ಕಸುಬುಯಾಗಿದೆ.

## ೬. ಹಬ್ಬಗಳು

ಜಂಗಮರು ಯುಗಾದಿ, ಬಸವಜಯಂತಿ, ದಸರಾ, ದೀಪಾವಳಿ, ಶಿವರಾತ್ರಿ ಹಾಗೂ ಸೀಗೆ ಹುಣ್ಣಿಮೆ ಇವರ ಪ್ರಮುಖ ಹಬ್ಬಗಳಾಗಿವೆ. ಇವರು ರೇವಣಸಿದ್ಧೇಶ್ವರ, ಸಂಗಮೇಶ್ವರ, ಸಿದ್ದೇಶ್ವರ, ರಾಚಣ್ಣಾ, ರಾಮಲಿಂಗ, ವೀರಭದ್ರೇಶ್ವರ, ಬಸವಣ್ಣ, ನಂದಿ ಮತ್ತು ಶಿವಪಾರ್ವತಿ ದೇವರುಗಳನ್ನು ಜಿಲ್ಲೆಯಾದ್ಯಂತ ಪೂಜಿಸಿಕೊಂಡು ಬರುತ್ತಾರೆ (ವೃತ್ತಚಿತ್ರ ೧).

ವೃತ್ತಚಿತ್ರ ೧. ಬೀದರ ಜಿಲ್ಲೆಯ ಜಂಗಮರ ದೇವರುಗಳ ಪ್ರಮಾಣ




ಜಿಲ್ಲೆಯ ಜಂಗಮರು ಶೇ.೨೨ರಷ್ಟು ರೇವಣಸಿದ್ಧೇಶ್ವರ, ಶೇ.೧೨ರಷ್ಟು ಸಂಗಮೇಶ್ವರ, ಶೇ.೨೮ರಷ್ಟು ಸಿದ್ದೇಶ್ವರ, ಶೇ.೪ರಷ್ಟು ರಾಚಣ್ಣ, ಶೇ.೧ರಷ್ಟು ರಾಮಲಿಂಗ, ಶೇ.೨೩.ರಷ್ಟು ವೀರಭದ್ರೇಶ್ವರ, ಶೇ.೩ರಷ್ಟು ಬಸವಣ್ಣ, ಶೇ.೩ರಷ್ಟು ಮಲ್ಲಿಕಾರ್ಜುನ ದೇವರುಗಳಿಗೆ

ಪೂಜಿಸುವುದುಂಟು. ಸಿದ್ದೇಶ್ವರ, ರೇವಣಸಿದ್ಧೇಶ್ವರ ಮತ್ತು ವೀರಭದ್ರೇಶ್ವರ ದೇವರನ್ನು ಹೆಚ್ಚಾಗಿ ಪೂಜಿಸುವುದು ತಿಳಿಯುತ್ತದೆ.

## ೭. ಆಚರಣೆಗಳು ಮತ್ತು ಸಂಸ್ಕಾರಗಳು

ಯಾವುದೆ ಜನಾಂಗದ ವ್ಯಕ್ತಿಯು ಸಾಂಪ್ರದಾಯಿಕವಾಗಿಯೋ ಕಡ್ಡಾಯವಾಗಿಯೊ ಅನುಸರಿಸಿಕೊಂಡು ಬಂದ ನಿಗದಿತ ವಿಸ್ತೃತವಾದ ಧಾರ್ಮಿಕ ವಿಧಿ ವಿಧಾನಗಳಿಗೆ ಆಚರಣೆಗಳು ಅಥವಾ ಸಂಸ್ಕಾರಗಳು ಎನ್ನಬಹುದುದಾಗಿದೆ. ಇವುಗಳು ವ್ಯಕ್ತಿಯ ಮಾನಸಿಕ ಒಂದಡೆಯಾದರೆ ಮತ್ತೊಂದಡೆಗೆ ಆತನ ಸಂಸ್ಕೃತಿಯ ಮೇಲೆ ಬೆಳಕು ಬೀರಲು ಸಹಾಯಕವಾಗುವದೆಂದು ನಂಬಲಾಗಿದೆ.

ಆಚರಣೆಗಳು ಧರ್ಮದ ಒಂದು ಭಾಗವಾಗಿವೆ ಮತ್ತು ಧರ್ಮದ ಹುಟ್ಟಿಗೆ ಕಾರಣೀಭೂತ ವಾಗಿವೆಯೊಂದು ಭಾವಿಸಲಾಗಿದೆ. ಆದರೂ ಕೆಲವೊಂದು ಆಚರಣೆಗಳು ಮಾಂತ್ರಿಕ ಬಳಕೆ ಯಿಂದಾಗಿ ಧಾರ್ಮಿಕ ದಿಕ್ಕನ್ನು ಮೀರಿ ಸಾಗಿರುವುದು ಕಾಣಬಹುದಾಗಿದೆ. ಸಂಸ್ಕಾರಗಳು ಒಂದು ಜನಪ್ರಿಯ ಹಾಗೂ ಮೂಢಭಕ್ತಿಯದಾದರೆ ಮತ್ತೊಂದು ಸಾಂಸ್ಕೃತಿಕ ಸಾಮಾಜಿಕ ವಾಗಿವೆ. ಪ್ರಪಂಚದಲ್ಲಿ ಹಲವಾರು ದೇಶಗಳ ಜನರುಗಳು ತಿಳಿದುಕೊಂಡಂತೆ ಹಿಂದುಗಳು ಕೂಡ ಅಮಾನುಷ ಶಕ್ತಿಗಳು ಇವೆಯೆಂದು ಅವು ತಮ್ಮ ಮೇಲೆ ಒಳ್ಳೆಯ ಅಥವಾ ಕೆಟ್ಟ ಪ್ರಭಾವ ಬೀರುವಲ್ಲಿ ಯಶಸ್ವಿಯಾಗಿವೆಯೊಂದು ಹೇಳಲಾಗಿದೆ. ಮಾನವನ ಜೀವನದ ಒಳ್ಳೆಯ ಸಂದರ್ಭಗಳಲ್ಲಿ ಅಡ್ಡ ಬರುವುವು ಎಂದು ತಿಳಿದು ಆ ಕಾರಣಕ್ಕಾಗಿ ದುಷ್ಟ ಶಕ್ತಿಯನ್ನು ಹೊಡೆದೊಡಿಸಲು ಹೆದರಿ ಅನೇಕ ತಂತ್ರಗಳನ್ನು ಉಪಯೋಗಿಸುತ್ತಿದ್ದರು ಎನ್ನುವುದರೆ ಸಾಕಷ್ಟು ದಾಖಲೆಗಳು ದೊರೆಯುತ್ತವೆ. ಹೀಗೆ ಮಾಡುವುದರಿಂದ ಬಾಹ್ಯ ತೊಂದರೆಯಿಂದ ವಿಮುಕ್ತನಾಗುವನೆಂದು ದೇವರ ಹಾಗೂ ಶಕ್ತಿಯ ನಿರ್ದೇಶನ ಮತ್ತು ಸಹಾಯ ಪಡೆದುಕೊಳ್ಳುತ್ತಿದ್ದರು. ಈ ಕಾರಣದಿಂದಲೇ ವ್ಯಕ್ತಿಗಳ ಮೇಲೆ ಯಾವುದೇ ಕೆಟ್ಟ ಶಕ್ತಿ ಪ್ರಭಾವ ಬೀರಬಾರದೆಂದು ಅನೇಕ ವಿವಿಧ ಆಚರಣೆಗಳು ಮತ್ತು ಸಂಸ್ಕಾರಗಳು ಉಪಯೋಗಿಸಿ ಕೊಳ್ಳುತ್ತಿದ್ದರು. ದೇವರ ಪೂಜೆಯಿಂದ ಧನ, ಸಂತಾನ ದೀರ್ಘಾಯಷ್ಯ, ಸಂಪತ್ತು, ಸಮೃದ್ಧಿ, ಬಲ ಹಾಗೂ ಬುದ್ಧಿ ಶಕ್ತಿ ಮುಂತಾದ ಭೌತಿಕ ಶಕ್ತಿಗಳು ಪಡೆಯುವುದಕ್ಕಾಗಿ ಸಂಸ್ಕಾರಗಳಿಗೆ ನಂಬುತ್ತಿದ್ದರು ಎನ್ನಬಹುದು. ದೇವರಲ್ಲಿ ಭೀಕ್ಷೆ ಬೇಡುವುದೇ ಅವುಗಳ ಮುಖ್ಯ ಗುರಿಯೊಂದು ತಿಳಿದುಕೊಳ್ಳುತ್ತಿರಲಿಲ್ಲ. ವ್ಯಕ್ತಿ ತನಗಾದ ಸಂತೋಷ, ದು:ಖಗಳು ಅಭಿವ್ಯಕ್ತಿ

ಗೊಳಿಸಲು ಸಂಸ್ಕಾರ ಮೊರೆ ಸಾಗುವುದುಂಟು. ಉದಾಹರಣೆಗೆ - ಜನನ, ಮದುವೆ, ಮರಣ ಸವಿಯೂಟ, ಸಂಗೀತ, ಅಂತ್ಯೋಷ್ಟಿ ಇತ್ಯಾದಿ. ಸಂಸ್ಕಾರಗಳ ಜನಪ್ರಿಯ ಉದ್ದೇಶಗಳನ್ನು ಮಾನ್ಯ ಮಾಡಿದ ಮಹಾಪಂಡಿತರು ಅವುಗಳಲ್ಲಿ ಉಚ್ಚ ಧರ್ಮ ಹಾಗೂ ಜೀವನ ಪಾವಿತ್ರ್ಯವನ್ನು ಆಳವಡಿಸಲು ಪ್ರಯತ್ನಿಸಿದರು. ಗರ್ಭಧಾರಣೆ, ಜಾತಕಕರ್ಮ, ಜಾವಳ ಮುಂತಾದ ಸಂಸ್ಕಾರ ಗಳು ಮಾಡುವುದರಿಂದ ವೀರ್ಯ ಹಾಗೂ ಗರ್ಭಾಶಯದ ಅಪವಿತ್ರತೆ ಹೊರಟುಹೋಗುತ್ತ ದೆಂದು ಮನು ಹೇಳುವ ಪ್ರಕಾರ ದ್ವಿಜರ, ಶರೀರ ಸಂಬಂಧಿ ಸಂಸ್ಕಾರಗಳು ಅವರ ಇಹಪರ ಜೀವನ ಪವಿತ್ರಗೊಳಿಸುತ್ತವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ(ಗುಬ್ಬಣ್ಣ ಶಿವಾನಂದ: ೧೯೮೪:೧೮).

ಸಂಸ್ಕಾರಗಳಿಂದ ಮನುಷ್ಯ ಸಮಾಜದಲ್ಲಿ ಬಲಿಷ್ಠವಾಗಿ ಜೀವಿಸಲು ಸಹಾಯಕಾರಿಯಾಗಿವೆ. ಜೊತೆಗೆ ಮನುಷ್ಯರಲ್ಲಿ ಸದ್ಗುಣಗಳು ಹೆಚ್ಚಿಸಿ ಸಾಮಾಜಿಕ ಹಕ್ಕು ಬಾಧ್ಯತೆಗಳನ್ನು ಪಡೆಯುವಲ್ಲಿ ಯಶಸ್ವಿಯಾಗುತ್ತಾನೆ. ಬ್ರಾಹ್ಮಣರಲ್ಲಿ ಉಪನಯನ ಇರುವಂತೆ ಜಂಗಮ ಸಮುದಾಯಗಳಲ್ಲಿ ಲಿಂಗಧಾರಣೆ ಕುರುಹುಯಾಗಿ ತನ್ಮೂಲಕ ವ್ಯಕ್ತಿ ಸಮಾಜದ ಅವಿಭಾಜ್ಯ ಅಂಗವಾಗಿ ಪರಿಣಮಿಸು ತ್ತಾನೆ. ಹೀಗಾಗಿ ಸಂಸ್ಕಾರಗಳು ಕೊನೆಯೆಂದು ಭಾವಿಸಲಾಗಲಿಲ್ಲ. ಅವುಗಳು ಮಾನವನ ಬೆಳವಣಿಗೆಗಳಲ್ಲಿ ತುಂಬ ಅವಶ್ಯಕತೆಗಳಾಗಿವೆ.

ಜಂಗಮ ಸಮುದಾಯಗಳಲ್ಲಿ ಕೆಲವು ಸಂಸ್ಕಾರಗಳು ಹೆಂಗಸರಿಗೂ ವಿಶೇಷವಾಗಿ ಕಂಡುಬಂದರೆ ಮತ್ತೆ ಕೆಲವು ಗಂಡಸರಿಗೂ ವಿಶೇಷವಾಗಿ ಕಾಣಿಸಿಕೊಳ್ಳುವುದುಂಟು. ಹೀಗಾಗಿ ಇಬ್ಬರಲ್ಲಿ ಯಾವುದೇ ತಾರತಮ್ಯಗಳು ಇಲ್ಲವೇ ಇಲ್ಲ. ಇಬ್ಬರಿಗೂ ದೀಕ್ಷೆ ಬೋಧನೆ ಕಡ್ಡಾಯ. ಮತ್ತು ವೈದಿಕರಲ್ಲಿನಂತೆ ಯಾವುದೇ ಪಂಚ ಸೂತ್ರಗಳು ಇಲ್ಲ ಜೊತೆಗೆ ಮೈಲಿಗೆಯನ್ನು ಇವರ ಹತ್ತಿರ ಸುಳಿಯುವುದೇ ಇಲ್ಲ. ಕೆಲಮಟ್ಟಿಗೆ ಜಂಗಮರ ಮೇಲೆ ವೈದಿಕ ಪ್ರಭಾವವಿದ್ದರೂ ಅವು ವೈದಿಕ ಸಂಪ್ರದಾಯ ಪ್ರತಿರೂಪವಲ್ಲವೆನ್ನಬಹುದು. ಉದಾಹರಣೆ ಜನನ, ವಿವಾಹಗಳಲ್ಲಿ, ಕನ್ಯಾನ್ವೇಷಣೆ ಮತ್ತು ಮರಣಗಳಲ್ಲಿ ವೈದಿಕರಂತೆ ಪಂಚಾಂಗವನ್ನು ನೋಡಿ ಕ್ರಿಯೆಗಳು ಮುಂದುವರಿಸುತ್ತಾರೆ. ಅದರ ಪ್ರತಿರೂಪವಲ್ಲ. ವೈದಿಕ ಮಂತ್ರಗಳಿಗೆ ವೇದ, ಸ್ಮೃತಿಗಳು ಆಧಾರವಾದರೆ ಜಂಗಮ ಮಂತ್ರಗಳಿಗೆ ಶಿವಾಗಮಗಳು ಮತ್ತು ಶರಣರು ವಚನಗಳು ಆಧಾರಸ್ತಂಭಗಳಾಗಿವೆ. ವೈದಿಕರು ಮದುವೆಯನ್ನು ಅಗ್ನಿಸಾಕ್ಷಿಯಾಗಿ ನೇರವೇರಿ ಸಿದರೆ ಜಂಗಮರು ಪಂಚಕಳಸದ ಮೂಲಕ ಮುಗಿಸುತ್ತಾರೆ. ಇವರಲ್ಲಿ ಪಂಚಕಳಸಕ್ಕೆ ತುಂಬ

ಮಹತ್ವವಿದೆ. ಯಾವುದೆ ಕ್ರಿಯೆ ಸಂಸ್ಕಾರವಿರಲಿ ಈ ಪಂಚಕಳಸದ ಎದುರಿನಲ್ಲಿಯೇ ನೆರವೇರುತ್ತವೆ. ಹೀಗೆ ಒಂದು ಸಮುದಾಯದ ಸಂಸ್ಕಾರಗಳು ಇನ್ನೊಂದು ಸಮುದಾಯದ ಸಂಸ್ಕಾರಗಳಲ್ಲಿ ಭೇಧವನ್ನು ವ್ಯಾತ್ಯಾಸವನ್ನು ನೋಡಬಹುದು. ಜಂಗಮ ಹುಟ್ಟಿನಿಂದ ಸಾಯುವವರೆಗೂ ತಮ್ಮ ಮನೆಗುರುಗಳಾದ ಪಟ್ಟದೇವರಿಂದ ನೆರವೇರುತ್ತವೆ. ಯಾವ ಆತ್ಮವು ಸಂಸ್ಕಾರಗಳಿಂದ ಪರಿಪಕ್ವವಾಗುವುದಿಲ್ಲ ಅದು ಎಂದು ಸಂತೋಷದಿಂದ ಬಾಳುವುದಿಲ್ಲ. ಅಂದರೆ ಸೂರ್ಯನ ಕಿರಣಗಳು ಎಲ್ಲಾ ಕಮಲಗಳ ಮೇಲೆ ಸಮವಾಗಿ ಬಿದ್ದರೂ ಕಮಲಗಳೆಲ್ಲವೂ ಅರಳಲಾರವು ಕೇವಲ ಪಕ್ವಗಳಾಗಿರುವ ಕಮಲಗಳು ಮಾತ್ರ ಅರಳುತ್ತವೆ. ಇದರಿಂದ ಆತ್ಮವು ಪರಿಪಕ್ವವಾಗಿಸಿ ಸಮಾಜದಲ್ಲಿ ಕಮಲದಂತೆ ಪ್ರೀತಿಯಿಂದ ಬಾಳಲು ಸಂಸಾರದ ಬಂಧನಗಳಿಂದ ಬಿಡಿಸಿಕೊಂಡು ಮುಂದೆ ನಡೆಸುವಲ್ಲಿ ಆಚಾರಣೆಗಳು, ಸಂಸ್ಕಾರಗಳು ಅತಿ ಮಹತ್ವದ್ದಾಗಿವೆ.

**೭. ೧. ಜನನ ಪೂರ್ವ- ಸೀಮಂತ ಕಾರ್ಯ :** ಗರ್ಭಧಾರಣೆಯೊಂದಿಗೆ ಹಿಡಿದುಕೊಂಡು ಮನುಷ್ಯನ ಅಂತ್ಯ ಕಾಲದವರೆಗೆ ಸಂಸ್ಕಾರಗಳು ಪ್ರಾರಂಭವಾಗುತ್ತವೆ. ಹೆಣ್ಣು ವಯಮಾನಕ್ಕೆ ಬಂದಂತೆ ಮದುವೆ ಯಾಗಿ ಮಗುವಿಗೆ ಜನ್ಮವನ್ನು ನೀಡುತ್ತಾಳೆ. ಮದುವೆಯಾದ ಹೆಣ್ಣು ಮೂರು ತಿಂಗಳಲ್ಲಿ ಗರ್ಭವತಿಯಾಗಬೇಕೆಂದು ಬಯಸುತ್ತಾರೆ. ಆಗಲಿಲ್ಲ ಎಂದರೆ ದೇವರಿಗೆ ಹರಕೆಯನ್ನು ಹೊತ್ತುತ್ತಾರೆ. ಮೂರನೇ ತಿಂಗಳಿಗೆ ಗರ್ಭವತಿಯಾದಾಗ ಗರ್ಭವತಿಯ ವಿಷಯವನ್ನು ಹೆಣ್ಣಿನ ತವರುಮನೆಗೆ ಸುದ್ದಿ ಮುಟ್ಟಿಸುತ್ತಾರೆ. ತವರಿನವರು ಸಂತೋಷದ ಸುದ್ದಿ ತಿಳಿದ ತಕ್ಷಣವೇ ಗರ್ಭವತಿಗೆ ಇಷ್ಟವಾದ ಹಣ್ಣುಗಳು ಅಡಿಗೆಯನ್ನು ತೆಗೆದುಕೊಂಡು ಬಂದು ಗರ್ಭವತಿಗೆ ತಿನ್ನಿಸುವುದರ ಜೊತೆಗೆ ತಂದ ಹಣ್ಣುಗಳು ಮನೆಯ ಸುತ್ತಮುತ್ತಲ್ಲಿನ ಜನರಿಗೆ ಸಂಬಂಧಿಕರೆ ಹಂಚುತ್ತಾರೆ. ಹೀಗೆ ಮಾಡುವುದಕ್ಕೆ 'ಹಣ್ಣು ತಂದರು' ಎನ್ನುತ್ತಾರೆ. ನಂತರ ಐದನೆಯ ಅಥವಾ ನಾಲ್ಕನೆಯ ತಿಂಗಳಲ್ಲಿ ಪುಂಸವನ ಮಾಡುತ್ತಾರೆ. ಪುಂಸವನದಂದು ಹಿರೇಮಠದ ಜಂಗಮರಿಗೂ ಮಠಪತಿ ಜಂಗಮರಿಗೂ ಕರೆಯುತ್ತಾರೆ. ಈ ಶುಭದಿನದಂದು ದಂಪತಿಗಳಿಗೆ ಬೆಳಗ್ಗೆ ಎದ್ದಂತೆ ನಿತ್ಯಾ ಕ್ರಿಯೆಗಳನ್ನು ಮಾಡಿಕೊಂಡ ನಂತರ ಮಂಗಳ ಸ್ನಾನ ಮಾಡಿಸಿ ಪತ್ನಿಯನ್ನು ಪತಿಯ ತನ್ನ ಬಲಭಾಗದಲ್ಲಿ ಕುಳ್ಳಿರಿಸಿಕೊಂಡು ಆಚಮನ ಪ್ರಾಣಾಯಾಮುಗಳು ಮಾಡಿ ದೇಶ - ಕಾಲಾದಿಗಳನ್ನು ಹೇಳುತ್ತಾರೆ. ಎರಡನೆಯ ದಿವಸ ತಟ್ಟೆಯೊಳಗೆ ಅಕ್ಕಿಯನ್ನು ತುಂಬಿ ಅದರ ವಿಳ್ಯಾದಲ್ಲಿ ಚಿಟ್ಟರಿಕೆ, ತೆಂಗಿನಕಾಯಿ, ವಿಭೂತಿಯಿಂದ ತಯಾರಿಸಿದ ಕಂಕಣಗಳನ್ನು ಇಟ್ಟು ಹಿರಿಯ ಜಂಗಮ 'ತ್ರಿಯಂಬಕಂ ಯಜಾಮಹೇ ಸುಂಗಂಧಿಂ ಪ್ರಷ್ಟಿವರ್ಧನಂ! ಉರ್ವಾರುಕಮಿವಬಂಧನಾನ್ಮೃ ತ್ಯೋರ್ಮುಕ್ಷೀಯಮಾಮೃತಾತ್!'

(ತೋಟಪಶಾಸ್ತ್ರಿ:೩೩)ಮಂತ್ರ ಹೇಳುತ್ತಾ ಕಂಕಣಕ್ಕೆ ಮತ್ತೊಮ್ಮೆ ಭಸ್ಮಲೇಪನವಂ ಮಾಡಿ ಪತಿಯ ಬಲಗೈಯಲ್ಲಿ ಕಂಕಣವನ್ನು ಕಟ್ಟುವುದು ನಂತರ ಮಂತ್ರದಿಂದ ಸ್ತ್ರೀಯರ ಎಡಮುಂಗೈಯಲ್ಲಿ ಕಂಕಣವನ್ನು ಧರಿಸುವುದು ನಂತರ ದಂಪತಿಗಳಿಂದ ಹಿರಿಯ ಮಹೇಶ್ವರರಿಗೆ ನಮಸ್ಕರಿಸುವುದರ ಮೂಲಕ ಗುರುಪಾದೋದಕ ಪ್ರಾಸಾದವಂ ತೆಗೆದುಕೊಂಡು ಬಂದ ಜಂಗಮರಿಗೆ ಊಟ, ಧನವನ್ನೂ ಕೊಟ್ಟು ನಮಸ್ಕರಿಸು ತ್ತಾರೆ. ಆ ಮೇಲೆ ಕಟ್ಟಿದ ಕಂಕಣಗಳನ್ನು ಗುರುಗಳು ಬಿಚ್ಚುತ್ತಾರೆ. ಹೀಗೆ ಮಾಡುವುದರಿಂದ ಹುಟ್ಟುವ ಮಗು ಒಳ್ಳೆಯ ಸಂಸ್ಕಾರದಲ್ಲಿ ಬೆಳೆಯಲು ಸಹಕಾರಿಯಾಗುತ್ತದೆಂದು ತಿಳಿಯುತ್ತಾರೆ.

**ಸೀಮಂತ ಕಾರ್ಯ (ಕುಪ್ಪಸ ತೊಡಿಸುವುದು):** ಗರ್ಭವತಿಯಾದ ಐದನೆಯ ಅಥವಾ ಎಂಟನೆಯ ತಿಂಗಳಲ್ಲಿ ಈ ಕಾರ್ಯ ನಡೆಯುತ್ತದೆ. ಇದು ಸಂಪೂರ್ಣವಾಗಿ ಹೆಣ್ಣಿನ ತವರ ಮನೆಯವರ ಖರ್ಚಿನಲ್ಲಿ ನಡೆಯುವ ಕ್ರಿಯೆಯಾಗಿದೆ. ಮತ್ತು ಗಂಡಿನ ಮನೆಯಲ್ಲಿ ನೇರವೇರುತ್ತದೆ. ಅಂದು ಮನೆಯನ್ನು ಸಾರಣಿ, ಕಾರಣಿ, ತೀರಾಣಿ, ಮುಗ್ಗು ರಂಗವಲ್ಲ್ಯಾದಿಗಳಿಂದಲಂಕಾರ ಮಾಡುತ್ತಾರೆ. ತಮ್ಮ ಬಂಧು ಬಾಂಧವರನ್ನು ಇಷ್ಟಮಿತ್ರರನ್ನು ಕರೆಯಿಸಿಕೊಂಡು ಶುದ್ಧ ಜಾಗದಲ್ಲಿ ಮಣೆಯನ್ನು ಅಥವಾ ಕಂಬಳಿಯ ಮೇಲೆ ಪತಿಯ ಬಲಭಾಗದಲ್ಲಿ ಹೆಂಡತಿಗೆ ಕೂಡ್ರಿಸಿ ದೇಶಕಾಲಾದಿಗಳನ್ನು ನೆನೆಸಿಕೊಂಡು ಮುತ್ತೈದೆಯರಿಂದ ಸೀರೆ, ಕುಪ್ಪಸ, ಮತ್ತು ಬಳೆ ಮಾಡುತ್ತಾರೆ. ಕಾರ್ಯಕ್ರಮಕ್ಕೆ ಬಂದ ಹೆಣ್ಣು ಮಕ್ಕಳು ಹಾಡುತ್ತಾರೆ. ಇಲ್ಲಿಯು ಎರಡು ಕಂಕಣಗಳನ್ನು ಮಾಡಿ ಪೂಜಿಸಿ ದಂಪತಿಗಳ ಕೈಯಲ್ಲಿ ಕಟ್ಟುತ್ತಾರೆ. ನಂತರ ಮಂಗಲಕರವಾದ ಪದ - ಪದ್ಯಗಳು ಹಾಡಿದ ಮೇಲೆ ಗುರುಗಳಿಂದ ಆಶೀರ್ವಾದವನ್ನು ಹೊಂದಿ ದೇವರ ಮನೆಯ ದೇವರ ಮತ್ತು ಗುರುವಿನ ಮಧ್ಯದಲ್ಲಿ ಕಂಕಣ ವಿಸರ್ಜನೆಯಾಗುತ್ತದೆ. ತದನಂತರ ಬಂದ ಸರ್ವಬಂಧುಗಳಿಗೆ ತಮ್ಮ ಸಾಮರ್ಥ್ಯದ ಪ್ರಕಾರ ಭೋಜನೆಯನ್ನು ಮಾಡಿಸುತ್ತಾರೆ. ಈ ಪ್ರಕಾರ ಕುಪ್ಪಸ ತೊಡಿಸುವ ಕಾರ್ಯಕ್ರಮ ಮುಗಿಸುತ್ತಾರೆ.

**೭.೨. ಜಾತಕ ಕರ್ಮ(ಗರ್ಭಲಿಂಗ ಧಾರಣ) ಜನನ ಮತ್ತು ಲಿಂಗಕಟ್ಟು ವುದು :** ಗರ್ಭವತಿಯಾದ ಎಂಟನೆ ತಿಂಗಳಿನಲ್ಲಿ ತಮ್ಮ ಮನೆಯ ಗುರುಗಳಿಗೆ ಕರೆಯಿಸಿ ಸೂತ್ರಯುಕ್ತವಾದ ಲಿಂಗವನ್ನು ಪೂಜಿಸಿ ಗರ್ಭಿಣಿಯ ಸ್ವಾಧಿನಕ್ಕೆ (ಹೊಟ್ಟೆಗೆ) ಕಟ್ಟುತ್ತಾರೆ. ಕೂಸು ಹುಟ್ಟಿದಾಕ್ಷಣ ಅಂಗದ ಮೇಲೆ ಲಿಂಗಧಾರಣ ಮಾಡಲು ಅನುಕೂಲವಾಗುತ್ತದೆಂದು ನಂಬುತ್ತಾರೆ. ಅಂದರೆ ಇವರಲ್ಲಿ ಹೊಟ್ಟೆಯೊಳಗಿನಿಂದಲೇ ಲಿಂಗಧಾರಿಯಾಗಿ ಮಗುವಿನ ಜನನವಾಗಬೇಕು ಎನ್ನುವುದೇ ಇವರ

ಉದ್ದೇಶ. ಹೀಗಾಗಿ ಮಗು ಹುಟ್ಟುವ ಪೂರ್ವದಲ್ಲೇ ಗರ್ಭವತಿಯ ಗರ್ಭಕ್ಕೆ ಲಿಂಗಧಾರಣ ಮಾಡುತ್ತಾರೆ. ಆ ಮೇಲೆ ಮಗುವಿನ ಜನನವಾದ ನಂತರ ಜಂಗಮರಿಗೆ ಕರೆಯಿಸುತ್ತಾರೆ. ಆಗ ಹುಟ್ಟಿದ ಮಗುವಿಗೆ ಗರ್ಭದ ಲಿಂಗವನ್ನು ತೆಗೆದುಕೊಂಡು ಲಿಂಗಧಾರಣ ಮಾಡುತ್ತಾರೆ. ಆ ದಿನ ಮಗುವಿಗೆ ಸ್ನಾನಾಧಿಗಳನ್ನು ಮಾಡಿಸಿ ಗೋಮಯದಿಂದ ಮನೆಯ ಸಾರಣಿಯನ್ನು ಮಾಡಿ ಮಠದವರನ್ನು ಮತ್ತು ಮಠಪತಿಯನ್ನು ಕರೆಯಿಸಿ ಮನೆಯ ಒಂದು ಸ್ಥಳದಲ್ಲಿ ಅವರನ್ನು ಕಂಬಳಿಯ ಮೇಲೆ ಕುಡಿಸುತ್ತಾರೆ. ಆಗ ಮಠದಯ್ಯಾ ಪಾದೋದಕವನ್ನು ಒಂದು ಬಟ್ಟಲಲ್ಲಿ ಇಟ್ಟುಕೊಳ್ಳುತ್ತಾರೆ. ಮಠಪತಿ ಜಂಗಮ ತನ್ನ ಮುಂದೆ ಒಂದು ರಂಗೋಲಿ ಹಾಕಿ ಅದರ ಮೇಲೆ ಜೋಳ, ಖೊಬ್ಬರಿ ಇಟ್ಟು ಅದರಲ್ಲಿ ಗಂಗಳವನ್ನು ಇಟ್ಟು ಹಾಲು, ತುಪ್ಪ, ಸಕ್ಕರೆ, ಗೋಮುತ್ರ, ಪಾದೋದಕ ತೆಗೆದುಕೊಂಡು ಹೂ, ಬಿಲ್ವಪತ್ರಿ, ವಿಭೂತಿಯಿಂದ ಐದು ಸಾರಿ ಮೇಲಿನ ಎಲ್ಲಾ ವಸ್ತುಗಳಲ್ಲಿ ಲಿಂಗದ ಮೇಲೆ ಸುರಿದು ತೊಳೆಯುತ್ತಾನೆ. ನಂತರ ಒಂದು ಬಟ್ಟೆಯನ್ನು ತೆಗೆದುಕೊಂಡು ವಿಭೂತಿಯಿಂದ ಪೂಜಿಸಿ ಅದನ್ನು ಕಟ್ಟಿ ಮಗುವಿನ ಹಣೆಗೆ ವಿಭೂತಿ ಹಚ್ಚಿ ಮಠದಯ್ಯಾನ ಪಾದೋದಕವನ್ನು ಮಗುವಿನ ಮತ್ತು ತಾಯಿಗೆ ಕೊಟ್ಟು ನಂತರ ಲಿಂಗವನ್ನು ಮಗುವಿನ ಎದೆಯ ಮೇಲೆ ಧಾರಣೆ ಮಾಡುತ್ತಾರೆ. ಹೀಗೆ ಈಕಾರ್ಯಕ್ರಮ ಮುಗಿಯುತ್ತದೆ. ಈ ಕ್ರಿಯಾ ಮಾಡುವುದರಿಂದ ಸೇರಪಾವ ಜೋಳ, ಒಂದು ಖೊಬ್ಬರಿ, ಎರಡು ರೂಪಾಯಿ ಐವತ್ತು ಪೈಸೆ, ಗೌರವ ಪೂರ್ವಕವಾಗಿ ಜಂಗಮರಿಗೆ ನೀಡುತ್ತಾರೆ. ಇದರಲ್ಲಿ ಕೇವಲ ಎರಡು ರೂಪಾಯಿ ಐವತ್ತು ಪೈಸೆಯಲ್ಲಿ ಮಠದಯ್ಯನಿಗೆ ಒಂದು ರೂಪಾಯಿ ಇಪ್ಪತ್ತೈದು ಪೈಸೆ ತೆಗೆದುಕೊಳ್ಳುತ್ತಾರೆ. ಉಳಿದ ಹಣ, ಜೋಳ ಎಲ್ಲವು ಮಠಪತಿಗೆ ಸಲ್ಲುತ್ತದೆ. ಇದು ಅವರ ಪಾಲುಗಾರಿಕೆಯಾಗಿರುತ್ತದೆ. ಮುಂದೆ ಪಂಚಾಕ್ಷರಿ ಮಂತ್ರೋಪದೇಶವನ್ನು ಮಾಡಿ ವಸ್ತ್ರದಲ್ಲಿ ಕಟ್ಟಿದ ಲಿಂಗವನ್ನು ಶಿಶುವಿಗೆ ಕಟ್ಟುತ್ತಾರೆ. ಇಂದಿನಿಂದ ಇದು ಜಂಗಮ ಶಿವನೆಂದು ನಂಬುತ್ತಾರೆ. ಎಂದಿಗೂ ಮಗುವಿನ ಅಂಗದಿಂದ ತೆಗೆಯಲಾಗದು, ಕಳೆಯಲಾಗದು ಅದು ತಾಯಿ ಜೋಪಾನ ಮಾಡಬೇಕಾಗುತ್ತದೆ. ನಂತರ ಗುರುಗಳಿಗೆ ಊಟ ಮಾಡಿಸಿ ಕಳುಹಿಸುತ್ತಾರೆ. ಈ ಸಂಸ್ಕಾರವು ಮೊದಲನೆಯ ದೀಕ್ಷೆ ಎನ್ನುತ್ತಾರೆ.

**೭.೩. ಐದೇಶಿ** :ಹುಟ್ಟಿದ ಮಗುವಿಗೆ ೫ನೇ ದಿನಕ್ಕೆ ಮಾಡುವ ಸಂಸ್ಕಾರಕ್ಕೆ ಐದೇಶಿ ಎಂದು ಕರೆಯುತ್ತಾರೆ. ಆ ದಿವಸ ಒಬ್ಬ ಜಂಗಮನಿಗೆ ಐವರು ಜನ ಜಂಗಮ ಮುತ್ತೈದೆಯರಿಗೆ ಭೋಜನಕ್ಕೆ ಹೇಳಿ ಕರೆತಂದು ಅವರನ್ನು ಪೂಜಿಸಿ ಬಾಣಂತಿ ಮತ್ತು ಕೂಸಿನಿಂದ ನಮಸ್ಕಾರ

ಮಾಡಿಸಿ ಆಶೀರ್ವಾದ ಪಡೆಯುತ್ತಾರೆ. ನಂತರ ಈ ಸಂಸ್ಕಾರಕ್ಕೆ ವಿಶೇಷವಾದ ಊಟವನ್ನು ಮಾಡಿರುತ್ತಾರೆ. ಕಡಬು, ಉದ್ದಿನ ಬಾಳೆ, ಅನ್ನ ಪಲ್ಯಾ, ಇಲ್ಲಿ ಕಡಬು ತುಂಬ ವಿಶೇಷವಾಗಿರುತ್ತದೆ. ಇದನ್ನು ಬಂದ ಎಲ್ಲಾರಿಗೂ ಊಟ ಮಾಡಿಸಿ ಜಂಗಮರಿಗೆ ದಕ್ಷಣಾದಿಗಳನ್ನು ಕೊಟ್ಟು ನಮಸ್ಕರಿಸಿ ಕಳುಹಿಸುತ್ತಾರೆ. ಹೀಗೆ ಮಾಡುವುದರಿಂದ ಬಾಣಂತಿ ಮತ್ತು ಮಗು ಆರೋಗ್ಯದಿಂದ ಚೆನ್ನಾಗಿ ಬಾಳುವರು ಎಂಬ ನಂಬಿಕೆ.

**೭.೪. ತೊಟ್ಟಿಲ ಸಂಸ್ಕಾರ :** ಹುಟ್ಟಿದ ಮಗುವಿಗೆ ಹನ್ನೆರಡು ದಿವಸಕ್ಕಾಗಲಿ, ಮೂರು ಅಥವಾ ಐದು ತಿಂಗಳಲ್ಲಿ ಈ ಕಾರ್ಯಕ್ರಮ ಜರುಗುತ್ತದೆ. ಹನ್ನೇರಡು ದಿವಸ ಅಥವಾ ಮೂರು ತಿಂಗಳಲ್ಲಿ ಹಿರಿಯ ಜಂಗಮರಿಂದ ಒಳ್ಳೆಯ ದಿನ ಯಾವುದು ಎಂದು ಪಂಚಾಂಗದಿಂದ ತಿಳಿದುಕೊಂಡು ಒಂದು ಸುದಿನ ನಿರ್ಧರಿಸುತ್ತಾರೆ. ಇದಕ್ಕಿಂತ ಪೂರ್ವದಲ್ಲಿ ಹೆಣ್ಣಿನ ತವರ ಮನೆಯಲ್ಲಿ ಹನ್ನೇರಡು ದಿವಸಕ್ಕೆ ಮಗುವಿಗೆ ತೊಟ್ಟಿಲಿಲ್ಲ ಹಾಕುತ್ತಾರೆ. ತದನಂತರ ಇದು ಗಂಡಿನವರ ಮನೆಯಲ್ಲಿ ತುಂಬ ವೈಭವದಿಂದ ನೇರವೇರಿಸುತ್ತಾರೆ. ಆ ದಿನ ಮನೆ ಸಾರಣಿಗಳಿಂದ ಶುದ್ಧಮಾಡಿ ತಮ್ಮಸಂಬಂಧಿಕರನ್ನು ಕರೆಯಿಸಿಕೊಂಡು ಇಷ್ಟ ಮಿತ್ರರನ್ನು ಆಮಂತ್ರಿಸಿ ಭೋಜನೆಯನ್ನು ಮಾಡಿಸಿ ಸಂಜೆ ಸಮಯದಲ್ಲಿ ಅಥವಾ ರಾತ್ರಿ ಎಂಟರಿಂದ ಒಂಭತ್ತು ಗಂಟೆಯವರೆಗೂ ಮಗುವಿಗೆ ತೊಟ್ಟಿಲ್ಲಲ್ಲಿ ಹಾಕುವುದು ನಿಗದಿಸುತ್ತಾರೆ. ಇದು ಶಿಶುಪರಬ್ರಹ್ಮನು ಆನಂದಪಟ್ಟಿರುವಂಥದ್ದು. ಉಯ್ಯಾಲೆಗೆ ಸರಿಯಾದದ್ದು ತೊಟ್ಟಿಲು ಕಾರ್ಯಕ್ರಮ ಹೀಗಾಗಿ ಮಗು ತೊಟ್ಟಿಲಲ್ಲಿ ಹಾಕುವುದರಿಂದ ಪರಬ್ರಹ್ಮನಂತೆ ಆನಂದದಾಯಕವಾಗಿರುತ್ತದೆಂದು ತಿಳಿಯುತ್ತಾರೆ. ಪಟ್ಟದ ಜಂಗಮ ಹೇಳುವಂತೆ ನಮ್ಮ ಪೂರ್ವಜರಾದ ಪಂಚಾಚಾರ್ಯವಂಶರಲ್ಲಿ ಕೆಲವು ಸತ್ಪುರುಷರು ಇದೆ ಉಯ್ಯಾಲೆಯಲ್ಲಿ ಕೂತು ನನ್ನ ಸ್ತೋತ್ರ ಅದೆ ಆನಂದದೊಳಗೆ ಸ್ವರ್ಗಹೊಂದಿದರು. ಕಾರಣ ಈ ಶಿಶುವಾದ ಪರಬ್ರಹ್ಮನು ಮೂರು ತಿಂಗಳ ವಯಸ್ಸು ಆಗುವವರೆಗೆ ಇತ್ತ ಕಡೆಯ ಏನುಧ್ಯಾನವಿಲ್ಲದೆ ನನ್ನ ಮೇಲಿನ ಕಾಂಕ್ಷೆಯುಳ್ಳ ದಾಗಿರುವದರಿಂದ ಈ ತೊಟ್ಟಿಲವೆಂಬ ಉಯ್ಯಾಲೆಯನ್ನು ಪೂಜೆ ಮಾಡಿ ಅವರ ಶಿಶುವಾದ ಬ್ರಹ್ಮನನ್ನು ಅದರಲ್ಲಿ ಶಯನಮಾಡಿಸತಕ್ಕದಿರುತ್ತದೆ. ಆದರಿಂದ ತೋಟಿಲ ಪೂಜೆಯನ್ನು ಸಿದ್ದಮಾಡಿರುವುದುಂಟು. ರಾತ್ರಿ ಕೆಲವು ಮುತ್ತೈದೆಯರು ಕೂಡಿ ಊರಿನ ಅಂದರೆ ಓಣೆಯ ಹೆಣ್ಣು ಮಕ್ಕಳನ್ನೆಲ್ಲ ಆಮಂತ್ರಿಸಿ ಕೂಸನ್ನು ತೊಟ್ಟಿಲದಲ್ಲಿರಿಸಿ ಜೋಗುಳವನ್ನು ಹಾಡುತ್ತಾರೆ. ತೊಟ್ಟಿಲ ಬಳಿ ಮಗುವಿನ ತಾಯಿಗೆ ಕೂಡ್ರಿಸಿ ಹೊಸ ಸೀರೆ, ಕುಪ್ಪಸ ಮಾಡಿ ತಲೆಗೆ ಹೂವಿನ ದಂಡಿಗಳಾದಿ ಅಲಂಕರಿಸುತ್ತಾರೆ. ಆಗ ಕೂಸಿನ ಸೋದರತ್ತೆ

ಸಹಿತ ನೆರೆದ ನಾಲ್ಕು ಮುತ್ತೈದೆರಿಂದ ಬಾಣಂತಿಗೆ ಉಡಿತುಂಬುತ್ತಾರೆ. ಉಡಿ ತುಂಬಿಕೊಟ್ಟ ಮುತ್ತೈದೆಯರು ತೊಟ್ಟಿಲದ ನಾಲ್ಕು ದಿಕ್ಕಿಗೆ ನಿಂತು ಐದು ಬಾರಿ ತೊಟ್ಟಿಲ ಮೇಲಿನ ಕೂಸು ಕೆಳಗೆ ತೆಗೆದುಕೊಳ್ಳುವವರು ಅಕ್ಕಿ ಹೇರು ಎಂದು ಹೇಳುತ್ತಾ ಕೂಸನ್ನು ವಿನಿಮಯಿಸುತ್ತಾರೆ. ನಂತರ ಜೋಗುಳ ಪದ ಹೆಂಗಳೆಯರು ಹಾಡಿದ ಮೇಲೆ ತೋಟಿಲ್ಲಿರುವ ಕೂಸನ್ನು ಕೂಸಿನ ಸೋದರತ್ತೆ ಕೈಯಲ್ಲೆತ್ತಿಕೊಂಡು ತಮ್ಮ ಗುರುಗಳು ಮೊದಲಿಗೆ ಇಟ್ಟ ಹೆಸರು ಹೇಳುತ್ತಾಳೆ ಮಗುವಿನ ಕಿವಿಯಲ್ಲಿ (ಕುಟ್ಟಟ್ಟಕಾರ್ರ) ಎಂದು ಕೂಗುತ್ತಾಳೆ. ಇದನ್ನು ನೆರೆದವರು ಆಲಿಸುತ್ತಾ ಸಂತೋಷ ವ್ಯಕ್ತಪಡಿಸುತ್ತಾರೆ. ಹೀಗೆ ತಮ್ಮ ಗುರುವರ್ಗದವರ ಇಲ್ಲವೆ ಮನೆಯ ವಂಶಸ್ಥರ ಅಥವಾ ಮಹಾನ್ ವ್ಯಕ್ತಿಗಳ ಹೆಸರಿಡುವ ಕೆಲಸವನ್ನು ಮಾಡುತ್ತಾರೆ. ಆದ್ದುದರಿಂದ ಇದಕ್ಕೆ ನಾಮಕರಣ ಕಾರ್ಯವೆಂದು ವೃದ್ಧಾಚಾರ ಬಿದ್ದಿರುತ್ತದೆ. ನಂತರ ಹೆಣ್ಣು ಮಕ್ಕಳು ತೋಟಿಲ ಹಾಡುಗಳನ್ನು ಹಾಡುತ್ತಾರೆ.

"ಜೋ ಜೋ ಜೋ ಕಂದ ಪರಮಾನಂದ
ಮುದವನು ತಾ ತಂದ ಒಲವಿನ ಕಂದ (ಜೋ ಜೋ)

ತಾಯಿ ತಂದೆಯರ ಪ್ರೇಮದ ಅರಗಿಣಿ
ಬಂಧು ಬಾಂಧವರ ಮುದ್ದಿನ ಕಣ್ಮಣಿ
ವಂಶದ ಆಗಸದಿ ಚೆಲುವಿನ ದಿನಮಣಿ
ದಿನದಿನಕೆ ಬೆಳೆಯುತ ಆಗು ನೀ ಗುಣಮಣಿ (ಜೋ ಜೋ)

ಆರೋಗ್ಯ ಆಯುಷ್ಯ ಸಂಪ್ರಾಪ್ತವಾಗಲಿ
ವಿದ್ಯಾ ಬುದ್ಧಿಗಳು ಎಂದೆಂದು ನಿನಗಿರಲಿ
ಸಂಪತ್ತು ಸಂತೋಷ ಸಂತೃಪ್ತಿ ದೊರಕಲಿ
ನೂರು ವರ್ಷ ಕಾಲ ಬದುಕುವ ದೆಸೆಯಿರಲಿ (ಜೋ ಜೋ)

ಜಗದೊಡೆಯ ದೇವನ ಕರುಣೆ ಕಾಪಾಡಲಿ
ಗುರು ಹಿರಿಯರೆಲ್ಲರ ಒಲವಿನ ಬಲವಿರಲಿ
ಶರಣರ ಪಥದಲ್ಲಿ ಸಾಗುವ ಛಲವಿರಲಿ
ಗುರುಬಸವ ತಂದೆಯ ಶ್ರೀ ರಕ್ಷೆ ನೀನಗಿರಲಿ (ಜೋ ಜೋ)"

(ಮಾತೆ ಮಹಾದೇವಿ:೧೯೯೫:೩೩-೩೪)

ಎಂದು ಹೀಗೆ ಹಾಡುವರು. ಆಮೇಲೆ ಜೋಳ ಮತ್ತು ಕಡಲೆ ಕಾಳುಗಳಿಂದ ಗೂಗರಿಯನ್ನು

ಹಾಕುತ್ತಾರೆ. ಈ ಜೋಳ ಸ್ವಲ್ಪ ತೋಟಲಿನ ಕೆಳಗೆ ಹರಡಿ ನೀರಿನ ತಂಬಿಗೆ ತುಂಬಿ ಆದರ ಮೇಲೆ ತಾಟು ಇಟ್ಟು ಗೋದಿ ಹೀಟನಿಂದ ತಯಾರಿಸಿದ ದೀಪದ ಹಣತೆ ಮಾಡಿ ದೀಪ ಹಚ್ಚಿ ಪೂಜಿಸುತ್ತಾರೆ. ಇದಕ್ಕೆ 'ಷಟಿಗೇವ್ವನ ಪೂಜೆ' ಎಂದು ಕರೆಯುತ್ತಾರೆ. ಬಂದ ಜನರಿಗೆ ಜೋಳ ಮತ್ತು ಕಡಲೆಕಾಳುಗಳಿಂದ ಮಾಡಿದ ಗುಗ್ಗರಿಗಳನ್ನು ಕೊಟ್ಟು ಕಳುಹಿಸುತ್ತಾರೆ. ತದನಂತರ ಜಂಗಮರಿಗೆ ಸಂತೋಷದಿಂದ ಧನ, ದನ ಇತರ ವಸ್ತುಗಳು ಧಾನ ನೀಡಿ ಗೌರವಿಸುತ್ತಾರೆ. ತರುವಾಯ ತಮ್ಮ ಮನೆದೇವರಿಗಾಗಲಿ ಅಥವಾ ಇಷ್ಟವಾದ ದೇವರ ಗುಡಿಗೆ ಹೋಗಿ ಕಾಯ ಕರ್ಪೂರು ಮಾಡುತ್ತಾರೆ. ಇಲ್ಲಿ ಅವರ ಉದ್ದೇಶ ಬಲವಾಗಿ ಅಡಗಿರುತ್ತದೆ. ಸಂತೋಷವಾಗಿ ಹೆರಿಗೆಯಾಗಿದರಿಂದ ಅಥವಾ ಮಕ್ಕಳಾಗದೆಯಿದ್ದರಿಂದ ದೇವರಿಗೆ ಹರಕೆಹೊತ್ತಿದ್ದರಿಂದ ದೇವರಿಗೆ ಕೃತಜ್ಞತೆ ವ್ಯಕ್ತಪಡಿಸುತ್ತಾರೆ. ದೇವರಿಗೆ ಹೋಗಿ ಬರುವಾಗ ದಾರಿಯಲ್ಲಿ ಐದು ಮನೆಗಳಲ್ಲಿ ಉಡಿಯಕ್ಕೆ ಹಾಕಿಕೊಂಡು ಬರುವದುಂಟು ಹೀಗೆ ಮಾಡುವುದರಿಂದ ಮನೆಯಲ್ಲಿನ ಧನ, ಧಾನ್ಯ, ಕಳ್ಳರು, ಇಲಿ ಮತ್ತು ಹೆಗ್ಗಣಗಳು ಲುಟಿ ಮಾಡುವದಿಲ್ಲ ಎಂದು ನಂಬುತ್ತಾರೆ.

**೭.೫. ಮುರುವು ಚುಚ್ಚುವುದು :** ಹುಟ್ಟಿದ ಮಗುವಿಗೆ ಮೂರು, ಐದು ಅಥವ ಒಂಬತ್ತನೆಯ ತಿಂಗಳಲ್ಲಿ ಶುಭ ಮೂಹೊರ್ತ ದಿವಸ ನೋಡಿ ಮುರುವು ಚುಚ್ಚಿಸುತ್ತಾರೆ. ಚುಚ್ಚಿಸಿಕೊಳ್ಳಲು ಪಾಂಚಳನ ಅಂಗಡಿಗಾಗಲಿ ಅಥವ ಮನೆಗಾಗಲಿ ಎರಡು ಒಣಗೊಬ್ಬರಿ ಬಟ್ಟಲಗಳನ್ನು ಉದಿನಕಡ್ಡಿ ಪಂಚಫಳಾರ (ಪುಠಾಣಿ, ಸಕ್ಕರೆ, ಅಳ್ಳು, ಬೇಳೆ, ಬೆಲ್ಲ ಮಿಶ್ರಿಣ) ತೆಗೆದುಕೊಂಡು ಹೋಗುತ್ತಾರೆ. ಆಗ ಪಾಂಚಳನ್ನುಸಿದ್ದಪಡಿಸಿದ ಮುರವ (ಚಿನ್ನ, ಬೆಳ್ಳಿ, ತಾಮ್ರ) ಕೊಬ್ಬರಿ ಬಟ್ಟಲದಲ್ಲಿ ಚುಚ್ಚಿ ಕೂಸಿನ ಎರಡು ಕಿವಿಗಳಿಗೆ ಚುಚ್ಚುತ್ತಾನೆ. ರಕ್ತ ಬರಬಾರದೆಂದು ಚುಚ್ಚಿದ ಭಾಗಕ್ಕೆ ಎಣ್ಣೆ, ಕುಂಕುಮ ಲೇಪಿಸುತ್ತಾನೆ ನಂತರ ಕೊಬ್ಬರಿ ಬಟ್ಟಲನ್ನು ಕೂಸಿನ ಕಿವಿಯ ಹತ್ತಿರ ಒಯ್ದು ಲಟಕ್ಕಂತೆ ಮುರಿದು ಇದ್ದ ಜನಗಳಿಗೆ ಫಳಹಾರ ಹಚ್ಚುತ್ತಾರೆ. ಈ ರೀತಿ ಮಾಡುವದರಿಂದ ಕೂಸಿಗೆ ಕಿವಿ ಚುಚ್ಚಿದ ನೋವು ಕಡಿಮೆ ಯಾಗುತ್ತದೆಂದು ನಂಬುತ್ತಾರೆ. ಇದು ಸತ್ಯ ಎನ್ನಿಸುತ್ತದೆ. ನಿಜವಾಗಲು ಕಬ್ಬಿಣದ ಮಳೆಯಾಗಲಿ, ತಾರಾಗಲಿ ಹತ್ತಿದರೆ ನೋವಾಗಿರುತ್ತದೆ. ಇದು ಚುಚ್ಚುವದರಿಂದ ಅಷ್ಟುನೋವಾಗದು ಗಮನಕ್ಕೆ ಬರುವದು ಗಮನಿಸಬೇಕಾದದ್ದು. ನಂತರ ಪಾಂಚಳನಿಗೆ ತಮ್ಮ ಖುಸಿಗೆ ಬಂದಂತೆ ಐದು ಮತ್ತು ಹನ್ನೊಂದು ರೂಪಾಯಿಗಳು ಕೊಡುತ್ತಾರೆ.

ಕೂಸು ಬಾಣಂತಿಯನ್ನು ತವರ ಮನೆಯಿಂದ ಗಂಡಮನೆಗೆ ಕಳುಹಿಸುವಾಗ ಮುರುವ ಚುಚ್ಚುವುದು, ಮತ್ತು ತೊಟ್ಟಿಲು - ಬಟ್ಟಲ ನಿಬ್ಬಣ ಮಾಡಿಸಿ ಇಡುತ್ತಾರೆ. ಗಂಡನ ಮನೆಯವರು ಸೊಸೆ ಕರೆಯುವುದಕ್ಕಾಗಿ ಬರುತ್ತಾರೆ. ಪ್ರಥಮ ಹೆರಿಗೆ ಇದ್ದುದರಿಂದ ಕೂಸಿನೊಂದಿಗೆ ಗಂಡನಮನೆಗೆ ಹೊರಟುನಿಂತ ಮಗಳಿಗೆ ತವರಿನವರು ವಿಶೇಷ ಉಡುಗರೆ ನೀಡಿ ಗಂಡನ ಮನೆಗೆ ಕಳುಹಿಸುತ್ತಾರೆ. ಸಾಮಾನ್ಯವಾಗಿ ಸೀರೆ ಕುಪ್ಪಸ, ಕೂಸಿಗೆ ಹೊಸ ಬಟ್ಟೆ ತೊಟ್ಟಿಲ ಬಟ್ಟಲು, ಬೆಳ್ಳಿ ತೋಡೆ, ಹಾಲ್ಗಡಗ, ಬೆಳ್ಳಿ ಉಡದಾರ, ಬಂಗಾರದ ಶೇಟಿಗ್ವೆನರೂಪ ಮಾಡಿ ಕೊರಳಲ್ಲಿ ಹಾಕಿ ಕಿವಿಯಲ್ಲಿ ಚಿನ್ನದ ನವಲೋಕ ಮಾಡಿಸಿ ಕೊಟ್ಟು ಬಿಳುಕೊಡುತ್ತಾರೆ. ಉಡಿಯಕ್ಕಿ ಹಾಕಿ ಕೂಸಿನೊಂದಿಗೆ ಗಂಡನ ಮನೆಗೆ ಕರೆದುಕೊಂಡು ಬರುತ್ತಾರೆ. ಕೂಸಿನ ಸೋದರಮಾವ ಪೂಜೆ ಮಾಡಿದ ತೊಟ್ಟಿಲು ತಲೆಯ ಮೇಲೆ ಇಟ್ಟಿಕೊಂಡು ಗಂಡನ ಮನೆಗೆ ಬರುತ್ತಾರೆ. ಗಂಡಿನವರು ಹೊತ್ತು ತಂದ ತೋಟಲಿಗೆ ಪೂಜೆಮಾಡುವವರೆಗೆ ಬಾಗಿಲ ಬಳಿ ನಿಲ್ಲುತ್ತಾರೆ. ತೊಟ್ಟಿಲ ಹೊತ್ತ ನಿಂತ ಸೋದರ ಮಾವನಿಗೆ ತೊಟ್ಟಲಿಗೂ ಆರತಿ ಮಾಡಿ ಕೂಸು - ತಾಯಿಗೆ ಅನ್ನದಿಂದ ನಿವಾಳಿಸಿ ಮನೆಯೊಳಗೆ ಕರೆದ್ದೊಯುತ್ತಾರೆ. ಗಂಡಿನವರು ಸೋದರಮಾವನಿಗೆ ಹೊದಿಕೆ ಮಾಡಿ ಗೌರವಿಸುತ್ತಾರೆ. ಮುಂದೆ ತೊಟ್ಟಿಲು ಕಾರ್ಯಕ್ರಮ ಜರಗುತ್ತದೆ. ತದನಂತರ ತಮ್ಮ ಕೈಲಾದ ಮಟ್ಟಿಗೆ ಜನರಿಗೆ ಊಟವನ್ನು ಮಾಡಿಸುತ್ತಾರೆ.

**೭. ೬. ಜಾವಳ ಇಳಿಸುವುದು :** ಹುಟ್ಟಿದ ಮಗುವಿಗೆ ಒಂದು ವರ್ಷ ತುಂಬುವದರೊಳಗಾಗಿ ಅಂದರೆ ಐದು ತಿಂಗಳ ಮೇಲಿನ ಯಾವುದಾದರೊಂದು ವಿಷಮ ತಿಂಗಳಲ್ಲಿ ಅಥವಾ ಐದು ವರ್ಷದಲ್ಲಿ ಜಾವಳ ಕಾರ್ಯಕ್ರಮ ನಡೆಯುತ್ತದೆ. ಒಂದು ದಿನ ಮಠದಯ್ಯದವರ ಮನೆಗೆ ಹೋಗಿ ಪಂಚಾಂಗವನ್ನು ತೊರಿಸಿಕೊಂಡು ಬಂದುಶುಭ ಮೂರ್ಹತದಲ್ಲಿ ಜಾವಳ ಮಾಡ ಬೇಕೆಂದು ದಿನಾಂಕವನ್ನು ತೆಗೆದು ಕೊಡುತ್ತಾರೆ. ಆ ದಿನ ಮನೆ ಸಾರಿಸಿ ಶುದ್ಧಗೊಳಿಸಿ ಪಟ್ಟದ್ದೇವರಿಗಾಗಲಿ ಮಠದಯ್ಯಾನಿಗಾಗಲಿ ಕರೆದು ಗದ್ದಿಗೆಯ ಮೇಲೆ ಕುಳ್ಳರಿಸಿ ಅವರ ಪೂಜಾ ಮಾಡಿ ಚರಣತೀರ್ಥಗೈದು ತಯಾರ ಮಾಡಿ ನಂತರ ಜಾವಳ ತೆಗೆಯುವ ಹುಡುಗ ಅಥವಾ ಹುಡುಗಿ ಇವರಿಗೆ ಸ್ನಾನಮಾಡಿಸಿ ಜಂಗಮಯ್ಯಾರ ಗದ್ದುಗೆಯ ಹತ್ತಿರ ಮಗುವನ್ನು ಕುಳ್ಳಿರಿಸಿ ತೀರ್ಥವನ್ನುಸಿಂಪಡಿಸಿ ಕೂಸಿನ ಮುಂಗೈಗೆ ಕಂಕಣಕಟ್ಟಿ ವೀಳ್ಯದೆಲೆಯನ್ನು ಕತ್ತರಿಯಾಕಾರ ಮಾಡಿಜಂಗಮಯ್ಯನಿಂದ ತಲೆಯಲ್ಲಿರುವ ಕೇಶಗಳಿಗೆ ಸ್ಪರ್ಶಮಾಡಬೇಕು ನಂತರ ಸ್ವಲ್ಪ ಕೇಶವನ್ನು ಮಠದಯ್ಯ ಕತ್ತರಿಸಿದ ಬಳಿಕ ಕ್ಷೌರಿಕನಿಂದ ಉಳಿದ ಕೇಶಗಳು ಕತ್ತರಿಸಿ ಮಗುವಿನ ತಲೆಯ ಮೇಲೆ ಮಠದಯ್ಯ ಬಲಗಾಲನ್ನು ಇಟ್ಟು ಸ್ನಾನವನ್ನು

ಮಾಡಿಸುತ್ತಾರೆ. ನಂತರ ತವರಿನವರು ಕೂಸಿಗೆ ಮತ್ತು ತಂದೆ-ತಾಯಿಗಳಿಗೆ ಹೊಸ ಬಟ್ಟೆಗಳು ತಂದು ಹೊದಿಕೆ ಮಾಡುತ್ತಾರೆ. ಆಮೇಲೆ ಜಂಗಮರಿಗೆ ಕರೆದು ಪಾದತೀರ್ಥವನ್ನು ತೆಗೆದು ಎಲ್ಲಾ ಅಡಿಗೆಯ ಮೇಲೆ ಸಿಂಪಡಿಸಿ ಮೊದಲು ಜಂಗಮರು ಊಟ ಮಾಡಿದ ನಂತರ ತಮ್ಮ ಕೈಲಾದ ಮಟ್ಟಿಗೆ ಅಡುಗೆಯನ್ನು ಮಾಡಿಸಿ ತಮ್ಮ ಬಂಧು ಮಿತ್ರರಿಗೆ ಹೇಳಿಕೊಂಡು ಬಂದವರಿಗೆ ಭೋಜನೆ ಮಾಡಿಸುತ್ತಾರೆ. ನಂತರ ಈ ಜಾವಳ ಕಾರ್ಯಕ್ರಮಕ್ಕೆ ಆಗಮಿಸಿರುವವರೆಲ್ಲರೂ ಕೆಲವು ವಸ್ತುಗಳಾಗಲಿ, ಹಣವನ್ನಾಗಲಿ ಕಾಣಿಯಾಗಿ ಅಥವಾ ಐಯ್ಯಾರಿಯಾಗಲಿ ಮಾಡುತ್ತಾರೆ. ಕೂಸಿಗೆ ತಮ್ಮ ಮನೆಯ ಮಠದಯ್ಯನಿಗೂ ಮತ್ತು ಮಠಪತಿ ಆಕಳು ಅಥವಾ ಹೊದಿಕೆ ನೀಡಿ ಗೌರವಿಸುತ್ತಾರೆ. ಮಗುವಿನ ಕೇಶ ಕತ್ತರಿಸಿದ ಕೇಶವನ್ನು ಒಂದು ಹೊಸ ಬಟ್ಟೆಯಲ್ಲಿ ಕಟ್ಟಿ ನದಿಯಲ್ಲಿ ಬಿಡುತ್ತಾರೆ. ಏಕೆಂದರೆ ದುಷ್ಟ ಶಕ್ತಿಗಳು ಮಗುವಿಗೆ ತಾಗಲಾಗವು ನದಿಗಳು ಪವಿತ್ರ ವಾದ ಗಂಗಮ್ಮ ತಾಯಿ ಎಂದು ತಿಳಿದು ಅವಳು ನಮ್ಮ ಮಗುವಿಗೆ ಕಾಪಾಡುತ್ತಾಳೆ ಎಂದು ಹೀಗೆ ಮಾಡುವದುಂಟು.

ಕೆಲವು ಗಂಡು ಮಕ್ಕಳಿಗೆ ಐದು ವರ್ಷದ ನಂತರವು ಅಥವ ಐದು ವರ್ಷದೊಳಗೆ ಇರುವಾಗಲು ಜಾವಳ ತೆಗೆಯುತ್ತಾರೆ. ಆದರೆ ಐದು ವರ್ಷಕ್ಕೆ ಈ ಕಾರ್ಯಮಾಡುವದಾದರೆ ವಿಶೇಷವಾಗಿ ಒಂದು ಕಾರ್ಯಕ್ರಮ ಜರುಗುವುದು. ಅಂದು ಮಗುವಿಗೆ ಸ್ವಲ್ಪ ಕೇಶಗಳನ್ನು ಇಟ್ಟು ಉಳಿದ ಕೇಶಗಳನ್ನು ಕತ್ತರಿಸುತ್ತಾರೆ. ಅಂದರೆ ಚಂಡಿಕೆಯನ್ನು ಬಿಡಿಸಬೇಕಾಗುತ್ತದೆ. ಆ ಮಗು ಯಾವ ಸಿಂಹಾಸನಕ್ಕೆ ಸೇರಿದೆ ಆ ಸಿಂಹಾಸನ ಪ್ರಕಾರ ಜಡೆಯನ್ನು ಬಹಿಸ್ಸಿಕೆಯನ್ನು ಬಿಡಿಸಬೇಕು ಇದರ ಕ್ರಮವನ್ನು ಒಂದು ಶುಭ ಮೂಹರ್ತದಲ್ಲಿ ಕೆಲವು ಮುತ್ತೈದೆರಿಗೆ ಗಂಡಸರಿಗೆ ಭೋಜನಕ್ಕೆ ಹೇಳಿ ಜಾತಿ ಧರ್ಮದ ಪ್ರಕಾರ ಆ ಮಗುವಿಗೆ ತಲೆ ಸ್ನಾನ ಮಾಡಿಸಿ ಮಠದಯ್ಯನ ಹತ್ತಿರ ಕುಳ್ಳಿರಿಸುತ್ತಾರೆ. ಆಗ ಮಠದಯ್ಯ ಮಗುವಿಗೆ ಹಣೆಗೆ ವಿಭೂತಿ ಧಾರಣಮಾಡಿ ಆಕಳ ಪಾದದಷ್ಟು ಕಾಗದ ಅಥವ ಎಲೆಯನ್ನು ಗೋಲಾಕೃತಿಯಯಾಗಿ ಕತ್ತರಿಸಿ ಚಂಡಿಕೆ ಬಿಡುವ ಸ್ಥಾನಕ್ಕೆ ಸ್ಪರ್ಶಮಾಡಿ ನಂತರ ಮಠದಯ್ಯನವರ ಸೇರುಪಾವು ಅಕ್ಕಿ ಗೋಬ್ಬರಿ ಬಟ್ಟಲು, ದಕ್ಷಣವನ್ನು ನೀಡಿ ಪಾದಕ್ಕೆ ನಮಸ್ಕರಿಸಿ ಜಂಗಮರಿಗೂ ಮುತ್ತೈದೆಯರಿಗೂ ಪೂಜಿಸಿ ಭೋಜನೆ ಮತ್ತು ಧನವನ್ನು ನೀಡಿ ಸತ್ಕರಿಸಬೇಕು. ಇಲ್ಲಿ ಕ್ಷೌರಿಕನಿಗೆ ಚಂಡಿಕೆಯನ್ನು ಕತ್ತರಿಸದಂತೆ ಉಳಿದ ಕೇಶವನ್ನು ಕತ್ತರಿಸಲು ಹೇಳಬೇಕು. ನಂತರ ಬಂದ ಜನರಿಗೆ ಭೋಜನವನ್ನು ಮಾಡಿಸುತ್ತಾರೆ. ಹೀಗೆ ೧ ರಿಂದ ೫ ವರ್ಷದವರಿಗೂ ಜಾವಳ ತೆಗೆಯಬೇಕಾದರೆ ಈ ರೀತಿಯ ಕ್ರಿಯೇ ಮಾಡಬೇಕಾಗುತ್ತದೆ. ಇದು ಇಂದು

ಹೆಚ್ಚಾಗಿ ಕಂಡು ಬರುವುದಿಲ್ಲ. ಇದು ಬ್ರಾಹ್ಮಣರಲ್ಲಿ ಕಂಡುಕೊಳ್ಳಬಹುದು. ಆದರೆ ಅವರಲ್ಲಿನ ವಿಧಿ ವಿಧಾನಗಳು ಇವರಲ್ಲಿನ ವಿಧಿ ವಿಧಾನಗಳಲ್ಲಿ ತುಂಬ ವ್ಯತ್ಯಾಸಗಳು ಕಂಡು ಬರುತ್ತವೆ. ಹೆಣ್ಣು ಮಕ್ಕಳಿಗೆ ದೊಡ್ಡವರಾಗುವುದರೊಳಗೆ ಮೂಗು ಚುಚ್ಚಿಸಿಕೊಂಡು ಬರುತ್ತಾರೆ. ಮದುವೆಯಲ್ಲಿ ಮೂಗು ಬಟ್ಟು (ಸುಪಾನಿ) ಧರಿಸಬೇಕೆಂಬ ನಿಯಮದಿಂದ ನೋವು ಇದ್ದರೂ ಮೂಗು ಚುಚ್ಚಿಸಿಕೊಳ್ಳಬೇಕಾಗುತ್ತದೆ. ಮೂಗು ಚುಚ್ಚಿಸಿಕೊಳ್ಳಲು ಯಾವುದೇ ಮೂಹರ್ತಗಳಿಲ್ಲ. ಪಾಂಚಾಳನ ಹತ್ತಿರ ಹೋಗಿ ಮೂಗು ಚುಚ್ಚಲು ಕೇಳಿಕೊಳ್ಳುತ್ತಾರೆ. ಆಗ ಅವನು ಹೆಣ್ಣಿನ ಮೂಗಿನ ಎಡಭಾಗದ ಕೆಳ ತುದಿಯ ಮೇಲೆ ಬಂಗಾರ ಕಡ್ಡಿಯಿಂದ ಮೂಗು ಚುಚ್ಚುತ್ತಾನೆ. ತದನಂತರ ಚುಚ್ಚಿದ ರಂಧ್ರ ಮುಚ್ಚಬಾರದೆಂದು ಕರಿದಾರ ಕಟ್ಟುತ್ತಾನೆ. ಹದಿನೈದು ದಿವಸಗಳನಂತರ ಬೇವಿನ ಕಡ್ಡಿ ಇಟ್ಟುಕೊಳ್ಳಲು ತಿಳಿಸುತ್ತಾನೆ. ಏಕೆಂದರೆ ಬೇವು ಜಂತು ನಿರೋಧಕವಿರುವುದರಿಂದ ಚುಚ್ಚಿದ ಗಾಯ ಬೇಗ ಮಾಯ್ದು ಸುಪಾನಿ ಇಟ್ಟುಕೊಳ್ಳಲು ಸುಲಭವಾಗುತ್ತದೆ ಎಂದು ತಿಳಿದುಕೊಂಡು ಹೇಳುತ್ತಿದ್ದರು. ನಂತರ ಪಾಂಚಾಳನಿಗೆ ಹಣವನ್ನು ನೀಡುತ್ತಾರೆ. ಕೆಲವರು ಮೂಗಿನ ರಂಧ್ರ ಮುಚ್ಚಬಾರದೆಂದು ಬಂಗಾರದ ಸುಪಾನಿಗಳು ಸಿಗದೆ ಇದ್ದಾಗ ಇಂದಿಗೂ ಬೇವಿನ ಕಡ್ಡಿ ಇಟ್ಟುಕೊಂಡಿರುತ್ತಾರೆ. ಆದರೆ ಇಂದಿನ ಯುವತಿಯರು ಮಾತ್ರ ಮೂಗಿನ ಸೌಂದರ್ಯ ಹೋಗುವುದೆಂದು ಮೂರು ಚುಚ್ಚಿಕೊಳ್ಳಲು ಮುಂದೆ ಸಾಗುತ್ತಿಲ್ಲ. ಆದರೆ ಹೆಚ್ಚಿನ ಹೆಣ್ಣುಮಕ್ಕಳು ಮೂಗು ಚುಚ್ಚಿ ಚುಚ್ಚಿಸಿಕೊಳ್ಳುತ್ತಾರೆ. ಮೂಗು ಚುಚ್ಚಿಸಿಕೊಳ್ಳುವುದು ಆರೋಗ್ಯ ಹಾಗೂ ಸಂಪ್ರದಾಯ ದೃಷ್ಟಿಯಿಂದ ಆಕ್ಷೇಪಣೀಯವಾಗಿದೆ. ಆದರೆ ಕೆಲವರು ಚುಚ್ಚಿಸಿಕೊಳ್ಳಲು ಹಿಂಜರಿಯುತ್ತಿರುವುದುಂಟು.

ಜಂಗಮರಲ್ಲಿ ಹೆಣ್ಣುಮಕ್ಕಳು, ಹೆಂಗಸರು ಮತ್ತು ಗಂಡಸರು ಹಚ್ಚೆ ಹಾಕಿಸಿಕೊಳ್ಳುವುದುಂಟು. ಹೆಣ್ಣು ಕನ್ಯಾವಸ್ಥೆಗೆ ಬರುವಷ್ಟರೊಳಗೆ ಇಲ್ಲವೆ ಮದುವೆಯಾಗಿದ ನಂತರ ಹಚ್ಚಿ ಹಾಕಿಸಿಕೊಳ್ಳುತ್ತಾರೆ. ಹಣೆ, ಕೆನ್ನೆ, ಮುಂಗೈ, ಮೊಳಕೈಯಿ ಇತರ ಭಾಗಗಳ ಮೇಲೆ ಹೆಂಗಸರು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಮೊಣಕೈಯ ಮೇಲೆ ಗಂಡಸರು ತಮ್ಮ ಹೆಸರು ಮತ್ತು ದೇವರ ಚಿತ್ರಗಳು ಹಾಕಿಸಿಕೊಂಡಿದ್ದ ಹಚ್ಚೆಗಲು ಕಾಣುತ್ತವೆ. ಹೆಂಗಸರಲ್ಲಿ ಹೆಚ್ಚಾಗಿ ಹಣೆಯ ಮೇಲೆ ಕಂಡು ಬರುತ್ತದೆ. ಇದನ್ನು ಹಾಕಿಸಿಕೊಳ್ಳುವರು ಹೇಳಿದ ಭಂಗಿಯ ಚಿತ್ರಗಳು ಮೊದಲ ಮನೆಯಿಂದ ಚಿತ್ರಿಸಿ ನಂತರ ಏಳು ಸೂಜಿಯ ಕಟ್ಟಿನಿಂದ ಅದರ ಮೇಲೆ ಚುಚ್ಚುತ್ತಾ ಸಾಗುತ್ತಾಳೆ. ಹಾಕಿಸಿಕೊಳ್ಳುವರಿಗೆ ನೋವಾಗಬಾರದೆಂದು ಹಚ್ಚೆಯವರು ಹಾಡು

ಹೇಳುತ್ತಾಳೆ. (ಹಚ್ಚೆಯ ಹಾಡುಗಳು ಎಚ್. ಎಲ್. ನಾಗೇಗೌಡರ ಪದವ ನಮ್ಮ ಎದೆಯಲ್ಲಿ ಎಂಬ ಸಂಕಲನದಲ್ಲಿ ಹಚ್ಚಲು ಪದಗಳು ನೋಡಬಹುದು). ಹಚ್ಚೆ ಹಾಕಿನ ನಂತರ ಅದನ್ನೆ ತೊಳೆದು ಅರಿಶಿನ ಪುಡಿ, ಕೊಬ್ಬರಿ ಎಣ್ಣೆ ಲೇಪಿಸುತ್ತಾರೆ. ದಿನ ದಿನ ವಾಸಿಯಾಗುತ್ತಾ ಬರುತ್ತದೆ. ಜಾನಪದರು ಹೇಳುವಂತೆ ಹಿಂದಿನ ಕಾಲದಲ್ಲಿ ಹಚ್ಚೆ ಹಾಕಿಸಿಕೊಳ್ಳದವಳು ಗಂಡಸಿಗೆ ನೀರು ಕೊಡುವಂತಿಲ್ಲ. ರಾಶಿ ಕಣಕ್ಕೆ ಹೋಗುವಂತಿಲ್ಲ, ತುಂಬಿದ ಸಭೆಗೆ ಬರುವಂತಿಲ್ಲ. ಆದ್ದುದರಿಂದ ಹಚ್ಚೆ ಹಾಕಿಸಿಕೊಳ್ಳಲೇಬೇಕೆಂದು ಕಡ್ಡಾಯವಾಗಿ ನಂಬಲಾಗಿತ್ತು. ಆದರೆ ಇಂದು ಇದಕ್ಕೆ ಅಷ್ಟು ಮಹತ್ವ ಕೊಡದಿರುವುದು ಕಾಣುತ್ತೇವೆ. ಇಂದಿನ ಯುವತಿಯರು ಹೆಚ್ಚಾಗಿ ಹಾಕಿಸಿಕೊಳ್ಳದವರು ಸಿಗುತ್ತಾರೆ. ಮತ್ತು ಸೌಂದರ್ಯ ಮಾರಕವೆಂದು ಹಚ್ಚೆ ಹಾಕಿಸಿಕೊಳ್ಳುವುದಿಲ್ಲ.

**೭.೭. ಅಕ್ಷರ ಆರಂಭ (ವಿದ್ಯಾರಂಭ) :** ಹಿಂದಿನ ಕಾಲದಲ್ಲಿ ಶಿಕ್ಷಣಕ್ಕೆ ಹೆಸರುವಾಸಿಯಾದ ಜಂಗಮ ಮಠಗಳು ಹಿಂದಿನ ಕಾಲದಲ್ಲಿ ಶಿಕ್ಷಣವನ್ನು ನೀಡುವಲ್ಲಿ ಹೆಸರು ವಾಸಿಯಾಗಿದ್ದವು. ಶಿಕ್ಷಣ ಪ್ರಸಾರ ಆರಂಭಗೊಂಡಿದ್ದು ಜಂಗಮರ ಮಠಗಳಿಂದ ಎಂದು ಸರ್ವವಿಧಿತ. ಬರಬರುತ್ತಾ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಶಾಲೆಗಳನ್ನು ಕಟ್ಟಿಸಿ ಅವುಗಳಲ್ಲಿ ಶಿಕ್ಷಕರನ್ನು ನೇಮಕಮಾಡಿ ಅವರಿಗೆ ಹಣವನ್ನು ನೀಡುತ್ತಿದ್ದುದುಂಟು. ಆದರೆ ಮಠಗಳಲ್ಲಿ ಶಿಷ್ಯಗೆ ಗುರುಗಳು ನೀಡಿದ ಶಿಕ್ಷಣದ ಪರವಾಗಿ ದವಸ ಧಾನ್ಯಗಳನ್ನು ಕೊಟ್ಟು ಗೌರವಿಸಲಾಗುತ್ತಿತ್ತು. ಇಂದು ಮಠದ ಶಿಕ್ಷಣವನ್ನು ಹೋಗಿ ಸರಕಾರವು ಮಠದ ಮಾದರಿಯೊಳಗೆ ಶಾಲೆಗಳನ್ನು ತೆರೆದು ಜಂಗಮ ಗುರುವಿನಂತೆ ಶಿಕ್ಷಕರನ್ನು ನೇಮಿಸಿಕೊಂಡು ಶಿಕ್ಷಣ ಪ್ರಸಾರ ಮಾಡುತ್ತಿರುವುದು ಕಾಣುತ್ತೇವೆ. ಆದರೂ ದೊಡ್ಡ ದೊಡ್ಡ ಮಠಗಳು ಇಂದಿಗೂ ಹಿಂದಿನ ಶಿಕ್ಷಣ ಪದ್ದತಿ ಮತ್ತು ಇಂದಿನ ಪದ್ದತಿ ಎರಡು ಅಳವಡಿಸಿಕೊಂಡು ಶಿಕ್ಷಣ ಪ್ರಚಾರ ಮಾಡುತ್ತಿರುವುದು ಭಾರತದ್ಯಾಂತ ಕೀರ್ತಿಗಳಿಸಿವೆ, ಗಳಿಸುತ್ತಿವೆ. ಜಂಗಮರ ಐದು ವರ್ಷದ ಮಕ್ಕಳಿಗೆ ಮಠದಲ್ಲಿ ಶಿಕ್ಷಣ ಪಡೆಯುವದಕ್ಕಾಗಿ ಬಿಟ್ಟುಬರುತ್ತಿದ್ದರು. ಆಗ ಜಂಗಮ ಗುರುಗಳು ಹುಡುಗನಿಗೆ ಒಂದು ಶುಭದಿನವನ್ನೆ ನೋಡಿ ಬಾಲಕನಿಗೆ ಎಣ್ಣೆ ಸ್ನಾನಮಾಡಿಸಿ ಹೊಸ ಬಟ್ಟೆಗಳನ್ನು ಕೊಡಿಸಿ ತಮ್ಮ ಮನೆದೇವರನ್ನು ಪೂಜಿಸಿ ತಂದೆ, ತಾಯಿ, ಅಕ್ಕ, ಅಣ್ಣ ತಮ್ಮೆಲ್ಲರಿಗೂ ನಮಸ್ಕರಿಸಿ ಗುರುವಿನ ಹತ್ತಿರ ಬಂದು ಗುರುಗಳಿಗೆ ಪ್ರದಕ್ಷಿಣವನ್ನು ಹಾಕಿ ಪಾದಕ್ಕೆ ನಮಸ್ಕರಿಸುತ್ತಾರೆ. ಆಗ ಗುರುಗಳು ಹುಡುಗನ ಮೊದಲನೆ ದಿನವಾಗಿರುವುದರಿಂದ ಓಂ ಎಂಬ ಪ್ರಾಣಕ್ಷರವನ್ನು ಬರೆದು ಅದರಂತೆ ಹುಡುಗನಿಗೆ ಬರೆಯಲು ಹೇಳುತ್ತಿದ್ದರು.

ಅಂದಿನಿಂದ ಗುರುಗಳ ಸೇವೆ ಮಾಡುತ್ತಾ ಧಾರ್ಮಿಕ ಶಿಕ್ಷಣದ ಜೊತೆಗೆ ಲೌಕಿಕ ಶಿಕ್ಷಣವನ್ನೇ ಪಡೆಯುತ್ತಿದ್ದರು. ಪರಿಪೂರ್ಣ ಜ್ಞಾನವನ್ನು ಪಡೆದನಂತರ ಮಗುವಿಗೆ ಮನೆಗೆ ಕಳುಹಿಸುತ್ತಿದ್ದರು. ಕೆಲವೊಂದು ಸಂದರ್ಭದಗಳಲ್ಲಿ ಬುದ್ಧಿವಂತ ಹುಡುಗನಿಗೆ (ಅಂದರೆ ಅವನ ತಂದೆ ತಾಯಿ ಹಾಗೂ ಅವನು ಒಪ್ಪಿದ ಬಳಿಕ) ಪಟ್ಟಾಧಿಕಾರಿಯಾಗಿ ಅಥವಾ ಮಠದ ಗುರುಗಳಾಗಿ ನೇಮಕ ಮಾಡುವದುಂಟು.

**೭.೮. ಅಯ್ಯಾಚಾರ (ದೀಕ್ಷಾ) :** ಅಯ್ಯಾಚಾರ ಅಥವಾ ದೀಕ್ಷಾ ಜಂಗಮರಲ್ಲಿ ತುಂಬ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಅಯ್ಯಚಾರವಾಗಿರದ ಜಂಗಮನಿಗೆ ಇತರರ ಮನೆಗಳಲ್ಲಿ ಅಥವಾ ವೀಶೈವರಲ್ಲಿ ಯಾವದೇ ವಿಧಿ ವಿಧಾನಗಳು ಪೂಜಾದಿಗಳು ಯಾವದೇ ಸಂಸ್ಕಾರ ಮಾಡಲು ಅರ್ಹನಾಗಿರುವುದಿಲ್ಲ. ಅಲ್ಲದೆ ಹಬ್ಬ ಹರಿದಿನಗಳಲ್ಲಿ ಭಕ್ತರ ಮನೆಯಲ್ಲಿ ಭಿನ್ನ ಮುಗಿಸುವದಕ್ಕಾಗಿ ಅಥವಾ ಪಟ್ಟಾಧ್ಯಕ್ಷನಾಗಲು, ಮಠಾಧ್ಯಕ್ಷನಾಗಲು ಬರುವದಿಲ್ಲ. ಹೀಗಾಗಿ ಜಂಗಮ ಗಂಡು ಮಕ್ಕಳಿಗೆ ಅಯ್ಯಾಚಾರ ಕ್ರಿಯೇ ಜರುಗುತ್ತದೆ. ಆದರೆ ಜಂಗಮರ ಹೆಣ್ಣು ಮಕ್ಕಳಿಗೆ ಇದು ಅವಕಾಶವಿಲ್ಲ. ಆದರೆ ಲಿಂಗದೀಕ್ಷೆ ಹೆಣ್ಣು-ಗಂಡು ಎಂಬ ಭೇದ ಭಾವ ಇವರಲ್ಲಿ ಕಾಣದು ಎಲ್ಲರು ಸಮಾನರು ಹುಟ್ಟುವ ಮಗುವಿಗೆ ಲಿಂಗದೀಕ್ಷೆ ಎಂಟು ವರ್ಷ ತುಂಬುವದರೊಳಗೆ ದೀಕ್ಷೆ ನಡೆಯುವುದು ಉತ್ತಮ, ಹದಿನಾರು ವರ್ಷದಲ್ಲಿ ಮಾಡುವುದು ಮಾಧ್ಯಮ, ಹದಿನಾರುವರ್ಷದ ನಂತರ ಮಾಡುವದು ಕನಿಷ್ಟವೆಂದು ತಿಳಿಯಬೇಕು ಎನ್ನುತ್ತಾರೆ(ಹಿರೇಮಠ ಶಿವಲಿಂಗಯ್ಯ ಚನ್ನಯ್ಯ, ೧೯೬೮) ಈ ಅಯ್ಯಾಚಾರ ದೀಕ್ಷಾ ನೆರವೇರಿದ ನಂತರ ಎಲ್ಲ ಕ್ರಿಯಾ ಕಾರ್ಯಕ್ರಮುಗಳಲ್ಲಿ ಭಾಗವಹಿಲು ಯೋಗ್ಯರಾಗುತ್ತಾರೆ. ಮಾಂಸಮಯ ಶರೀರವನ್ನು ಮಂತ್ರ ಶರೀರವನಾಗಿ ಜಂಗಮ ಗುರುಗಳು ಮಾಡುತ್ತಾರೆ. ಪುಣ್ಯಕರವಾದ ಮಂತ್ರದ ಕಡೆ ಗಮನಕೊಟ್ಟು ಭಕ್ತಿಯಿಂದ ಗುರುವಿನ ಉಪದೇಶವನ್ನು ಕೇಳಿ ಧನ್ಯನಾಗಬೇಕು ಅದಕ್ಕೆ

‘ಮಮ ಪಂಚಾಕ್ಷರೀ ಮಂತ್ರಂ ಪಾಠ ಮಾತೇಣ ಸಿದ್ಧಿತಂ
ಸರ್ವಲೋಕ ವಶೀಕಾರಂ ಸೌಭಾಗ್ಯಂ ಜ್ಞಾನವರ್ಧನಂ’

(ತೋಟಪ್ಪಶಾಸ್ತ್ರಿ : ೫೫)

ಪಂಚಾಕ್ಷರೀ ಮಹಾಮಂತ್ರದಿಂದಲೇ ಮಹಾ ಸಿದ್ಧಿಯು ನೀಡುತ್ತದೆ ಜೊತೆಗೆ ಸರ್ವ ಲೋಕವನ್ನು ವಶೀಕರಿಸುವ, ಸಮಸ್ತ ಐಶ್ವರ್ಯ ಸುಜ್ಞಾನಗಳ ಬೆಳವಣಿಗಿಯನ್ನು ಕೊಟ್ಟು ರಕ್ಷಿಸುವುದು ಎಂದು ಹೇಳಲಾಗಿಸದೆ. ಈ ಮಂತ್ರ ಪಡೆದುಕೊಂಡಿದರಿಂದ ಜೀವನದಲ್ಲಿ ಜಯವನ್ನು ಸಂಪಾದಿಸಿ ಶಿವಸಾಯಜ್ಯವನ್ನು ಹೊಂದುತ್ತಾನೆ. ಎಂಬ ದೃಢ ನಂಬಿಕೆ ಅವರದು.

ಹೀಗೆ ಎಂಟನೇ ವರ್ಷಕ್ಕೆ ದೀಕ್ಷಾ ಮಾಡಬೇಕೆಂಬುದಾಗಿದಾಗಿ ಶಾಸ್ತ್ರಧಾರವಿದೆ. ಈ ದೀಕ್ಷಾ ಪಡೆದನಂತರ ೧೨ವರ್ಷದವರೆಗೂ ಲಗ್ನ ಮಾಡಬಾರದು ಏಕೆಂದರೆ ಈ ಸಮಯದಲ್ಲಿ ಹುಡುಗ ವಿದ್ಯಾಭ್ಯಸ ಮಾಡಲು ಮತ್ತು ಮಂತ್ರಧ್ಯಯನ ಮುಂತಾದದಲ್ಲಿ ಕಲಿತು ಕೊಳ್ಳಲಿಕ್ಕೆ ಸಹಾಯವಾಗುತ್ತದೆಂದು ಹೀಗೆ ಹೇಳಿದ್ದು ಕಾಣಿಸುತ್ತದೆ.

ಅಯ್ಯಾಚಾರ ವಿಧಿ ಆಚರಿಸುವ ದಿನಗಳ ಪೂರ್ವ ಭಾವಿಯಾಗಿ ಮನೆಯನ್ನು ಸಂಪೂರ್ಣವಾಗಿ ಸುಣ್ಣ ಬಣ್ಣಗಳಿಂದ ಸಾರಿಸಿ ಶುದ್ಧವಾಗಿ ಮಾಡುತ್ತಾರೆ. ಇದು ಹೆಚ್ಚಾಗಿ ವೈಶಾಖದಿಂದ ಫಾಲ್ಗುಣ ತಿಂಗಳ ಒಳಗೆ ಶುಭಮೂರ್ಹತದಲ್ಲಿ ಈ ವಿಧಿ ಆಚರಿಸಲಾಗುತ್ತದೆ. ಈ ಕ್ರಿಯೆ ನಡೆಯುವಲ್ಲಿ ಮೇಲೆ ಹೇಳಿದ ಐದು ಪಂಚಚಾರ್ಯರಲ್ಲಿ ಯಾವ ಸಿಂಹಾಸನದ ಪೀಠಕ್ಕೆ ಸೇರಿದ ಮನೆಯಿದೆ. ಆ ಮನೆಯ ಪೀಠದ ಗುರುಗಳು ಇದ್ದು ಐದು ಪೀಠಗಳ ಕಲಶಗಳನ್ನು ಆಯಾ ದಿಕ್ಕುಗಳಲ್ಲಿ ಸ್ಥಾಪಿಸುತ್ತಾರೆ. ಈ ಕ್ರಿಯೆ ಯಾವ ಮನೆಯಲ್ಲಿ ನಡೆಯುತ್ತದೆಯೋ ಆ ಮನೆಯಲ್ಲಿ ಮಂಟಪವನ್ನು ರಚನೆಮಾಡಿ ಆ ಮಂಟಪದ ಮಧ್ಯದಲ್ಲಿ ಹೆಣ್ಣು ಮಕ್ಕಳಿಂದ ರಂಗೋಲಿ ಹಾಕಿಸಿ ಅದರ ಮೇಲೆ ಅಕ್ಕಿಯಿಂದ ಸಸಿ ಬರೆದು ಅದರ ಮೇಲೆ ಕಲಶವನ್ನು ಸ್ಥಾಪಿಸುತ್ತಾರೆ. ನಂತರ ಯಾವ ಯಾವ ಪೀಠದ ಜಂಗಮರು ಇರುತ್ತಾರೋ ಆ ಕಲಶದ ಹತ್ತಿರ ಗದ್ದುಗೆಯನ್ನು ಹಾಕಿಕೊಂಡು ಕಲಶವನ್ನು ತುಂಬುತ್ತಾರೆ.

ಆಯ್ಯಾಚಾರ ಹೊಂದುವ ಜಂಗಮ ಹುಡುಗನಿಗೆ ಆ ದಿನ ಉಪವಾಸ ಮಾಡಿಸುತ್ತಾರೆ. ಹಸಿವೆ ತಾಳಲಾರದ ಹುಡುಗನಿಗೆ ಹಾಲು ಸೇವಿಸಲು ಕೊಡುತ್ತಾರೆ. ಬ್ರಾಹ್ಮಿ ಶುಭಮೂಹರ್ತ ದಲ್ಲಿ ಅಯ್ಯಾಚಾರ ವಿಧಿಗೊಳಪಡುವ ವಟುವಿನ ತಲೆ ಕ್ಷೌರಿಕನಿಂದ ಸಿಕೆ (ಜುಟ್ಟ) ಬಿಟ್ಟು ತಲೆ ಬೋಳಿಸಲಾಗುತ್ತದೆ. ನಂತರ ಒಂದು ಮಣೆಯ ಮೇಲೆ ಅಥವಾ ದೊಡ್ಡ ಪರಾತಿನೊಳಗೆ ಕೂಡಿಸಿ ವಟುವಿನ ತಲೆಯ ಮೇಲೆ ಮಂತ್ರೋಪದೇಶ ಮಾಡಲು ಬಂದ ಗುರು ತನ್ನ ಬಲಪಾದ ವಟುವಿನ ತಲೆಯ ಮೇಲೆ ಇಟ್ಟು ಪಂಚಾಮೃತ ಸ್ನಾನ ಮಾಡಿಸಿ ನಂತರ ಸೀಗೆಕಾಯಿ ಪುಡಿ ಹಚ್ಚಿ ಅಥವಾ ತೈಲಾಭ್ಯಂಗ ಸ್ನಾನ ಮಾಡಿಸಿದ ಮೇಲೆ ಸುರಗಿಯಲ್ಲಿ ಸ್ನಾನ ಮಾಡಿಸಿದ ತರುವಾಯ ಜಂಗಮನಿಗೆ ಹೊಸ ಪಂಜಿ, ಕಾಪೀನ, ಭೀಕ್ಷೆ ಪಾತ್ರೆ (ಅರವಿಯ ಜೋಳಗಿ) ಯಾವ ಪೀಠಕ್ಕೆ ಸೇರಿದ್ದಾನೆ. ಆ ಪೀಠದ ಬೆತ್ತ ಜಂಗು ತರಿಸುತ್ತಾರೆ. ಹುಡುಗನನ್ನು ಕರೆತಂದು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ವೀಳ್ಯಾದ ಎಲೆ, ಖಾರೀಕ, ಅಡಿಕೆ, ಕೊಬ್ಬರಿ ತರಿಸಿ ಪಂಚಕಲಶಕ್ಕೆ ಇಡಿಸಿ ಕಲಶವನ್ನು ಸೂತ್ರದಿಂದ ಲೇಪಿಸಿ ದೀಕ್ಷೆಯಾಗುವವರೆಗೆ ಒಂದೊಂದು ಸೂತ್ರ ಬರೆಯುವಂತೆ ಕ್ರಮದಿಂದ ಸೂತ್ರವನ್ನು ತೆಗೆಸಿ ಆ ಸೂತ್ರದ ಕೊನೆಗೆ ಎರಡು ಕಡೆಗೂ

ವೀಳ್ಯಾದೆಲೆ ಹಾಕಿ ಅರಿಶಿನ ಬಟ್ಟು ಕಟ್ಟಿ ಒಂದು ಸೂತ್ರವನ್ನು ಗುರುಗದ್ದುಗೆಯಲ್ಲಿ ಒಂದು ಸೂತ್ರವನ್ನೆ ದೀಕ್ಷೆ ಆಗುವವರ ಕೈಯಲ್ಲಿ ಕೊಟ್ಟ ಮೊದಲು ಲಿಂಗಾಭಿಷೇಕವನ್ನು ಮಾಡಿಸಿ ಕಂಕಣ ಪೂಜೆಯನ್ನು ಮಾಡಿ ಲಿಂಗಾಧಾರಣ ಮತ್ತು ಕಂಕಣ ಧಾರಣ ಮಾಡಿದ ನಂತರ ಅವರಿಗೆ ಗುರುವಿನ ಗದ್ದುಗೆಯ ಎದುರು ಕುಳ್ಳಿರಿಸಿ ಏಕಾಂತದಲ್ಲಿ ಗುರು ಬಾಲಕನ ಬಲಕರ್ಣದಲ್ಲಿ ಷಡಕ್ಷರಿ ಮತ್ತು ಎಡಕಿವಿಯಲ್ಲಿ ಮಂತ್ರೋಪದೇಶವನ್ನು ಮಾಡುತ್ತಾರೆ. ಮೇಲೆ ಹೇಳಿದಂತೆ ಅವರವರ ಸೂತ್ರದ ಪ್ರಕಾರ ಯಾವ ದಂಡವು, ಯಾವ ಕೈಯಲ್ಲಿ ಕೊಡತಕ್ಕದ್ದೋ ಆ ದಂಡವನ್ನು ಜೋಳಿಗೆ, ಜಂಗು ಕೊಟ್ಟು ಅಲ್ಲಿ ನೆರೆದವರಲ್ಲಿ ಭೀಕ್ಷೆ ಬೇಡಲು ಗುರುಗಳು ಆದೇಶ ನೀಡುತ್ತಾರೆ. ಆ ಗುರುಗಳ ಆದೇಶದಂತೆ ಮೊದಲು 'ಭವತಿ ಭಿಕ್ಷಾಂದೇಹಿ' ಎಂದು ತಾಯಿಯಲ್ಲಿ 'ಭವನ್ ಭಿಕ್ಷಾಂದೇಹಿ' ಎಂದು ತಂದೆಯಲ್ಲಿ ತದನಂತರ 'ಭವತಿ ಭಿಕ್ಷಾಂದೇಹಿ' ಎಂದು ವಿಧಿ ವೀಕ್ಷಿಸಲು ನೆರೆದವರ ಬಳಿ ಭೀಕ್ಷೆ ಬೇಡುತ್ತಾರೆ. ತಂದ ಭೀಕ್ಷೆಯನ್ನು ಗುರುವಿನ ಎದುರಿಗೆ ಇಡುತ್ತಾರೆ. ಆಗ ಗುರು ಪ್ರಶ್ನೆ ಮಾಡಲಾಗಿ ಶಿಷ್ಯ ಅದಕ್ಕೆ ಉತ್ತರ ನೀಡುತ್ತಾನೆ. ಆಗ ಜೋಳಗಿಯಲ್ಲಿದಿದ್ದನ್ನು ಗುರುವಿಗೆ ಅರ್ಪಿಸುತ್ತಾನೆ. ಆನಂತರ ಗುರು ಮತ್ತೆ ಆದೇಶವಿತ್ತುತ್ತಾರೆ. ನೀನು ತಿಂದು ಅನ್ಯರನ್ನು ಸಂರಕ್ಷಣೆ ಮಾಡಬೇಕೆಂದು ಅಪ್ಪಣೆಯನ್ನು ಮಾಡುವರು. ಅದಕ್ಕೆ ಒಪ್ಪಿಕೊಂಡು ಅದೇ ಧರ್ಮದ ಪ್ರಕಾರ ಲಿಂಗವು ಎಂದೆಂದು ಬಿಡದಂತೆ ಆಚಾರಣೆಯುಕ್ತನಾಗಿ ಯಾವಾಗಲು ಭೀಕ್ಷೆಗೆ ಬಂದ ಅನ್ನವನ್ನೇ ಸೇವಿಸುತ್ತಾ ಅದೇ ಭೀಕ್ಷೆಯನ್ನು ಪರರಿಗೂ ಕೊಡುತ್ತಾ ಬಂದು ಹಣ ಸಂಗ್ರಹಿಸಿ ದೀನ ದಲಿತರ ಉದ್ಧಾರಕ್ಕಾಗಿ ಉಪಯೋಗಿಸಬೇಕೆಂದು ಉಪದೇಶಿಸುವುದರ ವಟು ಗುರುಗಳು ಉಪದೇಶಿಸಿದ ಪ್ರಕಾರ ನಡೆಯುತ್ತದೆಂದು ಪ್ರಮಾಣ ಮಾಡುತ್ತಾನೆ. ಹೀಗೆ ಪ್ರತಿಯೊಬ್ಬ ಜಂಗಮ ಹುಡುಗನಿಗೆ ಮೇಲಿನ ರೀತಿಯಿಂದ ಅಯ್ಯಾತನ ಪ್ರಾಪ್ತವಾಗುತ್ತದೆ. ಮುಂದೆ ಆತ ಅಯ್ಯಾತನ ಕೆಲಸ ಮಾಡಲು ಅರ್ಹನಾಗುತ್ತಾನೆ.

ದೀಕ್ಷಾ ಪಡದುಕೊಂಡ ಹುಡುಗ ಗುರುಗಳಿಗೆ ತಂದೆ ತಾಯಿಗಳಿಗೆ ನಮಸ್ಕರಿಸುತ್ತಾನೆ. ಈ ರೀತಿಯಿಂದ ಜಂಗಮ ಹುಡುಗರಿಗೆ ಪ್ರೌಢ ವ್ಯವಸ್ಥೆಗೆ ಬರುತ್ತಿರುವಂತೆ ಈ ಸಂಸ್ಕಾರವನ್ನು ಕಡ್ಡಾಯವಾಗಿ ಮಾಡುತ್ತಾರೆ. ಒಂದು ವೇಳೆ ಎಂಟು ಅಥವಾ ಹದಿನಾರು ವರ್ಷದಲ್ಲಿ ಮಾಡಲಿಲ್ಲವಾದಾಗ ಮದುವೆ ಸಂದರ್ಭದಲ್ಲಂತೂ ಅಂದರೆ ಮದುವೆ ಪೂರ್ವದಲ್ಲಿ ಕಡ್ಡಾಯವಾಗಿ ಮಾಡುತ್ತಾರೆ. ಇದು ಜಂಗಮ ಪ್ರಾಪ್ತಕ್ಕೆ ಮೆಟ್ಟಲೇ ಇದಾಗಿದೆ. ಕೊನೆಗೆ ದೀಕ್ಷಾ ಹೊಂದಿರುವ ವಟುವಿಗೆ ಮುತ್ತೈದೆಯರಿಂದ ಆರತಿ ಮಾಡುತ್ತಾರೆ. ನಂತರ ಜಂಗಮರಿಗೆ

ಮತ್ತು ಇತರ ಬಂಧುಮಿತ್ರರಿಗೆ ಭೋಜನೆಯನ್ನು ಮಾಡಿಸುತ್ತಾರೆ. ಇಂದು ಈ ದೀಕ್ಷಾ ಕಾರ್ಯವು ಇಪ್ಪತ್ತು ಪ್ರತಿಶತ ಕಡಿಮೆಯಾಗಿದೆ. ಉಳಿದ ಎಂಭತ್ತು ಪ್ರತಿಶತ ಆಚರಿಸಿಕೊಂಡು ಬರುತ್ತಿದ್ದಾರೆ. ಆದರೆ ಭೀಕ್ಷಾ ಬೇಡುವುದು ಕಡಿಮೆಯಾಗಿದೆ. ಏಕೆಂದರೆ ಶಿಷ್ಯರು ಕೊಡುವ ಭೀಕ್ಷೆಯಿಂದ ಅವರ ಕುಟುಂಬವು ನಡೆಸಲು ಆಗದ ಕಾರಣಕ್ಕಾಗಿ ಮನೆಯಲಿ ಒಬ್ಬ ವ್ಯಕ್ತಿ ತಮ್ಮ ಹಿಂದಿನ ಕಾಯಕ ಹಿಡಿದು ಮಾಡಿದರೆ ಉಳಿದವರು ತಮ್ಮ ತಮ್ಮಗೆ ತೋಚಿದ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡುತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಅಯ್ಯಾಚಾರ ದೀಕ್ಷಾ ಗಂಡಿಗೆ ಸೀಮಿತವಾಗಿದೆ. ಆದರೆ ಲಿಂಗದೀಕ್ಷಾ ಹೆಣ್ಣು - ಗಂಡು ಎನ್ನಲಾಗದೆ ಎಲ್ಲರಿಗೂ ಕಟ್ಟುತ್ತಾರೆ. ವಿಶೇಷವೆನೆಂದರೆ ಅಯ್ಯಾಚಾರ ಮಾಡುವ ಗುರು ಅಯ್ಯಾಚಾರ ಮಾಡಿಸಿಕೊಳ್ಳುವ ಜಂಗಮ ವಟುವಿನ ಗೋತ್ರ, ಸೂತ್ರ, ಪೀಠ ಒಂದೇಯಾಗಿರಬೇಕು. ಒಂದೇ ಇಲ್ಲದ್ದಾಗ ಆ ವಟುವಿನಿಂದ ಗೋತ್ರದ ಯಂತ್ರೋಪದೇಶ ಮಾಡಿಸುವುದು ಉತ್ತಮ ಎನ್ನುತ್ತಾರೆ. ಈ ಜಂಗಮರ ಅಯ್ಯಾಚಾರ ದೀಕ್ಷಾ ನೋಡಿದರೆ ವೈದಿಕ ಉಪನಯನ ವಿಧಿಯನ್ನು ಹೋಲುವಂತೆ ಕಂಡುಬರುತ್ತದೆ. ಆದರೆ ಮಾಡುವ ವ್ಯವಸ್ಥೆ ಬೇರೆಯಾದರೂ ನೀಡುವ ದೀಕ್ಷಾ ಉದ್ದೇಶ ಒಂದೇ ಎನ್ನುವ ನಿಟ್ಟಿನಲ್ಲಿ ಕಾಣಬಹುದು.

**೭.೯. ಮಠದಯ್ಯಾ , ಉತ್ತರಾಧಿಕಾರ ಅಥವಾ ಪಟ್ಟಾಧಿಕಾರ :** ಮೇಲಿನ ಹೆಸರಿನಲ್ಲಿ ಜಂಗಮ ಅಧಿಕಾರವನ್ನೇ ವಹಿಸಿಕೊಂಡು ಲಿಂಗಧಾರಣ, ದೀಕ್ಷಾ ಬೋಧನೆಯ ಜೊತೆ ವೀರಶೈವ ಧರ್ಮ ತತ್ವಗಳನ್ನು ಪ್ರಸಾರ ಮಾಡುವ ಕಾರ್ಯವಹಿಸಿಕೊಂಡು ಹೋಗುತ್ತಾರೆ. ಎಲ್ಲಾ ನಮ್ಮ ನಾಡಿನ ದೊಡ್ಡ ದೊಡ್ಡ ಮಠಗಳಾದ ಪಂಚಪೀಠದ ಮಠಗಳಿಗೆ ಎಲ್ಲಾ ಮಠಗಳು ಅಧೀನವಾಗಿ ಕೆಲಸಮಾಡುತ್ತಿರುತ್ತವೆ. ಅಧೀನ ಮಠಗಳಿಗೆ ಪಂಚಾಚಾರ್ಯರು ತಮ್ಮ ಪ್ರತಿನಿಧಿಯಂತಿರುವ ಉಪಚಾರ್ಯರನ್ನು ಅಥವಾ ಪಟ್ಟಚರಾಧಿಕಾರಿಗಳನ್ನು ನೇಮಿಸಿದುಂಟು, ನೇಮಿಸುತ್ತಾರೆ. ಒಳ್ಳೆಯ ಪಟ್ಟಧಿಕಾರಿಗಳನ್ನು ನೇಮಿಸಿ ಸಮಾಜದ ಜನರ ಸೇವೆಯಲ್ಲಿ ತೊಡಗಿಸುತ್ತಾರೆ. ಅದಕ್ಕಾಗಿ ಪಟ್ಟಧಿಕಾರಿಯಾಗಲು ಹಲವಾರು ಮಹತ್ವ ಗುಣಗಳನ್ನು ಹೊಂದಬೇಕಾಗುತ್ತದೆ. ಕೆಲವೊಂದು ಗುರುತಿಸಬಹುದು, ಒಳ್ಳೆಯ ನಡತೆ, ಸುಶೀಲ ಸುಸಂಪನ್ನನಾಗಿರಬೇಕು, ಒಳ್ಳೆಯ ಜಾತಕ ಹೊಂದಿರಬೇಕು. ಅಲ್ಲದೆ ಅಯ್ಯಾಚಾರ ದೀಕ್ಷಾ ಪಡೆದಿರಬೇಕು, ಸರ್ವರಲ್ಲಿ ಸಮನಾಗಿ ಬಾಳು ಮನೋಭಾವ ಇರಬೇಕು. ಎಲ್ಲಕ್ಕಿಂತಲೂ ತಿದ್ದಿ ತಿಳಿ ಹೇಳಿ ಶಿಷ್ಯರಕ್ಕೆ ಸನ್ನಮಾರ್ಗಕ್ಕೆ ತರುವ ಫಲ ಹೊಂದಿರಬೇಕು. ಎಲ್ಲಾ ವಿದ್ಯಾಭ್ಯಾಸವನ್ನು ಮಾಡಿರಬೇಕು. ಅವುಗಳಲ್ಲಿ ಪಳಗಿರಬೇಕು. ಹೀಗೆ ಅವರ ಗುಣಗಳನ್ನು

ತಿಳಿಸುತ್ತಾರೆ. ಏಕೆಂದರೆ ರಾಜನಾದವನು ತನ ರಾಜ್ಯ ರಕ್ಷಣೆಗಾಗಿ ಬುದ್ಧಿವುಳ್ಳ ಮಂತ್ರಿಯನ್ನು ನೇಮಿಸಿಕೊಂಡು ಅವನಿಗೆ ಸರ್ವಾಧಿಕಾರವನ್ನು ಕೊಡುತ್ತಾನೆ. ಹಾಗೆಯೇ ಪಂಚಾಚಾರ್ಯಗಳು ಪಟ್ಟಚಾರಾಧಿಕಾರಿಗಳಿಗೆ ವೀರಶೈವಧರ್ಮರಾಜ್ಯದ ಆಡಳಿತಾಧಿಕಾರಗಳನ್ನು ವಹಿಸಿಕೊಟ್ಟಿರುತ್ತಾರೆ. ಹೀಗಾಗಿ ಸರ್ವವಿಧದಲ್ಲಿ ಮಠದ ಜವಾಬ್ದಾರಿಯಿಂದ ಕರ್ತವ್ಯವನ್ನು ನಿರ್ವಹಿಸಬೇಕಾಗುತ್ತದೆ. ಧರ್ಮದ ಖಡ್ಗ ಯಾವಾಗಲೂ ಹಸ್ತದಲ್ಲಿ ಹಿಡಿದು ಕಾಮಕ್ರೋದಾದಿ ಅಂತಶತ್ರುಗಳನ್ನು ವಿಧಿಸಿ, ಮಾಯಾ ಜಗತ್ತನ್ನು ಗೆದ್ದು, ಶಿಷ್ಯರಿಗೆ ಧರ್ಮದ ಸಂಪತ್ತನ್ನು ಉಣಬಡಿಸಬೇಕು. ಹೀಗೆ ಮಾಡದೆ ಇದ್ದಾಗ ತಮ್ಮಗೆ ತಾವೇ ಶತ್ರುವಾಗಿ ಪರಿಣಮಿಸ ಬೇಕಾಗುತ್ತದೆ. ಆದರಿಂದ ಶುದ್ಧಮನಸ್ಸಿನಿಂದ ಶಿಷ್ಯೋದ್ಧಾರ ಕಾರ್ಯದಲ್ಲಿ ತೊಡಬೇಕು. ಏಕೆಂದರೆ ಜಂಗಮಗುರು ಅಜ್ಞಾನವೆಂಬ ಕೊಳೆಯಿಂದ ಮಲಿನವಾಗಿ ಹೋಗಿರುವ ಶಿಷ್ಯರ ಚಿತ್ತವೆಂಬ ಕನ್ನಡಿಯನ್ನು ಯಾರು ಶಿವಜ್ಞಾನವೆಂಬ ಬೂದಿಯಿಂದ ಬೆಳಗಿ ಸ್ವಚ್ಛವಾಗಿಸುವರೋ ಗುರೂತ್ತಮರೆಂದು ಶ್ರೀ ರೇಣುಕಾ ಭಗವತ್ಪಾದರೂ ಸಿದ್ಧಾಂತ ಶಿಖಾಮಣಿಯಲ್ಲಿ ಗುರುಲಕ್ಷಣವನ್ನು ಉಪದೇಶ ಮಾಡಿರುವುದುಂಟು.

ಜಂಗಮ ಮಠಾಧಿಕಾರಿಯ ಇನ್ನೊಂದು ಮಾತು ಹೇಳುವುದಾದರೆ (ಶ್ರೀ ವೀರಮಾಹೇಶ್ವರ ಚಂದಿಕೆಯ ಪು. ೨೨ರಲ್ಲಿ ನೋಡಬಹುದು).

"ಗುರುದೇವ ಪರಂ ತತ್ತ್ವಂ ಪ್ರಕಾಶಯತಿ ದೇಹಿನಾಂ !
ಕೋವಾ ಸೂರ್ಯಂವಿನಾ ಲೋಕೇ ತಮಸ್ಯೋ ವಿನಿವರ್ತಕ:
ಅಂತರೇಣ ಗುರುಸಿದ್ಧಂ ಕಥಂ ಸಂಸಾರ ನಿಷ್ಕೃತಿ : !
ನಿದಾನಜ್ಞಂ ವಿನಾವೈದ್ಯಂ ಕೋವಾ ರೋಗೋ ನಿವರ್ತತೇ !!"

ಅಂದರೆ ಪ್ರಪಂಚದಲ್ಲಿ ಕತ್ತಲೆಯನ್ನು ನಾಶಗೊಳಿಸುವ ಶಕ್ತಿಯು ಸೂರ್ಯನ ಹೊರತು ಇನ್ನಾರಿಗೂ ಇರುವುದಿಲ್ಲ. ಅದರಂತೆ ಶಿಷ್ಯರ ಅಜ್ಞಾನಾಂಧಕಾರವನ್ನು ಪರಿಹರಿಸುವ ಶಕ್ತಿಯು ಗುರುವಿಗಲ್ಲದೆ ಮತ್ತೊಬ್ಬನಿಗಿಲ್ಲ. ಹಾಗೆಯೇ ವೈದ್ಯರು ರೋಗಿಗೆ ಚಿಕಿತ್ಸೆಯನ್ನು ಮಾಡಿದ ನಂತರವೇ ಆ ರೋಗವು ಪರಿಹಾರ ಹೊಂದುವಂತೆ ಗುರುಗಳ ಅಧಿಕಾರ ಶಿಷ್ಯನ ಮೇಲಿರಬೇಕೆಂದು ಹೇಳಲಾಗಿ ಅದಕ್ಕೆ ಸತ್ಯಶುದ್ಧನಾಗಿ ಚಿಕಿತ್ಸಿಸಬೇಕಾಗಿರುತ್ತದೆ. ಇಂತಹ ಗುಣಗಳನ್ನು ಹೊಂದಿದ ಜಂಗಮನಿಗೆ ಕರೆದು ತಂದು ಸಮಾಜದ ಭಕ್ತರೊಡನೆ ಸಮಾಲೋಚಿಸಿ ಇದ್ದ ಮಠಕ್ಕೆ ಗುರು ತನ್ನ ಮರಿ ಜಂಗಮನನ್ನು ಮಠ ತೆಗೆದುಕೊಳ್ಳುತ್ತಾರೆ. ಮುಂದೆ ಮರಿ ಜಂಗಮ ತನ್ನ ಗುರುವಿನಂತೆ ಸಮಾಜದಲ್ಲಿ ಕಾರ್ಯ ಮಾಡಲು ಪ್ರಾರಂಭಿಸುತ್ತಾರೆ. ಒಂದು

ವೇಳೆ ಮಠಕ್ಕೆ ಮರಿ ಜಂಗಮ ಮಾಡದೆ ಹಿರಿಯ ಜಂಗಮ ತಿರಿಕೊಂಡಿದರೆ ಅಥವಾ ಲಿಂಗೈಕ್ಯಯಾದರೆ ಸಮಾಜದ ಜನಗಳು ಸೇರಿಕೊಂಡು ಬುದ್ಧಿಶಾಲಿಯ ಜಂಗಮ ವ್ಯಕ್ತಿಯನ್ನು ಕರೆತಂದು ಆ ಮಠಕ್ಕೆ ಮರಿಗುರು ಎಂದು ಆಯ್ಕೆ ಮಾಡುತ್ತಾರೆ. ಆಯ್ಕೆಯಾಗುವ ಜಂಗಮ ಚಿಕ್ಕ ವಯಸ್ಸಿನಲ್ಲಿ ಇದ್ದರೆ ಅವರಿಗೆ ಹೆಚ್ಚಿನ ವಿದ್ಯೆಕ್ಕಾಗಿ ಕಾಶಿಗೋ, ಶಿವಯೋಗ ಮಂದಿರಕ್ಕೊ ಅಥವಾ ಧಾರ್ಮಿಕ ಕ್ಷೇತ್ರಕ್ಕೆ ಕಳುಹಿಸಿಕೊಡುತ್ತಾರೆ. ಅಲ್ಲಿಯವರೆಗೆ ಇನ್ನೊಬ್ಬ ಜಂಗಮನನ್ನು ನೇಮಿಸಿ ಮಠದ ಜವಾಬ್ದಾರಿಯನ್ನು ಕೊಡುತ್ತಾರೆ. ತದನಂತರ ಮರಿಜಂಗಮ ಹಿಂದಕ್ಕೆ ಬಂದನಂತರ ಮಠದ ಎಲ್ಲಾ ವಿಧಿಕ್ರಿಯೆಗಳು ಮಾಡಲು ಮತ್ತು ಮಠದ ಸಕಲ ಜವಾಬ್ದಾರಿಯನ್ನು ತೆಗೆದುಕೊಳ್ಳಲು ಸರ್ವ ಭಕ್ತಗುಣವು ಕೇಳಿಕೊಳ್ಳುತ್ತದೆ. ಆಗ ಒಂದು ದಿನ ಉತ್ತರಾಧಿಕಾರ ಮಹೋತ್ಸವ ಕಾರ್ಯಕ್ರಮ ಜರುಗುತ್ತದೆ. ಒಂದು ತಾರಿಖನ್ನು ನಿಗದಿಪಡಿಸಿ ಹೆಚ್ಚಾಗಿ ಭಕ್ತರು ಸೇರಲಿ ಎಂದು ಎಲ್ಲಾ ಕಡೆ ಕರಪತ್ರವನ್ನು ಹಂಚುತ್ತಾರೆ. ಜೊತೆಗೆ ಪತ್ರಿಕೆಗಳಲ್ಲಿ ಶುದ್ಧಿ ಪ್ರಸಾರಪಡಿಸುತ್ತಾರೆ. ಅಧಿಕಾರ ಸ್ವೀಕಾರ ಮಾಡುವ ದಿವಸ ಒಳ್ಳೆಯ ಮೂಹರ್ತ, ತಿಥಿ ವಾರ ನಕ್ಷತ್ರ ಮತ್ತು ಬ್ರಹ್ಮೀ ಮೂಹರ್ತದಲ್ಲಿ ಉತ್ತರಾಧಿಕಾರ ಮಹೋತ್ಸವ ಆರಂಭವಾಗುತ್ತದೆ. ಅಂದಿನ ದಿನ ಮರಿ ಜಂಗಮನನ್ನು ಕ್ಷೌರಿಕನಿಂದ ತಲೆ ಬೋಳಿಸಿ ಪಂಚಾಮೃತದಿಂದ ಸ್ನಾನವನ್ನು ಮಾಡಿಸುತ್ತಾರೆ. ಅಷ್ಟರಲ್ಲಿ ಪ್ರಸ್ತುತ ಪಟ್ಟಾಧ್ಯಾಕ್ಷರು ಪಂಚಕಳಸವನ್ನು ತಯಾರಿಸಿ ಕುಳಿತುಕೊಳ್ಳುತ್ತಾರೆ. ಒಂದು ವೇಳೆ ಪಟ್ಟಾಧ್ಯಕ್ಷರು ತೀರಿಕೊಂಡಿದ್ದರೆ ಅಥವಾ ಲಿಂಗೈಕ್ಯರಾದರೆ ಬೇರೆ ಮಠದ ಗುರುಗಳನ್ನು ಆಮಂತ್ರಿಸಿ ಕಾರ್ಯ ಮುಗಿಸುತ್ತಾರೆ. ಆಗ ಗುರುಗಳು ಮಂತ್ರ ಹೇಳುವುದರೊಂದಿಗೆ ವಿಧಿಗೊಳಪಡುವ ಶಿಷ್ಯನ ಮಸ್ತಕಾಭಿಷೇಕ ಮಾಡಿ ಪಾದೋದಕ ಪ್ರಸಾದ ಕರುಣಿಸುತ್ತಾರೆ. ನಂತರ ನಿತ್ಯ ಪ್ರತಿಯಾಗಿ ಗುರುವಿಗೆ ಪಾದೋದಕ ಪ್ರಸಾದ ನೀಡುತ್ತಾರೆ. ಅಂದರೆ ಇಲ್ಲಿ ಗುರು - ಶಿಷ್ಯರ ಸಂಬಂಧ ಕಲ್ಪಿಸದೆ ಅದು ಇಬ್ಬರು ಸರಿಸಮಾನರು ಎಂಬ ಸಂಕೇತವಾಗಿ ಪಾದೋದಕ ಪ್ರಸಾದ ಬದಲಾಯಿಸಿಕೊಳ್ಳುತ್ತಾರೆ. ಹೀಗೆ ಗುರು - ಶಿಷ್ಯರ ಸಂಬಂಧ ಹೋಗಿ ಇಬ್ಬರು ಸಮಾನರು. ಇದಕ್ಕೆ ಅನೇಕ ಶರಣರ ವಚನಗಳು ಉದಾಹರಿಸಬಹುದು.

"ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯಾ!
ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದನಯ್ಯಾ!
ದ್ವಾಪರ ಯುಗದಲ್ಲಿ ಶ್ರೀಗುರು, ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದ ವೆಂದನೆಯ್ಯಾ!
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದ ವೆಂದನೆಯ್ಯಾ!
ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು."

(ಡಾ. ಎಚ್.ತಿಪ್ಪೇರುದ್ರಸ್ವಾಮಿ : ೧೯೬೩ : ೧೬೨)

ಈ ವಚನವನ್ನು ನೋಡಿದಂತೆಲ್ಲಾ ಗುರು ಶಿಷ್ಯರ ಸಂಬಂಧ ಮತ್ತು ವಿದ್ಯಾಭ್ಯಾಸದಲ್ಲಿ ಗುರು ಶಿಷ್ಯರ ಭೇಧವನ್ನು ಹೋಗಲಾಡಿಸಿ ಇಬ್ಬರೂ ಸಮಾನರು ಎಂದು ತೋರಿಸುತ್ತದೆ. ಹೇಗೆ ಎಂದರೆ ಕೃತಯುಗದಲ್ಲಿ ಅಂದರೆ ಪ್ರಾರಂಭದ ಹಂತದಲ್ಲಿ ಗುರು - ಶಿಷ್ಯರ ಸಂಭಂಧ ದೆಸೆಯಾಗಿರುತ್ತದೆ. ಶಿಷ್ಯ ಗುರುವನ್ನು ಆಶ್ರಯಿಸುವ ಕಾಲವಾಗಿರುತ್ತದೆ. ಆಗ ಗುರುವಿನಿಂದ ಸಂಪೂರ್ಣ ದೂರ ಮಾತ್ರವಲ್ಲ. ಗುರುವಿನ ದಾಸಾನುದಾಸ ಸ್ವಲ್ಪ ಸ್ವಲ್ಪ ಗುರುವಿನ ಪರಿಪಾಠವನ್ನು ಕಲೆಯುತ್ತಾನೆ. ತ್ರೇತಾಯುಗದಲ್ಲಿ ಇಂದ್ರಿಯಗಳನ್ನೆ ನಿವೃತ್ತಿ ಮಾಡಿ ಲಿಂಗಭಾವ ಭರಿತನಾಗಿರುತ್ತಾನೆ. ಈ ಸಮಯದಲ್ಲಿ ಗುರು ಶಿಷ್ಯಂಗೆ ಹೊಡೆಯುವುದು ಬೇಕಾಗಿಲ್ಲ. ಕೇವಲ ಬಯ್ದರೆ ಸಾಕು ಸರಿಹೋಗುತ್ತಾನೆ. ದ್ವಾಪರಯುಗದಲ್ಲಿ ಸ್ವಲ್ಪ ಮಟ್ಟಿಗೆ ಗುರು ಸ್ವರೂಪವನ್ನು ಶಿಷ್ಯ ಪಡೆಯುತ್ತಾನೆ. ಈಗ ಇವನಿಗೆ ಬಯ್ಯುವುದು ಬೇಕಿಲ್ಲ. ಗದರಿಸಿದರೆ ಸಾಕು ಎಚ್ಚರವಾಗುತ್ತಾನೆ. ಮುಂದಿನ ಹಂತವೇ ಕಲಿಯುಗ. ಇದು ಕೊನೆಯ ಹಂತ ಇಲ್ಲಿ ಸಂಪೂರ್ಣವಾಗಿ ಗುರುವಿನಿಂದ ಎಲ್ಲಾ ವಿದ್ಯಾ ಕಲಿಯುತ್ತಾನೆ. ಗುರುವಿನ ಸಮನಾಗುತ್ತಾನೆ. ಆಗ ಶಿಷ್ಯನ ಆ ನಿಲುವಿಗೆ ಗುರುವು ವಂದಿಸುತ್ತಾನೆ. ಆಗ ಗುರು - ಶಿಷ್ಯರ ಭೇಧ ಭಾವನೆ ತೊಲಗಿ ಒಂದೇ ಭಾವನೆ ನಿಲುತ್ತದೆ. ಗುರುವಿನ ಎಲ್ಲಾ ಸಂಸ್ಕಾರಗಳು ಶಿಷ್ಯಗೆ ನೀಡಿದರೆ ಅವನು ಗುರುವಿನ ಸಮನಾಗುತ್ತಾನೆ ಎಂಬ ಅಲ್ಲಮ ಪ್ರಭುದೇವರ ವಚನ ಅರ್ಥವನ್ನು ಸೂಚಿಸುತ್ತದೆ. ಇಂತಹ ಅನೇಕ ವಚನಗಳು ನಾವು ಗುರು - ಶಿಷ್ಯನ ಸಂಬಂಧ ಕುರಿತು ನೋಡಬಹುದಾಗಿದೆ.

ಶಿಷ್ಯಗೆ ಕಾವಿ ಅಂಗಿ ಧರಿಸುತ್ತಾರೆ. ಕೈಯಲ್ಲಿ ಜೋಳಿಗೆ, ಕಮಂಡಲ, ಬೆತ್ತ (ದಂಡಕೋಲ) ಹಿಡಿದು ಅಲ್ಲಿ ಬಂದ ಜನರಲ್ಲಿ ಗುರು ಭೀಕ್ಷೆ ಬೇಡಲು ಆದೇಶವನ್ನು ಮಾಡುತ್ತಾನೆ. ಆಗ ಶಿಷ್ಯ ಭೀಕ್ಷೆಯನ್ನು ಬೇಡಿದ ತಂದ ಜೋಳಿಗೆಯನ್ನು ಗುರುವಿಗೆ ಒಪ್ಪಿಸುತ್ತಾನೆ. ಆಗ ಗುರು ಶಿಷ್ಯನನ್ನು ಕುರಿತು ಭಕ್ತರಿಂದ ಬಂದ ಭೀಕ್ಷೆಯ ಹಣವನ್ನು ಪ್ರಸಾದ ಅಥವಾ ಪ್ರಸಾದಕ್ಕೆ ಬೇಕಾದಷ್ಟು ಇಟ್ಟಿಕೊಂಡು ಉಳಿದುದೆಲ್ಲಾ ಭಕ್ತರ ಕಲ್ಯಾಣಕ್ಕಾಗಿ ಸಮಾಜದ ಸೇವೆಗೆ ಉಪಯೋಗಿಸು ಎಂದು ಹೇಳುತ್ತಾರೆ. ಹೀಗೆ ಶಿಷ್ಯನಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಪ್ರಜ್ಞೆ ಮೂಡಿಸಿ ಭೀಕ್ಷೆಯ ಮಹತ್ವದ ಅರಿವು ಮಾಡಿ ಗುರು ಶಿಷ್ಯಗೆ ಜೋಳಿಗೆ ಕೂಡುತ್ತಾನೆ. ಗುರು ಮೊದಲು ಪೀಠಾರೋಹಣ ಮಾಡಿದ ಬಳಿಕ ಶಿಷ್ಯ ತನ್ನ ಗುರುವಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡುವಾಗ ಗುರು ಶಿಷ್ಯನಿಗೆ ಕೈ ಹಿಡಿದು ಮೇಲಕ್ಕೆ ಎತ್ತಿಕೊಳ್ಳುವುನು. ಅದೇ ರೀತಿ ಗುರು ಶಿಷ್ಯನಿಗೆ ಮಾಡುತ್ತಾನೆ. ನಂತರ ಇಬ್ಬರೂ ಹೂ ಮಾಲೆಗಳು ಪರಸ್ಪರ

ಬದಲಾಯಿಸಿಕೊಳ್ಳುತ್ತಾರೆ. ಇಲ್ಲಿಯೇ ಇಬ್ಬರೂ ಸರಿಸುಮಾರು ಎನ್ನುವುದು ತೋರಿಸಿಕೊಡುತ್ತದೆ. ಇದ್ದ ಪೀಠದ ಕಿರೀಟವನ್ನು ಶಿಷ್ಯನ ಶಿರಕ್ಕೆ ಇಡಲಾಗುತ್ತದೆ. ನಂತರ ಭಕ್ತರಿಂದ ಜಯಘೋಷಗಳು ಆರಂಭವಾಗುತ್ತವೆ. ಪಟ್ಟಾಧಿಕಾರವನ್ನು ಸ್ವೀಕರಿಸಿದ ಜಂಗಮರಿಂದ ಭಕ್ತರಿಗೆ ಸಂದೇಶ ನೀಡುತ್ತಾರೆ. ಆ ಮೇಲೆ ಬಂದ ಭಕ್ತರಿಗೆ ಪ್ರಸಾದ ವ್ಯವಸ್ಥೆ ಮಾಡಲಾಗುತ್ತದೆ. ಈ ರೀತಿ ಇಂದಿಗೂ ಜಿಲ್ಲೆಯಲ್ಲಿ ಮಠಗಳಲ್ಲಿ ಪಟ್ಟಾಧಿಕಾರ ಸಮಯದಲ್ಲಿ ಹೀಗೆ ನೇರವೇರಿಸುವುದುಂಟು.

**೭.೧೦. ಹೆಣ್ಣು ಋತಿಮತಿಯಾದಾಗ ನಡೆಯುವ ವಿಧಿಗಳು :** ಹುಡುಗಿ ಪ್ರೌಢ ವ್ಯವಸ್ಥೆಗೆ ಬಂದಂತೆ ಅಥವಾ ವಯಮಾನಕ್ಕೆ ಬಂದಂತೆ ಹುಡುಗಿಯರು ದೊಡ್ಡವರಾಗುವುದು (ಮೈ ನೆರೆಯುವುದು) ಪ್ರಕೃತಿಯ ನಿಯಮವಾಗಿದೆ. ಇದು ಹತ್ತು ವರ್ಷದಿಂದ ಹನ್ನೆರಡು ವರ್ಷದ ವಯಸ್ಸಿನೊಳಗೆ ನಡೆಯುವಂಥದ್ದು. ಈ ವಯಸ್ಸನ್ನು ಮೀರಿದರೆ ಹುಡುಗಿಯ ಆರೋಗ್ಯ ಸರಿಯಿಲ್ಲ ಇವಳು, ತುಂಬ ಖಟ್ (ಗಟ್ಟಿ) ಇದ್ದಾಳೆ ಎನ್ನುವರು. ಕೊನೆಗೆ ದವಾಖಾನೆಗೆ ಕರೆದುಕೊಂಡು ಹೋಗುವುದುಂಟು. ಹೆಣ್ಣು ಮೈ ನೆರೆಯುವುದಕ್ಕೆ ಸಂವಾದಿ ಯಾಗಿ ಅನೇಕ ಪ್ರಕಾರವಾಗಿ ಕರೆಯುತ್ತಾರೆ. ಪುಷ್ಪವತಿ, ಹಿರ್‍ಯಾಕಿ, ದೊಡ್ಡಾಕಿ, ರಸಸ್ವತಿ ಮತ್ತು ಋತುಮತಿ ಎಂದು ಕರೆಯುತ್ತಾರೆ. ಇವರಲ್ಲಿ ಯಾವುದೇ ಮೈಲಿಗೆ ಆಚರಿಸುವುದಿಲ್ಲ. ಹೆಣ್ಣು ಮೈ ನೆರೆದ ತಕ್ಷಣವೇ ಹಿರಿಯರು ಅವಳನ್ನು ಒಂದು ಸ್ಥಳದಲ್ಲಿ ಕುಳ್ಳಿರಿಸುತ್ತಾರೆ. ಅಳುತ್ತಿರುವ ಹುಡುಗಿಗೆ ತಾಯಿಯಾಗಲೀ ಅಥವಾ ಹಿರಿಯ ಹೆಣ್ಣು ಮಕ್ಕಳು ಹುಡುಗಿಗೆ ಸಮಾಧಾನದಿಂದ ತಿಳಿ ಹೇಳುತ್ತಾರೆ. ಈ ವಯಸ್ಸಿನಲ್ಲೇ ಹುಡುಗರಿಗೂ ವೀರ್ಯಸ್ಖಲನವಾದರೂ ಹೆಣ್ಣಿನಂತೆ ಗಂಡಿಗೆ ಯಾವ ವಿಧಿಗಳು ಇಲ್ಲ. ಆ ಮೇಲೆ ತಮ್ಮ ಓಣಿಯ ಸುತ್ತ ಇರುವ ಹೆಣ್ಣು ಮಕ್ಕಳಿಗೆ ಕರೆದುಕೊಂಡು ಬಂದು ಹಾಡುತ್ತಾ ಹುಡುಗಿಗೆ ಅರಿಷಿಣ, ತುಪ್ಪ ಹಾಲು ಇತ್ಯಾದಿ ಹಾಕಿ ಮುತ್ತೈದೆಯರು ಸ್ನಾನ ಮಾಡಿಸುತ್ತಾರೆ. ಹೀಗೇನೆ ಐದು ದಿವಸ ಮುತ್ತೈದೆಯರು ಬಂದು ನೀರು ಎರೆದು (ಸ್ನಾನ ಮಾಡಿಸಿ) ಹೋಗುವುದುಂಟು. ಹೀಗೆ ಮಾಡುವುದರಿಂದ ಸಂಪೂರ್ಣ ವಾಗಿ ಹುಡುಗಿ ಶುದ್ಧಳಾಗಿ ಯಾವುದೇ ಅನಿಷ್ಟ ಅಂಟಿಕೊಳ್ಳುವುದಿಲ್ಲವೆಂದು ತಿಳಿದು ಕೊಳ್ಳುತ್ತಾರೆ. ಮುತ್ತೈದೆಯರಿಗೆ ಕೊನೆಯ ದಿನಕ್ಕೆ ಉಡುಗರೆ ನೀಡಿ ಗೌರವಿಸುತ್ತಾರೆ.

ಋತುಮತಿಯಾದ ದಿವಸದಂದು ಮಠದಯ್ಯಾ ಮತ್ತು ಮಠಪತಿ ಜಂಗಮರನ್ನು ಕರೆ ತಂದು ಲಿಂಗವನ್ನು ಮೈಲಿಗೆಯಾಗಿದೆ. ಅದನ್ನು ಶುದ್ಧಗೊಳಿಸಬೇಕೆಂದು ತಿಳಿದು ಲಿಂಗ ತೊಳೆಯುವುದು ಎಂದು ಕರೆಯುತ್ತಾರೆ. ಜಂಗಮರ ಮುಂದೆ ಆಕಳ ಸಗಣಿಯಿಂದ ಸ್ವಲ್ಪ

ಜಾಗವನ್ನು ಸಾರಿಸಿ ಅದರ ಮೇಲೆ ರಂಗೋಲಿಯನ್ನು ಬರೆದು ಅಕ್ಕಿ ಅಥವಾ ಜೋಳವನ್ನು ಹರಡಿ ಅದರ ಮೇಲೆ ಒಂದು ತಾಟು ಅಥವಾ ಗಂಗಳನ್ನು ಇಟ್ಟು ಆಕಳ ಮೂತ್ರ, ಮಠದಯ್ಯಾನ ಪಾದೋದಕ, ಹಾಲು, ಸಕ್ಕರೆ, ತುಪ್ಪ ಇವುಗಳಿಂದ ಲಿಂಗವನ್ನು ಐದು ಬಾರಿ ಹುಡುಗಿ ಕೈಯಿಂದ ತೊಳೆಸುತ್ತಾರೆ. ವಿಭೂತಿ, ಹೂ, ಬಿಲ್ವ ಪತ್ರಿಗಳಿಂದ ಲಿಂಗಕ್ಕೆ ಪೂಜಾ ಸಲ್ಲಿಸುತ್ತಾರೆ. ತದನಂತರ ಮಠದಯ್ಯಾನವರ ಪಾದತೀರ್ಥವನ್ನು ತೆಗೆದುಕೊಳ್ಳಲು ಹುಡುಗಿಗೆ ಹೇಳಲಾಗುತ್ತದೆ. ಮಠದಯ್ಯಾನಿಗೆ ಕುಳಿತುಕೊಳ್ಳಲು ಕಂಬಳಿ ಹಾಸಲಾಗಿರುತ್ತದೆ. ಅವನ ಪಾದಗಳು ಮುಂದಕ್ಕೆ ಮಾಡಿ ಕುಳಿತುಕೊಳ್ಳಲು, ಅವರ ಎರಡು ಪಾದಗಳು ತಾಟಿನಲ್ಲಿ ತೊಳೆದು ಆ ಪಾದೋದಕವನ್ನು ಮನೆಯ ಎಲ್ಲಾ ಭಾಗಗಳಲ್ಲಿ ಚೆಲ್ಲುತ್ತಾ ಸಾಗುತ್ತಾರೆ. ಜಂಗಮನ ಪಾದೋದಕದಿಂದ ಮನೆಯು ಶುದ್ಧವಾಗುತ್ತದೆಂದು ನಂಬುತ್ತಾರೆ. ಅಷ್ಟೇ ಅಲ್ಲ ಮನದಲ್ಲಿ ಏನೇ ಅಪನಂಬಿಕೆಗಳು ಬಂದರೂ, ಮೇಲಿನ ಪಾದೋದಕದಿಂದ ಹೊರಟು ಹೋಗುತ್ತದೆಂದು ಸಮಾಧಾನಗೊಳ್ಳುತ್ತಾರೆ. ಮನೆಯ ತುಂಬ ಪಾದೋದಕವನ್ನು ಚೆಲ್ಲಿದ ನಂತರ ಮತ್ತೆ ಬೇರೆ ತಂಬಿಗೆಯೊಳಗೆ ನೀರನ್ನು ತುಂಬಿಕೊಂಡು ಮೊದಲಿನ ತಾಟಿನೊಳಗೆ ಇನ್ನೊಂದು ತಾಟನ್ನು ಇಟ್ಟು ಆ ತಾಟಿನೊಳಗೆ ಜಂಗಮರ ಎರಡು ಅರ್ಧ ಪಾದಗಳು ಮಾತ್ರ ಇಡುತ್ತಾರೆ. ವಿಭೂತಿಯಿಂದ ಪಾದಕ್ಕೆ, ಲಿಂಗಕ್ಕೆ, ಕೈಯಿಗೆ ಮತ್ತು ತಲೆಗೆ ಪೂಜಿಸುತ್ತಾರೆ.

ಮೈನೆರೆದ ಹುಡುಗಿಯ ಸೀರೆಯಲ್ಲಿ ಹೊಲಿ ಹೋಗಿ ಕೊಳೆಯಾಗುವುದರಿಂದ ಅದನ್ನು ಅಗಸರ ಹೆಣ್ಣುಮಗಳಿಗೆ ಕೊಡುತ್ತಾರೆ. ಹುಡುಗಿಗೆ ಐದು ದಿವಸಗಳ ವರೆಗೆ ಹಳೆಯ ಸೀರೆ ಕೊಟ್ಟು ಒಂದೇ ಸ್ಥಳದಲ್ಲಿ ಅವಳನ್ನು ಕೂಡಲು ಹೇಳುತ್ತಾರೆ. ಏಕೆಂದರೆ ಐದು ದಿವಸ ಹೊಲಿ ಹೋಗುವಿಕೆ ಇರುವುದರಿಂದ ಹೀಗೆ ಮಾಡುತ್ತಾರೆ. ಇದರಿಂದಾಗಿ ಅವಳ ಕೋಣೆಯಲ್ಲಿ ಯಾರಿಗೂ ಹೋಗಬಾರದಂತೆ ನೋಡಿಕೊಳ್ಳುತ್ತಾರೆ. ಕೆಲವು ಹುಡುಗಿಯರ, ಸಣ್ಣ ಸಣ್ಣ ಹುಡುಗರು ಅವಳ ಮೇಲೆ ಬಿದ್ದು ಅವಳನ್ನು ಎಳೆದುಕೊಂಡು ಏಳು ಹೊರಗೆ ಹೋಗಬೇಕಾಗಿವೆ ಎಂದು ತೊಂದರೆ ಕೊಡಬಹುದೆಂದು ಹಿರಿಯರು ಅವಳಿಗೆ ಮುಟ್ಟಿಸಿಕೊಳ್ಳಬಾರದೆಂದು ಹೇಳುತ್ತಾರೆ. ಹೊರೆತು ಯಾವುದೇ ಮುಟ್ಟಿ ತಟ್ಟಿ ಇರುವುದಿಲ್ಲ. ಇದರಿಂದ ಅವಳಿಗೆ ಐದು ದಿವಸ ಇದ್ದ ಅಲ್ಲಿಯೇ ಊಟೋಪಚಾರ ಮಾಡುತ್ತಾರೆ. ಮೈನೆರೆದ ದಿವಸದಿಂದ ಅವಳಿಗೆ ಅಲಂಕಾರವನ್ನೆ ಮಾಡಿ ಓಣಿಯ ಮುತ್ತೈದೆಯರಿಂದ ಕೆಳಗಿನ ಹಾಡಿನ ಮೂಲಕ ಆರತಿ ಮಾಡಿಸುತ್ತಾರೆ.

ಶ್ರೀ ಪಂಚಾರುತಿ ಬೆಳಗುವೇ ಪ್ರಭುವೇ
ಆ ಪರ ಬ್ರಹ್ಮನ ವಯಬು ವಯಭುವೇ!
ಧರೆಯೋಳು ವಚನ ನಮ ಕೂಡಲರೇಶನ
ಪರಶಿವ ಸಿದ್ಧಲಿಂಗ ಅನುಭವಿಸುವೇನೋ
ಶ್ರೀ ಪಂಚಾರುತಿ ಬೆಳಗುವೆ ಪ್ರಭುವೇ
ಆ ಪರಬ್ರಹ್ಮನ ವಯಬು ವಯಭುವೇ!
ಯತ್ತಾ ನೋಡಲು ಸಣ್ಣ ಮುತ್ತಿನ ಬಾಲಿಯಂತೇ
ಶಿವ ಕರೆಸಲು ಶಿವ ನಾಮವೂ ಸತತ
ಶ್ರೀ ಪಂಚಾರುತಿ ಬೆಳಗುವೇ
ಆ ಪರ ಬ್ರಹ್ಮನ ವಯಬು ವಯಭುವೇ!
ಧರೆಯೊಳು ಮರೆಯುವ ಗುರು ಮಾಂತೇಶನಾ
ಶ್ರೀ ಪಂಚಾರುತಿ ಬೆಳಗುವೇ ಪ್ರಭುವೇ
ಆ ಪರಬ್ರಹ್ಮನ ವಯಬು ವಯಭುವೇ!

**ಹಾಡಿದವರು :** ಶ್ರೀಮತಿ ಶರಣಮ್ಮ ಸುಕಾಸ್ಥಿ ಮತ್ತು ಶ್ರೀಮತಿ ಲಕ್ಷ್ಮಿ ಮಠಪತಿ

ಮೂರನೆ ದಿವಸಕ್ಕೆ ಸುಂದರವಾದ ಮಂಟಪವನ್ನು ರಚಿಸಿ ಅದರ ಮೇಲೆ ಕಂಬಳಿ ಹಾಸಿ ಅಲಂಕಾರ ಮಾಡಿಕೊಂಡು ಮಂಟಪದಲ್ಲಿ ಕುಳ್ಳಿರಿಸಿ ಹಾಡುತ್ತಾರೆ. ಇಂದಿನ ದಿನಮಾನಗಳಲ್ಲಿ ಕುರ್ಚಿಯ ಮೇಲೆ ಕುಡಿಸುವುದುಂಟು. ಪ್ರತಿ ದಿನ ರಾತ್ರಿ ಹತ್ತು ಗಂಟೆಗೆ ಓಣಿಯ ಹೆಣ್ಣು ಮಕ್ಕಳು ಹಾಡಿ ಆರತಿಯನ್ನು ಮಾಡುತ್ತಾರೆ. ಅವರವರ ಅನುಕೂಲಕ್ಕೆ ತಕ್ಕಂತೆ ಐದು, ಒಂಭತ್ತು, ಹನ್ನೊಂದು, ಹದಿನಾರು ಅಥವಾ ಇಪ್ಪತ್ತೊಂದು ದಿವಸ ಪ್ರತಿ ರಾತ್ರಿ ಕೂಡಿಸಿ ಹಾಡುತ್ತಾರೆ. ಇವಳ ಜೊತೆಗೆ ಬಲಬದಿಗೆ ಚಂದುಳ್ಳಿ ಗೊಂಬೆ ಇಡುತ್ತಾರೆ, ಇದು ಸಂತಾನದ ಸಂಕೇತವಾಗಿದೆನ್ನಬಹುದು.

ಋತುಮತಿಯಾದ ಹೆಣ್ಣಿಗೆ ಐದು ದಿವಸ ಹಗುರವಾದ ಆಹಾರವನ್ನು ಕೊಡುತ್ತಾರೆ. ಐದು ದಿವಸದ ನಂತರ ಪೋಷಕಾಂಶವಿರುವ ಆಹಾರವನ್ನು ಕೊಟ್ಟು ದಿನಾಲು ಎಣ್ಣೆ ಹಚ್ಚಿ ಸ್ನಾನ ಮಾಡಿಸಿ ಒಳ್ಳೆಯ ಹಣ್ಣುಗಳು ಮತ್ತು ಕೊಬ್ಬರಿಯಿಂದ ಮಾಡಿದ ಎಚ್ಚವನ್ನು (ಕೊಬ್ಬರಿ, ಸಕ್ಕರೆ, ಅಂಟು, ಎಲಕ್ಕಿ, ಬಾದಾಮ, ಖಾರಿಕ್ ಮಿಶ್ರಣದಿಂದ ತಯಾರಿಸುತ್ತಾರೆ) ತಿನ್ನಲು ಹೇಳುತ್ತಾರೆ. ಏಕೆಂದರೆ ಮೈಕೈ ತುಂಬಿಕೊಂಡು ಚೆನ್ನಾಗಿ ಕಾಣಿಸುವಂತೆಯಾಗಲಿ ಎಂದು ಈ ರೀತಿಯ ಆಹಾರವನ್ನು ತಾಯಿ ತುಂಬ ಕಾಳಜಿಯಿಂದ ಬಡಿಸುತ್ತಾಳೆ. ಅಲ್ಲದೆ ಅವಳ

ನಂಟರಿಷ್ಟರು, ಸ್ನೇಹಿತರು ಮೊದಲಾದವರು ಅನೇಕ ಪ್ರಕಾರದ ಸಿಹಿಯನ್ನು ಮಾಡಿಕೊಂಡು ತಿನ್ನಿಸುವುದುಂಟು. ಜೊತೆಗೆ ಅಡಿಗೆಯನ್ನು ತೆಗೆದುಕೊಂಡು ಬರುತ್ತಾರೆ. ಅಂದರೆ ಅಂದಿನ ದಿನಕ್ಕೆ ಬೇಕಾದ ಎಲ್ಲಾ ಆಹಾರ ಪದಾರ್ಥಗಳು ತಂದು ಅಡಿಗೆಯನ್ನು ಮಾಡಿಸಿ ಅದೇ ರಾತ್ರಿ ಹುಡುಗಿಗೆ ಸೀರೆ ಕುಪ್ಪಸ ಮಾಡಿ ಹಾಡುತ್ತಾರೆ. ಇದು ಪ್ರತಿಯೊಂದು ಹಳ್ಳಿಯ ಕಡೆ ಸರ್ವಸಾಮಾನ್ಯವಾಗಿ 'ಅಡಿಗೆ ತಂದರು' ಎಂದು ಕರೆಯುತ್ತಾರೆ. ಮತ್ತು ಹುಡುಗಿಗೆ ಎಂತಹ ಸಿಹಿ ಬೇಕು ನಿನಗೆ ಅಲ್ಲದೇ ಎನು? ಊಟಮಾಡಿ ಮೈನೆರೆದ ಹೆಣ್ಣು ಅಂತ ಹೀಯಾಳಿಸುತ್ತಾ ಹಾಡುತ್ತಾರೆ.

"ಕನ್ಯ ಮೈನೆರೆದಾಳ ಕನ್ನೆಗೆ ನೊಯ್ಯಾಲೆ
ಸಣ್ಣ ಶಾವೀಗಿ ಸಕ್ಕರಿ (ಸೋ ...........)
ಸುಬ್ಬಿ ಮೈನೆರೆದಾಳ ಸುಬ್ಬಿಗೇ ನೊಯ್ಯೊಲೆ
ಕೊಬ್ಬರಿ ಖಾರ ತಿಳಿದುಪ್ಪ (ಸೋ...........)
ಹರದಿ ಮೈನೆರೆದಾಳ ಹರಿದಿಗೇ ನೊಯ್ಯಾಲೆ
ಪರಡಿ ಪಾಯಸ ರಸ ಪಾಕ (ಸೋ..........)"

(ಗದಿಗಿಮಠ ಬಿ.ಎಸ್.:೧೯೬೯:೭೮)

ಹೀಗೆ ಅವರು ನೆಂಟರು, ಬಂಧುಮಿತ್ರರು, ಮೈನೆರೆದವಳಿಗೊಂದು ಮಾಡಿಕೊಂಡು ಬರುವ ಹಲವಾರು ಪ್ರಕಾರದ ತಿನ್ನಿಸುಗಳನ್ನು ಹಾಡಿನಲ್ಲಿ ಗುರುತಿಸಬಹುದಾಗಿದೆ. ಇಂತಹ ಅನೇಕ ಹಾಡುಗಳು ಕಾಣಬಹುದು. ಆ ಮೇಲೆ ಕೊನೆಯ ದಿವಸ ತಮಗೆ ಕೈಲಾದ ಮಟ್ಟದ ಊಟವನ್ನು ದಿನಾಲು ಹಾಡಲು ಬಂದ ಜನರಿಗೆ ಹೇಳಿಕೊಂಡು ಭೋಜನೆಯನ್ನು ಮಾಡಿಸುತ್ತಾರೆ.

ಮುಂದೆ ಋತುಮತಿಯಾದ ಹೆಣ್ಣಿನ ದೈಹಿಕ ಸ್ಥಿತಿಗತಿಗಳಲ್ಲಿ ಬದಲಾವಣೆಯಾಗುವುದರಿಂದ ಅವಳ ಮಾನಸಿಕ ಮತ್ತು ಸಾಮಾಜಿಕ ಸ್ಥಿತಿಗಳಲ್ಲಿಯೇ ಬದಲಾವಣೆಯಾಗಿರುತ್ತದೆ. ಹೋರಗೆ ಹೋಗಬೇಕಾದರೂ ತಂದೆ - ತಾಯಿಯರ ಅನುಮತಿ ಪಡೆಯಬೇಕಾಗುತ್ತದೆ. ಶಾಲೆಗೆ ಹೋಗುವ ಹುಡುಗಿ ಇದ್ದಾರೆ ಶಾಲೆ ಬಿಡಿಸುತ್ತಾರೆ. ಇದು ಹೆಚ್ಚಾಗಿ ಹಳ್ಳಿಗಳಲ್ಲಿ ನಡೆಯುವುದುಂಟು. ಏಕೆಂದರೆ ಗಂಡು ಹೆಣ್ಣುಗಳಲ್ಲಿ ಏನಾದರೂ ವ್ಯತ್ಯಾಸವಾಗಬಹುದೆಂದು ಹೆದರಿ ಶಾಲೆಗೆ ಕಳುಹಿಸುವುದಿಲ್ಲ. ಮೈನೆರೆದ ಹೆಣ್ಣು ಮದುವೆಯ ಪೂರ್ವ ಶೀಲಹರಣ ಮಾಡಿಕೊಳ್ಳುವಳೆಂಬ ಆತಂಕದಿಂದ ಆಕೆ ವಯಸ್ಸಿಗೆ ಬಂದ ತಕ್ಷಣವೇ ಮದುವೆ ಮಾಡುತ್ತಾರೆ.

ಮೈನೆರೆದ ಹೆಣ್ಣು ಗಂಡಸರ ಜೊತೆಗೆ ಮಾತಾಡುವುದಾಗಲಿ, ಹೇ, ಹೇ ಹಲ್ಲು ಕಿರಿಯುವುದಾಗಲಿ ಮಾಡುವಂತಿಲ್ಲ. ಹೀಗೇನು ಮಾಡಿದರೆ ಗಂಡು ಬೀರಿ, ಗಂಡಜಾಣೆ, ದಿಂಡು, ಮೈನೆರದು ಮಿಂಡಲಾಡಿಯಾಗಿದಿ ನಿನ್ನಗೆ ಅರುಯಿಲ್ಲ ಎಂದು ಬೈಯುತ್ತಾರೆ. ಹಳ್ಳಿಗಳಲ್ಲಿ ಈ ವಿಧಿಯು ತುಂಬ ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಅದರಿಂದ ಹೆಣ್ಣು ತುಂಬ ಸೂಕ್ಷ್ಮವಾಗಿ ವೃತ್ತಿಸಬೇಕಾಗುತ್ತದೆ. ಆದರೆ ಇಂದಿನ ನಗರವಾಸಿಗಳಲ್ಲಿ ಈ ಆಚರಣೆ ಹೆಚ್ಚಾಗಿ ಕಂಡುಬರುವುದಿಲ್ಲ. ನಗರದವರು ಮೈನೆರೆದ (ಹೆಣ್ಣು) ವಿಷಯ ಗುಟ್ಟಾಗಿಡುತ್ತಾರೆ. ಇಲ್ಲವೆ ಸಂಕ್ಷಿಪ್ತವಾಗಿ ಮುಗಿಸುತ್ತಾರೆ. ಇಲ್ಲವೆ ಮಾಡುವುದೇ ಇಲ್ಲ. ಆದರೂ ಒಂಬತ್ತು ಹದಿನಾರು ದಿವಸ ಅವಳಿಗೆ ಎಣ್ಣೆ ಸ್ನಾನ ಮಾಡಿಸಿ ಪೌಷ್ಟಿಕ ಆಹಾರ ಕೊಟ್ಟು ಯಾವುದೇ ಕೆಲಸ ಮಾಡದಂತೆ ನೋಡಿಕೊಳ್ಳುವುದು ಬಿಡುವಂತಿಲ.

ಒಟ್ಟಿನಲ್ಲಿ ಹೆಣ್ಣು ಬಾಲ್ಯ ವ್ಯವಸ್ಥೆಯಿಂದ ಪ್ರೌ ವ್ಯವಸ್ಥೆಗೆ ಸ್ವಾಗತಿಸುವ ಮತ್ತು ತಿಳಿಯಲಾಗದ ವಿಷಯಗಳನ್ನು ತಿಳಿಸಿ ಮದುವೆಯ ಒಳ್ಳೆಯ ಗೃಹಿಣಿಯಾಗಿ ಬಾಳಬೇಕೆಂಬ ಉದ್ದೇಶದಿಂದ ಈ ವಿಧಿ ಆಚರಿಸುತ್ತಾರೆ.

**೭.೧೧. ಮದುವೆ ಸಂಸ್ಕಾರಗಳು :** ನೈಸರ್ಗಿಕವಾಗಿ ಮನುಷ್ಯನು ಪೌಢ ವ್ಯವಸ್ಥೆಗೆ ಬಂದ ನಂತರ ಗಂಡು ಹೆಣ್ಣಿನಲ್ಲಿ ಬದಲಾವಣೆಗಳು ಕಂಡುಬವರುತ್ತವೆ. ಅದರಲ್ಲಿ ತಾರುಣ್ಯ ವ್ಯವಸ್ಥೆಗೆ ಬಂದೊಡನೆ ಮದುವೆ ಮಾಡಿಕೊಳ್ಳುವ ತವಕ ಹುಟ್ಟಿಕೊಳ್ಳುತ್ತದೆ. ಸಮಯಕ್ಕೆ ಅಂಕುರಿಸುವ ಕಾಮತೃಪ್ತಿಗಾಗಿಯೇ ಹಾಗೂ ಸಂತಾನಾಭಿವೃದ್ಧಿಗಾಗಿಯೂ ಮದುವೆ ಮಾಡಿಕೊಳ್ಳಬೇಕು ಎಂದು ಇಬ್ಬರ ಮನಸ್ಸಿನಲ್ಲಿ ಆಸೆ ಹುಟ್ಟಿಕೊಳ್ಳುತ್ತವೆ. ಅಂತೇಯೆ ಮದುವೆಯಾಗಬೇಕಾದರೆ ಹತ್ತು ಹಲವಾರು ವಿಧಿಗಳುಂಟು ಇವು ಎಲ್ಲಾ ಸಮುದಾಯಗಳಲ್ಲಿ ಕಂಡು ಬರುತ್ತವೆ. ಏಕೆಂದರೆ ಮದುವೆ ಸಾಮಾಜಿಕ ಕಟ್ಟಳೆಯಾಗಿದರಿಂದ ಎರಡು ಜೀವಗಳು ಒಂದು ಮಾಡುವ ಧಾರ್ಮಿಕ ನೈತಿಕ ಬಂಧನವಾಗಿದೆ. ಆದರಿಂದಲೇ ಶರಣರು ಸಂಸಾರದಲ್ಲಿದ್ದು ಸರ್ವಸ್ವವನ್ನು ಕಾಣಬೇಕು ಸಂಸಾರದಿಂದಲೇ ಜೀವನ ಮುಕ್ತಿ ಎಂದು ಹೇಳಿದ್ದಾರೆ. ಹೀಗಾಗಿ ಮದುವೆ ವ್ಯಕ್ತಿಯ ಜೀವನದ ಗರಿ ಬದಲಿಸುವದರಿಂದಾಗಿ ಮಹತ್ವ ಪಡೆದಿದೆ. ಮೊದಲೂ ಎಲ್ಲಾ ಸಮಾಜಗಳಲ್ಲಿ ಪ್ರಚಲಿತವಿದ್ದಂತೆ ಜಂಗಮರಲ್ಲೂ ಬಾಲ್ಯ ವಿವಾಹ ಜಾರಿಯಲ್ಲಿತ್ತು. ಬಾಲ್ಯವಸ್ಥೆಯಿಂದ ತಾರುಣ್ಯಾವಸ್ಥೆಗೆ ಬಂದರೆ ಮಗನ-ಮಗಳ ಮದುವೆ ಮಾಡಲು ತಂದೆ ತಾಯಿಗಳ ಹಂಬಲಿಸುತ್ತಾರೆ. ಸಂದರ್ಭಕ್ಕೆ ತಕ್ಕಂತೆ ಮದುವೆಯಾಗಲಿಲ್ಲ ಎಂದರೆ ಅಡ್ಡದ್ದಾರಿ ಹಿಡಿಯುವ ಸಂಭವ ಇರುವದೆಂದು ತಿಳಿದು ಬಾಲ್ಯವಸ್ಥೆಯಲ್ಲಿ ಹೆಚ್ಚಾಗಿ ಮದುವೆ

ನಡೆಯುತ್ತಿದ್ದವು. ಇದರಿಂದ ಗಂಡು ಹೆಣ್ಣು ವಯಸ್ಸಿಗೆ ಬರುವ ಪೂರ್ವದಲೇ ಮದುವೆಯಾಗುತ್ತಿದ್ದವು. ದೊಡ್ಡವರಾದ ಮೇಲೆ ನಾವು ಗುರುತಿಸಿದ ಹೆಣ್ಣು-ಗಂಡು ಒಪ್ಪುವುದಿಲ್ಲವೆನೋ ಜೊತೆಗೆ ಮದುವೆಯಾಗದಿದ್ದಲ್ಲಿ ಮನಸ್ಸಿಗೆ ಬಂದಂತೆ ಕೆಲಸ ಮಾಡದೆ ಇರುವವರು ಬಹಳ ಅದಕ್ಕಾಗಿ ಮದುವೆಮಾಡಿದರೆ ಜವಬ್ದಾರಿಯಿಂದ ಕೆಲಸ ಮಾಡುತ್ತಾನೆಂದು ಮದುವೆ ನೆರವೆರಿಸುತ್ತಿದ್ದರು. ಆದರೆ ಸರಕಾರದವರು ಬಾಲವಿವಾಹ ನಿಷೇಧಿಸಿದ ಮೇಲೆ ಅಥವಾ ಕಾನುನೂ ಜಾರಿಗೆ ತಂದ ಮೇಲೆ ಬಾಲವಿವಾಹಗಳು ನಿಂತುಹೋಗಿವೆ ಆದರೂ ಅಲಲ್ಲಿ ಇನ್ನೂ ಕಂಡುಬರುತ್ತವೆ.

ಇವರಲ್ಲಿ ಮದುವೆ ಮಾಡುವ ಸಲುವಾಗಿ ತಂದೆ ಸ್ನೇಹಿತರನ್ನು ಭೇಟಿ ಮಾಡಿ ತನ್ನ ಮಗನಿಗೆ-ಮಗಳಿಗೆ, ಗಂಡು-ಹೆಣ್ಣು ನೋಡಿರೆಂದು ಹೇಳುತ್ತಾರೆ ಒಂದು ಹೆಣ್ಣು-ಗಂಡು ಗೊತ್ತು ಮಾಡಿದ ಮೇಲೆ ಪರಿಚಯವಿರುವವರ ಮೂಲಕ ಹೆಣ್ಣು-ಗಂಡಿನ ಸುಂದರತೆ, ಅವಳ ಶಿಕ್ಷಣ, ನಡಾವಳಿಕೆ, ಮನೆತನದ ಅಂತಸ್ತು, ತಂದೆ ತಾಯಿಗಳ ಸ್ವಭಾವ, ಅವರ ಒಳಪಂಗಡ ಜಾತಕವಿವರ ಮುಂತಾದವುಗಳು ತಿಳಿದುಕೊಂಡು ಇಂದು ದಿವಸ ಹೆಣ್ಣಿನ ಮನೆಗೆ ಹೆಣ್ಣು ನೋಡಲು ಹೇಳಿ ಕಳುಹಿಸುತ್ತಾರೆ. ಅವರ ಬಗ್ಗಿ, ಪೀಠ, ಮಠ, ಮನೆ, ಮಠಪತಿ ಎಲ್ಲಾ ತಿಳಿದುಕೊಂಡೆ ಹೇಳಿ ಕಳುಹಿಸುತ್ತಾರೆ. ಒಂದೇ ಪೀಠ ಅಥವಾ ಒಂದೆ ಬಗ್ಗಿ ಇರುವವರಿಗೆ ಮದುವೆ ನಡೆಯುವುದಿಲ್ಲ. ಅವರು ಸೋದರರು ಎನ್ನುವ ಭಾವನೆಯಿರುತ್ತದೆ. ಪಂಚಾಚಾರ್ಯ ಜಗದ್ಗುರುಗಳು ನಿರ್ಮಿಸಿರುವ ಬಗ್ಗಿ, ಗೋತ್ರ ದಂಡಗಳು ಮತ್ತು ಜೋಳಿಗೆ ವರ್ಣ ಎಲ್ಲವು ಒಂದೊಂದು ಪೀಠದಿಂದ ಬೇರೆಬೇರೆಯಾಗಿವೆ( ಅವುಗಳನ್ನು ಅಧ್ಯಾಯ ೨, ಕೋಷ್ಟಕ ೧ರಲ್ಲಿ ನೋಡಿ).

ಈ ರೀತಿಯೊಳಗೆ ಜಂಗಮರಲ್ಲಿ ಪೀಠಗಳು ಗೋತ್ರಗಳು ಉಂಟು. ಇವುಗಳಲ್ಲಿ ಒಂದೇ ಗೋತ್ರದವರಿದ್ದರೆ ಇದು ಬಂಧುವರ್ಗ ಎನ್ನಿಸುತ್ತದೆ ಎಂದು ತಿಳಿಯುತ್ತಾರೆ. ಅವರವರ ಗೋತ್ರ ಸೂತ್ರಗಳು, ಸಿಂಹಾಸನಗಳು ಬೇರೆ-ಬೇರೆ ಆದಲ್ಲಿ ನಂಟಸ್ತನ ಮಾಡಲಿಕ್ಕೆ ಅಡ್ಡಿ ಇಲ್ಲಾವೆಂದು ತಿಳಿದು ಆ ಮನೆಗೆ ಹೆಣ್ಣು ನೋಡಲು ಹೋಗುತ್ತರೆ. ಆದರೆ ಇಂದಿನ ದಿನಮಾನಗಳಲ್ಲಿ ಮೇಲಿನ ಯಾವುದೆ ಬಗ್ಗಿ ನೋಡದೆ ಮದುವೆಗಳು ನಡೆದಿವೆ. ಕೆಲವೊಂದು ಜಂಗಮರಿಗೆ ತಮ್ಮ ಗೋತ್ರ, ಬಗ್ಗಿ ಯಾವುದು ಎಂದು ಸಹಿತ ಗೊತ್ತಿಯಿಲ್ಲ. ಹೀಗಾಗಿ ಗೋತ್ರ, ಬಗ್ಗಿ, ಪೀಠ ನೋಡಿದ ಮೇಲೆನೆ ಮದುವೆ ಮಾಡುವದು. ಎರಡನೆ ಅಧ್ಯಯನದಲ್ಲಿ ಹೇಳಿರುವಂತೆ ಜಂಗಮರಲ್ಲಿ ಒಳಪಂಗಡಗಳಿವೆ. ಮಠ(ಹಿರೇಮಠ) ಮಠಪತಿ, ಗಣಚಾರಿ,

ಗಣಕುಮಾರ ಮತ್ತು ಸುಕಾಸ್ತಿ, ಇವುಗಳಲ್ಲಿ ಹಿರೇಮಠದವರು ಕೆಳಗಿನ ಯಾವದೇ ಜಂಗಮ ಹೆಣ್ಣಿಗೆ ಮದುವೆಯಾಗುತ್ತಾರೆ, ಆದರೆ ಹೆಣ್ಣು ಕೊಡುವದಿಲ್ಲ. ಇಲ್ಲಿ ನಾವು ಶ್ರೇಷ್ಟರು ಎನ್ನುವ ಮಾತ ಇದೆ. ಆದರೆ ಇಂದು ಜಂಗಮ ಏಂದರೆ ಸಾಕು ನೆಂಟಸ್ಥಾನಗಳು ನಡೆಯುತ್ತವೆ. ಮೂಲತ: ಎಲ್ಲಾ ಜಂಗಮರು ಒಂದೆ ಆದರೆ ಅವರವರ ಅಧಿಕಾರಗಳ ಮೇಲೆ ಉಪಜಾತಿಗಳಾಗೆ ಪರಿಣಾಮಿಸಿವೆ ವಿನಹ ಬೇರೆ ಬೇರೆಯಿಲ್ಲ ಎಂಬುವುದು ಸ್ಪಷ್ಟ.

ಗಂಡು ಹೆಣ್ಣಿನ ಜನ್ಮ ನಕ್ಷತ್ರ ವಗೈರೆ, ನಾಡೀಕೂಟ ಕೂಡಿ ಬಂದ ನಂತರ ಒಂದು ದಿವಸ ಐದು ಒಂಬತ್ತು ಅಥವಾ ಹನ್ನೊಂದು ಜನರು ಹೆಣ್ಣು ನೋಡಲು ಹೋರಡುತ್ತಾರೆ. ಹೋರಡುವಾಗ ಹಣ್ಣುಗಳು, ಸಕ್ಕರೆ ಪುಡಿ, ಕುಂಕುಮ ಪುಡಿ, ಹೂವು , ಖೋಬರಿ ಒಯ್ಯುವರು. ಹೋಗುವಾಗ ಕೆಲವರು ಅಪಶಕುನಗಳಿಗೆ ಬೆಲೆ ಕಟ್ಟುತ್ತಾರೆ ಕೆಲವರು ಕಟ್ಟುವದಿಲ್ಲ. ಆದರು ಕೆಲವರು ಹೆಣ್ಣು ನೋಡುವಾಗ ಎಲ್ಲಿಗೆ ? ಎಂದು ಕೇಳುವುದು ದಾರಿಯ ಮಧ್ಯದಲ್ಲಿ ಬೆಕ್ಕು, ಹಾವು, ಖಾಲಿಕೊಡಗಳು, ವಿಧವೆಯರು, ಗುದ್ದಲಿ, ಸಲಕಿ ಹೆಡಿಗೆ ಹೊತ್ತುಕೊಂಡವರು ಎದುರಾಗುವುದು ಅಪಶಕುನವೆಂದು ಕೆಲವರು ಭಾವಿಸಿಕೊಳ್ಳುತ್ತಾರೆ. ಮತ್ತೆ ಶುಭ ಶಕುನಗಳು ಕೂಡ ಕೆಲವರು ಶುಭವೆಂದು ತಿಳಿದುಕೊಳುತ್ತಾರೆ. ಹೋಗುವಾಗ ತುಂಬಿದ ಕೊಡ ಹೊತ್ತವರು, ಮುತ್ತೈದೆ ಹೆಣಹೊತ್ತವರು ಹೆಂಡದ ಗಾಡಿ ಎದುರಾದರೆ ಶುಭ ಶಕುನವೆಂದು ಭಾವಿಸುವದುಂಟು. ಗಂಡಿನವರು ಹೆಣ್ಣಿನ ಮನೆಗೆ ಬರುವದಕ್ಕಿಂತ ಪೂರ್ವದಲ್ಲಿ ಹುಡುಗಿಯ ತಂದೆ ಊರಿನ ಕೆಲವು ಹಿರಿಯರಿಗೆ ಕರೆತಂದು ಕುಳ್ಳರಿಸುತ್ತಾರೆ. ನಗರಗಳಲ್ಲಿ ತಮ್ಮ ಸ್ನೇಹಿತರನ್ನು ಕರೆಯುವದುಂಟು. ಬಂದ ಬೀಗರಿಗೆ ಉಪಹಾರ ಮಾಡಿಸಿದ ನಂತರ ಹೆಣ್ಣು ನೋಡುತ್ತಾರೆ. ಅಂದಿನ ದಿನ ಹೆಣ್ಣು ತುಂಬ ಅಲಂಕಾರ ಮಾಡಿಕೊಂಡು, ತಲೆಯತುಂಬ ಸೆರಗು ಹೊದ್ದುಕೊಂಡು, ನಯಭಯದ ನಡುಗೆಯಿಂದ ಅವಳಿಗೆ ಹಾಕಿದ ಮಣೆಯ ಮೇಲೆ ಕುಳಿತುಕೊಳ್ಳುತ್ತಾಳೆ. ಕುಳಿತುಕೊಳ್ಳಬೇಕಾದರೆ ವಾರಗಳ ರಾಹುಗಳನ್ನು ನೋಡುತ್ತಾರೆ.

| | | |
|---|---|---|
| ರವಿವಾರ | - | ಪೂರ್ವಕ್ಕೆ |
| ಸೋಮುವಾರ | - | ದಕ್ಷಿಣ |
| ಮಂಗಳವಾರ | - | ಪಶ್ಚಿಮ |
| ಬುಧುವಾರ | - | ಉತ್ತರ |
| ಗುರುವಾರ | - | ಪೂರ್ವಕ್ಕೆ |
| ಶುಕ್ರವಾರ | - | ಪಶ್ಚಿಮ |
| ಶನಿವಾರ | - | ಉತ್ತರಕ್ಕೆ( ಬಸವೇಶ್ವರ ಪಂಚಾಂಗ) |

ಹೀಗೆ ವಾರಗಳನ್ನು ನೋಡಿ ಮೇಲಿನ ವಾರಗಳದಿಂದ ದಿಕ್ಕುಗಳಿಗೆ ಮುಖಮಾಡಿ ಕುಡಿಸುವದಿಲ್ಲ. ಆ ದಿಕ್ಕನ್ನು ಬಿಟ್ಟು ಉಳಿದ ದಿಕ್ಕಿಗೆ, ಮಣೆಹಾಕಿ ಕುಡಿಸುತ್ತಾರೆ. ಮಣೆಯ ಮೇಲೆ ಎಡಗಾಲು ಮಡಚಿ ಬಲಗಾಲನ್ನು ಚಿಕ್ಕಪಟ್ಟಿಯಾಗಿ ಹಾಕಿಕೊಂಡು ನಾಚಿ ತಲೆಬಾಗಿ ಕುಳಿತುಕೊಳ್ಳುತ್ತಾಳೆ. ಗಂಡಿನ ಹಿರಿಯರು ಮಾತನಾಡಿಸುತ್ತಾರೆ. ಹೆಸರು, ತಂದೆ ಹೆಸರು, ಅಣ್ಣ - ತಮ್ಮ , ಅಕ್ಕತಂಗಿಯರು ಎಷ್ಟು? ಶಿಕ್ಷಣ ಬಗೆ ಕೇಳುತ್ತಾರೆ. ಆಮೇಲೆ ಹಿರಿಯರು ಹಸ್ತರೇಖೆ, ದಾರ ಹಿಡಿಯುವುದು ಅಂದರೆ ಸರಿಯಾದ ಸಮಯಕ್ಕೆ ಅವಳ ಅಂಗಾಂಗಗಳು ಬೆಳೆದಿವೆ ಇಲ್ಲ ಎನ್ನುವದು ನೋಡುವದಾಗಿದೆ. ಅಲ್ಲದೆ ಹೆಣ್ಣಿನ ಪಾದದ ಕೆಳಗೆ ಕುದುರೆಗಿರುವಂತೆ ತಗ್ಗು ಇರಬಾರದೆಂದು ಒಂದು ವೇಳೆ ಇದ್ದಲ್ಲಿ ಅಂತಹ ಹೆಣ್ಣು ಮನೆ ಹಿಡಿದು ಬಾಳ್ವೆ ಮಾಡುವದಿಲ್ಲವೆಂದು ನಂಬುತ್ತಾರೆ. ತದನಂತರ ಹೆಣ್ಣಿಗೆ ಕುಂಕುಮವನ್ನು ಹಚ್ಚಿ ಹೂ ಮೂಡಿಸಿ ಹಣ್ಣುಗಳಿಂದ ಉಡಿ ತುಂಬುತ್ತಾರೆ. ಉಡಿ ಗಟ್ಟಿಯಾಗಿ ಹಿಡಿದು ನಾಚುತಾ ನೇರವಾಗಿ ದೇವರ ಜಗುಲಿಗೆ ಹೋಗಿ ಉಡಿ ಇಟ್ಟು ಬಂದು ಹಿರಿಯರಿಗೆ ನಮಸ್ಕರಿಸಿ ಒಳಗೆ ಹೋಗುತ್ತಾಳೆ. ಗಂಡಿನಕಡೆಯ ಹೆಣ್ಣು ಮಕ್ಕಳು ಒಳ ಹೋಗಿ ಮದುವೆ ಹೆಣ್ಣಿನ ಅಂಗಾಂಗಳನ್ನು ಪರೀಕ್ಷಿಸುತ್ತಾರೆ. ಬಿಳುಪು-ತೊನ್ನು ಇಂತಹ ಕಾಯಿಲೆ ಇರಬಹುದೆಂದು ನೋಡುವದುಂಟು. ಆ ಮೇಲೆ ಹೆಣ್ಣಿನ ಕಡೆಯವರು ಗಂಡಿನ ಆಸ್ತಿ-ಪಾಸ್ತಿ, ಶಿಕ್ಷಣ, ಉದ್ಯೋಗ ಕುರಿತು ವಿಚಾರಿಸುತ್ತಾರೆ. ಒಂದು ದಿವಸ ಗಂಡಿನ ಅಥವ ಹೆಣ್ಣಿನ ಮನೆಯಲ್ಲಾಗಲಿ ವರದಕ್ಷಿಣೆಯನ್ನು ಮಾತನಾಡಿ ಮದುವೆಯನ್ನು ಗಟ್ಟಿ ಮಾಡುತ್ತಾರೆ. ಎರಡು ಕಡೆ ಒಪ್ಪಿಗೆಯಾದನಂತರ ಸಕ್ಕರೆ ತಂದು ಎಲ್ಲರಿಗೂ ಹಂಚುತ್ತಾರೆ. ನಂತರ ಎಲ್ಲರಿಗೂ ಕುಂಕುಮ ಹಚ್ಚಿ ಸಕ್ಕರೆ ತಿಂದು ಕೋನೆಗೆ ಸಾವಿಗೆ ಅನ್ನ ಮಾಡಿ ಬಂದ ಬೀಗರಿಗೆ ಊಟವನ್ನು ಮಾಡಿಸಿ ಶಾಲ್ಯೆ ಮುಂಡಾಸಿ (ಟೋಪಿ) ಮಾಡುತ್ತಾರೆ. ಗಂಡಿನವರು ಹೆಣ್ಣಿಗೆ ಬಂಗಾರದ ಉಂಗರವನ್ನು ಇಟ್ಟಿ ಬರುತ್ತಾರೆ. ಮದುವೆ ನಿಶ್ಚಯವಾದರೆ ಇವರಲ್ಲಿ ಅರ್ಧ ಮದುವೆಯಾದಂತೆ.

ಮದುವೆ ನಿಚ್ಚಯಿಸಿದ ನಂತರ ಮದುವೆ ಮಾಡಲು ಹೆಚ್ಚು ದಿನಗಳು ತೆಗೆದುಕೊಂಡರೆ ಸಕ್ಕರೆ ಹಾಕುತ್ತಾರೆ. ಅಂದಿನ ದಿನ ಗಂಡಿನವರು ತಮ್ಮ ಊರಿನ ಗಣ್ಯರಿಗೆ ನೆಂಟರಿಗೆ ಇಷ್ಟಮಿತ್ರರಿಗೆ ಬರಮಾಡಿಕೊಂಡು ಬಂದು ಹೆಣ್ಣಿನವರು ಅವರಿಗೆ ಗೌರವದಿಂದ ಬರಮಾಡಿಕೊಂಡು ಗಂಡಿನವರು ಹೆಣ್ಣಿಗೆ ತಂದ ಉಡುಗೆ ತೊಡಿಗೆಗಳನ್ನು ತೊಡಿಸಲಾಗುತ್ತದೆ. ಗಂಡಿಗೂ ಹೊಸ ಬಟ್ಟೆಗಳು ತೊಡಿಸಲಾಗುತ್ತದೆ. ನೆರೆದ ಹೆಣ್ಣು ಮಕ್ಕಳು ಸಂಪ್ರದಾಯದ ಹಾಡುಗಳು ಹೇಳುತ್ತಾರೆ. ಮತ್ತು ಮುತ್ತೈದಿಯರು ಹೆಣ್ಣಿನ ಉಡಿ ತುಂಬಿ ಆರತಿ ಮಾಡುತ್ತಾರೆ.

ಕಾರ್ಯಕ್ರಮ ಮುಗಿದ ನಂತರ ಬಂದ ಎಲ್ಲ ಬಾಂಧವರಿಗೆ ಒಂದು ಖೋಬರಿಯ ತುಂಬ ಸಕ್ಕರೆಯನ್ನು ಹಂಚುತ್ತಾರೆ. ಬಂದ ನೆಂಟರಿಗೆ ಊಟವನ್ನು ಮಾಡಿಸಿ ಕಳುಹಿಸುತ್ತಾರೆ. ಬಂದ ಇವರ ಮನೆಯ ಜಂಗಮರಿಗೆ ದಕ್ಷಿಣೆ ನೀಡುತ್ತಾರೆ. ಗಂಡಿನವರಿಗೆ ಅಲ್ಲಿನ ಜಂಗಮರಿಗೂ, ಭೋಜನವನ್ನು ಮಾಡಿಸಿ ಖುಷಿ ಕೊಡುತ್ತಾರೆ. ಆ ಮೇಲೆ ಒಂದು ದಿವಸ ಮದುವೆ ನಿಶ್ಚಯ ಕಾರ್ಯಕ್ರಮ ಇಟ್ಟುಕೊಳ್ಳುತ್ತಾರೆ. ಗಂಡು-ಹೆಣ್ಣಿನವರು ಅನುಕುಲವಾದ ಶುಭದಿನದಂದು ಮದುವೆ ದಿನ ನಿರ್ಧರಿಸುತ್ತಾರೆ. ಮೊದಲು ಹುಡುಗ - ಹುಡುಗಿಯ ಜಾತಕವನ್ನು ನೋಡುತ್ತಾರೆ. ಜೇಷ್ಠ ಮಾಸದ ಜೇಷ್ಠ ಸಕ್ಷತ್ರದಲ್ಲಿ ವಧು-ವರರು ಜನಿಸಿದರೆ ಆ ತಿಂಗಳಲ್ಲಿ ಮದುವೆ ಇಡುವದಿಲ್ಲ. ಜೇಷ್ಠವಾಗುವದರಿಂದ ಇಂತಹ ಮದುವೆಗಳು ಕಲಹ, ದ್ರವ್ಯ ನಾಶವಾಗುತ್ತದೆಂದು ನಂಬುತ್ತಾರೆ. ಇದೇ ರೀತಿಯಂತೆ ಜೇಷ್ಠ ಪುತ್ರ ಹಾಗೂ ಜೇಷ್ಠ ಪುತ್ರಿ ಇವರ ವಿವಹವನ್ನು ಜೇಷ್ಠ ಮಾಸದಲ್ಲಿ ಮಾಡುವದಿಲ್ಲ ಪ್ರಥಮ ಗರ್ಭದಲ್ಲಿಯು ಜೇಷ್ಠ ಮಾಸದಲ್ಲಿಯು ಹುಟ್ಟಿದ ಸ್ತ್ರಿ - ಪುರುಷರಿಗೆ ಜೇಷ್ಠ ಮಾಸದಲ್ಲಿ ವಿವಾಹ ಮಾಡಿದರೆ ಪಂಚ ಜೇಷ್ಠ ಕೂಡುವದರಿಂದ ಅಶುಭವಾಗುವದೆಂದು ಭಾವಿಸಲಾಗಿದೆ. (ಬಸವೇಶ್ವರ ಪಂಚಾಗ ಪು.೨) ಆದ್ದರಿಂದ ಜೇಷ್ಠ ಮಾಸವನ್ನು ಬಿಟ್ಟು ಇತರ ಶುಭ ಮಾಸಗಳಾದ ವೈಶಾಖ, ಮಾಘ, ಫಾಲ್ಗುಣ ಉತ್ತಮ, ಕಾರ್ತಿಕ, ಮಾರ್ಗಶಿರ, ಮಾಸಗಳಲ್ಲಿ ಮದುವೆ ಹಮ್ಮಿಕೊಳ್ಳುವುದುಂಟು.

ನಂತರ ಪಂಚಾಂಗ ಶ್ರೇಷ್ಠವಾಗಿ ಅರಿಯುವ ತಮ್ಮ ಮನೆಯ ಜಂಗಮರ ಮಧ್ಯ ಲಗ್ನ ಮೂಹುರ್ತವನ್ನು ನಿಶ್ಚಯಿಸಿ ಲಗ್ನ ಪತ್ರಿಕೆಯನ್ನು ವಿಧಾನೋಕ್ತವಾಗಿ ಬರೆಯಲಾಗುತ್ತದೆ. ಅದಕ್ಕೆ ವಿಭೂತಿ ಕುಂಕುಮದಿಂದ ಪೂಜೆ ಮಾಡಿ ಹೆಣ್ಣಿನವರು ಗಂಡಿನವರಿಗೆ, ಗಂಡಿನವರು ಹೆಣ್ಣಿನವರಿಗೆ ಕೊಡಲಾಗುತ್ತದೆ. ನಂತರವೇ ಉಳಿದ ಬಂಧು ಬಳಗ ಸ್ನೇಹಿತರಿಗೆ ಕೊಡುತ್ತಾರೆ. ಮನೆಯ ಗುರುವಿನಿಂದ ಲಗ್ನದಲ್ಲಿ ಯಾವ ಮುತ್ತೈದಿ ಹೆಸರಿನಿಂದ ಬಲ ಬರುತದೇಯೊ ಆ ಮುತ್ತೈದೆಯಿಂದ ಲಗ್ನದಕ್ಕಿಯ ಕಟ್ಟಿಸುವ ಕೆಲಸ ಮಾಡಿಸುತ್ತಾರೆ. ಲಗ್ನದ ಅಕ್ಕಿಯನ್ನು ಹುಡುಗಿಯ ಮನೆಗೆ ಕಳಿಸಬೇಕಾದರೆ ಮುತ್ತೈದಿ ಹೆಣ್ಣುಮಗಳನ್ನು ತಂದು ೫ ಗೇಣು ಉದ್ದ ಹಾಗೂ ೫ ಗೇಣು ಅಗಲ ಚೌಕಾಕರದ ಬಿಳಿಯ ಹೊಸ ಅರಿವೆಯಲ್ಲಿ ೫ ಕಾಲುಪಾವು ಅಥವ ೫ ಅರಪಾವು ಅಕ್ಕಿ, ಅಡಿಕೆ, ಇಳ್ಳೆದೆಲೆ, ಉತ್ತತ್ತಿ, ಖೊಬ್ಬರಿ, ೫ ಅರಿಷಣಗಂಟು ಕಟ್ಟುತ್ತಾರೆ. ಮುತ್ತೈದೆಯ ಕೈಯಿಂದ ಕಟ್ಟಿದ ಮೇಲೆ ಸ್ವಾಮಿಗಳು ಅದಕ್ಕೆ ವಿಭೂತಿ ಕುಂಕುಮದ ಪೂಜಾ ಮಾಡಿಸುತ್ತಾರೆ. ಕರ್ಪೂರ ಆರತಿ ಬೆಳಗುತ್ತಾರೆ.

ಕರ್ಪೂರ ಆರುತಿ ಬೇಳಗೀರಿ
ಕಾರಣ ಮೃಗಕರ ದೇವನಿಗೆ ಕರುಣಾಳ ವಿರುಪಾಕ್ಷಿಗೆ!

ನೀಲಕಂದರ ನಿಗಮುಗೋಚರ ಬಾಲಿಚಂದ್ರ ಭರಣಗೆ
ಬಲಿಗೊಲಿದನು ಹಾಲ ಸವಿದನು ಮೂಲಶ್ರೀಗುರು ರಾಯನಿಗೆ (೧)
ಕರ್ಪೂರ....................

ವಾರಿ ಜದ್ಧವ ಶಿರವಾಹರಿದನು ಮಾರಹರಮಾಹಾದೇವಗೆ
ಶರಣ ಜನಕ್ಕೆ ಒರವಾ ನಿತ್ಯನು ಪರಮ ಪಾರ್ವತಿ ಅರಸಗೆ (೨)
ಕರ್ಪೂರ....................

ಘೋರ ಘೂರಿತನು ದೂರ ಮಾಡುವ ಸೂರ್ಯಸನ್ಮುಖ ಸ್ವಾಮಿಗೆ
ಧಿರಯೊಳ್ಳ ಅಧಿಕವಾದ ಸೊನ್ನಲಪುರದ ಸಿದ್ಧನಾಥಗೆ
ಕರ್ಪೂ ಆರುತಿ ಬೇಳಗೀರಿ
ಕಾರಣ ಮೃಗಕರ ದೇವನಿಗೆ ಕರುಣಾಳ ವಿರುಪಾಕ್ಷಿಗೆ

ಕಪೂರ ಗೌರಂ
ಕರುಣಾವತಾರಣ
ಸಂಸಾರ ಪಾರಂ
ಭೂಜಗೀಂದ್ರಹಾರಂ
ಸದಾವಸಂತಂ
ಹೃದಯರವಿಂದೇ
ಭವಂಭವಾನಿ
ಚೈತನ್ಯ ಮಾಮಿ
ಗುಣತಿತ ಕಾತಂ
ಪರಬ್ರಹ್ಮ ನಾಶಾಂತಂ ಭವರಣ್ಯಧಾನಂ
ಉಮನಾಥವೇಶಮಂ ಜಯ ನಮ್ಮ
ವಿಷ್ಣು ಲಿಂಗಂ......................

**ಹಾಡಿದವರು :** ವೀರಭದ್ರಯ್ಯಾ ಸ್ವಾಮಿ

ನಂತರ ಓರ್ವನು ಅದನ್ನು ವಧುವಿಗೆ ಮನೆಯ ಊರಿಗೆ ತೆಗೆದುಕೊಂಡು ಹೋಗುತ್ತಾನೆ. ಹೀಗೆ ತೆಗೆದುಕೊಂಡು ಹೋಗುವದು ಗಂಡು-ಹೆಣ್ಣಿನ ಮನೆಯವರನ್ನು ಆಮಂತ್ರಿಸುವದಾಗಿದೆ ಎನ್ನಬಹುದು. ಲಗ್ನದ ಅಕ್ಕಿ ಗಂಟು ಸ್ವೀಕರಿಸಿದ ಹೆಣ್ಣಿನವರು ಅದನ್ನು ದೇವರ ಜಗುಲಿಯ ಮೇಲಿಟ್ಟು ಜಂಗಮನಿಂದ ಪೂಜಿಸುತ್ತಾರೆ. ಆ ಮೇಲೆ ಲಗ್ನದ ಅಕ್ಕಿಗಂಟು ಬಿಚ್ಚಿ ಅನ್ನಮಾಡುವದರ ಜೊತೆಗೆ ಸಿಹಿ ಮಾಡಿ ಬಂದ ಜನರಿಗೆ ಊಟ ಮಾಡಿಸುತ್ತಾರೆ. ಮುಂದೆ ಲಗ್ನ ಪತ್ರಿಕೆಯಲ್ಲಿ ಯಾವ ಸಮಯಕ್ಕೆ ಲಗ್ನಕ್ಕೆ ಹೋಗಬೇಕಾಗುತ್ತದೆ ಮಿತಿಯ ಒಳಗೆ ಅರಿಷಿಣ ಕಾರ್ಯಾದ ದಿವಸವೇ ಕನ್ಯೆಯನ್ನು ಲಗ್ನದ ಮನೆಗೆ ಕಳುಹಿಸುತ್ತಾರೆ. ಒಬ್ಬಳನ್ನು ಕಳುಹಿಸಲಾರರು ಜೋತೆಗೆ ಹೆಣ್ಣಿನ ಸಂಬಂಧಿಕರು ಸೇರಿ ಬರುತ್ತಾರೆ.

ಒಳ ಕಲ್ಲು ಪೂಜೆ ತೋಳೆದು ಮುತ್ತೈದೆಯರು ಉಪವಾಸವಿದ್ದ ಐದು ಜನ ಮುತ್ತೈದೆಯರು ನೇಮಕ್ಕನುಸಾರವಾಗಿ ಮೊದಲು ಬಿಸಿ ನಂತರ ಐದು ದವಸದ ಕಾಳುಗಳನ್ನು ಕುಟ್ಟಿ ಅಕ್ಕಿ ಮಾಡುತ್ತಾರೆ. ಈ ಅಕ್ಕಿಗಳು ಅಕ್ಷತೆಯೊಂದಿಗೆ ಬೆರೆಸಿ ಅಕ್ಷತಾರೋಹಣೆಗೆ ಉಪಯೋಗಿಸುತ್ತಾರೆ. ಒಳ ಕಲ್ಲು ಬೀಸುವ ಸಂದರ್ಭಕ್ಕೆ ಹಾಡುತ್ತಾರೆ.

"ಕಲ್ಲ ಪೂಜೆ ಮಾಡಾಕ ನಮ್ಮನ್ನಾರ ಕರಿಸ್ಯಾರ
ಸಾಲ ಮಾಳಗಿ ಮನಿಯವಳು! ಸುಕಾರಣದ
ಒಳಕಲ್ಲ ಪೂಜೆಗೆ ಕರಿಸ್ಸಾಳ

ಬಲ್ಲಿದ ಬಲ್ಲಿದರೀಗೆ ಪಲ್ಲಕ್ಕಿ ಕಳುವ್ಯಾಳ
ಪಿಲ್ಲೇದಗಾಲ ಮದಗಳಿಗೆ! ಸುಮುತ್ತೈದಿಗೆ
ಪಲ್ಲಕ್ಕಿ ಕೊಟ್ಟು ಕರಿಸ್ಸಾರ ಸುವ್ವಿ

ಬಣ್ಣದ ಕಲ್ಲಿಗೆ ಸುಣ್ಣ ನಂದಿಯ ಬರದೆ
ಸುತ್ತ ಶಿವಲಿಂಗ ಕಲ್ಯಾಣ! ಸುಶರಣರ
ಓನಾಮ ಬರದೆ ಸುವಾಲೆ (ಸುವ್ವಿ)(ಅವರೇ:೯೦

ಹೀಗೆ ಹಾಡುತ್ತಾರೆ. ಮುಟ್ಟಗಿ, ಸೆಂಡಗಿ ಇಡುತ್ತಾರೆ. ನಂತರ ಬಂದ ಮುತ್ತೈದಿಯರಿಗೆ ಸಾವಿಗೆ ಅನ್ನ, ಸಾರು ಊಟ ಮಾಡಿಸಿ ಕಳುಹಿಸುತ್ತಾರೆ.

ಹಂದರ ಹಾಕುವುದು ಪೂರ್ವದಲ್ಲಿ ಮನೆಯ ಜಂಗಮನನ್ನು ಕರೆ ತಂದು ಪಂಚಾಂಗದ ಮೂಲಕ ಯಾರ ಹೆಸರಿಗೆ ಹಾಲುಗಂಬಗಳ ತರಬೇಕು ಎಂದು ಹೇಳುತ್ತಾರೆ. ಅವರ ಹೆಸರಿನವರೆ ನಸುಕಿನಲ್ಲಿ ಎದ್ದು ಕೊಡಲಿಯನ್ನು ತೆಗೆದುಕೊಂಡು ಅಡವಿಗೆ ಹೋಗಿ ಮಾವಿನ ಗಿಡದ ಟೊಂಗೆ, ಹತ್ತಿ ಗಿಡದ ಟೊಂಗೆಯನ್ನು ತೆಗೆದುಕೊಂಡು ಬರುತ್ತಾರೆ. ನಂತರ ಹಂದರ ಹಾಕುತ್ತಾರೆ. ಐದು ಕಡೆ ಕಟ್ಟಿಗೆಗಳು ಹಾಕಿ ಮೇಲೆ ಜೋಳದ ಕಳಿಕೆಯನ್ನು ಹಾಕಿ ನೆರಳಾಗುವಂತೆ ಮಾಡುತ್ತಾರೆ. ನಡುವೆ ಹಾಲಗಂಬವನ್ನು ನೆಡುತ್ತಾರೆ. ನೆಡುವಾಗ ಹಾಲು - ತುಪ್ಪ ಹಾಕಿ (ಶಾಂತ್ಯಾರ್ಥವಾಗಿ) ಹಾಕುತ್ತಾರೆ. ನಂತರ ಕೊಬ್ಬರಿ, ಉತ್ತತ್ತಿ, ಅರಿಷಿಣ ಬೇರು, ಬೆಲ್ಲದ ಕಣಿಗಳನ್ನು ಕೂಡಿಸಿ ಕಟ್ಟಿದ ರಸವನ್ನು ಹಾಲಗಂಬಕ್ಕೆ ಇಳಿ ಬಿಡುತ್ತಾರೆ. ನಂತರ ಬಂದ ಎಲ್ಲಾರಿಗೊ ಮುತ್ತೈದೆಯರಿಗೂ, ಪುರುಷರಿಗೂ ಖುಷಿಬಿ ಕುಟ್ಟಿ ಗೋದೆಯ ಹುಗ್ಗಿ ಮಾಡುತ್ತಾರೆ. ಎಲ್ಲಾರಿಗೂ ಊಟ ಹಾಕಿ ಕಳುಹಿಸುತ್ತಾರೆ. ಮರುದಿವಸ ಮುಂಜಾನೆ ಕುಂಬಾರ ಮನೆಗೆ ಹಲಗೆಯನ್ನು ತೆಗೆದುಕೊಂಡು ಮದುಮಕ್ಕಳ ಸೋದರ ಮಾವನು ಅವರ ಹೆಂಡತಿ ಐಯ್ಯಾರಣಿ ತೆಗೆದುಕೊಂಡು ಬರುತ್ತಾರೆ.

ಮಾರನೆಯ ದಿನ ಅಂದರೆ ಮದುವೆಯ ದಿವಸ ಬೀಗರು ನೇರವಾಗಿ ಮದುವೆ ನಡೆಯುವ ೨ ಗಂಟೆಯ ಮುಂಚಿತವಾಗಿ ಬರುತ್ತಾರೆ. ಬಂದು ಹನುಮಾನ ಮಂದಿರ ದೇವಾಲಯದ ಮೇಲೆ ಕುಳಿತುಕೊಳ್ಳುತ್ತಾರೆ. ಆಗ ಬೀಗರು ವಾದ್ಯ ವೈಭವಗಳೊಂದಿಗೆ ಬೀಗರನ್ನು ಕರೆದುಕೊಳ್ಳಲು ಹೋಗುತ್ತಾರೆ. ಆ ಕಡೆಯಿಂದ ಬಂದ ಜಂಗಮ ಗುರುವಿಗೂ ಈ ಕಡೆಯಿಂದ ಬಂದ ಜಂಗಮ ಗುರುವಿಗೂ ಕುಂಕುಮವನ್ನು ಹಂಚಿ ಇಬ್ಬರೂ ಬಾಯಿಯಲ್ಲಿ ಸಕ್ಕರೆ ಹಾಕಿಕೊಂಡು ತಬ್ಬಿಕೊಳ್ಳುತ್ತಾರೆ. ನಂತರ ಆರತಿಯನ್ನು ಹಿಡಿದ ಬಂದ ಮುತ್ತೈದೆಯರು ಒಬ್ಬರನೊಬ್ಬರು ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ನಂತರ ದೇವರಿಗೆ ಹೋಗಿ ಎರಡು ಖಾರಿಕುಗಳನ್ನು ಇಟ್ಟು ನಮಸ್ಕಾರ ಮಾಡಿ ಅವರಿಗೆ ವಾದ್ಯದ ಮೂಲಕ ಕರೆತಂದು ಒಬ್ಬರ ಮನೆಗೆ ತಂದು ಕೂಡಿಸುತ್ತಾರೆ. ಅದಕ್ಕೆ 'ಬಿಡಕಿ ಮನೆ' ಎನ್ನುತ್ತಾರೆ. ಮದುವೆ ಸಮಯ ಇನ್ನು ತಡವಾಗಿರುವುದರಿಂದ ಅವರಿಗೆ ಫಲಾಹಾರವನ್ನು ನೀಡುತ್ತಾರೆ. ಮುಂಜಾನೆ ಬೇಗನೆ ಬಂದಿರುತ್ತಾರೆ. ಹೀಗಾಗಿ ಸ್ವಲ್ಪ ಉಪಹಾರವನ್ನು ನೀಡಿದರೆ ಮದುವೆ ತಡವಾದರೂ ಚಿಂತೆಯಿಲ್ಲ ಎಂದು ಹಾಗೆ ಮಾಡುತ್ತಾರೆ.

ಅರಿಷಿಣ ಹಚ್ಚುವುದು ಪ್ರಾರಂಭಿಸುತ್ತಾರೆ. ಎಣ್ಣೆ ಮಿಶ್ರಿತ ಅರಿಷಿಣ ವಧು-ವರರಿಗೆ ಪ್ರಥಮವಾಗಿ ಲೇಪಿಸುತ್ತಾರೆ. ಇದಕ್ಕೆ ಹರಿದ್ರಾಲೇಪನ ಎಂದು ಕರೆಯುವುದುಂಟು. ಸುಮಂಗಲೆಯರು ಈ ಅರಿಷಿಣ ಕಾರ್ಯ ಮಾಡುತ್ತಾರೆ. ಮದುಮಗನನ್ನು ಒಬ್ಬರಿಗೆ ಹಸಿಮಣೆಗೆ ಕರೆತರಲಾಗುತ್ತದೆ. ನಂತರ ಐದಗಿತ್ತಿಯರು ಆತನ ಮೈ-ಕೈಗೆ ಅರಿಷಿಣ ಹಚ್ಚಿ ಸ್ನಾನ ಮಾಡಿಸಲು ಬಚ್ಚಲು ಮನೆಗೆ ಕರೆದುಕೊಂಡು ಬರುತ್ತಾರೆ. ಸ್ನಾನಕ್ಕೆ ಪೂರ್ವ ಐದುಗಿತ್ತಿಯ ಹಾಲು-ತುಪ್ಪ ಹಾಕಿ ಬಿಸಿನೀರು ತುಂಬಿದ ತಾ ಬಂಡಿಯಿಂದ ನೀರನ್ನು ಚರಿಗಿ ನೀರನ್ನು ಮದುಮಗನ ತಲೆಯ ಮೇಲೆ ಹಾಕುತ್ತಾರೆ. ಕೊನೆಯವರೆಗೆ ತಾಬಂಡಿಯಲ್ಲಿರುವ ಅಷ್ಟು ನೀರು ಮದುಮಗನಿಗೆ ಹಾಕಿ ಅವನಿಗೆ ಟಾವಲ್‌ನಿಂದ ಮೈಯನ್ನು ಒರೆಸಿ ಹೊಸ ಪಂಚೆಯನ್ನು ಕೊಡುತ್ತಾರೆ. ಇದೇ ರೀತಿಯಲ್ಲಿ ಮದುಮಗಳನ್ನು ಸ್ನಾನ ಮಾಡಿಸುತ್ತಾರೆ. ಶುಭ್ರವಾದ ಆತ್ಮಗಳಾಗುತ್ತಿರುವುದರಿಂದ ದೇವರಿಗೆ ಪೂಜಾ ಮಾಡುವಂತೆ ತಿಳಿದು ಆಚರಿಸುತ್ತಾರೆ. (ಸೋದರ ಮಾವ ಮತ್ತು ಸೋದರ ಸೊಸೆ) ಅರಿಷಿಣ ಹಚ್ಚುವ ಸಂದರ್ಭದಲ್ಲಿ ಸುಂಗಲೆಯರು ಹಾಡುತ್ತಾರೆ.

"ಎಣ್ಣೆ ಹಚ್ಚಿದ ಕಾಲ ಮಣ್ಣಾದವಂತ
ಬಣ್ಣ ತುಂಬ್ಯಾರ ನಡುಮನಿಗೆ ಸೋಬಾನವ

ಬಣ್ಣನು ತುಂಬ್ಯಾರ ನಡುಮನಿಗೆ ಮಲ್ಲವನ
ಶಿಶುವ ಬಚ್ಚಲನ ಇಳುವಾಗ ಸೋಬಾನವ

ಅರಷಿನ ಹಚ್ಚಿದ ಕಾಲ ಕೆಸರ ಆದಾವಂತ
ದಸರಿಪಹಾಸ್ಯಾರ ನಡುಮನಿಗೆ ಸೋಬಾನವ
ದಸರಿಪನು ಹಾಸ್ಯಾರ ನಡುಮನಿಗೆ ಮಲ್ಲವ್ವನ
ಶಿಶುವ ಬಚ್ಚಲನ ಇಳುವಾಗ ಸೋಬಾನವ" (ಅವರೇ:೯೪)

ನಂತರ ಐರಾಣಿ ತರಲು ಕುಂಬಾರನ ಮನೆಗೆ ವಾದ್ಯಗಳೊಂದಿಗೆ ಆರತಿ ಹಿಡಿದುಕೊಂಡು ಹೊರಡುತ್ತಾರೆ. ಏಕೆಂದರೆ ಸುರಗಿ ಕಾರ್ಯಕ್ಕೆಂದು ಗಡಿಗೆ ಬಿಂದಿಗೆ ಬೇಕಾಗುವುದರಿಂದ ಅಷ್ಟರಲ್ಲಿ ಕುಂಬಾರ ಗಡಿಗೆಗಳಿಗೆ ಸುಣ್ಣ ಬಣ್ಣ ಹಚ್ಚಿ ಸಿದ್ಧವಾಗಿಡುತ್ತಾನೆ. ಆಗ ಮುತ್ತೈದೆಯರು ಅವುಗಳಿಗೆ ಆರತಿ ಮಾಡಿ ಶಾಸ್ತ್ರೀಯವಾಗಿ,

ಹತ್ತು ಅಂಕಣ ಮನೆಯ ಮುತ್ತಿನ ತಲೆಬಾಗಿಲ
ಹೊಕ್ಕು ಗುಂಡ್ಯೆಯನ ಅರಮನೆಯ ಬಾಗಿಲಕ
ಮಿತ್ತರೈವರು ನಿಲನಿಂತ (ಸೋ)
ಹುಗ್ಗಿ ಸ್ವಾರಿ ತಾರೋ ಕೇಲ ಬಿಂದಗಿ ತಾರೋ
ನಾರೆರೈವರ ಮಗಿತಾರೋ ! ಕೇಲಿನ ಮ್ಯಾಗ
ನಾರೇಶೈವರ ಬರೆತಾರೋ (ಸೋ)(ಅವರೇ:೯೪)

ಹೀಗೆ ಹಾಡುತ್ತಾ ಐರಾಣಿ ಕೊಡಗಳು ಮದುವೆಯ ಮನೆಗೆ ತರುತ್ತಾರೆ. ಇದರಂತೆಯೇ ವಾದ್ಯಗಳ ಮೂಲಕ ಮದುವೆ ಮಕ್ಕಳಿಗೆ ಹಣೆಗೆ ಕಟ್ಟಲು ಬಾಸಿಂಗ ತರಲು ಹೂಗಾರನ ಮನೆಗೆ ಹೋಗಲಾಗುತ್ತದೆ. ಅಲ್ಲಿಯೂ ಮುತ್ತೈದೆಯರು ಆರತಿ ಮಾಡಿ ಹೂಗಾರನಿಗೆ ಉಲುಪೆ ಕೊಟ್ಟು ಬಾಸಿಂಗವನ್ನು ಹೊಸ ಬುಟ್ಟಿಯಲ್ಲಿ ಹಾಕಿಕೊಂಡು ತಲೆಯ ಮೇಲೆ ಇಟ್ಟುಕೊಂಡು ಬಾಜಾ ಭಜಂತರಿ ಮೂಲಕ ತೆಗೆದುಕೊಂಡು ಬರುತ್ತಾರೆ. ಸುರಗಿ, ಮದುವೆ - ಮುಂಜಿಗಳಲ್ಲಿ ಮದುಮಕ್ಕಳಿಗೆ ಮಾಡಿಸುವ ವಿಶಿಷ್ಟ ಸ್ನಾನಕ್ಕೆ ಸುರಗಿ ಎನ್ನಲಾಗಿದೆ. ಈ ಕಾರ್ಯಕ್ಕಾಗಿ ವಿಶಿಷ್ಟವಾಗಿ ಐರಾಣಿಕೊಡದಲ್ಲಿ ನೀರು ಹಾಕುತ್ತಾರೆ. ಐದಗಿತ್ತಿಯರ ಕೈಯಲ್ಲಿರುವ ಮಗಿ ಇಲ್ಲವೆ ಕಳಸಗಿಂಡಿಯಲ್ಲಿ ವೀಳ್ಯೆದಲ್ಲಿ ಕಟ್ಟಿದ ಗಣೆಯಿಂದ ಹಾಕಿ ಅನಂತರ ಆ ನೀರನ್ನು ಹಂಡೆಯಲ್ಲಿ ಕಾಯ್ದ ನೀರಿನಲ್ಲಿ ಬೆರೆಸಲಾಗುತ್ತದೆ. ಈ ರೀತಿಯಿಂದ ಸುರಗಿ ನೀರು ತಯಾರಿಸುತ್ತಾರೆ. ಸುರಗಿಯ ನೀರನ್ನು ಹಾಕುವದಕಿಂತ ಪೂರ್ವದಲ್ಲಿ ಮತ್ತೆ ಮದುವಕ್ಕಳಿಗೆ

ಅರಿಷಿಣ ಹಚ್ಚುತ್ತಾರೆ. ನಂತರ ಅವರನ್ನು ಸೂರಗಿ ಕಡೆ ತರುತ್ತಾರೆ. ಕುಂಬಾರಣ್ಣನಿಂದ ತಂದ ೫ ಮಗಿಗಳನ್ನು(ಕುಳಿಗಳನ್ನು) ಹಿಂದೆ ಎರಡು ಮುಂದೆ ಮೂರು ಕುಳಿಗಳು ಚೌಕಾಕರ ವಾಗಿ ಅಕ್ಕಿ ಯನ್ನು ಹಾಕಿ ಅದರ ಮೇಲೆ ಇಡುತ್ತಾರೆ. ಇಂದಿನ ಸಂದರ್ಭದಲ್ಲಿ ಹಿತ್ತಾಳೆಯೇ ತಂಬಿಗೆ ಉಪಯೋಗಿಸುತ್ತಿದ್ದಾರೆ. ಅವುಗಳಿಗೆ ವಿಭೂತಿ ಕುಂಕುಮದಿಂದ ಎರಡು ವಿಳ್ಯೆದೆಲೆಗಳನ್ನು ಇಡುತ್ತಾರೆ. ಐದಳೆ ದಾರವನ್ನು ಈ ಮಗಿಗಳಿಗೆ ಚೌಕಾಕಾರವಾಗಿ ಸುತ್ತುತ್ತಾರೆ. ಮಧ್ಯದಲ್ಲಿ ಮದುಮಕ್ಕಳನ್ನು ತಂದು ಕೂಡಿಸುತ್ತಾರೆ. ಅವರ ಹಿಂದೆ ಅಕ್ಕ-ತಂಗಿಯರು ಐದಗಿತ್ತಿಯರನ್ನು ಕೂಡಿಸಲಾಗುತ್ತದೆ. ಏಕೆಂದರೆ ಯಾವುದೇ ಕೆಟ್ಟ ದೃಷ್ಟಿಯಾಗಲಿ ಮದುಮಕ್ಕಳಿಗೆ ತಗಲದೆ ಇರಲೆಂದು ಸುರುಗಿ ಸುತ್ತುತ್ತಾರೆ. ಆಗ ಜೋಳದ ಧಂಟಿನಿಂದ ಮದುಮಕ್ಕಳಿಗೆ ಎಣ್ಣೆ ಎರೆದು ಬಿಸಿನೀರು ಹಾಕುತ್ತಾರೆ. ನಂತರ ಹೊಸ ಬಟ್ಟೆಗಳು ತೊಡಲು ಮಠದಯ್ಯ ಹೊದುಕಿ ಮದುಮಗನಿಗೆ ಮಾಡುತ್ತಾರೆ. ಮುತ್ತೈದಿಯರು ಮದುಮಗಳಿಗೆ ಸೀರೆ ಕುಪ್ಪಸ ಮಾಡುತ್ತಾರೆ. ಮಧುಮಕ್ಕಳ ಹಿಂದೆ ನಿಂತ ತಂಗಿ-ಅಕ್ಕಂದಿರಿಗೆ ಸೀರಿ ಕುಪ್ಪಸ ಮಾಡುತ್ತಾರೆ. ನಂತರ ಸುರಗಿ ದಾರವನ್ನು ಸುರಿಗಿಯಲ್ಲಿ ಕುಳಿತವರಿಗೆ ಹತ್ತದಂತೆ ಎತ್ತಿ ದಾರ ತೆಗೆದು ಮಧುಮಕ್ಕಳ ಕೈಗೆ ಕಟ್ಟುತ್ತಾರೆ. ನಂತರ ಮದುಮಕ್ಕಳನ್ನು ನೇರವಾಗಿ ದೇವರ ಮನೆಗೆ ಕರೆತಂದು ದೇವರಿಗೆ ನಮಸ್ಕಾರ ಮಾಡಿಸಿ ಮಣೆಯ ಮೇಲೆ ಕುಳ್ಳಿರಿಸಿ ಬಾಯಲ್ಲಿ ಸಕ್ಕರೆ ಹಾಕಿ ನೀರು ಕುಡಿಸುತ್ತಾರೆ. ನಂತರ ಪಂಚಕಳಸವನ್ನು ಈ ಕಡೆ ಶುದ್ದವಾದ ಸ್ಥಳದಲ್ಲಿ ಮಠದಯ್ಯ - ಮಠಪತಿ ತಯಾರಿಸುತ್ತಾರೆ.

**೭.೧೧.೧. ಪಂಚಕಳಸದ ಸ್ಥಾಪನೆ :** ಮನೆಯಲ್ಲಿ ಒಂದು ಯೋಗ್ಯವಾದ ಜಾಗವನ್ನು ನೋಡಿ ಮಂಟಪವನ್ನು ರಚಿಸುತ್ತಾರೆ. ಈ ಮಂಟಪದ ಮಧ್ಯದಲ್ಲಿ ಒಂದು ಹೊಸ ಜಮಖಾನೆ (ಕಾರಪೇಟ) ಹಾಸುತ್ತಾರೆ ಅದರ ಮೇಲೆ ೫-೧೦ ಸೇರು ಗೋಧಿ ಅಥವ ಅಕ್ಕಿಯನ್ನು ತಂದು ಸಸಿಯನ್ನು ಬರೆಯುತ್ತಾರೆ. ಸಸಿಯನ್ನು ಬರೆದ ಮೇಲೆ ಸ್ವಲ್ಪ ಉದ್ದು, ಜೀರಿಗೆ, ಕಡಲೇಬೇಳೆ ಹಾಕಿ ಮನೆಯ ಯಜಮಾನದ ಗೋತ್ರದ ಪ್ರಕಾರ ಪಂಚಕಳಸವನ್ನು ಮಧ್ಯದಲ್ಲಿ ಸ್ಥಾಪಿಸುತ್ತಾರೆ. ಜಂಗಮರಲ್ಲಿ ಯಾವುದೇ ವಿಧಿ ಅಥವಾ ಸಂಸ್ಕಾರವನ್ನು ನಡೆಯುವ ಸಂದರ್ಭದಲ್ಲಿ ಈ ಪಂಚಕಳಸವನ್ನು ಸ್ಥಾಪಿದನಂತರವೇ ಮುಂದೆ ಕಾರ್ಯ ನೇರವೇರಿಸುತ್ತಾರೆ. ಅವರವರ ಪೀಠಕ್ಕೆ ಸಂಬಂಧಿಸಿದ ಪಂಕಳಸವನ್ನು ಪ್ರಮುಖವಾಗಿಸಿ ಇನ್ನೊಳಿದ ಅದರ ಜೊತೆಗೆ ಸ್ಥಾಪಿಸುತ್ತಾರೆ. ಒಂದು ಗೋತ್ರದ ಬದಲು ಇನ್ನೊಂದು ಗೋತ್ರವನ್ನು ಕಳಸ ಸ್ಥಾಪಿಸಬಾರದು.

ರೇಣುಕಾಚಾರ್ಯರ ಬಾಳೀಹಳ್ಳಿ ಸಿಂಹಾಸನ ವ ಉತ್ತರ
ವೀರಗೋತ್ರ, ಪಡ್ವಿಡಿ ಬಗಿಯವರ ವಿವಾಹ
ಇತರ ಕಾರ್ಯಗಳಲ್ಲಿ ಕೆಳಗೆ ತೋರಿಸಿದಂತೆ ಪಶ್ಚಿಮ ಶಿ ನ ಯ ಪೂರ್ವ
ಆಯಾ ದಿಕ್ಕುಗಳಲ್ಲಿ ಪ್ರಣವಾಕ್ಷರಗಳನ್ನು
ಬರೆದು ಕಲಶ ಸ್ಥಾಪಿಸುತ್ತಾರೆ. ದಕ್ಷಿಣ ಮ

ದಾರುಕಾಚಾರ್ಯ ಉಜ್ಜೆಯಿನಿ ಸಿಂಹಾಸನ ನಂದಿ ಗೋತ್ರ, ವೃಷ್ಟಿ (ಮಳೆ)

ಯ ಉತ್ತರ
ಪಶ್ಚಿಮ ವ ಮ ನ ಪೂರ್ವ
ದಕ್ಷಿಣ ಶಿ

ಘಂಟಾಕರರ್ಣ ಶಾಖಾ ಏಕೋರಾಮಾರಾಧ್ಯರ ಹಿಮವತ್ಕೇದಾರ ಸಿಂಹಾಸನ ಭೃಂಗಿಗೋತ್ರ ಲಂಬನ ಸೂತ್ರದವರ ಕಾರ್ಯಗಳಲ್ಲಿ ಕೆಳಗಿನಂತೆ ಸ್ಥಾಪಿಸಬೇಕು.

ನ ಉತ್ತರ
ಪಶ್ಚಿಮ ಯ ಶಿ ಮ ಪೂರ್ವ
ವ ದಕ್ಷಿಣ

ಧೇನುಕರ್ಣ ಶಾಖಾ-ಪಂಡಿತಾರಾಧ್ಯರ ಶ್ರೀ ಶೈಲ ಸಿಂಹಾಸನ, ವೃಷಭ ಗೋತ್ರ ಮುಕ್ತಾ ಗುಚ್ಛ ಸೂತ್ರ(ಮುತ್ತಿನ ಪೆಂಡಿಬಗಿ)ದವರು

ಮ ಉತ್ತರ
ಪಶ್ಚಿಮ ನ ವ ಶಿಪೂರ್ವ
ಯ ದಕ್ಷಿಣ

ವಿಶ್ವಕರ್ಣ ಶಾಖಾ ವಿಶ್ವಾರಾಧ್ಯರ ಸಿಂಹಾಸನ ಸ್ಕಂದಗೋತ್ರ (ಪಂಚವಣ್ಣಿಗೆ ಬಾಗಿ)

ಶಿ ಉತ್ತರ
ಪಶ್ಚಿಮ ಮ ಯ ವ ಪಙರ್ವ
ನ ದಕ್ಷಿಣ

(ಸಾಲಿಮಠ ಚನ್ನವೀರಶಾಸ್ತ್ರಿ:೧೯೫೫:೧೯೧- ೧೯೨-೧೯೩)

ಹೀಗೆ ಪಂಚಾಚಾರ್ಯರು ಈ ಐದು ಕಲಶಗಳ ಪೈಕಿ ಕಾರ್ಯಸ್ತನ ಗುರುಕಲಶವನ್ನು (ಪೀಠಾಧಿಪತಿಗಳ ಪ್ರಾಣಾಕ್ಷರಗಳು) ರೇಣುಕ - ನ, ದಾರುಕು ಮ, ಘಂಟಾಕರ್ಣ - ಶಿ, ಧೇನುಕರ್ಣ - ವ, ಹಾಗೂ ವಿಶ್ವಕರ್ಣ - ಯ) ವಿವಾವಾದಿ ಸಂಬಂಧಿಸಿದವರ ಗೋತ್ರದವರ

ಗುರುಕಲಶವನ್ನು ಮಧ್ಯ ದಿಕ್ಕಿನಲ್ಲಿ ಮೊದಲು ಮೊದಲು ಸ್ಥಾಪಿಸಿಕೊಂಡ ಮೇಲೆ ಉಳಿದ ನಾಲ್ಕು ಪ್ರಣವಾಕ್ಷರ ಕಲಶಗಳನ್ನು ಕ್ರಮದಿಂದ ದಕ್ಷಿಣಾದಿಯಾಗಿ ನಾಲ್ಕು ದಿಕ್ಕುಗಳಲ್ಲಿ ಸ್ಥಾಪಿಸಬೇಕು. ಪಂಚಕಲಶಗಳಲ್ಲಿ ಶುದ್ಧೋದಕ ಗಂಧಾಕ್ಷತೆಯನ್ನು ಹಾಕಿ ಎರಡೆರಡು ವೀಳ್ಯಾದೆಲೆಗಳನ್ನು ಸುತ್ತಿ ಅವುಗಳ ಮೇಲಿಟ್ಟು ನಂತರ ಪಂಚಕಲಶಗಳಿಗೆ ಐದು ಎಳೆ ದಾರವನ್ನು ಸುತ್ತುತ್ತಾರೆ. ತನ್ನ ಗುರುಕಲಶದಿಂದ ಮಧ್ಯ ಕಲಶಕ್ಕೆ ಐದು ಸಾರಿ ದಾರವನ್ನು ಸುತ್ತುತ್ತಾರೆ ಹೀಗೆ ದಕ್ಷಿಣ-ಪೂರ್ವ-ಮಧ್ಯ ಪೂರ್ವ- ಉತ್ತರ ಮಧ್ಯ ಹಾಗೂ ಉತ್ತರ ಪಶ್ಚಿಮ ಕಲಶಗಳಿಗೆ. ನಂತರ ಮದುಮಕ್ಕಳನ್ನು ಕರೆತಂದು ಕೂಡುವ ಸ್ಥಳದಲ್ಲಿ ಬಲಕಾಲು ಮುಂದಕ್ಕೆ ಮಾಡಿ ಕಲಶದ ಎದುರಿಗೆ ಕೂಡಿಸುತ್ತಾರೆ. ಕೊನೆಗೆ ಪಂಚಕಲಶ ಪೂಜಿಸಿ ತೆಂಗಿನ ಕಾಯಿ ಒಡೆದು ಕಲಶಗಳ ಮೇಲೆ ಮಡಿ ಇಲ್ಲವೆ ಹೊಸ ವಸ್ತ್ರ ಹೊಂದಿಸಲಾಗುತ್ತದೆ. ಏಕೆಂದರೆ ಶುದ್ಧೋದಕ, ಗಂಧಾಕ್ಷತೆ ಹೊರಗೆ ಬೀಳದಿರಲೆಂದು ಹೀಗೆ ಮಾಡಲಾಗುತ್ತದೆ. ನಂತರ ಪಂಚಾಚಾರ್ಯರ ಸಾಕ್ಷಿಯಾಗಿ ಪಂಚಕಲಶಗಳ ಆವಾಹನ ಪೂಜಾದಿಗಳನ್ನು ನೇರವೇರಿಸುತ್ತಾರೆ. ಈ ಐದು ಕಲಶಗಳಲ್ಲಿ 'ಇಮಂಮೇ ಗಂಗೇಯಮುನೆ ಸರಸ್ವತಿ ಶತುದ್ರಿಸ್ತೋಮಗ್ಂ ಸಚತಾಪ ರುಷ್ಣಿಯಾ। ಅಸಿಕ್ನಿಯಾ । ಅಸಿಕ್ನಿಯಾ ಮರುದ್ವೃಥೆ ವಿತಸ್ತಯಾರ್ಜೀಕಿಯೆ ಶೃಣು ಹ್ಯಾ ಸುಘೋಮಯಾ ॥ ಆಪೋವಾ ಇದಗ್‌ರಿ ಸರ್ವಂರಿ ವಿಶಾ ಭೂತಾ ನ್ಯಾಪ :। ಪ್ರಾಣಾವಾ ಆಪ:। ಪಶವ ಆಪ:। ಸಮ್ರಾಡಾಪೋ ವಿರಾಡಾಪ: ಸ್ವರಾಡಾಪ:। ಛಂದಾಗ್ಂ ಷ್ಯಾಪ:। ಜ್ಯೋತಿಗ್ಂ ಷ್ಯಾಪ:। ಯಜೂಗ್‌ರಿ ಪ್ಯಾಪ:। ಸತ್ಯಮಾಪ : ಸರ್ವಾ ದೇವತಾ ಆಪ: ಭೂರ್ಭುವಸ್ಸುವರಾಪ : ಓಂ : ' (ತೋಟಪ್ಪಶಾಸ್ತ್ರಿ:೭೪) ಎಂಬೀ ಮಂತ್ರದಿಂದ ಪುಣ್ಯಹವಾಚನ ಮಾಡಿ ಕುಂಭ (ಕಲಶ) ದೊಳಗಿನ ತೀರ್ಥ ಜಲವನ್ನು ಐದೂ ಕಲಶಗಳಲ್ಲಿ ತುಂಬಿ ಗಂಧ ನ್ವಾರಾ ......ಶ್ರೆಯಂ ಮಂತ್ರದಿಂದ ಕಲಶಗಳಲ್ಲಿ ಗಂಧವನ್ನು ಮಾವಿನ ಚಿಗುರು, ಎಲೆ ಮುಂತಾದವುಗಳನ್ನು ಹಿರಣ್ಯ ರೂಪ .....ನಮಸ್ತೆ ಎಂದು ಬಂಗಾರವನ್ನು ಇಟ್ಟು ಘೋಡಶೋಪಬಾರ ಮಂತ್ರಗಳಿಂದ ಪೂಜಿಸಿ.

ಸದ್ಯೋಜಾತ ವಾದುದೇವ ಅಘೋರ ತತ್ವರ ಈಶಾನಾಯ ನಮಃ ಎಂದು ನಮಸ್ಕರಿಸಿ ಕಲಶಗಳಲ್ಲಿ ಪಂಚಾಚಾರ್ಯರ ಆವಾಹನಾದಿಗಳನ್ನು ಮಾಡಬೇಕು. ವಿಶ್ವಾರಾಧ್ಯರನ್ನು, ರೇವಣಾರಾಧ್ಯರನ್ನು, ಮರುಳಾರಾಧ್ಯರನ್ನು, ಏಕೋರಾಮಾರಾಧಯರನ್ನು ಮತ್ತು ಪಂಡಿತಾ ರಾಧ್ಯರನ್ನು ಕುರಿತು ಸುತ್ತಿಸಲಾಗುವ ಅಕ್ಷತೆಗನ್ನು ಕಲಶದ ಮೇಲೆ ಹಾಕುತ್ತಾರೆ. ನಂತರ ಕೊನೆಯಗೆ ಪೂಜಿಸಿ ಮಂಗಲ ಹಾಡುತ್ತಾರೆ.

ಎತ್ತುವೆನಾರತಿ ಪರಮ ಜಗದ್ಗುರು ಪಂಚಾಚಾರ್ಯರಿಗೆ
ಪರಶಿವ ಪಂಚಾಸನಗಳಿಂದುಯಸಿ ಶಿವಮತವನು ಜಯಿಸಿ
ಬೋದಿಸಿ! ಪರಿಪೂತವೆನಿಸಿದ ಶಿವಮತವನ್ನು ನೆಲೆಗೊಳಿಸಿದ ಪೂಜ್ಯರಿಗೆ (೧)

ಅಂಗಲಿಂಗಗಳ ತತ್ವವ ಬೋಧಿಸಿ ನಿರತ ಸಮುಹಕ್ಕೆ
ಲಿಂಗಾನಂದದಿ ಲಿಂಗದೊಳಡಗಾಹ ಮಹಿಮಾಶೀಲರಿಗೆ
ಜಗುದ್ಗುರು ಪಂಚಚಾರ್ಯರಿಗೆ (೨) ಎತ್ತುವೆನಾರತಿ.......

ಪಾವನ ಪರತರ ಜಂಗಮರಿಗೆ ಗುರು ಸಾರ್ವಭಾಮರಾಗಿ!
ನೆಲೆಸಿಹರಿಗೆ!! ಜಗದ್ಗುರು ಪಂಚಚಾರ್ಯರಿಗೆ (೩) ಎತ್ತುವೆನಾರತಿ......

ಪರಶಿವ ಪರಶಿವ ಪಂಚಾಸನಗಳಿಲದುಯಿಸಿ ಶಿವಮತವನು ಜಯಿಸಿ
ಬೋಧಿಸಿ! ಪರಿಪೂತವೆನಿಸಿದ ಶಿವಮತವನ್ನು ನೆಲೆಗೊಳಿಸಿದ
ಪೂಜ್ಯರಿಗೆ!! ಎತ್ತುವೆನಾರತಿ ಪರಮ ಜಗದ್ಗುರು ಪಂಚಚಾರ್ಯರಿಗೆ

**ಹಾಡಿದವರು :** ರಾಜಶೇಖರ ಸ್ವಾಮಿ ಗೋರ್ಟಾ

ಓಂ ನಮಃಶಿವಾಯ ಎಂಬ ಮೂಲ ಮಂತ್ರದಿಂದ ೧೦೮ ಸಲ ಜಪಮಾಡಿ ಜಲವಂ ಬಿಟ್ಟು ಕಲಶಗಳ ಮೇಲೆ ಒಂದು ದೊಡ್ಡ ಹೊಸ ವಸ್ತ್ರವನ್ನು ಹೊದಿಸುತ್ತಾರೆ.

**೭.೧೧.೨. ಮಧುಪರ್ಕ ವಿಧಾನ :** ಮದುಮಗನ ಮಂಟಪದ ಬಲಭಾಗಕ್ಕೆ ಕುಳಿತುಕೊಂಡ ಮೇಲೆ ಮದುಮಗಳ ತಂದೆ ಬಂದು ಪದ್ಯ, ಅರ್ಘ, ಅಚಮನೀಯ, ಮಧುಪರ್ಕಗಳ್ಳುಳ್ಳ ನಾಲ್ಕು ಬಟ್ಟಲುಗಳನ್ನು ಮದುಮಗನ ಕೈಗೆ ಕೊಡುತ್ತಾರೆ. ಆಗ ವರ ಮೊದಲ ಮೂರು ಬಟ್ಟಲಿನಲ್ಲಿರುವ ಜೇನು ತನ್ನ ಕಾಲಿಗೆ ಪ್ರೇಕ್ಷಣೆ ಮಾಡಿ ಕೊನೆಯ ಬಟ್ಟಲಿನಲ್ಲಿರುವ ಜೇನು ತುಪ್ಪವನ್ನು ತನ್ನ ಇಷ್ಟಲಿಂಗಕ್ಕೆ ನೈವ್ಯಾದೆ ತೋರಿಸಿ ಸೇವಿಸುತ್ತಾರೆ. ನಂತರ ಮದುಮಗನ ತಂದೆ ಮದುಮಗನಿಗೆ ಹಣೆಗೆ ಕುಂಕಮವನಿಟ್ಟು ಉಡುಗರೆ ಕಾಣಿಕೆಯಾಗಿ ಕೊಡುತ್ತಾನೆ.

ಈ ಮಧುಪರ್ಕ ಮುಗಿದನಂತರ ಮದುಮಗನ ಬಲಭಾಗಕ್ಕೆ ಮದುಮಗಳನ್ನು ಕರೆತಂದು ಕೂಡಿಸುತ್ತಾರೆ. ಬಲ - ಎಡಕ್ಕೆ ಪಶ್ಚಿಮಾಭಿಮುಖ ಮಾಡಿ ಕುಳಿತುಕೊಳ್ಳುತ್ತಾರೆ. ಆಗ ಕನ್ಯಾದಾನ ಮಾಡಲು ಸಪತ್ನಿಕನಾಗಿ ಉತ್ತರಾಭಿಮುಖ ಮಾಡಿಕೊಂಡು ಒಂದು ಕಂಚಿನ ಪಾತ್ರೆಯಲ್ಲಿ ವರನ ಬೊಗಸೆಯನ್ನು (ಕೈಯನ್ನು) ವಧುವಿನ ಬೊಗಸೆಯನಿಟ್ಟು ಬೋಗಸೆಯ

ಮೇಲೆ ಒಂದು ತೆಂಗಿನ ಕಾಯಿನ್ನಿಟ್ಟು ಪೂಜಿಸಿ ಬಿಲ್ವದಳಗಳನ್ನೇರಿಸಿ ಸಾವಕಾಶವಾಗಿ ಶುದ್ಧೋದಕ ಧಾರೆಯೆರೆಯುತ್ತಾರೆ. ನಂತರ ಹುಡುಗಿಯ ತಂದೆ ನನ್ನ ಮಗಳಾದ .....ದೇವಿಯನ್ನು .........ಮಗನಾದ ......... ಎಂಬ ವರನಿಗೆ ನಾನು ಪಿತ್ರಾದಿಗಳಿಗೆ ಶಿವಲೋಕ ಪ್ರಾಪ್ತಿ ಗಾಗಿಯೂ, ಗುರುಹಿರಿಯರಾದಿ ಸರ್ವ ದೈವದವರ ಸಾಕ್ಷಿಯಾಗಿ ಕನ್ಯದಾನ ಮಾಡುವೆ ಎಂದು ಪ್ರಮಾಣ ಮಾಡುತ್ತಾನೆ. ಆಗ ವರ ತನ್ನ ಬಲ ಕೈಯಿಂದ ವಧುವಿನ ಬಲ ಭುಜವನ್ನು ಮುಟ್ಟಿ (ಓಂ ಸ್ವಸ್ತಿ) ಶುಭ ವಾಗಲಿ ಎಂದು ಹೇಳುತ್ತಾನೆ. ನಂತರ ಮದುಮಗಳ ತಂದೆ ( ಧರ್ಮೇಚ - ಅರ್ಥೇಚ ಕಾಮೇಚ-ನಾತಿ ಚರಿತವ್ಯಾತ್ವಯೇ ಯಂ ) ಧರ್ಮದ ವಿಷಯವಾಗಿಯೂ, ದುಡ್ಡಿನ ವಿಷಯವಾಗಿಯೂ, ಕಾಮದ ವಿಷಯವಾಗಿಯೂ ಅತಿ ಕ್ರಮಿಸಿ ನಡೆಯ ಕೂಡದು ಎಂದು ಹೇಳುತ್ತಾನೆ. ಆಗ ವರನು ಆತಿ ಕ್ರಮ ನಡೆಯುವದಿಲ್ಲ (ನಾತಿ ಶ್ರಮಸಿ) ಎಂದು ಪ್ರತಿಜ್ಞಾ ಮಾಡುತ್ತಾನೆ. ಮತ್ತು ನನ್ನ ಮಗಳು ನಿನಗೆ ಒಪ್ಪಿಸಿರುತ್ತೇನೆ (ಅಹಂ ಕನ್ಯಾ ಸಂಪ್ರದದೆ) ಎಂದುಹೇಳುತ್ತಾರೆ.

ವರನು ಈ ಕನ್ಯೆಯನ್ನು ಸ್ವೀಕರಿಸುವೆ ಎಂದು ಹೇಳುತ್ತಾನೆ. ನಂತರ ವಿವಾಹ ದಶಕರ್ಮವನ್ನು ವಧು-ವರರಿಂದ ಮಾಡಿಸಲಾಗುತ್ತದೆ. ಇದು ಗುರುತು ಪರಿಚಯವಿರದ ವಧು-ವರರು ಶಾಶ್ವತವಾಗಿ ಕೂಡುವ ಸಂಕೇತವಾಗಿ ವಿವಾಹ ದಶಕರ್ಮಗಳನ್ನು ಮಾಡಿಸುತ್ತಾರೆ.

ಕಂಕಣ ಕಟ್ಟುವುದು ಮದುಮಗನಿಗೆ -ಮದುಮಗಳಿಗೆ ಕುಂಕುಮ, ಅರಿಶಿಣ ಹಚ್ಚಿ ಎರಡು ದಾರದ ಕಂಕಣವನ್ನು ಮಾಡುತ್ತಾರೆ. ಒಂದು ಮದುಮಗಳ ಎಡಗೈಗೆ ಇನ್ನೊಂದು ಮದುಮಗನ ಬಲಮುಂಗೈಗೆ ಜಂಗಮ ಕಟ್ಟುತ್ತಾರೆ. ಏಕೆಂದರೆ ವಧು-ವರರು ಗ್ರಹಸ್ಥಾಶ್ರಮ ಸ್ವೀಕರಿಸಿ ಧರ್ಮ, ಅರ್ಥ, ಮತ್ತು ಮೋಕ್ಷಗಳೆಂಬ ನಾಲ್ಕು ಫಲ ಪುರುಷಾರ್ಥಗಳನ್ನು ಶ್ರದ್ಧಾ ಭಕ್ತಿಯಿಂದ ಪಡೆಯಲು ಕಂಕಣ ಬದ್ಧರಾಗುವ ಸಲುವಾಗಿ ಈ ಕಂಕಣವನ್ನು ಕಟ್ಟುತ್ತಾರೆ.

ಬೆಲ್ಲ-ಜೀರಿಗೆ ಕ್ರಮ (ಗುಜೀರಕಾವ ಕಿರಣ) ವಧು -ವರರ ಕೈಯಲ್ಲಿ ಜಂಗಮರು ಬೆಲ್ಲ-ಜೀರಿಗೆಗಳನ್ನು ಕೊಟ್ಟ ಗಂಧ ಕುಂಕುಮಾದಿಗಳಿಂದ ಕೂಡಿರುವ ತೆರೆವಸ್ತ್ರವನ್ನು ಹಿಡಿದು 'ಸತ್ತೇನೋತ್ತ ಭಿತಾಭೂಮಿ : ಸೂರ್ಯೇ ಣೋತ್ತಂ ಭಿತಾದ್ಯೌ: ಋತೇನಾದಿತ್ಯಾಸ್ತಿಷ್ಠಂತಿ ದಿವಿಸೋಮೋ ಅಧಿಗ್ರಿತ:' ಎಂಬ ಸೂರ್ಯ ಸೂಕ್ತ ಮಂತ್ರವನ್ನು ಹೇಳುತ್ತಾ ತಮ್ಮ ಮನೆದೇವರನ್ನು ನೆನೆಯುತ್ತಾ ತೆರೆ ಬಟ್ಟೆಯನ್ನು ಉತ್ತರಕ್ಕೆ ಸರಿಸಿ ವಧುವಿನ ಬೊಗಸೆಯಲ್ಲಿರುವ ಬೆಲ್ಲ-ಜೀರಿಗೆಗಳನ್ನು ವಧುವಿನ ತಲೆಯಮೇಲೆ, ವರನ ಬೊಗಸೆಯಲ್ಲಿದ್ದ ಬೆಲ್ಲ - ಜೀರಿಗೆಗಳನ್ನು ವಧುವಿನ ತಲೆಯ ಮೇಲೂ ಪರಸ್ಪರ ಹಾಕಿಸುತ್ತಾರೆ. ಅಂದರೆ ಸಮಾಜದ

ಸಂಸಾರದಲ್ಲಿ ಸತಿ-ಪತಿಗಳು ಒಬ್ಬರೊಬ್ಬರೂ ಅನೋನ್ಯದಿಂದ ಸತ್ಯಾ, ಪ್ರೇಮದಿಂದ ಬಾಳಿ, ಬೆಲ್ಲದಂತೆ ಎಲ್ಲರಿಗೂ ಬೇಕಾಗಿ, ಜೀರಿಗೆಯಂತೆ ತಮ್ಮ ಜೀವನ ಸುವಾಸನೆಯುಳ್ಳದ್ದಾಗಿರಬೇಕು. ಆದ್ದರಿಂದ ಜಗತ್ ಇರುವವರೆಗೂ ಸೂರ್ಯ-ಚಂದ್ರರು ಪ್ರಜ್ವಲಿಸುವಂತೆ ತಮ್ಮ ಜೀವನ ಆಗಬೇಕೆಂದು ಈ ವಿಧಿಯನ್ನು ನೇರವೇರಿಸುತ್ತಾರೆ. ನಂತರ ಅವರ ಬೊಗಸೆಯಲ್ಲಿದ್ದ ಅಕ್ಕಿಯನ್ನು ಮೂರು ಮೂರು ಸಾರಿ ವಧು ವರನ ತಲೆಯ ಮೇಲೆ ವರ ವಧುವಿನ ತಲೆಯಲ್ಲಿ ಹಾಕುತ್ತಾರೆ. ಈ ವಿಧಿಯಲ್ಲಿ ಇಂದು ಹಲವಾರು ನಿಯಮಗಳು ಸಡಿಲಿಕೆಯಿಂದ ಮೇಲಿನ ಕ್ರಿಯೆಗಳು ನಡೆಯುತ್ತವೆ.

**೭.೧೧.೩. ಮಾಂಗಲ್ಯ ಧಾರಣ ವಿಧಿ :** ಬೆಲ್ಲ-ಜೀರಿಗೆ ಕ್ರಮವಾದ ನಂತರ ಮನೆ ಜಂಗಮರು ಒಂದು ತಟ್ಟೆಯಲ್ಲಿ ಅಕ್ಕಿಯನ್ನು ಹರಡಿ ಅದರ ಒಳಗೆ ಕುಂಕುಮದಿಂದ ಅಷ್ಟದಳ ಕಮಲವನ್ನು ಬರೆದು ಅದರ ಮಧ್ಯ ಒಂದು ಕೊಬ್ಬರಿ ಗುಂಡನ್ನು ಇಟ್ಟು ಮುತ್ತೈದೆಯರಿಂದ ಪೋಣಿಸಿದ ಮಂಗಲ ಸೂತ್ರ ತಾಳಿ ಕೊಬ್ಬರಿಯಲ್ಲಿ ಇಟ್ಟು ಜೊತೆಗೆ ಹಣ್ಣು ಹಂಪಲು, ಟೆಂಗಿನಕಾಯಿ, ಖಾರಿಕು, ಬಾದಮ್ ಇಟ್ಟಕೊಂಡು ಸರ್ವ ಮಂಗಲ ಮಾಂಗಲ್ಯ ಶಿವೇ ಸರ್ವಾರ್ಥ ಸಾಧಕೇ ! ಶರಣ್ಯತ್ರ್ಯಾಯಿಕ ದೇವೀನಾರಾಯಣೆ ನಮೋಸ್ತುತೇ !! ಎಂದು ಮಂತ್ರದಿಂದ ಮಾಂಗಲ್ಯ ದೇವತೆಯಾದ ಶ್ರೀ ಪಾರ್ವತಿಯನ್ನು ಧ್ಯಾನ ಮಾಡಲಾಗುತ್ತದೆ. ನಂತರ ಮಾಂಗಲ್ಯಕ್ಕೆ ಜಂಗಮರು, ಹಿರಿಯರು, ಬಂಧುಗಳು ಮುತ್ತೈದೆಯರು ಮಾಂಗಲ್ಯಕ್ಕೆ ಮುಟ್ಟಿ ನಮಸ್ಕರಿಸಿ ಆಶೀರ್ವಾದಿಸುತ್ತಾರೆ. ತದನಂತರ ವರನು ವಧುವಿನ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟುತ್ತಾನೆ. ಆಗ ಜಂಗಮರು ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ.

"ಮಾಂಗಲ್ಯ ತಂತುನಾನೇನ ! ಮಮ ಜೀವನಹೇತು ನಾ
ಕಂಠೇ ಬಧ್ನಾಮಿ ಶುಭಗೇ ! ತ್ವಂ ಜೇಗೀರ್ಘಯೆಶರದ: ಶತಂ
ಮಾಯಾಬಧ್ನಾಂ ದಾಕ್ಷಾಯಣೀ ! ಹಿರಣ್ಯಂ ಸದೇಪೀಘ್ರುಣ್ಯತಾಂ
ದೀರ್ಘಮಾರ್ಯ ! ಇತಿ ಮಾಂಗಲ್ಯ ಧಾರಯೇತ್ !!"

(ಗುಬ್ಬಣ್ಣ ಶಿವಾನಂದ:೯೮೪:೧೦೪)

ಆದರೆ ಗುರು ಹಿರಿಯರ ಮುತ್ತೈದೆಯರ ಮತ್ತು ಪತಿ ಹಸ್ತಗತವಾಗಿ ಬಂದ ಮಂಗಲಸೂತ್ರವು ಸತಿಯ ಕೊರಳಿಗೆ ಶೋಭಾಯಮಾನವಾಗಿ ದೀರ್ಘಾಯುಷ್ಯ ಹಾಗೂ ಶಾಂತಿಯನ್ನುಂಟು ಮಾಡಲಿ, ಸಂಸಾರದಲ್ಲಿ ಎಷ್ಟೋ ಕಷ್ಟ ತೊಂದರೆಗಳು ಬಂದರೂ ಕುತ್ತುಗೆಯ ಸುತ್ತ ಬಂದರೂ ಸಹ ಸಹಿಸಿಕೊಂಡು ಪತಿಯ ನೇಮಕ್ಕನುಸರಿಸಿ ಸ್ವಧರ್ಮಕ್ಕೆ ಚ್ಯುತಿ ಬಾರದಂತೆ

ಪತಿಯಿಂದಾಗುವ ಕಷ್ಟಗಳನ್ನು ಕೂಡ ತಾಳಿಕೊಂಡು ಬಾಳಬೇಕು. ಪತಿವ್ರತಾ ಧರ್ಮವನ್ನು ಪಾಲಿಸಬೇಕು. ಸಂಸಾರದಲ್ಲಿ ಸರಿಯಾದ ಹೆಸರು ತೆಗೆದುಕೊಳ್ಳಬೇಕು. ಇದರಿಂದ ಇದಕ್ಕೆ ತಾಳಿಯೆಂದು ಹೇಳುತ್ತಾರೆ. ಹಿರಿಯರು ಹೆಣ್ಣುಮಕ್ಕಳಿಗೆ ಕಷ್ಟ ನಷ್ಟಗಳು ಒದಗಿದರೂ ತಾಳಬೇಕು ಎನ್ನುತ್ತಾರೆ. ಅದಕ್ಕೆ ತಾಳಿದವನು ಬಾಳಿಯಾನು ಎಂಬ ಗಾದೆ ಸೂಕ್ತವಾಗಿದೆ. ತಾಳಿ ಕಟ್ಟಿಕೊಂಡ ಹೆಣ್ಣು ಒಬ್ಬರ ಸ್ವತ್ತಾಗುತ್ತಾಳೆ. ಅನ್ಯರು ಅವಳಿಗೆ ಆಸೆ ಪಡಲಿಕ್ಕೆ ಇಲ್ಲ ಎನ್ನುವುದಕ್ಕೆ ಮಾಂಗಲ್ಯಧಾರಣ ಸೂಚಕವಾಗುತ್ತದೆ. ಬಸವ ಧರ್ಮದ ಪ್ರಕಾರ ಜಿಲ್ಲೆಯಲ್ಲಿ ಅನೇಕ ಮದುವೆಗಳು ನಡೆಯುತ್ತದೆ. ಅವರ ಮದುವೆಗಳಲ್ಲಿ ಮಾಂಗಲ್ಯವನ್ನು ಕಟ್ಟುವಾಗ

"ನನ್ನ ಜೀವನದ ಅರ್ಧಾಂಗಿ ಎಂದು
ಜೊತೆಗೂಡಿ ನಡೆಯುವ ಸಹಚರಣಿ ಎಂದು
ಮನೆ ಮನ ತುಂಬುವ ಸತಿರತ್ನವೆಂದು
ಮಾಂಗಲ್ಯ ಧರಿಸುವೆನು ದೇವಿ ನಿನಗಿಂದು"

ಎಂದು ಹೇಳುತ್ತಾ ಮಾಂಗಲ್ಯಧಾರಣೆ ಮಾಡುತ್ತಾರೆ. ಈ ಬಸವ ಧರ್ಮದ ಪ್ರಕಾರ ಇತ್ತೀಚೆಗೆ ಅಲ್ಲೊಂದು ಇಲ್ಲೊಂದು ಮದುವೆಗಳು ಕಂಡುಬರುತ್ತಿವೆ. ಮದುವೆ ತುಂಬ ಸರಳಗೊಳಿಸುವುದರ ಮೂಲಕ ಸಮಾಜದಲ್ಲಿ ಮದುವೆಗಳು ನಡೆಯುತ್ತಿವೆ.

ವಧು-ವರರು ಕುಳಿತಿರುವಲ್ಲಿ ಎದ್ದು ವರನು ತನ್ನ ಬಲಗಾಲ ಹೆಬ್ಬರಳನ್ನು ವಧುವಿನ ಬಲಗಾಲ ಹೆಬ್ಬರಳಿಗೆ ಸ್ಪರ್ಶ ಮಾಡುತ್ತಾನೆ. ಇದಕ್ಕೆ ಪಾದಾಂಗುಷ್ಟ ಸ್ಪರ್ಶನ ಎಂದು ಕರೆಯುತ್ತಾರೆ. ನಂತರ ವಧು ತನ್ನ ಗಂಡನಾಗುವ ಪತಿಗೆ ನಮಸ್ಕಾರಮಾಡಿ ಅವನ ಪಾದ ಪೂಜೆ ಮಾಡುತ್ತಾಳೆ. ನಂತರ ಪರಸ್ಪರ ಎದುರು ಬದರು ನಿಂತು ಒಬ್ಬರೊಬ್ಬರು ಹೂಮಾಲೆಯನ್ನು ಬದಲಾಯಿಸಿಕೊಳ್ಳುತ್ತಾರೆ. ಹೂವಿನ ಮಾಲೆಗಳು ಪರಸ್ಪರ ಬದಲಾಯಿಸಿ ಕೊಳ್ಳುವ ಸಂಕೇತವೆಂದರೆ ಒಬ್ಬರ ತಪ್ಪುಗಳು ಒಬ್ಬರು ಹಂಚಿಕೊಂಡು ಹಗುರು ಮಾಡಿಕೊಳ್ಳುವುದಾಗಿದೆ.

ಅಕ್ಷತಾರೋಹಣ ವಿಧಿ - ಪಾದಸಂಘಟನ ಕ್ರಮವಾದ ನಂತರ ಇಲ್ಲಿಯವರೆಗೂ ವಧು ವರನ ಬಲಗಡೆ ಕುಳಿತ ವಧು ಈಗ ವರನ ಎಡಗಡೆ ಬರುತ್ತಾಳೆ ನಂತರ ಜಂಗಮರು ಮಂತ್ರವನ್ನು ಆರಂಭಿಸುತ್ತಾರೆ.

ತದೇವ ಲಂಗ್ನಂ ಸುದಿನಂತು ದೇವ ! ತಾರಾಬಲಂ ಚಂದ್ರಬಲಂತುದೇವ !!
ವಿದ್ಯಾಬಲಂ ದೈವಬಲಂತು ದೇವ ! ಗೌರಿಪತೇ ತೇಫ್ರಿಯುಗಂ ಸ್ಮಕಾಮಿ !!

ಶುಭ ಮುಹರ್ತೇ ಸಾವಧಾನಂ ! ಸುಲಗ್ನ ಸಾವಧಾನಂ

ಪಾರ್ವತಿ ಪರಮೇಶ್ವರ ಧ್ಯಾನೋತ್ಸವಸ್ಸಾವಧಾನ : !!

(ಸಾಲಿಮಠ ಚನ್ನವೀರಶಾಸ್ತ್ರಿ:೧೯೫೫:೨೬೮)

ಎಂಬ ಮಂತ್ರವನ್ನು ಹೇಳುತ್ತಾರೆ. ತಾರಾಬಲ ಚಂದ್ರಬಲ, ವಿದ್ಯಾಬಲ, ದೇವಬಲ ಹಾಗೂ ದೈವಬಲ ಹೀಗೆ ೫ ಪಂಚಬಲಯುಕ್ತವಾಗಿರುವುದರಿಂದ ಕೂಡಿದ ಲಗ್ನವಿರುವುದೋ ಅದು ಸುದಿನವು, ಸುಮುಹೂರ್ತವುವಾಗಿರುತ್ತದೆ. ಅಲ್ಲದೆ ಇಂತಹ ಸಮಯದಲ್ಲಿ ಮದು ಮಕ್ಕಳಿಗೆ ಹಂದರಕ್ಕೆಸ್ಪರ್ಷಸುತ್ತವೆಯೆಂದೂ ಸಮಸ್ತ ದೈವದ ಹಸ್ತಸ್ವರ್ಶದಿಂದ ಬಂದ ಮಂಗಲಾಕ್ಷತೆಯು ಎಂದು ತಿಳಿದು ಇವುಗಳು ವಧು ವರರ ಮಸ್ತಕಕ್ಕೆ ಮುಟ್ಟುವುದರಿಂದ ದಂಪತಿಗಳ ಜೀವನ ಸುಗಮವಾಗುತ್ತದೆ. ಆನಂದದಾಯಕವಾಗಿರುತ್ತದೆಂದು ಅಕ್ಷತೆ ಜಂಗಮರ ಮಂತ್ರ ಮುಗಿಯುತ್ತಿದ್ದಂತೆ ಎಲ್ಲಾ ತಂದೆ - ತಾಯಿ, ಬಂಧು - ಬಳಗದ, ಗುರು ಹಿರಿಯ ನೆಂಟರಿಷ್ಟರು ಸ್ನೇಹಿತರು ವಧು ವರರ ಮೇಲೆ ಅಕ್ಷತೆಯನ್ನು ಹಾಕುತ್ತಾರೆ. ಇಂದಿನ ದಿನಮಾನಗಳಲ್ಲಿ ಬಸವೇಶ್ವರರ ಪ್ರಕಾರ ಮದುವೆಗಳು ನಡೆಯುತ್ತಿವೆ. ಅವರು ಪುಷ್ಪಗಳನ್ನು ಹಾಕುತ್ತಾರೆ. ಅಕ್ಷತಕಾಳುಗಳು ಹಾಕುವುದಿಲ್ಲ, ಕಂಕಣಗಳು ರುದ್ರಾಕ್ಷಿ ಕಟ್ಟುತ್ತಾರೆ. ಕೆಲವೇ ಈ ಪದ್ಧತಿ ಜಿಲ್ಲೆಯಲ್ಲಿ ಕೆಲವು ವರ್ಷದಿಂದ ಮಾತ್ರ ಕಾಣಿಸುತ್ತಿದೆ.

ಬ್ರಹ್ಮಗಂಟು ಕಟ್ಟುವುದು ವರನ ಮತ್ತು ವಧುವಿನ ಸೀರೆ ಶೆಲ್ಲೆಗೆ ಅರಿಷಿಣ, ಜೀರಿಗೆ, ಬೆಲ್ಲ, ಅಡಿಕೆ ಹಾಗೂ ಬಂಗಾರ ಹೀಗೆ ಐದು ಪ್ರಕಾರದ ವಸ್ತುಗಳನ್ನು ಹಾಕಿ ಈ ಬ್ರಹ್ಮ ಗಂಟು ಕಟ್ಟುತ್ತಾರೆ. ಏಕೆಂದರೆ ಹೊಸ ದಂಪತಿಗಳ ಸಂಬಂಧ ಗಟ್ಟಿಯಾಗಿ ಶಾಶ್ವತವಾಗಿರಲೆಂದು ಹೀಗೆ ಮಾಡುವುದುಂಟು.

ನಂತರ ಮನೆ ಜಂಗಮರಿಗೆ, ಮದುಮಗಳ ಹಾಗೂ ಮದುಮಗನ ಕಡೆಯವರು ಹೊದಿಕೆಯನ್ನು ಮಾಡಿ ದಕ್ಷಣಾದಿಗಳನ್ನು ಕೊಟ್ಟು ನಮಸ್ಕರಿಸುತ್ತಾರೆ. ವರನ ತಂದೆ ಜಂಗಮರಿಗೆ ಪಂಚಕಳಸವನ್ನು ತೆಗೆಯಲು ಹೇಳುತ್ತಾರೆ.

**೭.೧೧.೪. ಧಾರೆ ಎರೆಯುವುದು** : ಅಕ್ಷತಾರೋಹಣವಾದ ಮೇಲೆ ವರ-ವಧುಗಳು ಬೋರಜಗಲಿಯ ಮೇಲೆ ಕುಳಿತುಕೊಳ್ಳುತ್ತಾರೆ. ಆಗ ಹುಡುಗಿಯ ಸೋದರ ಮಾವ ಸೋದರತ್ತೆ ಬಂದು ವಧು-ವರವಿನ ಪಾದಗಳು ತೊಳೆದು ಕುಂಕುಮದಿಂದ ಪೂಜಾ ಮಾಡಿ ನಮಸ್ಕರಿಸುತ್ತಾರೆ.

ನಂತರ ಸ್ನೇಹಿತರು, ನೆಂಟರಿಷ್ಟರು, ಬಂಧುಗಳು ಮದುಮಕ್ಕಳಿಗೆ ಭೇಟಿ ಮಾಡಿ ಶುಭವಾಗಲಿ ಎಂದು ಹೇಳಿ ಉಡುಗೊರೆ ಆಯ್ಕೇರು ಮಾಡುತ್ತಾರೆ. ಆ ಮೇಲೆ ಮದುವೆಗೆ ಬಂದ ಎಲ್ಲರಿಗೂ ಅವನ ಸಾಮರ್ಥ್ಯದ ಪ್ರಕಾರ ಊಟವನ್ನು ಮಾಡಿಸುತ್ತಾರೆ. ಊಟಕ್ಕೆ ಸಿಹಿ ಭಕ್ಷ್ಯಗಳು ಮಾಡುತ್ತಾರೆ. ಕೆಲವೊಂದು ಸಲ ನೆಂಟರಿಗೆ ಊಟ ಉಪಚಾರದಲ್ಲಿ ಕಡಿಮೆಯಾಗಿದ್ದರೆ ನೆಂಟರ ವ್ಯವಸ್ಥೆ ಮಾಡುವಲ್ಲಿ ಮದುವೆಯ ಒಳ್ಳೆಯದ್ದು ಕೆಟ್ಟದೆಂದು ನಿರ್ಧಾರವಾಗುವುದುಂಟು.

**೭.೧೧.೫. ಶೋಭನ -ಪ್ರಸ್ತ :** ಮದುವೆಯಾದ ನಂತರ ಮದುವೆಯ ದಿನ ಸಾಯಂಕಾಲ ವಾಗಲಿ ಅಥವಾ ಮದುಮಗಳನ್ನು ಗಂಡನ ಮನೆಗೆ ಕರೆದುಕೊಂಡು ಹೋದ ರಾತ್ರಿಗೆ ಈ ಕಾರ್ಯವನ್ನು ನಡೆಯುತ್ತದೆ. ಶುಭದಿನವಿರುವುದರಿಂದ ಮದುವೆಯ ದಿವಸನೆ ಮಾಡಲಾಗುತ್ತದೆ. ಹೊಸ ಗಂಡ - ಹೆಂಡತಿಯನ್ನು ಕೂಡಿಸುವ ಶಾಸ್ತ್ರವೆಂದು ಕರೆಯು ವುದುಂಟು. ಇದು ಗಂಡು ಹೆಣ್ಣನ್ನು ಕೂಡಿಸುವ ಏಕೆಂದರೆ ವಯೋಮಾನಕ್ಕೆ ತಕ್ಕಂತೆ ಬರುವ (ಹುಡುವ) ಕಾಮತೃಪ್ತಿಯನ್ನು ಸಂತಾನಾಭಿವೃದ್ಧಿ ಮತ್ತು ಮೋಕ್ಷ ಸಾಧನೆಗಾಗಿ ದಂಪತಿಗಳನ್ನು ಕೂಡಿಸುವುದು ಶುಭವಾಗಿರುವುದರಿಂದ ಶೋಭಾನ ಪ್ರಸ್ತ, ನಿಷೇಕವೆಂದು ಕರೆಯುತ್ತಾರೆ.

ಮಾರನೆಯ ದಿನ ತಮ್ಮ ಮನೆದೇವರಿಗೆ ಹೋಗಿ ಕಾಯಿ ಕರ್ಪೂರ ಮಾಡಿಕೊಂಡು ಬರುತ್ತಾರೆ. ಅಂದಿನ ರಾತ್ರಿ ದಂಪತಿಗಳಿಗೆ ಕೂಡುವಸಲುವಾಗಿ ಅವರ ಪಲಂಗಿನ ಮೇಲಿನ ಹೂವಿನಿಂದ ಅಲಂಕರಿಸುತ್ತಾರೆ. ಹಾಲು ಹಣ್ಣುಗಳು ತಿನ್ನಲಿಕ್ಕೆ ಇಟ್ಟು ಮದುಮಕ್ಕಳನ್ನು ಆ ಕೋಣೆಯೊಳಗೆ ಕಳುಹಿಸುತ್ತಾರೆ. ಅಂದಿನ ರಾತ್ರಿ ಆ ನೂತನ ದಂಪತಿಗಳು ಒಂದಾಗುತ್ತಾರೆ. ಒಂದು ಮನಸ್ಸು ಇನ್ನೊಂದು ಮನಸ್ಸಿಗೆ ಹೊಂದಿಸಿ ಎರಡು ಹೃದಯಗಳು ಒಂದಾಗಿ ಎರಡು ಒಂದೇ ಒಂದೇ ಎರಡನ್ನಾಗಿಸಿ ಸಂಸಾರದಲ್ಲಿ ಸುಖವಾಗಿ ತಮ್ಮ ಜೀವನವನ್ನು ಸಾಗಿಸಲು ಇಂತಹ ಸಂಸ್ಕಾರವನ್ನು ನೇರವೇರಿಸುತ್ತಾರೆ. ಇದು ತುಂಬ ಮಹತ್ವದ್ದಾಗಿದೆ ಎನ್ನಬಹುದು.

**೭.೧೧.೬. ನೀರು ಶಾಸ್ತ್ರ :** ನೂತನ ಮದುವೆಯಾದ ದಂಪತಿಗಳಿಗೆ ಒಟ್ಟಿಗೆ ಸೇರಿಸಿ ಗಂಡಿನ ಮನೆಯಲ್ಲಿ ಐದು ಬಾರಿ ನೀರು ಶಾಸ್ತ್ರ ಮಾಡಿಸುತ್ತಾರೆ. ಈ ಶಾಸ್ತ್ರವು ಹೆಚ್ಚಾಗಿ ಬುಧವಾರ ಅಥವಾ ಶನಿವಾರ ಪ್ರಾರಂಭಿಸುತ್ತಾರೆ. ಕೊನೆಯದಿನ ಬುಧುವಾರವೇ ಮುಕ್ತಾಯವಾಗ ಬೇಕೆಂದು ಹೇಳುತ್ತಾರೆ.

ನಂತರ ಅಳಿಯನನ್ನು ಮದುವೆಯ ನಂತರ ಪ್ರಥಮ ಬಾರಿಗೆ ಕರೆದುಕೊಂಡು ಹೋಗುತ್ತಾರೆ. ಅದಕ್ಕೆ ಮಾಮನಿ (ಮನೆ ಹುಗ್ಗುವುದು) ಎಂದು ಕರೆಯುತ್ತಾರೆ. ಕರೆದುಕೊಂಡು ಹೋಗುವ

ಉದ್ದೇಶ ಹೆಣ್ಣಿನ ಸಂಬಂಧಿಕರು ಅಳಿಯನಿಗೆ ಸರಿಯಾಗಿ ನೋಡದ ಕಾರಣದಿಂದ ಅಥವಾ ಹಲವು ಕಾರಣದಿಂದ ಮದುವೆಗೆ ಬರದವರಿಗೆ ಅಳಿಯನನ್ನು ನೋಡುವ ಅವಕಾಶಕ್ಕೆ ಮನೆ ಹುಗ್ಗುವುದು ಎಂದು ಕರೆಯುತ್ತಾರೆ. ನಂತರ ನೂತನ ದಂಪತಿಗಳಿಗೆ ಹಸಿಯ ಮಣೆಯ ಮೇಲೆ ಕೂಡಿಸಿ ಮುಖ, ಮುಂಗೈಗೆ ಮುತ್ತೈದೆಯರು ಅರಿಷಿಣ ಹಚ್ಚಿ ನೀರಿನಿಂದ ತೊಳೆಯುತ್ತಾರೆ. ನಂತರ ಆರತಿ ಮಾಡಿ ಅಳಿಯನಿಗೆ ಉಡುಗೋರೆ ನೀಡುತ್ತಾರೆ.

**೭.೧೧.೭. ಬಹುಪತ್ನಿತ್ವ :** ಜಂಗಮರಲ್ಲಿ ಬಹುಪತ್ನಿತ್ವ ಸಂಪ್ರದಾಯ ಕಂಡು ಬರುವುದಿಲ್ಲ. ಇವರು ಏಕಪತ್ನಿವೃತಸ್ಥರಾಗಿರುತ್ತಾರೆ. ಆದರೆ ಕೆಲವು ಸಂದರ್ಭದಲ್ಲಿ ಎರಡು ಮೂರು ಮದುವೆಯಾಗುತ್ತಾರೆ. ಏಕೆಂದರೆ ಮೊದಲ ಹೆಂಡತಿಯಿಂದ ಮಕ್ಕಳು ಪ್ರಾಪ್ತಿಯಾಗದಿದ್ದಲ್ಲಿ ನಮ್ಮ ವಂಶ ಮತ್ತು ಮಠಕ್ಕೆ ವಾರಸುದಾರ ಬೇಕಾಗುತ್ತದೆ ಎಂಬ ಉದ್ದೇಶದಿಂದ ಮೊದಲನೆ ಹೆಂಡತಿಯ ಅನುಮತಿಯೊಂದಿಗೆ ಮತ್ತೊಬ್ಬಳ ಹೆಣ್ಣುಮಗಳನ್ನು ಮದುವೆಮಾಡಿಕೊಳ್ಳುವ ಹಲವಾರು ಉದಾಹರಣೆಗಳು ಜಂಗಮರಲ್ಲಿ ಕಂಡು ಬರುತ್ತವೆ. ಆದರೆ ಇಂದಿನ ಸಂದರ್ಭದಲ್ಲಿ ಹೆಚ್ಚಾಗಿ ಕಾಣುತ್ತಿಲ್ಲ. ಏಕೆಂದರೆ ಮಕ್ಕಳಾಗದ ಕಾರಣವನ್ನು ತಿಳಿದು ವೈದ್ಯರನ್ನು ಕಂಡು ಸಲಹೆ ಮೇರೆಗೆ ನಡೆದು ಮಕ್ಕಳು ಪಡೆಯುತ್ತಿರುವುದರಿಂದ ಬಹಪತ್ನಿತ್ವ ಹೆಚ್ಚಾಗಿ ಇವರಲ್ಲಿ ಕಾಣುವುದಿಲ್ಲ ಎನ್ನಬಹುದಾಗಿದೆ.

**೭.೧೧.೮. ವಿವಾಹ ವಿಚ್ಛೇಧನ :** ಜಂಗಮರಲ್ಲಿ ವಿವಾಹ ವಿಚ್ಛೇಧನ ಕಂಡು ಬರುವುದಿಲ್ಲ. ಏಕೆಂದರೆ ಸಮಾಜದಲ್ಲಿ ಗೌರವಸ್ಥಾನವನ್ನೇ ಹೊಂದಿರುವುದಕ್ಕಾಗಿ ಅಲ್ಲದೆ ಸಮಾಜವೇ ತಿದ್ದಿ ಸನ್ಮಾರ್ಗದಡೆಗೆ ತರುವ ಜನರು ಇಂತಹ ಕಾರ್ಯಕ್ಕೆ ತುಂಬ ಹೆದರುತ್ತಾರೆ. ಜಗಳವಾಡಿ ಹೆಂಡತಿ ತವರುಮನೆಯಲ್ಲಿ ಬಹಳ ದಿವಸಗಳೂ ಇದ್ದರೂ ಮತ್ತೇ ಒಳ್ಳೆಯ ಹಿರಿಯ ವ್ಯಕ್ತಿಗಳ ಮೂಲಕ ಅವಳಿಗೆ ಅವನಿಗೆ ಮನೆಯವರೆಲ್ಲ ಅವರ ಸಮಸ್ಯೆಯನ್ನು ಪರಿಹರಿಸಿ ಮತ್ತೆ ಗಂಡನ ಮನೆಗೆ ಕರಕೊಂಡು ಬರುವುದು ಹೆಚ್ಚಾಗಿದೆ. ಆದರೆ ವಿವಾಹ ವಿಚ್ಛೇಧನ ಮಾಡುವುದಿಲ್ಲ. ಆದರೂ ಗಂಡನವರಿಗೂ ಹೆಣ್ಣಿನವರಿಗೂ ಹೊಂದಿಕೆಯಾಗಲಾರದ ಸಂದರ್ಭದಲ್ಲಿ ವಿವಾಹ ವಿಚ್ಛೇಧನಗಳು ಯಾಗಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಜಂಗಮರಲ್ಲಿ ಹೆಚ್ಚಾಗಿ ವಿವಾಹ ವಿಚ್ಛೇಧನಗಳು ಕಂಡು ಬರುವುದಿಲ್ಲ. ಕೆಲವೊಂದು ಸಂದರ್ಭದಲ್ಲಿ ಆಗಿರುವ ವಿಚ್ಛೇಧನಗಳು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ.

**೭.೧೧.೯. ಪುನರ್ವಿವಾಹ :** ಜಂಗಮರಲ್ಲಿ ಮೊದಲನೆ ಹೆಂಡತಿಗೆ ಸಂತಾನ ಪ್ರಾಪ್ತಿಯಾಗದಿದ್ದಲ್ಲಿ ಅಥವಾ ಕಾರಣಗಳಿಂದ ಹೆಂಡತಿಯನ್ನು ವಿಚ್ಛೇಧನ ಮಾಡಿದಲ್ಲಿ, ಮರಣಹೊಂದಿದಲ್ಲಿ

ಪುನರ್ವಿವಾಹ ಮದುವೆಯಾಗುತ್ತವೆ. ಮೊದಲಿನ ಅಂದರೆ ಹಿಂದಕ್ಕೆ ಬಾಲ್ಯವಿವಾಹ ಬಳಕೆ ಹೆಚ್ಚಾಗಿತ್ತು. ಗಂಡಿಗೂ - ಹೆಣ್ಣಿನಲ್ಲಿ ಅಂತರಗಳು ಹೆಚ್ಚಾಗಿ ಕಂಡುಬರುತ್ತಿದ್ದವು. ಹೀಗಾಗಿ ಕೂಡುವುದಕ್ಕೆ ಬದಲಾಗಿ ದೂರ ಇರುವಂತೆ ಯಾಗುತ್ತಿತ್ತು. ಹೀಗೆ ಅನೇಕ ಕಾರಣಗಳಿಂದ ಪುನರ್ವಿವಾಹ ನಡೆಯುತ್ತಿವೆ. ಈಗ ಸರಕಾರದವರು ಬಾಲ್ಯವಿವಾಹವನ್ನು ನಿಷೇಧಿಸದ್ದರಿಂದ ಇತರ ಮದುವೆಗಳು ಇವರಲ್ಲಿ ನಿಂತು ಹೋಗಿವೆ.

**೭.೧೧.೧೦. ವಿಧವಾ ವಿವಾಹ :** ಹೆಂಡತಿ ಸತ್ತುಹೋಗಿದ್ದರಿಂದ ವಿಧುರ ಮದುವೆ ಯಾಗುತ್ತಾನೆ. ವಿಧವಾವಿವಾಹ ಜಂಗಮರಲ್ಲಿ ಹಚ್ಚಾಗಿ ನಡಯುವುದಿಲ್ಲ. ವಿದುರನಿಗೆ ನಡೆಯುತ್ತದೆ. ವಿಧವೆಗೊ ಮರು ಮದುವೆ ನಡೆಯುತ್ತದೆ. ಆದರೆ ಅವಳ ಸಾಮಾಜಿಕ ಸ್ಥಾನಮಾನ ಕಡೆಮೆಯಾಗಲು ಮದುವೆಯಾದ ಮೇಲೆ ಹಣೆಗೆ ಕುಂಕುಮ ಕೊರಳಲ್ಲಿ ಮಂಗಲಸೂತ್ರ ಮುಡಿಗೆ ಹೂವು, ಕಾಲಲ್ಲಿ ಕಾಲುಂಗರ ವಿಟ್ಟುಕೊಳ್ಳುವಂತಿಲ್ಲ. ಆದರೆ ಇಂದು ಮೊದಲಿನ ಮದುವೆಯಂತೆ ಇಟ್ಟುಕೊಳ್ಳುತ್ತಿದ್ದಾರೆ. ಈ ಮದುವೆ ತಮ್ಮ ಮನೆಯ ಜಂಗಮರ ನೇತೃತ್ವದಲ್ಲಿ ವಿಧಿವತ್ತಾಗಿ ಜರುಗುತ್ತದೆ. ಆದರೆ ಮೊದಲನೆ ವಿವಾಹದಂತೆ ಸುಂದರವಾಗಿ ಕಂಡುಬರುವುದಿಲ್ಲ. ಮದುವೆ ಮನೆಯಲ್ಲಿ ನಡೆಯುವುದರ ಬದಲಾಗಿ ದೇವರ ಮಂದಿರದಲ್ಲಿ, ಮದುವೆ ಮಂಟಪದಲ್ಲಿ ನಡೆಯುತ್ತಿದೆ. à Ä«¬«Ä ã 'ಗಂಡು - ಹೆಣ್ಣುಗಳ ಕೂಡುವಿಕೆ'ಯೆಂದು ಕರೆಯುತ್ತಾರೆ. ಇದರಿಂದ 'ಕೂಡಿಕೆ ಉಡಿಕೆ ' ಎಂದು ಜನರು ಕರೆಯುವುದುಂಟು. ವಿಧವೆಯ ಹೆಣ್ಣಿಗೆ ಮುಂದೆ ಸಮಾಜದಲ್ಲಿ ಒಳ್ಳೆಯ ಕಾರ್ಯದಲ್ಲಿ ಭಾಗವಹಿಸಲಿಕ್ಕೆ ಅರ್ಹಳಿಲ್ಲವಾಗಿರುತ್ತದೆ. ಮತ್ತೆ ಭಕ್ತರ ಮನೆಯಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ಯಾವುದೇ ಕಾರ್ಯಕ್ರಮವನ್ನು ನೇರವೇರಿಸಲು ಬರುವುದಿಲ್ಲ. ಇದರಿಂದ ಅವಳು ವಂಚಿತಳಾಗುತ್ತಾಳೆ. ಇಂದು ಜಂಗಮರಲ್ಲಿ ಕೆಲವೊಂದು ಮಾತ್ರ ನೋಡಬಹುದಾಗಿದೆ. ಹೆಚ್ಚಾಗಿ ಜಂಗಮ ಕ್ರಿಯೆಗಳನ್ನು ಮಾಡುವ ಜಂಗಮ ವಿಧವೆ ಹೆಣ್ಣಿನನ್ನು ಮಾಡಿಕೊಳ್ಳುವುದಿಲ್ಲ. ಆದರೆ ಇಂದು ಅಂತಹ ಹೆಣ್ಣುಮಗಳಿಗೆ ಬಾಳು ಕೊಡಬೇಕು ಎಂದು ತಿಳಿದು ಕೆಲವು ಜಂಗಮ ಹುಡುಗರು ಮದುವೆಯಾಗಿದ್ದು ಕಡಿಮೆ ಎಂದು ಹೇಳಬಹುದಾಗಿದೆ. ಇಂತಹ ನೇಮಗಳು ಇವರಲ್ಲಿ ಇಲ್ಲವಾದರೂ ಸಮಾಜದ ಪರಿವರ್ತನೆಗಳಲ್ಲಿ ಮೇಲಿನ ಅಂಶಗಳು ಸೇರಿಕೊಂಡಂತೆ ಕಂಡುಬರುತ್ತದೆ.

**೭.೧೧.೧೧. ಕುಟುಂಬದ ಮೇಲೆ ಮದುವೆಯ ಪರಿಣಾಮ :** ಮದುವೆಯಂದಕ್ಷಣವೇ ಖರ್ಚುಯಾದದ್ದು ಕಣ್ಣಮುಂದೆ ಬರುತ್ತದೆ. ನೂರಾರು ವಸ್ತುಗಳಿಗೆ ಹಣ ಖರ್ಚು

ಮಾಡಬೇಕಾಗುತ್ತದೆ. ಜಂಗಮ ಆರ್ಥಿಕವಾಗಿ ಪ್ರಬಲವಾಗಿ ಕಂಡುಬರುವುದಿಲ್ಲ. ಏಕೆಂದರೆ ಇವರ ಕೆಲಸ ಭೀಕ್ಷೆ ಬೇಡುವುದು ಭಕ್ತರು ನೀಡಿದ ಕಾಣಿಕೆಯ ಮೇಲೆ ತಮ್ಮ ಜೀವನವನ್ನು ಸಾಗಿಸುತ್ತಾರೆ. ಹೀಗಾಗಿ ಸಮಾಜದಲ್ಲಿ ಉನ್ನತ ಸ್ಥಾನದಲ್ಲಿ ಬರುತ್ತಾರೆ ವಿನಹ ಆರ್ಥಿಕತೆಯಲ್ಲಿ ಕೆಳಸ್ಥಾನವನ್ನು ಪಡೆಯುತ್ತಾರೆ. ಇವರ ಕೆಲಸ ಸಮಾಜ ಸೇವೆ, ಹೊಲ-ಗದ್ದೆಗಳು ಇವರಿಗಿಲ್ಲ. ಕೆಲವರಲ್ಲಿ ಎಲ್ಲಾ ಸೌಕರ್ಯಗಳು ನೋಡಬಹುದು. ಇದರಿಂದ ಜಂಗಮರು ಮದುವೆಯಿಂದ ತುಂಬ ಕಷ್ಟದಲ್ಲಿ ಸಿಲುಕಿಕೊಂಡು ಮತ್ತೆ ಸಮಾಜದ ಜನರೊಂದಿಗೆ ನಗುತ್ತಾ ಬಾಳುತ್ತಾರೆ. ಕೆಲವು ಭಕ್ತರ ದವಸಧಾನ್ಯಗಳಿಂದ ನೀಡುತ್ತಾರೆ. ಮತ್ತೊಬ್ಬ ಭಕ್ತರ ಮದುವೆಯು ಮತ್ತೊಂದು ಏನನ್ನು ನೀಡಿ ಜಂಗಮರ ಮದುವೆಗಳು ನಡೆಸಿಬಿಡುತ್ತಾರೆ. ವರದಕ್ಷಿಣೆ ಹಣವನ್ನು ಮಾತ್ರ ಬಾಕಿಯಾಗುತ್ತದೆ. ಅದು ತನ್ನ ಭೀಕ್ಷೆಯನ್ನು ಬೇಡಿ ಸಂಪಾದಿಸಲಿಕ್ಕೆಯಾಗುವುದಿಲ್ಲ. ಆದ್ದರಿಂದ ಮನೆ ನಡೆಯಬಹುದು, ಸಾಲ ಹೋಗುವುದಿಲ್ಲ. ಇದರಿಂದ ತನ್ನ ವೃತ್ತಿಯನ್ನು ಬಿಟ್ಟು ಇನ್ನಾವುದೋ ಕೆಲಸಗಳಲ್ಲಿ ತೊಡಗಿಸಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಾರೆ. ಕೆಲವು ಶ್ರೀಮಂತ ಜಂಗಮರಿಗೆ ಇಂತಹ ಕಷ್ಟಗಳು ಬರುವುದಿಲ್ಲ. ಆದರೂ ಜಂಗಮರು ತಮ್ಮ ಕೈಲಾದ ಮಟ್ಟದಲ್ಲಿ ಲಗ್ನವನ್ನು ನೇರವೇರಿಸಿ ಸಾಗಿಸುತ್ತಾರೆ. ಆದರೆ ಮಕ್ಕಳಿಗೆ ಶಾಲೆ ಬಿಡಿಸಿ ತಮ್ಮ ಕಾಯಕಕ್ಕೆ ಹಚ್ಚುತ್ತಾರೆ. ಮಕ್ಕಳ ಓದಿಗೆ ಹೊಡೆತ ಬೀಳುತ್ತದೆ. ಕುಟುಂಬರು ದೊಡ್ಡದಾದಾಗ ಅವರು ಊರಲ್ಲಿ ಮಾಡಿದ ಕಾರ್ಯದಿಂದ ಹೊಟ್ಟೆ ತುಂಬುವುದಿಲ್ಲ. ಇದರಿಂದ ಹಲವಾರು ಕೆಲಸಕ್ಕೆ ಹೋಗುತ್ತಾರೆ. ಇದರಿಂದ ಜನಗಳು ಜಂಗಮರ ಹೊಟ್ಟೆಯಲ್ಲಿ ಹುಟ್ಟಿ ಎಂತಹ ಕೆಲಸ ಮಾಡುತ್ತಿದ್ದಾನೆ ಎಂಬ ಅಪವಾದಗಳಿಗೆ ಗುರಿಯಾಗುತ್ತಾರೆ. ಒಟ್ಟಿನಲ್ಲಿ ಜಂಗಮ ಸಮುದಾಯದಲ್ಲಿ ಮದುವೆಗಳಿಂದ ಸುಮಾರು ಪರಿಣಾಮಗಳು ಅವರ ಕುಟುಂಬದ ಮೇಲೆ ಬೀಳುತ್ತವೆ. ಆದರೂ ಭಕ್ತರು ಇವರ ಮದುವೆಯಲ್ಲಿ ಎಲ್ಲರ ಶ್ರದ್ಧೆಯಿಂದ ದುಡಿದು ಮದುವೆ ಸಫಲಗೊಳಿಸುತ್ತಾರೆ.

## ೮ ಮರಣ ಸಂಸ್ಕಾರಗಳು

ಹುಟ್ಟಿದ ಮನುಷ್ಯನು ಒಂದಿಲ್ಲೊಂದು ದಿವಸ ಸಾಯಿವುದು ಸತ್ಯ. ಏಕೆಂದರೆ ದೇಹವು ಸ್ಥಿರವಾದುದಲ್ಲವೆಂಬುದು ಪ್ರತಿಯೊಬ್ಬರಿಗೂ ಗೊತ್ತಾದ ವಿಷಯ. ಅದಕ್ಕೆ 'ಜಾತಸ್ಯ ಮರಣಂ ಧೃವಮ್' ಎನ್ನುವಂತೆ ಹುಟ್ಟಿರುವನು ಸಾಯುವುದು ನಿಶ್ಚಯವಾದದು. ಹುಟ್ಟಿದ ಬಗ್ಗೆ ನಿಖರವಾಗಿ ಹೇಳಬಹುದಾದರೂ ಸಾವಿನ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಸಾಯುವ ಸಮಯಕ್ಕೆ ತಾನು ಮಾಡಿರುವ ಪಾಪ-ಪುಣ್ಯ, ಕಷ್ಟ-ನಷ್ಟ, ನೆರೆಹೊರೆಯರಿಗೂ ಕೊಟ್ಟ

ತೊಂದರೆಗಳನ್ನು ಇಳಿವಯಸ್ಸಿನಲ್ಲಿ ನೆನೆದು ದುಃಖಿಸುವುದು ಸಹಜವಾಗಿದೆ. ಮತ್ತು ತಾನು ಹಾಗೆ ಮಾಡಬಾರದಿತ್ತೆಂದು ಪಶ್ಚಾತ್ತಾಪ ವ್ಯಕ್ತಪಡಿಸುತ್ತಾನೆ. ಮುಂದೆ ನನ್ನ ಎಲ್ಲಾ ತಪ್ಪುಗಳನ್ನು ದೇವರೆ ಮನ್ನಿಸಿ ಮುಕ್ತಿ ಹಾದಿಯನ್ನು ತೋರಿಸು ಎಂದು ಬೇಡಿಕೊಳ್ಳುತ್ತಾನೆ.

'ಮರಣ' ಅಥವಾ ಸಾವು ಎನ್ನುವ ಶಬ್ದಕ್ಕೆ ಅನೇಕ ಅರ್ಥದಲ್ಲಿ ಕರೆಯುತ್ತಾರೆ. ಆದರೆ ಜಂಗಮರಲ್ಲಿ ಸಾವು ಎಂದು ಕರೆಯುವುದಿಲ್ಲ. 'ಲಿಂಗೈಕ್ಯ' ಎಂದು ಕರೆಯುವುದುಂಟು. ಮರಣವೇ ಮಹಾನವಮಿ ಎಂದು ಭಾವಿಸಿ ಸಂತೋಷವಾಗಿ ಸಾಯುತ್ತಾರೆ. ಸಾಯುವ ಸಮಯ ಆವರಿಸಿದಂತೆ ಜಂಗಮ ಗುರುವನ್ನು ಕರೆಯಿಸಿಕೊಂಡು ಅವರ ಪಾದಪೂಜೆಯನ್ನು ಮಾಡಿ ಶಿವೈಕ್ಯವಾಗತಕ್ಕ ಭಕ್ತನನ್ನು ಪಾದತೀರ್ಥ ಪ್ರಸಾದವರ ಕೊಟ್ಟು ಭಕ್ತ ಮತ್ತು ಮಹೇಶ್ವರರ ಮಧ್ಯ ವಿಭೂತಿ ವೀಳ್ಯವನ್ನಿಟ್ಟಿರುತ್ತಾರೆ. ಅಂದೆ ವಿಭೂತಿ - ದಾನ ದಕ್ಷಿಣೆಗಳನ್ನಿಟ್ಟು ಗುರು ಉಪದೇಶ ಬಲದಿಂದ ಮುಕ್ತಿ ಹಾದಿ ಕೊಂಡುಕೊಳ್ಳಲಾಗುತ್ತದೆ ಎಂದು ನಂಬಲಾಗಿದೆ. ನಂತರ ಜಂಗಮವರ್ಯನ ಪಾದದ ಅಳತೆಯಿಂದ ಮಾಡಿ ಒಂಬತ್ತು ಪಾದ ಉದ್ದ ಐದು ಪಾದ ಅಗಲ ಚೌಕೋನಾಕಾರದ ಜಾಗದಲ್ಲಿ ಆಕಳ ಮೂತ್ರ ಹಾಲು ಮೋಸರು ತುಪ್ಪಗಳಿಂದ ಸಾರಣಿ ಕಾರಣಿಗಳಿಂದಲಂಕಾರಿಸಿ ಅದರ ಮೇಲೆ ಭಸ್ಮದ ಹಾಸಿಗೆಯನ್ನು ಮಾಡಿ ಇದರ ಮೇಲೆ ಬಿಳಿ ಹೊಸ ಬಟ್ಟೆಯನ್ನು ಹಾಸಲಾಗುತ್ತದೆ. ಸಾಯುವ ವ್ಯಕ್ತಿಯನ್ನು ಸ್ನಾನ ಮಾಡಿಸುತ್ತಾರೆ. ತದನಂತರ ಜಂಗಮ ಗುರುವಿನ ಹತ್ತಿರ ತಂದು ಕುಳ್ಳಿರಿಸುತ್ತಾರೆ. ಆಗ ಗುರುಗಳು ಆತನ ಮಸ್ತಕ, ಎರಡು ಕಿವಿಗಳಿಗೆ, ಕುತ್ತಿಗೆ, ಎರಡು ಭುಜಗಳು, ಹೃದಯ, ನಾಭಿ, ಬೆನ್ನು ಎರಡು ಮೊಳಕೈಗಳು, ಎರಡು ಹೆಗಲುಗಳು, ಎರಡು ಮುಂಗೈಗಳು, ಹೀಗೆ ಈ ಹದಿನೈದು ಸ್ಥಾನಗಳಲ್ಲಿ ವಿಭೂತಿ ತ್ರಿಪುಂಡ್ರ(ಮೂರುಪಟ್ಟಿ)ಧಾರಣವನ್ನು ಮಾಡುತ್ತಾರೆ. ತದನಂತರ ಶಿಖಾಸ್ಥಾನಗಳಲ್ಲಿ ಶಿರಸ್ಸಿನಲ್ಲಿ ೩, ಮಸ್ತಕದಲ್ಲಿ ೩೬, ಬಲಬುಡಕಿವಿಗಳಲ್ಲಿ ಆರು - ಆರು, ಕಂಠದಲ್ಲಿ ೩೨, ಎದೆಯಲ್ಲಿ ೫೦, ಬಲತೋಳಿನಲ್ಲಿ ೧೯, ಎಡತೋಳಿನಲ್ಲಿ ೧೬, ಬಲಮುಂಗೈ - ಎಡಮುಂಗೈಯಲ್ಲಿ ೨೪, ಹೀಗೆ ಜಂಗಮಗುರು ಭಕ್ತನಿಗೆ ಧಾರಣ ಮಾಡಿಸುತ್ತಾರೆ. ಮೇಲಿನ ಅಷ್ಟು ರುದ್ರಾಕ್ಷಿಗಳು ಸಿಗಲಿಲ್ಲ ಎಂದರೆ ಒಂದಾದರೂ ಕೊರಳಲ್ಲಿ ಕಟ್ಟುತ್ತಾರೆ. ಆಮೇಲೆ ಒಂದು ತಟ್ಟೆಯಲ್ಲಿ ಒಂದು ತೆಂಗಿನಕಾಯಿ, ಒಂದು ಭಸ್ಮದ ಉಂಟೆ, ೨ ವೀಳ್ಯದ ಎಲೆ, ಅಡಕಿ, ಇಷ್ಟು ವಸ್ತುಗಳು ಜಂಗಮ ಮುಂದೆ ಇಡುತ್ತಾರೆ. ಆ ಮೇಲೆ ವಿಭೂತಿ ವೀಳ್ಯದ ಕ್ರಿಯೆಗಳು ನಡೆಯುತ್ತವೆ.

ವಿಭೂತಿ ಹಾಸಿಗೆಯನ್ನು ಮಾಡಿರುವುದರ ಮೇಲೆ ಆ ಭಕ್ತನನ್ನು ಉತ್ತರಕ್ಕೆ ಪಾದ ಕ್ಷಣಕ್ಕೆ ತಲೆಮಾಡಿ ರಂಗವಲ್ಲಿ ಮೇಲೆ ಮಲಗಿಸುತ್ತಾರೆ. ಆಗ ಜಂಗಮ ಅವನ ಕಡೆ ಉತ್ತರಮುಖ ಮಾಡಿ ಕುಳಿತುಕೊಳ್ಳುತ್ತಾರೆ. ವಿಭೂತಿ ವೀಳೆ ಮಾಡಿಸಿಕೊಳ್ಳುವವನ ಲಿಂಗವನ್ನು ಜಂಗಮ ಪೂಜಿಸುತ್ತಾರೆ. ಆ ಮೇಲೆ ಒಂದು ಬಟ್ಟೆಯಲ್ಲಿ ಕಟ್ಟಿ ಅವನ ಎಡಗೈ ರಟ್ಟೆಯಲ್ಲಿ ಕಟ್ಟುತ್ತಾರೆ. ತರುವಾಯ ಜಂಗಮ ತನ್ನ ಎರಡು ಪಾದಗಳು ಭಕ್ತನ ತಲೆಯ ಮೇಲೆ ಇಡುತ್ತಾರೆ. ಫಲಪುಷ್ಪಗಳಿಂದ ಪೂಜಿಸುತ್ತಾರೆ. ಆಗ ಅವನ ಬಲ ಕಿವಿಯಲ್ಲಿ ೩೬ ಸಲ ಪ್ರಮಾಣಸಹಿತವಾದ ಪಂಚಾಕ್ಷರಿ ಮಂತ್ರವನ್ನೆ ಹೇಳುತ್ತಾರೆ. ನೆರೆದವರು ಉಘೇ ಉಘೇ ಚಾಂಗುಭಲರೆ ಎಂದು ಎತ್ತರದ ಧ್ವನಿಯಲ್ಲಿ ಜಯಘೋಷಿಸುತ್ತಾರೆ. ಆಗ ಗುರುಗಳು ಶತರುದ್ರೀಯ, ಶ್ವೇತಾಶ್ವಂತರ, ಅಥರ್ವಶಿರ, ಅಥರ್ವಶಿಖಾ, ಕೈವಲ್ಯಗಳೆಂಬ ಪಂಚರುದ್ರಗ'ಳನ್ನೆ ಉಚ್ಚ ಸ್ವರದಲ್ಲಿ ಹೇಳುತ್ತಾರೆ. ನಂತರ ಮಂಗಲ ಮಾಡಿ ನೆರೆದವರಿಗೆ ಬಿಲ್ವಪತ್ರಿ - ಪುಷ್ಪಗಳನ್ನು ಕೊಡಲಾಗುತ್ತದೆ. ಆಗ ಲಿಂಗೈಕ್ಯ ಅಷ್ಟಕ - ವಾರ್ಧಕ ಸೂತ್ರಗಳು ಹೇಳಿ ಎಲ್ಲಾ ವೀಳೆ ಮಾಡಿಸಿಕೊಳ್ಳುವ ವ್ಯಕ್ತಿಯ ಮೇಲೆ ಪುಷ್ಪ ಬಿಲ್ವ ಪತ್ರಿಗಳು ಹಾಕುತ್ತಾರೆ. ನಂತರ ತೆಂಗಿನ ಕಾಯಿ ಒಡೆದು ಅದರ ನೀರನ್ನು ಎಲ್ಲರಿಗೂ ತೀರ್ಥದ ರೂಪದಲ್ಲಿ ಹಂಚುತ್ತಾರೆ. ನಂತರ ಜಂಗಮ ಗುರುಗಳಿಗೆ ಪ್ರಸಾದ ವೀಳೆ ಮಾಡಿಸಿಕೊಂಡಿರುವುದರಿಂದ ಕೈಯಿಂದ ಆಕಳು , ಭೂಮಿ, ಬಂಗಾರ, ತಂಬಿಗೆ, ಗಂಗಾಳ, ವಸ್ತ್ರ, ಭಸ್ಮ, ದಕ್ಷಿಣೆ, ಧಾನ್ಯಗಳನ್ನು ನೀಡಿ ಗೌರವಿಸುತ್ತಾರೆ. ಈ ರೀತಿ ಮಾಡುವುದರಿಂದ ಆತನಿಗೆ ಪರದಲ್ಲಿ ಸದ್ಗತಿ ಸಿಗುವುದೆಂದು ನಂಬಲಾಗಿದೆ. ನಂತರ ನೆರೆದವರಿಗೆಲ್ಲರಿಗೂ ಪ್ರಸಾದ ಹಂಚುತ್ತಾರೆ.

ವಿಭೂತಿ ವೀಳೆ ಮಾಡಿಕೊಂಡಿರುವ ವ್ಯಕ್ತಿ ಹೆಚ್ಚು ದಿನ ಬದುಕುವುದಿಲ್ಲ. ಹಂತ ಹಂತವಾಗಿ ಸಾವಿನ ಸಮೀಪ ಬರುತ್ತಾನೆ. ಸಾವಿನ ಪೂರ್ವದಲ್ಲಿ ಮಾಡುವ ಸಂಸ್ಕಾರವೆಂದು ಕರೆಯುವುದುಂಟು. ಹೆಚ್ಚು ದಿನ ಸಾಯಲಿಲ್ಲ ಎಂದರೆ ಅವರಿಗೆ ಕಾಡಿನೊಳಗೆ ಇಟ್ಟ ಬರುತ್ತಿದ್ದರು. ಇಲ್ಲವಾದರೆ ವ್ಯಕ್ತಿ ಸಾಯುವ ತನಕ ಜಂಗಮರಿಗೆ ಪ್ರತಿ ದಿನ ಊಟಕ್ಕೆ ಕರೆದು ಪಾದೋದಕದಿಂದ ಮನೆಯಲ್ಲಿ ಸಿಂಪಡಿಸಿ ತೀರ್ಥ ತೆಗೆದುಕೊಂಡು ಭೋಜನವನ್ನು ಮಾಡಿಸುತ್ತಾರೆ. ಇದು ಮನಷ್ಯನಿಗೆ ಸಾಯುವುದು ಗೊತ್ತಾದಾಗ ಈ ಕ್ರಿಯೆ ಮಾಡುತ್ತಾರೆ. ಸಾಯಿವರೆಗೂ ವ್ಯಕ್ತಿಗೆ ಭಜನೆ, ಕೀರ್ತನೆ, ದಾನಧರ್ಮದಲ್ಲಿ ಪಾಲ್ಗೊಳ್ಳಲು ಹೇಳುತ್ತಾರೆ. ಅದರಂತೆ ಅವನು ನಡೆದುಕೊಳ್ಳುತ್ತಾನೆ. ಹೀಗೆ ಇದು ಇಂದು ಹೆಚ್ಚು ನಡೆಯುವದು ಕಂಡು ಬರುವುದಿಲ್ಲ. ಕೆಲವು ಹಿರಿಯ ಜಂಗಮರು ಬಹಳ ದಿವಸದಿಂದ ಹಾಸಿಗೆ ಹಿಡಿದಿದ್ದಾರೆ. ಈ

ರೀತಿಯ ವಿಭೂತಿ ವೀಳೆ ಮಾಡುತ್ತಾರೆ. ಹೆಚ್ಚಾಗಿ ದೊಡ್ಡ ಸ್ವಾಮಿಜಿಗಳಿಗೆ ಹಿರಿಯರಿಗೆ ಮಾಡುತ್ತಾರೆ. ವಿನಹ ಸಾಮಾನ್ಯ ಜಂಗಮರಿಗೆ ಈ ಕ್ರಮ ಮಾಡುವುದು ಕಂಡುಬರುವುದಿಲ್ಲ.

**೮.೧. ಸಾವಿನ ಸೂಚನೆ :** ಮನುಷ್ಯನ ದೇಹದಿಂದ ಈ ಜೀವವು ದೇಹದ ಒಂಭತ್ತು ದ್ವಾರಗಳ ಮೂಲಕ ಹೊರಗೆ ಹೋಗುತ್ತದೆ. ಸತ್ತಿರುವ ವ್ಯಕ್ತಿಯನ್ನು ಆತನ ಮುಂಗೈ ನಾಡಿ ಬಡಿತ ನೋಡಲಾಗುತ್ತದೆ. ಇಲ್ಲವೆ ಮೂಗಿನ ಹತ್ತಿರ ಉಸಿರಾಟ ನಡೆದಿದೆ ಎಂದು ಕೈ ಬೆರಳು ಹಿಡಿದು ನೋಡುತ್ತಾರೆ. ಮೈಯಲ್ಲಿ ಮುಟ್ಟಿ ನೋಡಿದಾಗ ತಣ್ಣಗಿದ್ದರೆ ಅವರ ಪ್ರಾಣ ಹಾರಿಹೋಗಿದ್ದಾರೆ ಎಂದು ತಿಳಿದು ತಕ್ಷಣ ಅವನ ಕಾಲುಗಳು ಮಡಚುತ್ತಾರೆ. ಏಕೆಂದರೆ ಸಮಯ ಬಹಳವಾದರೆ ಕಾಲುಗಳು ಸೆಟೆದುಕೊಳ್ಳುತ್ತವೆಂದು ತಿಳಿದು ಮತ್ತೆ ತೊಂದರೆಯಾಗುವುದೆಂದು ಹೀಗೆ ಮಾಡುವರು. ಇಲ್ಲವಾದರೆ ಶವ ಗೂಡಿಗೆ ಕೂಡಿಸಲು ಬರುವುದಿಲ್ಲ. ಇದರಿಂದ ಮುಂದೆ ಶವಕ್ಕೆ ಅಲಂಕರಿಸಲು ಅಥವಾ ಶೃಂಗಾರ ಮಾಡಲು ಬರುವುದಿಲ್ಲವೆಂದು ಹೀಗೆ ಮಾಡುವುದುಂಟು.

ಹಿರಿಯರು ಹೇಳುವ ಪ್ರಕಾರ ಸಾವು ಕಣ್ಣುಗಳಿಂದ ಉಸಿರು ಹೋಗಿ ಸತ್ತಿದ್ದರೆ ಕಣ್ಣು ತೆರೆದು ಇರುತ್ತವೆ. ಬಾಯಿಂದ ಗಾಳಿ ಹೋದರೆ ಬಾಯಿ ತೆರೆದು ಸಾಯುತ್ತಾರೆ. ಗುದದ್ವಾರದ ಮಾರ್ಗವಾಗಿ ಗಾಳಿ ಹೋದರೆ ವಿಸರ್ಜನೆಯಾಗುವುದು, ಹೊಟ್ಟೆಯ ಮೂಲಕ ಗಾಳಿ ಹೋದರೆ ಮೂತ್ರ ಹೋಗುತ್ತದೆ, ಮೂಗಿನಿಂದ ಅಥವಾ ಕಿವಿಗಳಿಂದ ಗಾಳಿ ಹೋಗಿದ್ದರೆ ಗೊತ್ತಾಗುವುದಿಲ್ಲ ಎಂದು ಹೇಳುತ್ತಾರೆ. ಹೀಗೆ ಮೇಲಿನ ಯಾವುದೇ ಸೂಚನೆಗಳ ಮೂಲಕ ಸತ್ತು ಹೋದರೆ ಮೇಲಿನಂತೆ ತಿಳಿದುಕೊಳ್ಳುತ್ತಾರೆ.

ವ್ಯಕ್ತಿ ಸತ್ತ ತಕ್ಷಣವೇ ಅವರ ಸಂಬಂಧಿಕರನ್ನು ಸುದ್ದಿ ಮುಟ್ಟಿಸಲು ಅವರ ಮನೆಯ ಅಂದರೆ ದೊಡ್ಡೆ ಮಾದಿಗನನ್ನೆ ಕರೆಯಿಸಿ ಇಂತಹ ಊರಿಗೆ ಹೋಗಿ ಇಂತಹರು ತೀರಿದ್ದಾರೆ ಎಂದು ತಿಳಿಸಿ ಬಾ ಎಂದು ಕಳುಹಿಸುತ್ತಾರೆ. ಮತ್ತೆ ಕೆಲವು ತಮ್ಮ ಬಂಧು ಬಳಗದವರು, ಸ್ನೇಹಿತರು ಕೂಡ ಮೋಟಾರ ಗಾಡಿಗಳಲ್ಲಿ ಹೋಗಿ ಮಣ್ಣಿನ ಸಮಯ ಮೀರದಂತೆ ಬೇಗನೆ ಬರುವುದಕ್ಕೆ ಹೇಳುತ್ತಾರೆ. ಇಂದಿನ ಸಂದರ್ಭದಲ್ಲಿ ಅನೇಕ ರೀತಿಯ ಸರಕುಗಳನ್ನು ಒದಗಿವೆ. ಕೆಲವೇ ನಿಮಿಷದಲ್ಲಿ ಸುದ್ದಿ ಮುಟ್ಟಿಸುತ್ತಾರೆ. ಆದರೆ ಹಿಂದೆ ಹೆಚ್ಚು ಸರಕುಗಳು ಇರದ ಕಾರಣದಿಂದ ಶವದ ಮಣ್ಣಿಗೆ ಕೆಲವರು ಬರುತ್ತಿದ್ದರು, ಕೆಲವರಿಗೆ ಸಿಗುತ್ತಿರಲಿಲ್ಲ. ಆದರೆ ಇಂದು ಹಾಗಲ್ಲ ಹೇಳಿನವರು ಖಂಡಿತವಾಗಿ ಮಣ್ಣಿಗೆ ತಲುಪುತ್ತಾರೆ.

**೮.೨. ಶವ ಸಂಸ್ಕಾರ :** ಹಿರಿಯರಿಗೆ ಮಠದ ಜಂಗಮರಿಗೆ, ಕಿರಿಯರಿಗೆ ಮತ್ತು ಮಕ್ಕಳಿಗೆ ಅಲ್ಲದೆ ವೈವಾಹಿಕ ಸ್ಥಾನಮಾನ ಮತ್ತು ಸಾಮಾಜಿಕ, ಆರ್ಥಿಕ ಅಂತಸ್ತಿಗನುಗುಣವಾಗಿ ಶವ ಶೃಂಗಾರ ನಡೆಯುತ್ತದೆ.

**೮.೩. ಮಠಸ್ಥರು ಮತ್ತು ಮದುವೆಯಾದವರ ಶವಸಂಸ್ಕಾರ :** ಮಠಸ್ಥ ಜಂಗಮ ತೀರಿದರೆ ಅವರ ಗುರುಗಳಾಗಲಿ ಗುರುಗಳಿಲ್ಲದ ಸಂದರ್ಭದಲ್ಲಿ ಅವರ ಮರಿ ಜಂಗಮರಿಂದ ಸಂಸ್ಕಾರವು ನೆರವೇರುತ್ತದೆ. ಮೊದಲು ನೀರಿನಲ್ಲಿ ಜಂಗಮ ಗುರುವಿನ ಪಾದೋದಕವನ್ನು ಸೇರಿಸಿ ಲಿಂಗೈಕ್ಯನಿಗೆ ವಿಭೂತಿ ಎಣ್ಣೆ ಹಚ್ಚಿ ಸ್ನಾನಮಾಡಿಸುತ್ತಾರೆ. ನಂತರ ಹಿಂದಿನ ಮಗ್ಗಲ ಅಂಗಿ ಮುಂದಕ್ಕೆ ಮುಂದಿನ ಮಗ್ಗಲ ಅಂಗಿ ಹಿಂದಕ್ಕೆ ಮಾಡಿ ಬಿಳಿ ಬಟ್ಟೆಗಳು ತೊಡಿಸುತ್ತಾರೆ. ದೇಹಕ್ಕೆ ವಿಭೂತಿ ಸವರಿ ಶುದ್ಧ ಜಲ ಸಮ್ಮಿಶ್ರವಾದ ಭಸ್ಮ ತ್ರಿಪುಂಡವನ್ನು ದೇಹದ ಆಯಾ ಸ್ಥಾನಗಳಲ್ಲಿ ಧರಿಸಿ ರುದ್ರಾಕ್ಷಿಗಳಿಂದ ಆಲಂಕರಿಸಿ ಪರಿಶುದ್ಧವಾದ ಒಂದು ಗೋಡೆಯ ಸಮೀಪದ ಸ್ಥಳದಲ್ಲಿ ಗಾಯತ್ರಿ ಮಂತ್ರದಿಂದ ನೀರು ಸಿಂಪಡಿಸಿ ಆ ಕಡೆ ಈ ಕಡೆ ಒಂದು ದೊಡ್ಡ ಚೌಕಿಯನ್ನು ಅಥವಾ ಅರಗಲ್ಲುಗಳನ್ನು ಇಟ್ಟು ಅದರ ಮೇಲೆ ಹೆಚ್ಚಾಗಿ ಅರಳಿಯನ್ನು ಹರಡಿ ಅಥವಾ ವಿಭೂತಿಯನ್ನು ಒಡೆದು ಹರಡುತ್ತಾರೆ. ಆ ಶುದ್ಧ ಸ್ಥಾನದ ಮೇಲೆ ಲಿಂಗಶರೀರವನ್ನು ಕುಳ್ಳಿರಿಸುತ್ತಾರೆ. ಏಕೆಂದರೆ ಗುದದ್ವಾರದ ಮೂಲಕ ಮಲಿನ ಪದಾರ್ಥ ಬರಬಹುದು. ಅದರಿಂದ ಪರಿಸರ ಮಾಲಿನ್ಯ ಆಗಬಹುದೆಂದು ಹೀಗೆ ಮಾಡುತ್ತಾರೆ. ಬಾಯಿಯ ಮೂಲಕ ದುರ್ವಾಸನೆ ಬರುವುದನ್ನು ತಡೆಯಲು ಒಂದು ಬಿಳಿ ಬಟ್ಟೆಯಿಂದ ಬಾಯಿಗೆ ಗಟ್ಟಿಯಾಗಿ ಕಟ್ಟುತ್ತಾರೆ. ಅದಕ್ಕೆ 'ಗಲಕಟ್ಟು' ಎಂದು ಕರೆಯುತ್ತಾರೆ. ಇಲ್ಲವೆ ತುಟಿಗಳಿಗೆ ಅಂಟಿನ ಮೂಲಕವು ಬಾಯಿ ಮುಚ್ಚುತ್ತಾರೆ. ನಂತರ ಶವದ ಮೇಲೆ ಸುಗಂಧವನ್ನು ಸಿಂಪಡಿಸುತ್ತಾರೆ. ಒಳ್ಳೆಯ ಅಗರಬತ್ತಿ ಹೊತ್ತಿಸುತ್ತಾರೆ. ದುರ್ವಾಸನೆ ತಡಿಯುವ ಸಲುವಾಗಿ ಮಾಡುತ್ತಾರೆ. ಶವವು ಸರಿಯಾಗಿ ಕೂಡಿಸಲಿಕ್ಕೆ ಆ ಕಡೆ ಈ ಕಡೆ ಸಿಪಾಯಿ ಆಕಾರದ ಕಟ್ಟಿಗೆಯನ್ನು ಶವದ ಕುತ್ತಿಗೆಗೆ ನೆಡಸುತ್ತಾರೆ. ಆಗ ಶವ ಚೆನ್ನಾಗಿ ಕೂಡುತ್ತದೆ. 'ಊರು ಉಪಕಾರ ಅರಿಯುದು ಹೆಣ ಶೃಂಗಾರ ಅರಿಯದು' ಎನ್ನುವಂತೆ ಸುಂದರವಾಗಿ ಅಲಂಕರಿಸುತ್ತಾರೆ. ಒಂದು ವೇಳೆ ಮೃತ ವ್ಯಕ್ತಿಯು ಸುಮಂಗಲೆ ಯಾಗಿದ್ದರೆ ಮೇಲಿನಂತೆ ಎಲ್ಲಾ ರೀತಿಯಿಂದ ಶೃಂಗರಿಸಿ ಹೂವಿನ ದಂಡೆ ಹಾಕಿ ಕಲಶ ಇಳಿಬಿಡಲಾಗುತ್ತದೆ. ಇದು ಮುತ್ತೈದಿ ಸಾವಿನ ಸಂಕೇತವಾಗಿ ಹೀಗೆ ಮಾಡುತ್ತಾರೆ. ಅದಕ್ಕೆ ಹೆಣ್ಣು ಪತ್ನಿಯರು ಗಂಡನ ಮುಂದೆ ನಾ ಸಾಯಿಬೇಕೆಂದು ಹೇಳುವುದುಂಟು. ಹೀಗಾದರೆ ಮುತ್ತೈದಿ ಸಾವು ಸರಿ ಎಂದು

ನಂಬುತ್ತಾರೆ. ನಂತರ ಶವದ ಎಡತೊಡೆಯ ಮೇಲೆ ಬಲಪಾದವನ್ನಿಟ್ಟು ನೆರೆದವರ ಎಲ್ಲರ ಕೈಯಲ್ಲಿ ಬಿಲ್ವಪತ್ರಿ - ಹೂಗಳು ಕೊಟ್ಟ ಮಂಗಳಾರುತಿ ಮಾಡುತ್ತಾರೆ.

"ಜಯಮಂಗಳಂ ನಿತ್ಯ ಶುಭ ಮಂಗಳಂ
ಜಯ ಜಯತು ಶಿವಲಿಂಗ ವರ ಮೂರ್ತಿಗೇ
ನರಜನ್ಮದಲ್ಲಿ ಪುಟ್ಟ ಗುರು ದೀಕ್ಷೆಯಂ ಪಡೆದು
ಹರಿದು ಭವಬಳ್ಳಿಯನು ಎತ್ನೇಡ್ಯಾಡುತೇ
ಶರಣಗಣ ಸಾಕ್ಷಿ ಮುಂತಾಗಿ ಮಂತ್ರದರುವಿಂದೆ
ಹರಲೋಕಕೈದಿ ಪರಮನೊಳು ಬರೆದಗೆ!!
ಹಿಂದೆ ಹರಿದು ಮುಂದೆ ಮುರಿದು ನಡುವಿರುವ
ಗೊಂದಣವ ಕಡಿದುಳಿದು ಸತ್ಕ್ರಿಯಗಳಾ
ಅಂದವನು ತಿಳಿದು ಶಿವ ಶಿವ ಎನ್ನುತ
ಮಂದಾರಗಿರಿಗೈದಿ ಕಂದು ಕೊರಲನೊಳು ಬೆರೆವಾತಗೇ !!
ಅನುಭವದ ಹಾದಿಯಿರಿ ತಿಳಿದು ಮಹಘನವಾದ
ಅನುಭವದ ರಚನೆಯಂ ಚಲಿಸುತ್ತಲಿ
ಮನವು ಬೊಮ್ಮದಿನಿಂದು ಸತ್ಯದಿಂ
ತನುಸಹಾ ಶಿವಲಿಂಗ ಮೂರ್ತಿಯಾದಾತಗೇ !!"

(ಪುರೋಹಿತ ಚನ್ನವೀರಶಾಸ್ತ್ರಿ ಶಾಲಿಮಠ:೧೯೫:೨೧:೨೨).

ಈ ರೀತಿಯಿಂದ ಮಂಗಳಾರತಿ ಮಾಡಿ ನೆರೆದವರೆಲ್ಲರೂ ಮೃತ ದೇಹದ ಮೇಲೆ ಬಿಲ್ವಪತ್ರಿ-ಪುಷ್ಪಗಳು ಹಾಕುತ್ತಾರೆ.

ಮನುಜ ಶರೀರವಿದು ಏನೂ ಸುಖ
ದಿನದಿನಾ ಹಸುತೃಷ ಘನ ಘನ ರೋಗದಿ ತನುಮನ ಭಾದವಿದು ಏನೂ ಸುಖ!
ಸುಖವಿದು ಏನೂ ಸುಖ ! ಏನು ದು:ಖ;
ಮನುಜ ಶರೀರವಿದು ಏನೂ ಸುಖ ೧
ಜನನ ಮರಣ ಮಲದ ಕೋಪಗಳಿರುವುದು
ಅನುಭವಿಸದು ಏನೂ ಸುಖ ಏನು ಸುಖವಿದು ೨
ಏನು ಸುಖ ಮನುಜ ಶರೀರವಿದು ಏನೂ ಸುಖ
ಪುರಂದರ ವಿಠಲನ ಮನದಲ್ಲಿ ನೆನೆಯುತ
ಸತ್ಯದಲ್ಲಿ ನಡೆದರೆ ಆದ ಸುಖ

ಆದ ಸುಖವಿದು ಆದ ಸುಖ
ಮನುಜ ಶರೀರವಿದು ಏನೂ ಸುಖ

**ಹಾಡಿದವರು :** ಶ್ರೀಮತಿ ಶರಣಮ್ಮ ಕಾಡವಾದ

ಮಠದಯ್ಯಾ ಲಿಂಗೈಕ್ಯನಾದರೆ ಅಂದರೆ ರಾತ್ರಿ ಸಮಯದಲ್ಲಿ ತೀರಿದರೆ ಎಲ್ಲಾ ಭಕ್ತರು ಭಜನೆ, ತತ್ವಪದಗಳು ಹಾಡುತ್ತಾರೆ.

ಪ್ರಸಾದ ವ್ಯವಸ್ಥೆ ಕೂಡ ಮಾಡುತ್ತಾರೆ. ಬಂದ ಭಕ್ತರು ಪ್ರಸಾದವನ್ನು ಸೇವಿಸುತ್ತಾರೆ. ಹೀಗೆ ಸಂತೋಷದಿಂದ ಭಜನೆ ನಡೆಯುತ್ತದೆ. ಸಾಮಾನ್ಯ ಜಂಗಮರು ತೀರಿದರೂ ಕೂಡ ರಾತ್ರಿಯ ಸಮಯದಲ್ಲಿ ಭಜನೆ ಏರ್ಪಡಿಸುತ್ತಾರೆ. ಸತ್ತ ವ್ಯಕ್ತಿಯ ಸಂಬಂಧಿಕರು ಅವರವರಿಗೆ ತಕ್ಕಂತೆ ಶವದ ಮುಂದೆ ಅಳುತ್ತಾರೆ. ಅದು ಆಯಾ ಜನಾಂಗದಲ್ಲಿ ಆಯಾ ಪ್ರಕಾರವಾಗಿ ಕಂಡುಬರುತ್ತದೆ. ಹೆಣದ ಮೇಲೆ ಬಿದ್ದು ಎದೆ ಬಡಿದುಕೊಂಡು ಚೀರುತ್ತಾ ಬೊಬ್ಬೆ ಹೊಡೆಯುತ್ತಾ ಓಡುತ್ತಾ ಬಂದು ದು:ಖವನ್ನು ಹಾಡಿನಲ್ಲೆ ಸುಂದರವಾಗಿ ವ್ಯಕ್ತಪಡಿಸುತ್ತಾರೆ. ಸುತ್ತಾ ಮುತ್ತಾ ಕುಳಿತವರು ಹೆಣಕ್ಕೆ ನೊಣವನ್ನು ಜಾಡಿಸುತ್ತಾ ತಮಗೆ ಕಂಡಂತೆ ಅಳುತ್ತಾರೆ. ನೆರೆದ ಜನರು ಅವರ ದು:ಖಕ್ಕೆ ಕರಗಿ ಅವರುಗಳು ಅಳುತ್ತಾರೆ. ಸತ್ತ ವ್ಯಕ್ತಿಯ ಗುಣಗಾನ ಮಾಡುತ್ತಾರೆ. ಒಬ್ಬಬ್ಬರೂ ಒಂದು ರೀತಿಯಲ್ಲಿ ಹೊಗಳುತ್ತಾರೆ. ಅವರ ದೇಹದ ಪರವೆಯಿರಲಾರದೇ ಕೊರಳಿಗೆ ಕೊರಳಾಡಿ ಅಳುತ್ತಾರೆ.

"ನನ ದೇವ್ರೆ ನಿಮಗೇನು ಬಂದಿತಪ್ಪ
ಆ ದೇವ್ರು ನಿನಗೆ ಯಾಕ ಕರಕೊಂಡ ಹೋದಪ್ಪ
ನಮಗಿನ್ಯಾರಪ್ಪ ದೇವ್ರೆ
ನಮ್ಮ ಬಾಯಿಗೆ ಮಣ್ಣು ಹಾಕದ್ಯಲ್ಲಪ್ಪ
ಮುತ್ತಿನಂಥ ಹೆಂಡ್ತಿ ಮಕ್ಳಿಗೆ ಬಿಟ್ಟು ನಡದಲಪ್ಪ
ನಮಗ ಯಾರಾದ್ರೊ ಏನಾದ್ರೂ ಅಂದ್ರೆ ಆಡಿದ್ರೆ
ಸುಮುಕ ಇರುತಿದ್ದಿಲ್ಲಪ್ಪಾ
ಇನ್ಯಾರ ನಮಗೆ ಬೆನ್ನಾಸಾರೆ ಕೇಳುವರು
ಹೇಳೋ ಅಪ್ಪಾ
ನೋಡಾ ನೋಡಾ ನಮ್ಮ ಕಣ್ಣಿಗಿ
ಸುಣ್ಣಾ ಹೊಯ್ದಿಲೋ ಶಿವಾ ....."(ಹೆಬ್ಬಾಳ ಜಗನ್ನಾಥ:೨೦೦೦:೨೬).

ಹೀಗೆ ಸತ್ತವರ ಸಂಬಂಧಿಕರು ಹೊಗಳುತ್ತಾ ಜೀವನದಲ್ಲಿ ಅವನು ಮಾಡಿರುವ ಕೆಲಸ

ಕಾರ್ಯಗಳು ನೆನೆಸಿಕೊಂಡು ದು:ಖವು ಹಾಡಿನಂತೆ ವ್ಯಕ್ತಪಡಿಸುತ್ತಾರೆ. ಶವ ಸಂಸ್ಕಾರ ಮಾಡಲು ಊರಿನ ಕೆಳವರ್ಗದ ನಾಲ್ಕೈದು ಜನರು ಕುಣಿ ಅಗಿಯಲು ಕಳುಹಿಸುತ್ತಾರೆ. ಅವರು ಪಿಕಾಸಿ, ಸಲಕೆ, ಗುಸಿ, ಬುಟ್ಟಿ ಮತ್ತು ಕುಳ್ಳಿನ ಮೇಲೆ ಬೆಂಕಿಯನ್ನು ತೆಗೆದುಕೊಂಡು ಊರಿನ ಅಗಸಿ ಬಾಗಿಲಿನ ಮೂಲಕ ಹೊರಡುತ್ತಾರೆ. ಇತ್ತ ಕಡೆ ಭಾಜ, ಹಲಗೆ ವಾದ್ಯಗಳು ನಡೆಯುತ್ತವೆ. ಇವುಗಳ ಮೂಲಕ ಸತ್ತ ಸುದ್ದಿ ಎಲ್ಲಾ ಕಡೆ ಹರಡುತ್ತದೆ. ಕೆಲವರು ಭಕ್ತರು ನೋಡಲು ಬಂದು,

"ಎಷ್ಟು ಚಂದ ಅಯ್ಯನೋರ
ಕರೆದವರ ಮನಿಗಿ ಬಂದು ಪೂಜಾ ಮಾಡಿ ಹೋಗುತ್ತಿದ್ದರು
ಯಾರಕೂಡ ಏನು? ಜಗಳ ಮಾಡುವ ಮನುಷ್ಯನೇ ಇದ್ದಿಲ್ಲ
ಕೊಟ್ಟಷ್ಟು ತೊಕೊಂಡು ಹೋಗುತ್ತಿದ್ದರು ......
ಇಂತಹ ಐನೋರಿಗೆ ದೇವರು ಜಲ್ದಿ ಕರಕೊಬ್ಯಾಡದಾಗಿತ್ತು ದೇವರೇ
ಇನಾ ನಾಕ್ಕ ದಿನ ಇಕ್ಕಬಾರದಾಗಿತ್ತಾ ದೇವರೇ ಸಣ್ಣ ಸಣ್ಣ ಮಕ್ಕಳಿಗೆ
ಬಿಟ್ಟು ನಡದಲ್ಲಪ್ಪ..... "

ಎಂದು ತಮಗೆ ಬಂದಂತೆ ದು:ಖ ವ್ಯಕ್ತಪಡಿಸುತ್ತಾರೆ. ಶವಕ್ಕೆ ಸ್ನಾನಾದಿಗಳು ಮಾಡಿಸಿದ ನಂತರ ಗೋಡೆಗೆ ಕೂಡಿಸಿ ಆರತಿ ಮಾಡುತ್ತಾರೆ. ಎಲ್ಲಾ ನೆಂಟರಿಷ್ಟರು ಬರುತ್ತಾರೆ. ಊರಿನ ಎಲ್ಲಾ ಜನರು ಆಗಮಿಸುತ್ತಾರೆ. ಹಲಗೆಯಲ್ಲಿ ಸತ್ತವರ ಸಂಬಂಧಿಕರು ರೊಕ್ಕ ಹಾರಿಸುತ್ತಾರೆ. ನೆಲದ ಮೇಲೆ ಬಿದ್ದ ರೊಕ್ಕ ಹಲಗೆ ಬಾರಿಸುವವರು ಹಲಗೆ ಬಾರಿಸುತ್ತಾ ಹಣೆಯಿಂದ ತೆಗೆದುಕೊಳ್ಳುತ್ತಾರೆ. ಬಂದ ನೆಂಟರಿಷ್ಟರು ಇತರರು ಶವಕ್ಕೆ ನಮಸ್ಕಾರ ಮಾಡುತ್ತಾರೆ. ಅವರವರ ಅನುಕೂಲಕ್ಕೆ ತಕ್ಕಂತೆ ರೂಪಾಯಿಗಳ ಸರಮಾಡಿ ಶವದ ಕೊರಳಲ್ಲಿ ಹಾರ ಹಾಕುತ್ತಾರೆ. ಗಂಡ ಸತ್ತರೆ ಅವರ ಹೆಂಡತಿಯನ್ನು ಶವದ ಜೊತೆ ಕುಳ್ಳಿರಿಸಿ ಅವಳಿಗೆ ಮುತ್ತೈದೆತನದ ಕೊನೆಯ ಅಲಂಕಾರವನ್ನು ಮಾಡುತ್ತಾರೆ. ಹೆಣ್ಣಿನ ತವರಿನವರು ಸೀರೆ ಕುಪ್ಪಸ ತರುತ್ತಾರೆ.

ತದನಂತರ ಶವವನ್ನು ಎತ್ತಿಕೊಂಡು ಹೋಗಲು ಮೂರು ನಾಲ್ಕು ಪ್ರಕಾರವಾಗಿ ತೆಗೆದುಕೊಂಡು ಹೋಗುತ್ತಾರೆ. ಇಲ್ಲಿ ಅವರವರ ಅಂತಸ್ಥಿನ ಪ್ರಕಾರ ಶವವನ್ನು ಹೊತ್ತುಕೊಂಡು ಅಥವಾ ರಥವನ್ನು ಮಾಡುತ್ತಾರೆ. ಮೃತದೇಹ ಬಹಳ ಹೊತ್ತು ಇಡುವುದರಿಂದ ಪರಿಸರ ಮಾಲಿನ್ಯ ಆಗಬಹುದೆಂದು ದೊಡ್ಡ ಚೀಲವೊಂದನ್ನು ತೆಗೆದುಕೊಂಡು

ಅದರ ಎರಡು ಬದಿಗೆ ಹರಿದು ಬಿಚ್ಚಿ ಎರಡು ಬದಿ ಗಟ್ಟಿ ಕಟ್ಟಿಗೆಯ ಕೋಲುಗಳನ್ನು ಹಾಕಿ ಹೊಲೆಯುತ್ತಾರೆ. ನಾಲ್ಕು ಜನರು ಆ ಕೋಲುಗಳನ್ನು ಹಿಡಿದು ಶವವನ್ನು ತೆಗೆದುಕೊಂಡು ಹೋಗುತ್ತಾರೆ.

ಇನ್ನೊಂದು ಒಂದು ಗೇಣು ಉದ್ದ ಳತೆ ಸುಮಾರು ೧೦ ಇಂಚು ಉದ್ದ ಎರಡು ಕಟ್ಟಿಗೆಗಳನ್ನು ತೆಗೆದುಕೊಂಡು ಮಧ್ಯ ಮೂರು ಗೇಣು ನಾಲ್ಕು ಬಟ್ಟು ಅಗಲ ಚೌಕಾಗಿ ಶವವನ್ನು ಕೂಡಿಸಲು ಆಸನದಂತೆ ಸಿದ್ಧಪಡಿಸುತ್ತಾರೆ. ಇದಕ್ಕೆ ಕುರ್ಚಿ, ಕೈವಲಿ ಎಂದು ಕರೆಯುತ್ತಾರೆ. ಹಿಂದಿನ ಬದಿಗೆ ಶವವನ್ನು ಆರಾಮವಾಗಿ ಕೂಡಿಸುವ ರೀತಿಯಲ್ಲಿ ಕಟ್ಟಿಗೆಗಳು ಕಟ್ಟುತ್ತಾರೆ. ಮಧ್ಯ ಹೂವಿನಿಂದ ಮಾಡಿದ ಕಳಸವನ್ನು ಕಟ್ಟುವಂತೆ ಕಟ್ಟಿಗೆ ಕಟ್ಟುತ್ತಾರೆ.

ಮತ್ತೊಂದು ಸತ್ತ ಶವವು ಮಠಸ್ಥನಾಗಿದ್ದರೆ ಅಥವಾ ಶ್ರೀಮಂತರಾಗಿದ್ದರೆ ಮತ್ತು ಗಣ್ಯವ್ಯಕ್ತಿಯಾಗಿದ್ದರೆ ತೇರು ಕಟ್ಟುತ್ತಾರೆ. ಇದು ಕೈವಲಿಯಂತೆ ಮಾಡುತ್ತಾರೆ. ಆದರೆ ನಾಲ್ಕು ಕಡೆ ಕಮಾನವನ್ನು ತೆಗೆದು ದೇವರ ಗುಡಿಯ ಗೋಪುರದಂತೆ ಕಟ್ಟಿಗೆಗಳಿಂದ ಮೇಲಿನ ತುದಿಯವರೆಗೆ ಜೋಡಿಸಿ ಬಿದಿರಿನ ಕಟ್ಟಿಗೆಗಳಿಂದ ಗೋಲಾಕಾರವಾಗಿ ಹೆಣೆಯುತ್ತಾರೆ. ತದನಂತರ ಒಳ್ಳೆಯ ಕೆಂಪು ಬಣ್ಣದ್ದಾಗಲಿ ಅಥವಾ ಇನ್ನಾವುದೇ ಬಣ್ಣದ ಸೀರೆಯನ್ನು ಅದಕ್ಕೆ ಕಟ್ಟುತ್ತಾರೆ. ನಂತರ ಹಿಂದಿನ ಭಾಗಕ್ಕೆ ಬಿಳಿಯ ಸೀರೆ ಕಟ್ಟುತ್ತಾರೆ. ಸುನೆಹರಿ ಹಾಳೆ ಹೂಗಳಿಂದ ಅಲಂಕರಿಸುತ್ತಾರೆ. ಜೊತೆಗೆ ಬಿದಿರಿನ ಕಟ್ಟಿಗೆಗಳಿಗೆ ಬಾಳೆಹಣ್ಣು, ಕೊಬ್ಬರಿ, ನಿಂಬೆಹಣ್ಣುಗಲು ಕಟ್ಟಿ ಎಲ್ಲಾ ಕೊನೆಗಳಿಗೆ ಕಟ್ಟುತ್ತಾರೆ. ಮೇಲೆ ಹೂವಿನಿಂದ ಮಾಡಿದ ಸುಂದರ ಕಳಸ ಕಟ್ಟುತ್ತಾರೆ.

ನಾಲ್ಕನೆಯದು ಚಟ್ಟ ಎಂದು ಕರೆಯುತ್ತಾರೆ. ಇದು ೬ ಫೀಟಿನ ಕಟ್ಟಿಗೆಯನ್ನು ತೆಗೆದುಕೊಂಡು ೩ ಫೀಟಿನ ಅಗಲದ ಕಟ್ಟಿಗೆಯನ್ನು ಮಧ್ಯ ಮೂರು ಫೀಟಿನ ಕಟ್ಟಿಗೆಯನ್ನು ಹಾಕಿ ತಯಾರಿಸುತ್ತಾರೆ. ಇದು ತೀರ ಕೆಳವರ್ಗದವರು ಉಪಯೋಸುವಂತಹದು ಅಲ್ಲದೆ ಮದುವೆಯಾಗದೆ ವಯಸ್ಕರಿಗೆ ಇಂತಹ ಚಟ್ಟ ಕಟ್ಟುತ್ತಾರೆ. ಏಕೆಂದರೆ ಮದುವೆಯಾಗದವರಿಗೆ ಅಂಗಾತ ಮಲಗಿಸಿ ಒಯ್ಯುವುದರಿಂದ ಸಿದಗಿ ವ್ಯವಸ್ಥೆ ಮಾಡುತ್ತಾರೆ. ಚಿಕ್ಕ ಮಕ್ಕಳುಗಳಿಗೆ ಮತ್ತು ಹಸುಗಸೂಗಳಿಗೆ ದೊಡ್ಡವರ ಸಂಸ್ಕಾರ ಮಾಡುವ ಸ್ಥಳಕ್ಕೆ ತರುವುದಿಲ್ಲ ಮತ್ತು ಯಾವುದೇ ವಿಮಾನವನ್ನು ಕಟ್ಟುವುದಿಲ್ಲ. ಅವರವರಿಗೆ ಸಂಬಂಧಪಟ್ಟಿರುವಂತೆ ಹಿರಿಯ ರೊಬ್ಬರು ಎರಡು ಕೈಗಳಲ್ಲಿ ಮುಂದೆ ಮಾಡಿ ಮಲಗಿಸಿಕೊಂಡು ಹೋಗುತ್ತಾರೆ ಹಾಗೆಯೇ ಅಂಗಾತಾಗಿಯೋ ಮಲಗಿಸಿ ಮಣ್ಣು ಮಾಡುತ್ತಾರೆ.

ಈ ಮೇಲಿನ ಶವವನ್ನು ಒಯ್ಯಲು ಮಾಡಿರುವ ವಿಮಾನಗಳು ಇಂದು ಹೆಚ್ಚಾಗಿ ಉಪಯೋಗಿಸುತ್ತಿಲ್ಲ. ಏಕೆಂದರೆ ವಿಮಾನವನ್ನು ಕಟ್ಟಿದಂತೆ ಕಬ್ಬಿಣದಿಂದ ತಯಾರಿಸುತ್ತಿದ್ದಾರೆ. ಅದರಲ್ಲಿ ಶವವನ್ನು ತೆಗೆದುಕೊಂಡು ಹೋಗಲಿಕ್ಕೆ ತುಂಬ ಸಹಕಾರಿಯಾಗಿದೆ. ತಕ್ಷಣವೇ ತಂದು ಒಯ್ಯುವ ವ್ಯವಸ್ಥೆ ಊರಿನ ಹಿರಿಯರು ಹಲವಾರು ಹಳ್ಳಿಗಳಲ್ಲಿ ನಗರದಂತೆ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಆದರೂ ಕೆಲವೊಂದು ಹಳ್ಳಿಗಳಲ್ಲಿ ಶವದ ಕಟ್ಟಿಗೆಯನ್ನು ತರುವ ಕೆಲವು ಜನರು ಇರುತ್ತಾರೆ. ಅವರಿಗೆ ಕಟ್ಟಿಗೆಗಳು ತರಿಸಿ ಬಡಿಗನಿಂದ ವಿಮಾನವನ್ನು ತಯಾರಿಸುತ್ತಾರೆ. ಅಂದರೆ ಆಯಾಗಾರಿಕೆಯಲ್ಲಿ ಇರುವ ಪ್ರತಿಯೊಬ್ಬರೂ ಸತ್ತವರ ಮನೆಯಲ್ಲಿ ಕೆಲಸ ಮಾಡುತ್ತಿದ್ದರು. ಇತ್ತಿತ್ತಲ್ಲಾಗಿ ಆಧುನಿಕ ವಿಮಾನಗಳು ಬಂದ ನಂತರ ಹಿಂದಿನಂತೆ ಯಾರಿಗೊ ಆಸೆ ಬೀಳದೆ ತಕ್ಷಣವೇ ಕಬ್ಬಿಣದ ವಿಮಾನ ತರುತ್ತಿರುವರು. ಇದರಿಂದ ಊರಿನ ಆಯಾಗಾರಿಕೆಯ ಕೆಲಸಗಳು ನಿಂತು ಹೋಗುತ್ತಿವೆ.

ಶವದ ಎಲ್ಲಾ ಬಂಧು ಮಿತ್ರರು ಬಂದ ತಕ್ಷಣವೇ ಗೋಡೆಗೆ ಗೂಟ ಹೊಡೆದು ಕೂಡಿಸಿದ ಶವವನ್ನು ಎತ್ತಿಕೊಂಡು ವಿಮಾನದಲ್ಲಿ ಕೂಡಿಸಲಾಗುತ್ತದೆ. ಶವವನ್ನು ಅಲುಗಾಡದಂತೆ ಮತ್ತು ಶವದ ಮುಖ ಕೆಳಗೆ ಬಾಗದಿರಲೆಂದು ಮೊಳಕಾಲು ಮಧ್ಯದಿಂದ ಸಿಪಾಯಿ ಕಟ್ಟಿಗೆಯನ್ನು ಕೊಡಲಾಗುತ್ತದೆ. ಜೊತೆಗೆ ಹಗ್ಗದಿಂದ ಬಿಗಿಯಾಗಿ ಕಟ್ಟುತ್ತಾರೆ. ತದನಂತರ ಓಂ ನಮ: ಶಿವಾಯ, ಹರಹರ ಮಹಾದೇವ ಮತ್ತು ಓಂ ಭಲಾ ಶಂಕರ ಫಲಾ ಎನ್ನುವ ಜಯಘೋಷದೊಂದಿಗೆ ವಿಮಾನವನ್ನು ನಾಲ್ಕು ಜನ ಹೊತ್ತಿಕೊಂಡು ಊರ ತುಂಬ ಶವ ಮೆರವಣಿಗೆ ಸಾಗಿಸಿಕೊಂಡು ಬರುತ್ತಾರೆ. ಶವದ ಹಿಂದೆ ಮನೆಯ ಹಿರಿಯ ಮಗಳು ಶವದ ತಲೆಯನ್ನು ಹಿಡಿದುಕೊಂಡು ಬರುತ್ತಾಳೆ. ಮುಂದೆ ಒಬ್ಬೊಬ್ಬರು ಶವಕ್ಕೆ ಹೆಗಲು ಬದಲಾಯಿಸುತ್ತಾ ಸಾಗುತ್ತಾರೆ. ಊರಲ್ಲಿ ಶವವನ್ನು ಹಿಂದಕ್ಕೆ - ಮುಂದಕ್ಕೆ ಮಾಡುತ್ತಾ ಒಯ್ಯುತ್ತಾರೆ. ಆಗ ದೇವರ ಹಾಡುಗಳು, ಭಜನೆ ಹಾಡುಗಳು ಹಾಡುತ್ತಾ ಹಲಗೆಯು ಜೋರಾಗಿ ಬಾರಿಸುತ್ತಾ, ಸಾಗುತ್ತಾರೆ. ಊರ ಸೀಮೆ ದಾಟಿದ ನಂತರ ಶವದ ವಿಮಾನವನ್ನು ಕೆಳಗೆ ಇಳಿಸಿ ಶವಕ್ಕೆ ಹಾಕಿದ ಉಡಿಕಟ್ಟಿರುವ ಜೋಳ, ನವಣೆ, ಎಳ್ಳು ಕಾಳುಗಳು ನೆಲದಲ್ಲಿ ಚೆಲ್ಲುತ್ತಾರೆ. ಮೃತರು ಬಹಳ ಗಟ್ಟಿ ಸ್ವಭಾವದವ ರಾಗಿದ್ದರೆ, ಆಸೆಯಿಂದ ಕೂಡಿದ್ದವರಾಗಿದ್ದರೆ, ಜಿಪುಣರಾಗಿದ್ದರೆ ಅಥವಾ ಎಲ್ಲರ ಜೊತೆ ಕಿರಿಕಿರಿ ಮಾಡುವವರಾಗಿದ್ದರೆ ಇಂತಹವರು ಮತ್ತೆ ಪಿಶಾಚಿಯಾಗಿ ದೆವ್ವವಾಗಿ ಕಾಡಬಾರದೆಂದು ನವಣೆ ಕಾಳು, ಎಳ್ಳು, ಕಾರಳು, ಹಿಡಿ ಕಾಳುಗಳು, ಶವದ ಕೆಳಗೆ ಒಂದು ಬಟ್ಟೆಯಲ್ಲಿ ಕಟ್ಟಿ ಅದಕ್ಕೆ ಚಿಕ್ಕದಾದ ತೂತು ಮಾಡಿರುತ್ತಾರೆ. ಅವುಗಳು

ನಿಧಾನವಾಗಿ ಸ್ಮಶಾನದವರಿಗೂ ಚೆಲ್ಲುತ್ತಾ ಸಾಗುತ್ತವೆ. ಅಂದರೆ ಆ ಪಿಶಾಪೀಡಿತರು ಪಿಶಾಚಿಯಾಗಿ ಅಥವಾ ದೆವ್ವವಾಗಿ ಊರ ಕಡೆ ಬರುತ್ತಿದ್ದರೆ ಆ ಚೆಲ್ಲಿದ ಕಾಳುಗಳು ನೋಡಿ ಅದು ಒಂದೊಂದು ಆಯ್ದುಕೊಂಡು ಮನೆಗೆ ಬರುವಷ್ಟರಲ್ಲಿ ಬೆಳಗಾಗುತ್ತಿದೆ. ಪಿಶಾಚಿ ಕಾಟ ತಪ್ಪುವುದು ಎನ್ನುತ್ತಾರೆ. ಇದು ಅವರ ಮಾನಸಿಕ ಭ್ರಾಂತಿಯಾಗಿದೆ. ಇದರಿಂದ ಮಾನಸಿಕ ಭ್ರಾಂತಿ ಭಯವನ್ನು ತಪ್ಪಿಸಲು ಜನರು ಮೇಲಿನಂತೆ ಮಾಡುತ್ತಾರೆ. ಆದರೆ ಇಂದು ಮೇಲಿನ ಪ್ರಕಾರ ಹೆಚ್ಚಾಗಿ ಕಂಡು ಬರುವುದಿಲ್ಲ. ಮುಂದೆ ಪಟಾಕಿ ಹಾರಿಸುತ್ತಾ ಹಲಗೆ ಗಟ್ಟಿಯಾಗಿ ಬಾರಿಸುತ್ತಾ ಸ್ಮಶಾನದ ಕಡೆ ಸಾಗುತ್ತಾರೆ. ಸ್ಮಶಾನವು ಹತ್ತಿರ ವಿರುವುದರೊಳಗಾಗಿ ಇಬ್ಬರು ಜಂಗಮರು ಶವಕ್ಕೆ ಎದುರಾಗಿ ಕೆಲವು ಮಾತುಗಳನ್ನು ನಡೆಯುತ್ತವೆ.

| | |
|---|---|
| ಜಂಗಮರು ಹೇಳುತ್ತಾರೆ | - ಅಯ್ಯಾ ಬಂದೆವಯ್ಯಾ ಬಂದೆವು. |
| ವಿಮಾನ ಹೊತ್ತವರು | - ಯಾವ ಲೋಕದಿ ಅಥವಾ ಎಲ್ಲಿಂದ ಬಂದಿರಯ್ಯಾ ! |
| ಅಯ್ಯಾನವರು | - ಕೈಲಾಸದಿಂದ ಬಂದೆವಯ್ಯಾ |
| ವಿಮಾನ ಹೊತ್ತವರು | - ಏಕೆ ? ಬಂದಿರಯ್ಯಾ |
| ಅಯ್ಯಾನವರು | - ಸತ್ತ ವ್ಯಕ್ತಿಯ ಹೆಸರು ಹೇಳುತಾತ ಇಂತಪ್ಪ ಲಿಂಗನಿಷ್ಠಾಪರನಪ್ಪ ಶರಣನು ಲಿಂಗೈಕ್ಯನಾದ ನೆಂಬ ಸುದ್ದಿಯು ಕೇಳಿ ಬಂದೆವಯ್ಯಾ |
| ವಿಮಾನ ಹೊತ್ತವರು | - ಬಂದದ್ದು ಒಳ್ಳೆಯದಾಯಿತು. ಈ ಲಿಂಗೈಕ್ಯನಾದ ಶರಣನನ್ನು ಶಿವನ ಕಡೆಗೆ ಕರೆದುಕೊಂಡು ಹೋಗುವಿರಯ್ಯಾ? |
| ಅಯ್ಯಾನವರು | - ಕರೆದುಕೊಂಡು ಹೋಗುವೆವು ಆದರೆ ಈ ಮಾತು ಕಷ್ಟವಯ್ಯಾ |
| ವಿಮಾನ ಹೊತ್ತವರು | - ಯಾವ ಕಾರಣವಿದೆ ಹೇಳಿರಯ್ಯಾ ಅಯ್ಯಾನವರು |
| | - ಇಲ್ಲಿನವರು ಅಪ್ಪಣೆ ಕೊಟ್ಟರೆ ಕರೆದುಕೊಂಡು ಹೋಗುವೆವಯ್ಯಾ. |
| ವಿಮಾನ ಹೊತ್ತವರು | - ಬಿತ್ತಿದ ಬೆಳೆಯತ್ತ ತೋರಿ, ಮುಕ್ತಿಯ ಕಳೆಯನ್ನು ಕೊಟ್ಟು ಸರ್ವಜೀವ ದಯಾಪರನಾಗಿ ಕ್ಷಮೆ, ದಯೆ, ಸ್ಮರಣೆಗಳಿಂದ ಬಂಜೆಗೆ ಮಗನಂತೆ, ಕುರುಡರಿಗೆ ಕಣ್ಣು ಬಂದಂತೆ, ಹೇಳವರಿಗೆ ಕಾಲು ಬಂದಂತೆ, ಬಡವನಿಗೆ ಭಾಗ್ಯ ಬಂದಂತೆ, ಭಕ್ತನಿದ್ದೆಡೆಗೆ ಜಂಗಮ ನಡೆದು ಬಂದಂತೆ, |

ಸಂಗಮೇಶ್ವರನ ಶರಣರ ಪಾದವ ಹೊಂದಿ
ದವರಿಗೆ ವಿಭೂತಿ ರುದ್ರಾಕ್ಷಿಗಳ ಹೊಣೆಯಲ್ಲದೆ
ಇನ್ನೊಬ್ಬರ ಹೊಣೆಯುಂಟೇನಯ್ಯಾ.

ಅಯ್ಯಾನವರು - ಸರಿ ಕರೆದುಕೊಂಡು ಹೋಗುತ್ತೇವೆ ಬನ್ನಿರಯ್ಯಾ.

ವಿಮಾನ ಹೊತ್ತವರು - ಓಂ ಭಲಾ ಶಂಕರ ಭಲಾ ಎಂದು ಹೇಳುತ್ತಾ
ಜಂಗಮರಿಗೆ ವಿಭೂತಿ, ತೆಂಗಿನ ಕಾಯಿ, ಕರ್ಪೂರ
ಕೊಡುತ್ತಾರೆ. ಸಮಾಧಿಯ ಬಲಗಡೆಯಿಂದ
ಅದಕ್ಕೆ ಒಂದು ಸುತ್ತು ಹಾಕಿ ವಿಮಾನವು
ಭೂಮಿಯ ಮೇಲೆ ಇಡುತ್ತಾರೆ.

(ಸಾಲಿಮಠ ಚನ್ನವೀರಶಾಸ್ತ್ರಿ:೧೯೫೫:೧೫೫-೧೫೬)

ಈ ರೀತಿಯ ಮಾತುಗಳು ಇಂದು ಕಂಡುಬರುವುದಿಲ್ಲ. ಆದರೆ ಭಜನೆ ಹಾಡುಗಳು ಶಿವನ ಸ್ತುತಿಯ ಗೀತೆಗಳು ಹಾಡುತ್ತಾ ಸಾಗುತ್ತಿರುವುದು ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿ ಕಂಡುಬರುತ್ತದೆ.

ಸಮಾಧಿ ಮಾಡುವ ಕುಣಿಯು ಸುಮಾರು ೬ ಅಡಿ ಉದ್ದ, ೫ ಅಡಿ ಅಗಲ, ೬ ಅಡಿ ಆಳ ತೊಡುತ್ತಾರೆ. ಮೂರು ಅಡಿ ಉದ್ದದ ಮೂರು ಅಡಿ ಅಗಲದ ಒಂದು ಅಡಿ ಎತ್ತರದಲ್ಲಿ ಕಿರುಕಣಿ ತೊಡುತ್ತಾರೆ. ಇದಕ್ಕೆ ಸುಣ್ಣಾ - ಜಾಜಗಳಿಂದ ಹೂಗಳಿಂದ ಅಲಂಕರಿಸುತ್ತಾರೆ. ತದನಂತರ ಗಟ್ಟಿಮುಟ್ಟಾದ ಇಬ್ಬರು ಕುಣಿಯೊಳಗೆ ಇಳಿಯುತ್ತಾರೆ. ಶವದ ಮೇಲೆ ಇದ್ದ ಬೆಲೆಬಾಳುವ ವಸ್ತುಗಳು ತೆಗೆದುಕೊಳ್ಳಲಾಗುತ್ತದೆ. ಸ್ವಲ್ಪ ಬಂಗಾರವನ್ನು ಶವದ ಬಾಯಿಯಲ್ಲಿ ಹಾಕುತ್ತರೆ. ಕೈಯಲ್ಲಿ ಲಿಂಗವನ್ನು ಕೊಡುತ್ತಾರೆ. ಶವ ಬಿಳಬಾರದೆಂದು ಸಿಪಾಯಿ ಕಟ್ಟಿಗೆಯನ್ನು ಹಚ್ಚುತ್ತಾರೆ. ಶವಕ್ಕೆ ಒಂದು ದಾರವನ್ನು ಕಟ್ಟಿ ಮೇಲಕ್ಕೆ ತಂದು ಜಂಗಮ ಹಿಡಿದುಕೊಳ್ಳುತ್ತಾರೆ. ಎಲ್ಲಾವು ಆದನಂತರ ಶವ ಚೀಲದಲ್ಲಿ ಶವವನ್ನು ಇಳಿಬಿಡುತ್ತಾರೆ. ಆ ಇಬ್ಬರು ವ್ಯಕ್ತಿಗಳು ಮೇಲೆಕ್ಕೆ ಬಂದ ನಂತರ ಎಲ್ಲರೂ ಮಣ್ಣು ಹಾಕುತ್ತಾರೆ. ನಂತರ ಸಲಕೆಯಿಂದ ಮಣ್ಣು ಎಳೆದು ಕುಣಿಯ ಮೇಲೆ ಐದು ಕಲ್ಲುಗಳು ಇಟ್ಟುತ್ತಾರೆ. ನಂತರ ಜಂಗಮ ಕುಣಿಯ ಮೇಲೆ ನಿಲ್ಲುತ್ತಾರೆ. ಆಗ ಮನೆಯ ಹಿರಿಯರು ಬಂದು ಜಂಗಮನ ಪಾದ ಪೂಜೆ ಮಾಡಿ ಕಾಯಿ ಕರ್ಪೂರ ಮಾಡಿ ಊದಬತ್ತಿ ಹಚ್ಚಿ ದಕ್ಷಿಣವನ್ನು ಇಟ್ಟು ನಮಸ್ಕರಿಸುತ್ತಾರೆ. ಆಗ ಜಂಗಮ ಮೂರ್ತಿ ಆರತಿಯ ಪದವನ್ನು ಹಾಡುತ್ತಾರೆ.

"ಜ್ಞಾನಪೂರ್ಣಂ ಜಾಗಮ ಜ್ಯೋತಿ
ನಿರ್ಮಲವಾದ ಮನವೇ ಕರ್ಪೂರದಾರುತಿ

ಅಷ್ಟಾವರರ್ಣದ ಶೋಭಾವ
ಮಾನವ ಜನ್ಮ ಹುಟ್ಟುವುದು ದುರಲಾಭ
ಕೋಟ್ಟಾನೋ ಗುರುಯನಗೆ....."

ಪಾರ್ವತಿ ಪರಮೇಶ್ವರ ಮಾರಾಜಕೀ ಜಯ ಎಂದು ಎಲ್ಲರೂ ಬಿಲ್ವಿಪತ್ರಿ, ಹೂಗಳು ಕುಣಿಯ ಮೇಲೆ ಹಾಕುತ್ತಾರೆ. ತದನಂತರ ಕುಣಿಯ ಸ್ವಲ್ಪ ದೂರದ ಸ್ಥಳದಲ್ಲಿ ಊರಿನ ಗೌಡರು, ಜಂಗಮರು, ಮನೆಯವರು ಕುಳಿತು ದಾನ ಧರ್ಮ ಮಾಡುತ್ತಾರೆ. ಹಲಗೆ, ಕುಣಿದವರಿಗೆ, ಕುಣಿ ಹೊಡೆದವರಿಗೆ, ಕೆಳವರ್ಗದವರಿಗೆ ಇತರ ಕೆಳವರ್ಗದವರಿಗೆ ಬಡಗೆ, ಕುಂಬಾರ, ಅಗಸ, ಇವರಿಗೆಲ್ಲರಿಗೂ ದಾನ ಮಾಡುತ್ತಾರೆ.ಮದುವೆಯಾಗದವರಿಗೆ ಕೋರಿ ಬಾರಿ ಪುಷ್ಪಾಂಜಲಿ ಹೇಳಿಸುವ ಸಂಪ್ರದಾಯವಿರುವದಿಲ್ಲ, ಹೊಸ ಬಟ್ಟೆ ಹಾಕುವದಿಲ್ಲ. ಸ್ನಾನ ಮಾಡಿಸುವದಿಲ್ಲ, ನೆಂಟರಿಷ್ಟರು ಬಂದಂತೆ ಬಡಿಗೆ ಮಾಡಿದ ಚಟ್ಟವನ್ನು ತಯಾರಿಸಿದ ನಂತರ ಭಾಜ, ಭಜಾನಾ, ಪಟಾಕಿ ಯಾವುದು ಇರುವುದಿಲ್ಲ. ಎಲ್ಲಾ ನೆಂಟರಿಗೆ ಸತ್ತ ಸುದ್ದಿ ಹೇಳುವುದಿಲ್ಲ. ಇದ್ದಂತಹ ಜನರಲ್ಲಿ ಚಟ್ಟದಲ್ಲಿ ಕಟ್ಟಿಕೊಂಡು ಹೋಗುತ್ತಾರೆ. ಎಕ್ಕೆ ಗಿಡಕ್ಕೆ ಬಾಸಿಂಗ ಕಟ್ಟುತ್ತಾರೆ. ಮದುವೆಯಾಗದಿದ್ದರಿಂದ ಹೀಗೆ ಮಾಡುವುದುಂಟು.

**೮.೪. ಸಮಾಧಿ ರಚನೆ :** ಜಂಗಮರು ಅಂಗದ ಮೇಲೆ ಲಿಂಗಧರಿಸುವ ಮೂಲಕ ಗುರುತ್ವದಲ್ಲಿ ಹುಟ್ಟುತ್ತಾರೆ. ಲಿಂಗಭಕ್ತಿ ಇಷ್ಟಲಿಂಗ ಪೂಜೆಗಳ ಮೂಲಕ ಬೆಳೆಯುತ್ತಾರೆ. ಗುರು- ಲಿಂಗ-ಜಂಗಮ ಎಂಬ ಭಾವನೆಯಿಂದ ಪರತತ್ವದಲ್ಲಿ ಬೆರೆಯುತ್ತಾರೆ. ಅದಕ್ಕ ಈ ಪರತತ್ವದಲ್ಲಿ ಸೇರಿಕೊಳ್ಳುವುದಕ್ಕೆ ಅಥವಾ ಲೀನವಾಗುವುದಕ್ಕೆ ಸಮಾಧಿಯನ್ನುತ್ತಾರೆ. ಅದಕ್ಕೆ ಜಂಗಮನು ಲಿಂಗೈಕ್ಯನಾದರೆ ಆತನ ಲಿಂಗರೂಪ ದೇಹವನ್ನು ಭೂಮಿಯಲ್ಲಿ ನೇಮಾನುಸಾರವಾಗಿ ತಗ್ಗು ತೋಡಿ ಹೂಳುವುದಕ್ಕೆ ಸಮಾಧಿ ಮಾಡುವುದು ಎಂದು ಕರೆಯುವುದುಂಟು. ಇಂತಹ ಘಟನೆಗಳು ತುಂಬ ಕೊಂಚಿತವಾಗಿ ಕಂಡು ಬರುವುದುಂಟು. ಈ ಜಂಗಮರಲ್ಲಿ ಹಿರಿಯ ಜಂಗಮರಿದ್ದರೆ ಊರಿಗೆ ಪ್ರಸಿದ್ಧಿಯನ್ನು ಹೊಂದಿದ ಜಂಗಮನಾಗಿದ್ದರೆ ಅವರಿಗೆ ಮನೆಯ ಮಠದಲ್ಲಿಯೇ ಸಮಾಧಿಯನ್ನು ಕಟ್ಟಿ ಅಲ್ಲಿಯೋ ಹೂಳುತ್ತಿದ್ದರು. ನಂತರ ಅದನ್ನು ಸಮಾಧಿ ಕಟ್ಟಿ ಅದರ ಮೇಲೆ ಲಿಂಗವನ್ನು ಸ್ಥಾಪಿಸಿ ಪೂಜಿಸುತ್ತಿದ್ದರು. ಅಂತೆಯೇ ಹೆಚ್ಚಾಗಿ ಜಂಗಮರ ಮನೆ ಮಠಗಳಲ್ಲಿ ಇಂದಿಗೂ ಇಂತಹ ಸಮಾಧಿಗಳು ಜಿಲ್ಲೆಯ ತುಂಬ ಕಂಡು ಬರುತ್ತವೆ. ಈ ಸಮಾಧಿಗಳು ಯಾರದು ಎಂದು ಆ ಜಂಗಮರಿಗೆ ಪ್ರಶ್ನಿಸಿದರೆ ಇದು ನಮ್ಮ ತಾತನ ತಂದೆದ್ದು, ಇದು ನಮ್ಮ ತಾತನದು ಎಂದು ಇಂದಿಗೂ ಹೇಳುತ್ತಾರೆ. ಅವುಗಳ ಮೇಲೆ

ಲಿಂಗವಿದ್ದು ಅದಕ್ಕೆ ಇಂದಿಗೂ ಪೂಜಿಸುತ್ತಾರೆ. ಪ್ರತಿ ವರ್ಷಕ್ಕೆ ಅವರಿಗೆ ಅನುಕೂಲವಿದ್ದಂತೆ ಸತ್ತವರ ಪುಣ್ಯತಿಥಿಯನ್ನು ಮಾಡುತ್ತಾರೆ.

ಈ ಸಮಾಧಿಗಳು ಜಿಲ್ಲೆಯಲ್ಲಿ ಪ್ರತಿಯೊಂದು ಜಂಗಮರ ಮಠಗಳಲ್ಲಿ ಆವರಣದಲ್ಲಿ ಕಂಡು ಬರುತ್ತವೆ. ಇವುಗಳ ಮೇಲೆ ಲಿಂಗಮುದ್ರೆಯ ಕಲ್ಲು ಇರುವುದರಿಂದ ಪ್ರತಿಯೊಬ್ಬರು ಗೌರವದಿಂದ ಕಾಣುತ್ತಾರೆ. ಜಂಗಮರಲ್ಲಿ ತಮ್ಮ ವೈಯಮಾನಕ್ಕೆ ತಕ್ಕಂತೆ ಸಮಾಧಿಯು ಕಟ್ಟಿಸುತ್ತಾರೆ. ಸಮಾಧಿಯಲ್ಲಿ ಹಲವಾರು ಪ್ರಕಾರ ಕಂಡು ಬರುತ್ತವೆ.

೧. ಜ್ಞಾನ ರೂಪ ಸಮಾಧಿ

೨. ಕ್ರಿಯಾ ರೂಪ ಎಂಬ ಸಮಾಧಿ ಹೀಗೆ ಎರಡು ಪ್ರಕಾರವಾಗಿ ಕಂಡು ಬರುವುದುಂಟು.

**೧. ಜ್ಞಾನರೂಪ ಸಮಾಧಿ :** ಇದರಲ್ಲಿ ಮತ್ತೆ ನಾಲ್ಕು ಪ್ರಕಾರಗಳುಂಟು.

೧. ನಿರ್ವಾಣ ಸಮಾಧಿ

೨. ಸಚ್ಚಿದಾನಂದ ಸಮಾಧಿ

೩. ನಿವಯ ಸಮಾಧಿ

೪. ನಿಜಶಿವ ಸಮಾಧಿ

**೨. ಕ್ರಿಯಾರೂಪ ಸಮಾಧಿ :** ಇದರಲ್ಲಿ ಮತ್ತೆ ನಾಲ್ಕು ಪ್ರಕಾರಗಳುಂಟು.

೧. ಸತ್‌ಕ್ರಿಯಾ ಸಮಾಧಿ

೨. ಗೋಮುಖ ಸಮಾಧಿ

೩. ಗೋಳಕ ಸಮಾಧಿ

೪. ಬಯಲು ಸಮಾಧಿ

ಇಷ್ಟು ಅಲ್ಲದೆ ಸ್ಥಳ ಸಮಾಧಿ, ಜಲ ಸಮಾಧಿ ಮತ್ತು ಅಗ್ನಿ ಸಮಾಧಿ ಎಂಬುದಾಗಿ ೩ ಸಮಾಧಿಗಳಿವೆ. ಹೀಗೆ ಸಮಯೆಕ್ಕ ಅಥವಾ ಸಂದರ್ಭಕ್ಕೆ ತಕ್ಕಂತೆ ೧೧ ಪ್ರಕಾರ ಸಮಾಧಿ ಕಾಣಬಹುದು(ತೋಟಪ್ಪ ಶಾಸ್ತ್ರಿಪು.೪೦).

**೮.೫. ಮಠಸ್ಥರಿಗೂ ಮತ್ತು ಮದುವೆಯಾದವರಿಗೆ ಸಮಾಧಿ ಮಾಡುವ ರೀತಿ :** ಮಠಸ್ಥರಿಗೂ ಮತ್ತು ಮದುವೆಯಾದವರಿಗೆ ಈ ಕೆಳಗಿನ ರೀತಿಯೊಳಗೆ ಸಮಾಧಿ ಜಂಗಮರಲ್ಲಿ ರಚಿಸುತ್ತಾರೆ. ಹೆಚ್ಚಾಗಿ ಕ್ರಿಯಾ ಸಮಾಧಿ ಕಟ್ಟಿಸುವದುಂಟು. ಹೀಗೆ ಕಟ್ಟುತ್ತಾರೆ. ಎಂಬುದನ್ನು

ಪರಮೇಶ್ವರಾಗಮ ದಲ್ಲಿ ಕೆಳಗಿನಂತೆ ಹೇಳಿದ್ದಾರೆ. ಜಂಗಮನ ೫ ಬಲ ಪಾದ ಉದ್ದ ಐದು ಅಗಲ ೯ ಪಾದ ಆಳವಾಗಿ ತಗ್ಗೂ ತೆಗೆಯುತ್ತಾರೆ. ತದನಂತರ ತಳದಲ್ಲಿ ಪಾದ ಉದ್ದ ೩ ಪಾದ ಅಗಲ ೧ ಪಾದದ ಎತ್ತರ ಚಚೌಕಾಕಾರದ ವೇದಿಕೆ ನಿಮಿಸುತ್ತಾರೆ. ಸಮುಧಾಯ ಉತ್ತರ ದಿಕ್ಕಿನಲ್ಲಿ ಒಂದು ಪಾದ ಉದ್ದ, ಒಂದು ಪಾದ ಅಗಲ, ಒಂದು ಪಾದ ಎತ್ತರವಿರುವ ೧ನೇಯ ಸೋಪಾನವನ್ನೂ, ಎರಡು ಪಾದ ಉದ್ದ, ಎರಡು ಪಾದ ಅಗಲ, ಎರಡು ಪಾದ ಎತ್ತರವಿರುವ ೨ನೆಯ ಸೋಪಾನವನ್ನೂ, ೩ ಪಾದ ಉದ್ದ, ೩ ಪಾದ ಅಗಲ, ೩ ಪಾದ ಎತ್ತರವಿರುವ ಮೂರನೆಯ ಸೋಪಾನವನ್ನು ರಚಿಸಲಾಗುತ್ತದೆ. ಆಮೇಲೆ ಸಮಾಧಿಯ ದಕ್ಷಿಣ ಭಾಗದ ಗೋಡೆಯಲ್ಲಿ ಲಿಂಗೈಕ್ಯನನ್ನೂ ಕೂಡಿಸಲು ತಳಭಾಗದಲ್ಲಿ ೩ ಪಾದ ಉದ್ದ, ೩ ಪಾದ ಅಗಲ, ೩ ಪಾದ ಎತ್ತರವಾದ ಕಿರುಗುಣಿಯನ್ನು ಮಾಡಲಾಗುತ್ತದೆ. ಒಳಕುಣಿಯ ಶಿಖರಕ್ಕೆ ಅದರ ತಳದ ಮಧ್ಯದಿಂದ ನಾಲ್ಕುವರೆ ಪಾದ ಎತ್ತರದಲ್ಲಿ ೮ ಪಾದ ತಗ್ಗು ತೊಡಿದೊಡನೆ ಒಳಕುಣಿಯನ್ನು ಕಟ್ಟಲು ಪ್ರಾರಂಭಿಸಬೇಕು ಎತ್ತರದ ತುದಿಯನ್ನು ಕೂಡಿಸುವಂತೆ ಮಾಡಬೇಕು ಆಗ ಅದು ತ್ರಿಕೋಣವಾಗುವದು. ಕಿರುಗುಣಿಯ ಮೇಲ್ಬಾಗದಲ್ಲಿ ಎಡಕೆ - ಬಲಕ್ಕೆ ದೀಪ ವಿಡಲು ಎರಡು ಚಿಕ್ಕ ಮಾಡಗಳು ರಚಿಸುತ್ತಾರೆ. ನಂತರ ಅದಕ್ಕೆ ಸುಣ್ಣ ಬಣ್ಣಗಳಿಂದ ಅಲಂಕರಿಸುತ್ತಾರೆ. ಅದರ ಮೇಲೆ ಕಲ್ಲಿನ ಲಿಂಗ ಮುದ್ರೆಯನ್ನು ಇಡುತ್ತಾರೆ. ಶವವನ್ನು ಉತ್ತರ ದಿಕ್ಕಿನಲ್ಲಿರುವ ವಿಮಾನದಿಂದ ಇಳಿಸಿಕೊಂಡು ಶವ ಚೀಲದಲ್ಲಿ ಶವವನ್ನು ಹಾಕಿ ಆ ಸಮಾಧಿಯಲ್ಲಿ ಇಟ್ಟುತ್ತಾರೆ. ಆಗ ಕೆಲವು ಮಠಸ್ಥರಲ್ಲಿ ತಗಟುಗಳನ್ನು ಬರೆದು ಶವಕ್ಕೆ ಅಂಟಿಸುತ್ತಾರೆ.

**೮.೬. ತಗಡ ರಚಿಸುವ ಬಗ್ಗೆ:** ಯಾವದಾದರೂ ಲೋಹದ ತಗಡವನ್ನು ತೆಗೆದುಕೊಂಡು ೫ ಪಾದದ ಚಚೌಕವಾಗಿ ಮಾಡಿ ಅದರ ಕೋನೆಗೆ ರಂಗವಾಲೆಯಿಂದ ಸಿದ್ದಪಡಿಸಿ ೫ ವರ್ಣಗಳಿಂದ ರಚಿಸಿದ ಸ್ಥಾನದಲ್ಲಿ ಮೇಲಿಗೆ ಒಂದೊಂದರಂತೆ ತಗಡಿನ ಮೇಲೆ ಬರೆದ, ನಾಲ್ಕು ಈಶ್ವರ ಮೂರ್ತಿಗಳನ್ನು ಸ್ಥಾಪಿಸ ಬೇಕು. ತಗಡು ಒಂದು ಚಚೌಕ ಹೆಬ್ಬರಳಿನ ಉದ್ದದಷ್ಟು ತೆಗೆದುಕೊಂಡು ಆದನಂತರ ೪ ದಿಕ್ಕಿನ ಕಡೆ ಮತ್ತು ಮಧ್ಯ ಭಾಗದಲ್ಲಿ ನಾಲ್ಕು ಸ್ಥಾನಗಳಲ್ಲಿ ತಾಮ್ರದ ಒಂದು ಬೆರಳು ಅಗಲದ ೪ ಬೆರಳು ಉದ್ದ ಕತ್ತರಿಸಿ ೪ಕ್ಕೆ ರಲ್ಲಿ ಓಂ ನಮ: ಶಿವಾಯ ಎಂದು ಚೂಪಾದ ಮೊಳೆಯಿಂದ ಬರೆಯಬೇಕು ವಿಭೂತಿಯನ್ನು ಅವುಗಳ ತುಂಬ ಹಚ್ಚಬೇಕು. ಶವ ಕೂಡಿಸುವ ಸಣ್ಣಗುಣಿಯಲ್ಲಿ ಶವದ ತಲೆಯ ಮೇಲೆ ಮೊಳೆ ಅಂತರದಲ್ಲಿ ಎರಡು ಕಡೆಯ ಗೋಡೆಗೆ, ಒಂದು ಕಳ ಎಡ ತೊಡೆಯ ಹತ್ತಿರ ನೆಲದ ಮೇಲೆ

ಒಂದು ಹೀಗೆ ೫ ಲಿಂಗ ಮುದ್ರೆಯ ತಗಡವನ್ನು ಮೇಲಿನ ಡಬ್ಬಣದಿಂದ ಬರೆದು ಹಚ್ಚ ಬೇಕು. ಆ ಮೇಲೆ ಮೂರು ಬೆರಳು ಅಗಲವಾದ ಉದ್ದವಾಗಿ ೫ ತಗಡು ತೆಗೆದುಕೊಂಡು ಒಂದರಲ್ಲಿ ಪೋಷಾಂ ಬರಿದು ಇದಾರೆ ಬುಡಕ್ಕೆ 'ಳಳಳ' ಅಂತ ೩ ಸಲ ಬರೆದು ೩ ಪಾದ ಅಗಲವಾಗಿ ಇದ್ದ ಪಾವಟಿಕಿಗೆ ನೆಲ ದ ಮೇಲೆ 'ಉಉಉ' ಅಂತ ೩ ಸಲ ಬರೆದು ೨ ಪಾದ ಆಗಲಿನ ಪಾವಟಿಗೆಯಲ್ಲಿ ಮಧ್ಯದ ನೆಲದ ಮೇಲೆ ಹಚ್ಚಬೇಕು ಆ ಮೇಲೆ ಇನ್ನೊಂದು ತಗಡವನ್ನು ತೆಗೆದು ಕೊಂಡು ಅದರಲ್ಲಿ 'ಅಅಅ' ಎಂಬ ೩ ಸಲ ಬರೆಯಬೇಕು. ಒಂದು ಅಗಲವುಳ್ಳ ಕೊನೆಯ ಪಾವಟಿಗೆಯ ಮಧ್ಯೆದಲ್ಲಿ ನೆಲದ ಮೇಲೆ ಹಚ್ಚಬೇಕು. ಮತ್ತೊಂದು ತೆಗೆದುಕೊಂಡು 'ಹಹಹ' ೩ ಸಲ ಬರೆದು ಶವ ಕೂಡಿಸುವ ಕೋಣೆಯವಳಗೆ ಮಧ್ಯೆಸಮಾಧಿಯ ನೆಲದ ಮೇಲೆ ಇಡಬೇಕು. ಈ ರೀತಿಯಾಗಿ ೧೮ ತಗಡಗಳನ್ನು ಹಚ್ಚುವದುಂಟು.

ತದನಂತರ ಶವವನ್ನು ವಿಮಾನದಿಂದ ಇಳಿಸಿಕೊಂಡು ಹೊಸ ಬಟ್ಟೆಗಳು ತೆಗೆದು ಹೊಸ ಚೀಲದಲ್ಲಿ ಕೂಡಿಸ ಬೇಕು ನಂತರ ಅವಳ ಅವನ ಶವದ ಇಷ್ಟ ಲಿಂಗವನ್ನು ತೆಗೆದುಕೊಂಡು ಗುರು ಜಂಗಮ ಅದಕ್ಕೆ ವಿಭೂತಿಯಿಮದ ಪೂಜೆ ಮಾಡುತ್ತಾರೆ. ನಂತರ ಶವವನ್ನು ಚೌಕಿನಲ್ಲಿ ಕೂಡಿಸಿದ ನಂತರ ರುದ್ರಕ್ಷಿ ಮಾಲಿಕೆಯನ್ನು ಶವದ ಕೈಯಲ್ಲಿ ಕೊಟ್ಟು ಶವದ ದೇಹಕ್ಕೆ ಬೀಜಾಕ್ಷರದಿಂದ ಯುಕ್ತವಾದ ತಾಮ್ರದ ತುಂಡುಗಳು ಒಂದು ಬೆರಳಿನ ಉದ್ದದಷ್ಟೆ ತೆಗೆದುಕೊಂಡು ಇವುಗಳ ಮೇಲೆ ಚೂಪಾದ ಮೊಳೆಯಿಂದ ಬೀಜಾಕ್ಷರ ಕ್ರಮದ ಆಕಾರವನ್ನು ಕೆತ್ತಬೇಕು ಬದಿಯಲ್ಲಿ 'ಉ' ಕಾರದ ಎದೆಯ ಗುಂಟೆಯಲ್ಲಿ 'ಮ' ಕಾರನದು ಬೆನ್ನಿನಲ್ಲಿ ಓಂ ಕಾರ ಬಲದ ಎಡ ಬದಿಯಲ್ಲಿ 'ಹ'ಕಾರವ ಶಿಖಿಯಲ್ಲಿ ಸಂಬಂಧಿಸುವದು ಇದು ಲಿಂಗ ಪ್ರಣವೆಂದು ತಿಳಿಯಬೇಕುಂದು ಗುರುಗಳು ಉಪದೇಶಿಸುತ್ತಾರೆ. ಬಸವಾಕ್ಷರದ ಕಂಠದಲ್ಲಿ 'ಮಾ'ಕ್ಷರ 'ವ'ಕಳ್ಳನ ಕುಣಿಕೆಯಲ್ಲಿ ಓಂ, ನಮಃ ಶಿವಾಯ ಎಂಬ ಷಡಕ್ಷರವ ಯಡದ ಕೊಂಕಳದಲ್ಲಿ ಹ್ರುಂ, ಹ್ರೀಂ, ಹ್ರೊಂ, ಹ್ರೈಂ, ಹ್ರೊಂ, ಹ್ರಾಃ ಎಂಬುವದನ್ನು ಬಲದ ಕೊಂಕಳದಲ್ಲಿ ಓಂಕಾರವ ಓಂಹ್ಯ ನಕಾರವ ಬಲದ ಭುಜದಲ್ಲಿ 'ಮ'ಕಾರವ ಎಡ ಭುಜದಲ್ಲಿ 'ಶಿ'ಕಾರವ ನಾಭಿಯಲ್ಲಿ 'ವ'ಕಾರವ ಬಲಪಾದದಲ್ಲಿ 'ಯ'ಕಾರವ ಯಡ ಪಾದದಲ್ಲಿ 'ಶಿ'ಕಾರವ ನಾಭಿಯಲ್ಲಿ ಲಿಂಗ ಮುದ್ರೆಯನ್ನು ಸ್ಥಾಪಿಸಬೇಕು ಹೀಗೆ ಇಪ್ಪತ್ತೊಂದು ಯಂತ್ರ ತಗಡನ್ನು ಮಾಡಿಸುತ್ತಾರೆ. ಈ ಮೇಲಿನ ರೀತಿಯನ್ನು ಆಗಮದ ಸ್ಲೋಕದಲ್ಲಿ ನೋಡಬಹುದು.

'ಆ' ಕಾರಂ ವಾಮಭಾಗೇಚ ।
'ಉ' ಕಾರಂ ಪೂರ್ವ ವೇಚ ।

'ಮ' ಕಾರಂ ಪಶ್ಚಿಮ ಶೈವ।
'ಓಂ' ಕಾರಂ ದಕ್ಷಣ ಸ್ಥದಾ।
'ದ' ಕಾರಂ   ಋರ್ಧ್ಯಭಾಗೇಚ ।
ಲಿಂಗ ಪ್ರಾಣಮಂತು ಲಕ್ಷಣಂ ।
ಬಸವಕ್ಷರಂತು ಪೂರ್ವರಿ ।
'ಅ ಉ' ಮೋಕ್ಷ ರಂತು ಪಶ್ಚಿಮ ॥
ಉತ್ತರರಂ ಷಡಾಕ್ಷರಂ ಚೈವ ।
ಪಂಚ ಪ್ರಸಾದ ದಕ್ಷಣೆ ಓಂ ಕಾರಂ ಉದನಂ ದೇವಿ ।
ನಮಕಾರ ಭುಜ ದ್ವಯಂ ॥
ಶಿಕಾರಂ ದೇಹಮಧ್ಯಸ್ತಂ ।
ವಯಕಾರ ಪದದ್ವಯಂ ॥
ಇಂತಿವು ಲಿಂಗೈಕ್ಯರಾದ ಭಕ್ತಮಹೇಶ್ವರುಗಳಿಗೆ ಸಾಧಿಸುವದು.

(ಹಿರೇಮಠ ಶಿವಲಿಗಯ್ಯ ಚನ್ನಯ್ಯ:೧೯೬೮:೫೯)

ಹೀಗೆ ಶವದ ದೇಹದಲ್ಲಿ ಮೇಲಿನಂತಹ ತಗಡುಗಳು ತಯಾರಿಸಿ ಮಂತ್ರಯುಕ್ತವಾಗಿ ಶವದ ದೇಹದಲ್ಲಿ ಸೇರಿಸುತ್ತಿರುವುದು ಅಂದಿನಿಂದ ಇಂದಿಗೂ ಕಂಡುಬರುತ್ತದೆ. ಆದರೆ ಇಂದಿನ ದಿನಮಾನಗಳಲ್ಲಿ ಇಂತಹ ತಗಡುಗಳು ಶವದ ದೇಹದಲ್ಲಿ ಸೇರಿಸಿ ಮಣ್ಣು ಮಾಡುವದು ತುಂಬ ಕಡಿಮೆಯಾಗಿದೆ. ದೂರಕ್ಕೆ ಎರಡರಷ್ಟು ಇರಬಹುದಾಗಿದೆ. ಇದು ದೊಡ್ಡ ದೊಡ್ಡ ಸ್ವಾಮಿಗಳ ಮತ್ತು ಮಠಾಧೀಶರ ಸಮಾಧಿಯಲ್ಲಿ ಇಂದಿಗೂ ಮಾಡುತ್ತಾರೆ.

ತದನಂತರ ಜಂಗಮಯ್ಯ ಕುಣಿಯ ಒಳಗೆ ಇಳಿದು ಶವವನ್ನು ಒಳಕೋಣೆಯಲ್ಲಿ ಇಳಿಸುತ್ತಾರೆ. ಅಥವ ಮಠಧಿಕಾರಿಗಳು ಇರುತ್ತಾರೆ. ತದನಂತರ ಶವದ ಮಸ್ತಕದ ಮೇಲೆ ಪಾದವನ್ನು ಇಟ್ಟು ಪುಷ್ಪಾಂಜಲಿ ಸಲ್ಲಿಸುತ್ತಾರೆ. ನೆರೆದವರೆಲ್ಲರು ಕೂಡ ಶವದ ಮೇಲೆ ಪುಷ್ಪ ಪತ್ರಿ ಹಾಕುತ್ತಾರೆ. ಜಂಗಮಯ್ಯ ಮೇಲಕ್ಕೆ ಬಂದ ನಂತರ ಶವಕ್ಕೆ ಬಾಗಿಲಿನಂತೆ ಮಾಡಿದ ವಸ್ತುವಿನಿಂದ ಮುಚ್ಚಬೇಕು ಮುಚ್ಚುವ ಪೂರ್ವದಲ್ಲಿ ವಿಭೂತಿ ಮತ್ತು ಉಪ್ಪು ಶವದ ಸುತ್ತಾ ಮುತ್ತಾ ಹಾಕುತ್ತಾರೆ. ನಂತರ ಸಮಧಿಯ ಮೇಲೆ ಒಂದು ಕಲ್ಲನ್ನು ಇಟ್ಟು ಅದರ ಮೇಲೆ ಜಂಗಮಯ್ಯ ನಿಲ್ಲುತ್ತಾರೆ ಮಠಪತಿ ಜಂಗಮನಿಂದ ಜಂಗಮಯ್ಯನ ಪಾದವನ್ನು ತೊಳೆಯಿಸಿ ವಿಭೂತಿ ಲೇಪಿಸಿ ಪೂಜೆ ಮಾಡಿ ಕಾಯಿ ಒಡೆಯುತ್ತಾರೆ. ತದನಂತರ ಇಂತಹ ದಿನದಂದು ಇಂತಹ ತಿಂಗಳಲ್ಲಿ ಇಷ್ಟು ಗಂಟೆಗೆ ಇಂತಹ ಶರಣನು ಲಿಂಗೈಕ್ಯನಾದನೆಂದು ಮಠಪತಿ ಹೇಳುತ್ತಾರೆ ಆಗ ಮತ್ತೊಂಮ್ಮೆ ಎಲ್ಲರೂ ಪತ್ರಿಯನ್ನು ಹಾಕಿ ಹೋರಡುತ್ತಾರೆ.

**೮.೭. ಕುಟುಂಬದ ಮೇಲೆ ಸಾವಿನ ಪರಿಣಾಮ** : ಮದುವೆಯಾದ ಗಂಡು ಅಥವಾ ಮುದುಕರು (ವೃದ್ಧರು) ತಿರಿಕೊಂಡಿದರೆ ಅವರ ಮನೆಯ ಹೆಂಡತಿಯ ಮೇಲೆ ಎಲ್ಲಾ ಜವಬ್ದಾರಿಯಾಗುತ್ತದೆ. ಗಂಡ ಸತ್ತು ಹೋದರೆ ಅವಳು ವಿಧವೆಯಾಗುತ್ತಾಳೆ. ಆಷ್ಟೆ ಅಲ್ಲದೆ ಸಮಾಜದ ಹಲವಾರು ಕಾರ್ಯಗಳಲ್ಲಿ ಬರುವದು, ಭಾಗವಹಿಸುವದು ತಪ್ಪಿಹೋಗುತ್ತದೆ. ಅವಳ ಗಂಡ ಸತ್ತಾಗ ಶವಕ್ಕೆ ಗೋಡೆಗೆ ಕೂಡಿಸಿದಾಗ ತವರಿನವರು ತಂದ ಸೀರೆ ಉಡಿಸುತ್ತಾರೆ. (ರಂಡೀ ಸೀರೆ) ಮತ್ತು ತಲೆಗೆ ದಂಡಿ ಕಟ್ಟಿ ಉಡಿ ತುಂಬುತ್ತಾರೆ. ಇದು ಆವಳ ಜೀವನದಲ್ಲಿ ಕೋನೆಯ ದಂಡಿ, ಉಡಿಯಕ್ಕಿ ತುಂಬುವದಾಗಿರುತ್ತದೆ. ಮುಂದೆ ಇಂತಹ ಅವಕಾಶಗಳು ಅವಳಿಗೆ ಎಂದಿಗೂ ದೊರೆಯುವದಿಲ್ಲ. ಇಂದು ಹೆಣ್ಣಿಗೆ ಒಂದು ನುಂಗಲಾರದ ಮೂಢ ನಂಬಿಕೆಯಾಗಿದೆ. ಹಂತ ಹಂತಕ್ಕೆ ಇವಳು ಹೆದರಿ ಹೆದರಿ ಹೆಜ್ಜೆ ಇಟ್ಟು ಜೀವನ ಸಾಗಿಸಬೇಕಾಗು ತ್ತದೆ. ನಂತರ ಮೃತನ ಅಂತ್ಯಕ್ರಿಯೇಯಾದ ಸ್ಥಳಕ್ಕೆ ಅವಳನ್ನು ಕರೆದುಕೊಂಡು ಬಂದು ಅವಳ ಕೈಬಳೆ ಒಡೆದುಹಾಕುತ್ತಾರೆ. ತಾಳಿ-ಮಂಗಳ ಸೂತ್ರ ಕಡಿದುಹಾಕುತ್ತಾರೆ. ಕೋನೆಯಲ್ಲಿ ಹಣೆಯ ಮೇಲಿನ ಕುಂಕುಮ ವನ್ನು ಅಳಿಸಿಹಾಕುತ್ತಾರೆ ಅಂದರೆ ಸಂಪೂರ್ಣವಾಗಿ ಅವಳ ಸೌಭಾಗ್ಯದಿಂದ ಮುಕ್ತಗೊಳಿಸುತ್ತಾರೆ. ಇಂತಹ ಸಂದರ್ಭದಲ್ಲಿ ಹೆಣ್ಣು ಸತ್ತು ಮತ್ತೆ ಮೇಲೆ ಬಂದಂತಾಗುತ್ತದೆ. ಸತ್ತ ಹೆಣದಂತೆ ಮುಂದೆ ಜೀವಿಸುತ್ತಾಳೆ. ಜಾನಪದರು ಕೇಳಗಿನಂತೆ ಹಾಡುತ್ತಾರೆ.

"ಗಂಡ ಸತ್ತರಿನ್ನ ಗಂಧ ಕುಂಕಮವ್ಯಾಕ
ಬಂಗಾರವ್ಯಾಕ ಬಳಿಯಾಕ । ಕೊರಳೀನ
ಸಿಂಗಾರ ಶಿವನೆ ಕಸಗೊಂಡ ಎಂದು ಅಳುತ್ತಾರೆ."

ಅದಕ್ಕ ಭಾರತೀಯ ಹೆಣ್ಣು ಮಗಳು ಗಂಡನ ಮುಂದೆಯೇ ಸಾಯಬೇಕು ಸೌಭಾಗ್ಯದಿಂದ ಸಾಯಬೇಕು ಎಂದು ಅಳುತ್ತಾರೆ, ಹೇಳುತ್ತಾರೆ. ಅದಕ್ಕೆ "ಅಂಗಯ್ಯಾ ಒಳಗಾನ ಲಿಂಗಮೂರುತಿ ಸ್ವಾಮಿ ಮಂಗಳಾರತಿ ನಾ ಬೆಳಗಿ । ಬೆಡುವೆನು ಮಾರಾಯರ ಮುಂದ ಮರಣವ" ಪತಿಯ ಮುಂದೆಯು ನನಗೆ ನಿನ್ನ ಪಾದಕ್ಕೆ ಕರಕೊ ದೇವರೆ ಎಂದು ಪ್ರಾರ್ಥಿಸುವದಕ್ಕೆ ಈ ವಿಧುವೆ ಸಾಕ್ಷಿಯಾಗಿದೆ. ಸಾವಿನ ಪರಿಣಾಮದಿಂದಾಗಿ ಅವ ತಂದೆ-ತಾಯಿ ಅಥವಾ ಮಕ್ಕಳ ಮೇಲೆ ಪರಿಣಾಮವಾಗಿ ಮನೋರೊಗಕ್ಕೆ ಬಲಿಯಾಗಿ ನರಳುತ್ತಾರೆ. ಮೃತನ ಸುತ್ತಿದ ರೂಮಾಲನ್ನು ಅಥವಾ ಟೋಪಿಯನ್ನು ಮನೆಯ ಹಿರಿಯ ಮಗನಿಗೆ ಸುತ್ತುತ್ತಾರೆ. ಇದರ ಉದ್ದೇಶ ಮನೆ ಇನ್ನು ಮುಂದೆ ಇವನ ವ್ಯಕ್ತಿ ಚಾರಿತ್ರ್ಯದ ಮೇಲೆ ಮನೆತನದ ಗೌರವ ಅವಲಂಬಿತ ವಾಗಿರುತ್ತದೆ.

ಸತ್ತ ಐದನೇದಿನಕ್ಕಾಗಲಿ ಅಥವಾ ೩ನೇ ದಿನಕಾಗಲಿ ಅಥವಾ ೧೧ನೇ ದಿನಕ್ಕಾಗಲಿ ಮನೆಯ ಸುಣ್ಣ-ಬಣ್ಣಗಳಿಂದ ಸಾರಿಸಿ ಶುದ್ಧಗೊಳಿಸಿ ದಿನೇ ಕರ್ಮವನ್ನು ಆಚಾರಿಸುತ್ತಾರೆ. ಅಂದಿನ ದಿನ ಮಠದಯ್ಯಮತ್ತು ಮಠಪತಿಯನ್ನು ಕರೆಯಿಸಿ ಮಠದಯ್ಯನ ಪಾದೋದಕವನ್ನು ತೆಗೆದುಕೊಂಡು ಹಸುವಿನ ಮೂತ್ರವನ್ನು ತೆಗೆದುಕೊಂಡು ಮನೆಯ ತುಂಬ ಸಿಂಪಡಿಸುತ್ತಾರೆ. ಶುದ್ಧವಾದದ್ದು ಎಂದು ತಿಳಿಯುತ್ತಾರೆ. ಈ ಜಂಗಮ ಪಾದೋದಕದಿಂದ ಎಲ್ಲಾ ಸೂತಕವು ಪರಿಹಾರವಾಗುತ್ತದೆಂದು ನಂಬುತ್ತಾರೆ. ಹುಗ್ಗಿ, ಪಾಯಸ, ಅನ್ನ, ಹುಳಿಸಾರು ಅಂದಿನ ದಿನದ ಊಟವಾಗಿರುತ್ತದೆ. ಶವಸಂಸ್ಕಾರಕ್ಕೆ ಬಂದ ಎಲ್ಲಾ ಜನರಿಗೆ ಆಮಂತ್ರಿಸುತ್ತಾರೆ. ಮುಂದೆ ವರ್ಷಕ್ಕೆ ಒಂದು ಸಲ ಪುಣ್ಯತಿಥಿ ಎಂಬ ಕಾರ್ಯ ಮಾಡುತ್ತಾರೆ. ಇವರಲ್ಲಿ ಮಠಾಧೀಶರಾಗಲಿ ದೊಡ್ಡ ದೊಡ್ಡ ಸ್ವಾಮಿಗಳ ಪುಣ್ಯ ತಿಥಿ ಕ್ರಿಯೇಗಳು ಜಿಲ್ಲೆಯಲ್ಲಿ ತುಂಬ ನಡೆಯುತ್ತವೆ. ಈ ಪುಣ್ಯ ತಿಥಿಯೊಂದು ಭಜನ, ಕಿರ್ತನ, ಮತ್ತು ಪ್ರವಚನಗಳು ಅನ್ನದಾನ ತುಂಬ ಭರಜರಿಯಾಗಿ ಮಾಡುವದುಂಟು. ಉಳಿದ ಜನರು ದೀಪಾವಳಿಯ ಪೂರ್ವದ ಮೂರನೆದಿನದಂದು ಸಮಾಧಿಯ ಪೂಜೆ ಮಾಡುತ್ತಾರೆ. ಇದಕ್ಕೆ ಹಿರಿಯರ ಹಬ್ಬ ಎಂದು ಕರೆಯುತ್ತಾರೆ.

ಈ ದಿನ ಕ್ರಮದಂದು ಮನೆಯವರು ನೈವ್ಯೆದೆಯನ್ನು ತೆಗೆದುಕೊಂಡು ಸತ್ತವ್ಯಕ್ತಿಗೆ ಅಥವಾ ಅವಳಿಗೆ/ಅವನಿಗೆ ಯಾವ ಯಾವ ವಸ್ತುವಿನ ಮೇಲೆ ಇಷ್ಟ ಇತ್ತು ಆ ವಸ್ತುಗಳನ್ನು ತೆಗೆದುಕೊಂಡು ಸಮಾಧಿಗೆ ಹೋಗಿ ಪೂಜಾ ನೈವ್ಯದ್ಯೆವನ್ನು ಮಾಡಿ ಬರುತ್ತಾರೆ. ಸಂಜೆ ಎಲ್ಲಾರಿಗೂ ಊಟ ಹಾಕಿಸುತ್ತಾರೆ. ಅಂದಿನ ದಿನ ಮನೆಯಲ್ಲಿ ಭಜನ ನಡೆಸುತ್ತಾರೆ. ಅಂದರೆ ಸತ್ತವರ ಆತ್ಮಕ್ಕೆ ಶಾಂತಿ ನೇರವೇರಲಿ ಎಂದು ಆಚರಿಸುವದುಂಟು. ಸತ್ತವರಿಗೆ ಸಾಂತ್ವನ ಹೇಳಿ ಬರುವದಕ್ಕೆ ಬರುವರನ್ನು ‘ಮಾತಾಡಿಸಲಿಕ್ಕೆ’ ಬಂದವರು ಎನುತ್ತಾರೆ. ಆವರ ನೆಂಟರಿಷ್ಟರು ಆಗಮಿಸಿ ಮನೆಯವರಿಗೆ ಧೈರ್ಯವನ್ನು ತುಂಬಿ ಸತ್ತವರ ಗುಣಗಾನವನ್ನು ಮಾಡಿ ಹೃದಯದಲ್ಲಿ ತುಂಬಿದ ದುಃಖವನ್ನು ಹಗುರ ಮಾಡಿಕೊಳ್ಳುತ್ತಾರೆ. ಬಂದವರು ಅಂದು ಅವರ ಮನೆಯಲ್ಲಿ ಇರುವದಿಲ್ಲ ಮತ್ತು ಬರುತ್ತೆವೆ, ಹೋಗ್ತೇವಿ ಎಂದು ಹೇಳುವುದಿಲ್ಲ.

ಸತ್ತವರ ಮನೆಯವರಿಗೆ ಮಾತನಾಡಿಸಿ ಹೋದ ನಂತರ ಮತ್ತೆ ಬಂದ ತಿಂಗಳಿಗೆ ಕಹಿ ತೋಳೆಯುವುದು ಕೂಡಿ ಉಣ್ಣುವದು ಎಂದು ಸಿಹಿಯಾದ ಊಟವನ್ನು ಕಟ್ಟಿಕೊಂಡು ಬರುತ್ತಾರೆ. ಏಕೆಂದರೆ ಸತ್ತ ಮನೆಯವರು ಯಾವಾಗಲು ದುಃಖದಲ್ಲಿಯೊ ತೊಡಗಿರುತ್ತಾರೆ. ಜೊತೆಗೆ ಸತ್ತ ವ್ಯಕ್ತಿಯ ನೆಪದಲ್ಲಿಯೊ ಮುಳುಗಿರುತ್ತಾರೆ. ಅಂತೆಯೆ ಈ ಸಂಧರ್ಭದಲ್ಲಿ ಚನ್ನಾಗಿ ಊಟ ಮಾಡುವದಿಲ್ಲ ಸರಿಯಾದ ಅಡುಗೆ ಮಾಡಿಕೊಂಡು ಊಟ ಮಾಡುವದಿಲ್ಲ

ಆದರಿಂದ ಅವರ ನೆಂಟರು ಸಿಹಿಯು ತಂದು ಎಲ್ಲರೂ ಸತ್ತವರನ್ನು ಮರೆಯಲಿ ಎಂದು ಮತ್ತೆ ಕೂಡಿ ಉಣ್ಣುವರು ಅದಕ್ಕೆ 'ಕೂಡಿ ಉಣ್ಣುವದು' ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ದುಃಖದಲ್ಲಿ ಇರುವವರನ್ನು ಸಂತೋಷ ತರುವಲ್ಲಿ ಹಿಂದಿನ ಹಿರಿಯರು ಮಾಡಿರುವದು ಈ ಪದ್ಧತಿಗಳು ತುಂಬ ಸೂಕ್ತವಾಗಿದೆ.

ಸತ್ತವರ ಗದ್ದಿಗೆಯನ್ನು ಕಟ್ಟಿಸುವುದು, ಜಂಗಮರಲ್ಲಿ ಹೆಚ್ಚಾಗಿ ಗದ್ದಿಗೆಗಳು ಕಂಡುಬರುತ್ತವೆ. ಹಿರಿಯರಿಗೆ ದೊಡ್ಡ ಸ್ವಾಮಿಗಳಿಗೆ ಮಠಸ್ಥರಿಗೆ ಹೆಚ್ಚಾಗಿ ಗದ್ದುಗೆಯನ್ನು ಕಟ್ಟಿಸಿ ಅದು ತಮ್ಮ ಮನೆಯ ಅಂಗಳದಲ್ಲಿಯೇ ಅವರನ್ನು ಸಮಾಧಿಮಾಡುತ್ತಾರೆ. ಅದರ ಮೇಲೆ ಗದ್ದಿಗೆ ಕಟ್ಟಿಸುತ್ತಾರೆ. ನಂತರ ಮೇಲೆ ಕಲ್ಲಿನ ಲಿಂಗವನ್ನು ಇಟ್ಟು ದಿನ ನಿತ್ಯ ಪೂಜೆ ಸಲ್ಲಿಸುತ್ತಾರೆ. ಬಹುತೇಕ ಹಳ್ಳಿಯಲ್ಲಿ ಜಂಗಮರ ಮನೆಗಳಲ್ಲಿ ಗದ್ದಿಗೆಗಳು ಕಂಡುಬರುತ್ತವೆ. ಇಗಲೂ ನೊಡಬಹುದಾಗಿದೆ. ಸಾಮಾನ್ಯ ಜಂಗಮರಲ್ಲಿ ಸತ್ತರೆ ಮೃತವರ ಹೆಣ್ಣು ಮಕ್ಕಳು ಕಟ್ಟಿಸುವ ರೂಢಿ ಇದೆ. ಇಂದಿಗೂ ಹೆಣ್ಣು ಮಕ್ಕಳು ಮಾತ್ರ ಗದ್ದಿಗೆ ಕಟ್ಟಿಸುತ್ತಾರೆ. ದೊಡ್ಡ ದೊಡ್ಡ ಸ್ವಾಮಿಜಿಗಳ ಗದ್ದಿಗೆಗಳು ಅವರ ಭಕ್ತಾಧಿಗಳು ಕಟ್ಟಿಸುತ್ತಿರುವದು ಜಿಲ್ಲೆಯಾದಾದ್ಯಂತ ಕಂಡುಬರುತ್ತದೆ.

**೮.೮. ಶುಭಕಾರ್ಯ :** ಮೃತನ ಮನೆಯ ತುಂಬ ದುಃಖಮಯ ಮಾಗಿರುವದರಿಂದ ಮೊದಲಿನಂತೆ ಸಂತೋಷದ ವಾತಾವರಣವನ್ನು ನಿರ್ಮಾಣ ಮಾಡಲು ಮೃತನ ಮನೆಯಲ್ಲಿ ಒಂದು ವರ್ಷ ತುಂಬುವದರೊಳಗೆ ಒಂದು ಶುಭ ಕಾರ್ಯ ಮಾಡಬೇಕೆಂದು ತಿಳಿದುಕೊಳ್ಳುತ್ತಾರೆ. ಹೀಗೆ ಮಾಡುವದರಿಂದ ಸತ್ತವರ ಮನೆಯ ಮಾತಾವರಣವು ಬದಲಾವಣೆ ತಂದು ಸಂತೋಷದ, ಸಂತದ ಛಾಯ ಮುದಿಸಲು ಹೀಗೆ ಮಾಡುವದುಂಟು. ಇದು ಮಾನಸಿಕ ವಾಗಿಯು ವೈಜ್ಞಾನಿಕವಾಗಿಯು ಬಹಳ ಮಹತ್ವದಾಗಿದೆ.

ಜಂಗಮರಲ್ಲಿ ಸ್ವರ್ಗ-ನರಕಗಳ ಬಗೆ ತಿಳಿದುಕೊಂಡಿದ್ದಾರೆ.ಅದು ತಮ್ಮ ಕೆಲಸದ ಕಾರ್ಯದ ಮೇಲೆ ಸ್ವರ್ಗ-ನರಕ ವಿದೆ ಎಂದು ತಿಳಿಯುತ್ತಾರೆ. ಆ ತತ್ವದಲ್ಲಿ ಮುಳುಗಿರುತ್ತಾರೆ.

'ಅಯ್ಯಾ ಎಂದರೆ ಸ್ವರ್ಗ, ಎಲೋ ಎಂದರೆ ನರಕ '

'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಯೊ '

'ಪುಣ್ಯ-ಪಾಪವೆಂಬುದು ತಮ್ಮ ಇಷ್ಟವು ಕಂಡಿರೆ '

ಅಂದರೆ ವ್ಯಕ್ತಿಯ ಗುಣಸ್ವಭಾವ ಗಳಲ್ಲಿಯೋ ಸ್ವರ್ಗ-ನರಕ, ಪಾಪ, ಪುಣ್ಯ ಇದೆ. ಎದನ್ನು ತಿಳಿದುಕೊಂಡು ಸಮಾಜದಲ್ಲಿ ನಡೆದವನಿಗೆ ಮುಕ್ತಿ ಸಿಗುತ್ತದೆ ಎಂದು ನಂಬಿಕೊಂಡಿದ್ದಾರೆ.

ಹೀಗೆ ಜಂಗಮರಲ್ಲಿ ಮೋಕ್ಷಮಾಡುವಲ್ಲಿ ತಮ್ಮದೇಯಾದ ವಿಧಿ ವಿಧಾನಗಳಲ್ಲಿ ನೇರವೇರಿಸಕೊಂಡು ಹೋಗುವರು. ಆದರೂ ಇಂದಿನ ದಿನಮಾನಗಳಲ್ಲಿ ಅಷ್ಟು ವಿಧಿವತರಿಗೆ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗುತ್ತಿದ್ದಾರೆ. ಏಕೆ ಎಂದು ಪ್ರಶ್ನೆಮಾಡಿದರೆ ಅವರ ಉದಾಸಿನವೇ ಕಾರಣ ಮೂಲ ಕಾರಣ ಆರ್ಥಿಕ ಪರಿಸ್ಥಿತಿಯಾಗಿದೆ. ಹೀಗಾಗಿ ಹೆಚ್ಚು ಹಣಖರ್ಚುಯಾಗುವ ಕ್ರಿಯೆಗಳು ಬಿಟ್ಟು ಸಲ್ಲಿಸಾಗಿ ಮಾಡುತ್ತಿದ್ದಾರೆ. ಇದು ಮುಂದೆ ಕಣ್ಮರೆಯಾಗುವ ಸ್ಥಿತಿಯಲ್ಲಿದೆ ಎಂದು ಹಿರಿಯ ಜಂಗಮರ ಮಾತಾಗಿದೆ.

ಈ ಸಂಸ್ಕಾರಗಳ ಆಚರಣೆಗಳಲ್ಲಿ ತಮ್ಮ ಸಂಬಂಧಿಕರ ಮತ್ತು ಸಮಾಜದ ಜನಗಳ ಪಾತ್ರ ತುಂಬ ಮಹತ್ವದಾಗಿದೆ.ಅಲ್ಲದೆ ತನ್ನ ಕುಟುಂಬದ ಮೇಲಾಗದಲ್ಲದೆ ಸುತ್ತ ಮುತ್ತಲಿನ ಸಮಾಜದ ಮೇಲೆಯೋ ಕಾರಣ ಯಾಗಬಹುದು ಏಕೆಂದರೆ ಸಂಸ್ಕಾರಗಳು ವ್ಯಕ್ತಿಯ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಿರಿರುವುದರ ಜೊತೆಗೆ ಅವುಗಳ ಅನುಷ್ಠಾನಕ್ಕೆ ತರುವದರಲ್ಲಿದೆ ಎಲ್ಲಾ ಪಂಗಡಗಳು ಸಹಕರಿಸಬೇಕೆನುವುದರಿಂದ ಒಂದು ಸಮಾಜದ ಮೌಲ್ಯಯಾಗಿರು ವುದರಿಂದ ಇವುಗಳ ಸಮಾಜದ ಭಾವೈಕ್ಯತೆ ದೋತಕವಾಗಿದೆ ಎನ್ನಬಹುದು. ಈಗ ವೈಜ್ಞಾನಿಕವಾದ ಕಾಲ ಒದಗಿ ಬಂದಿರುವುದರಿಂದ ನಗರವಾಸಿಗಳಲ್ಲೊಂತೋ ಸಂಸ್ಕಾರಗಳು ಆಚಾರಿಸುವುದೇ ಕಡಿಮೆಯಾಗಿ ಹೋಗುತ್ತಾಯಿದೆ. ಉಚ್ಚ ಶಿಕ್ಷಣ ಕೆಲಸದ ಬಿಡುವು ಉದ್ಯೋಗ ಇದೇ ಕಾರಣ ಎನ್ನಬಹುದು. ಇಂತಹ ಬಲಿಷ್ಠವಾದ ಆಚರಣೆ ಸಂಸ್ಕಾರಗಳು ಕಡಿಮೆಯಾಗಿ ಹೋಗುತ್ತಿರುವುದು ನೋಡಿದರೆ ಮುಂದಿನ ಪೀಳಿಗೆಗೆ ತೋರಿಸು ಅಥವಾ ಹಿಡಿದಿಡುವುದು ಮಾಡಬೇಕಾಗಿದೆ, ಅಧ್ಯಯನವಾಗಬೇಕಾಗಿದೆ. ಆದ್ದರಿಂದ ಜಂಗಮ ಸಮುದಾಯದ ಸಂಸ್ಕೃತಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

## ೯. ರಾಜಕೀಯ ಜೀವನ

ಜಂಗಮರ ರಾಜಕೀಯ ರಂಗದಲ್ಲಿ ಇವರು ತೋರಿಸಿರುವ ಸಾಧನೆ ಇಲ್ಲವೇ ಇಲ್ಲ ಏಕೆಂದರೆ ಇವರು ಕೇವಲ ಊರಿನಿಂದ ಊರಿಗೆ ಧರ್ಮ ಪ್ರಚಾರ ಪಡಿಸುತ್ತ ಶಿಷ್ಯರಿಗೆ ಸನ್ಮಾರ್ಗದಡೆಗೆ ಕರೆತರುವ ಕತ್ತಲನ್ನು ಹೋಗಲಾಡಿಸಿಬೆಳಕನ್ನು ಮೂಡಿಸುವ ಕಾರ್ಯದಲ್ಲಿ ತೊಡಗಿರಬೇಕಾದರೆ ಇವರಲ್ಲೆ ಎಲ್ಲಿ? ರಾಜಕೀಯ ಎಲ್ಲಿ ಇವರ ಸೇವೆ? ಎಂಬ ಪ್ರಶ್ನೆಯುಂಟಾಗುತ್ತದೆ ಏಕೆಂದರೆ ಊರಿಗೆ ಒಬ್ಬ ಜಂಗಮ ಇರುತ್ತಿದ್ದರು. ತದನಂತರ ಜನಸಂಖ್ಯೆ ಹೆಚ್ಚಾದಂತೆ ಒಂದು ಮನೆ ಹೋಗಿ ಎರಡು ನಾಲ್ಕು ಕೋನೆಗೆ ಎಂಟು ಮನೆಗಳು

ಹೆಚ್ಚಾಗಿರುವದನ್ನು ಕಾಣುತ್ತವೆ. ಇಂತಹ ಸಂದರ್ಭದಲ್ಲಿ ರಾಜಕೀಯ ರಂಗದಲ್ಲಿ ಇಳಿದು ಹೋಗಬೇಕಾದ್ದರೆ ಅದು ದೊಡ್ಡ ಮಾತಾಗಿರುತ್ತದೆ. ಏಕೆಂದರೆ ಸಮಾಜದಲ್ಲಿ ಪೂಜಾ ಸಂಸ್ಕಾರ ಮಾಡುತ್ತ ಸಾಗುವ ಜಂಗಮ ಇಂತಹ ಕ್ಷೇತ್ರದಲ್ಲಿ ಭಾಗವಹಿಸಿದ್ದಾರೆ. ಜನರು ಇವನಿಗೆ ಪುಕಟ್ಟೆ ಹಿಟ್ಟು ಹೆಚ್ಚಾಗಿದೆ ಎಂದು ಅಣುಕಿಸಿ ಮಾತನಾಡುತ್ತಾರೆ. ಅದಕ್ಕೆ ಜಂಗಮ ಈ ದಾರಿಗೆ ಹೋಗದೆ ತಮ್ಮ ಧರ್ಮ ಪ್ರಚಾರ ನಮ್ಮ ಕಾಯಕವೆಂದು ಜೀವಿಸುತ್ತಿದದ್ದು ಕಾಣುತ್ತದೆ. ಧರ್ಮ ಪ್ರಸಾರ, ಧರ್ಮ ಬೋಧನೆಯ ನಮ್ಮ ರಾಜಕೀಯ ಕರ್ತವ್ಯವೆಂದು ತಿಳಿದುಕೊಳ್ಳುತ್ತಾರೆ. ಅದಕ್ಕೆ ತಮ್ಮ ಕ್ಷೇತ್ರದೊಳಗೆ ತಾವು ತಮ್ಮ ಕೈಲಾದ ಮಟ್ಟಿಗೆ ಧಾರ್ಮಿಕ ಕೆಲಸಗಳು ಮಾಡುತ್ತಾ ಇಲ್ಲವಾದರೆ ಇತರ ಕೆಲಸಗಳಲ್ಲಿ ತೊಡಗಿಸಿಕೊಂಡಿರುವವರು. ಆದರೂ ಅವರು ಸ್ವಲ್ಪಮಟ್ಟದ ರಾಜಕೀಯ ಕ್ಷೇತ್ರದಲ್ಲಿ ಭಾಗಿಯಾಗಿರುದನ್ನು ಸದ್ಯ ವಿವರಿಸಲೇ ಬೇಕಾಗುತ್ತದೆ.

ಹೈದ್ರಾಬಾದ ಕರ್ನಾಟಕದಲ್ಲಿ ವೀರಶೈವ ಲಿಂಗಾತರು ಬಹುಸಂಖ್ಯಾತರಿದ್ದರು ಆದರೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದರು ಅದಕ್ಕಾಗಿ ಈ ಭಾಗದಲ್ಲಿ ಲಿಂಗಾಯತರಲ್ಲಿ ರಾಜಕರಣವು ತಡವಾಗಿ ಕಾಣಿಸಿಕೊಂಡಿತ್ತು. ಕಾರಣವನ್ನು ವಿವರಿಸುವದಾದರೆ ಈ ಭಾಗವು ೧೯೪೮ರಲ್ಲಿ ನಿಜಾಮರ, ನಿರಂಕುಶ ಪ್ರಭುತ್ವಕ್ಕಿಡಾಗಿತ್ತು. ಇದರಿಂದ ವೀರಶೈವ ಲಿಂಗಾಯತರು ಅಷ್ಟು ಪ್ರಾಮುಖ್ಯತೆಯಿಂದ ಈ ಕ್ಷೇತ್ರದಲ್ಲಿ ಪ್ರವೇಶಿಸಲಿಲ್ಲ. ಇದೊಂದು ಕಾರಣವಾದರೆ ಇನ್ನೊಂದು ಪ್ರಬಲವಾದ ಕಾರಣ ಮೇಲೆ ಹೇಳಿರುವಂತೆ ಆರ್ಥಿಕ ಪರಿಸ್ಥಿತಿ ಒಂದು. ಆದರೂ ಮುಂದೆ ಹಂತಹಂತವಾಗಿ ವೀರಶೈವ ಲಿಂಗಾಯತರ ರಾಜಕಾರಣದಲ್ಲೆಲ್ಲಾ ಆಧುನಿಕ ರಾಜಕೀಯಕ್ಕೆ ಸೇರಿದ ಧ್ಯೇಯಗಳು ಬಿಂಬಿತವಾಗಿವೆ. ಈ ಧ್ಯೇಯಗಳು ಜಾತಿವಾದದಿಂದ ಪ್ರಚೋದಿತವಾಗಿರದೆ ಇತರ ಸಮುದಾಯದ ಹೊಂದಾಣಿಕೆಯೊಂದಿಗೆ ತಮ್ಮ ಸಮುದಾಯದ ಪ್ರದೇಶದ ಪ್ರಗತಿಯನ್ನು ರಾಜ್ಯಮಟ್ಟದಲ್ಲಿ ರಾಜ್ಯದ ಒಟ್ಟು ಹಿತವನ್ನು ಸಾಧಿಸುವ ಆಸೆಯಿಂದ ರೂಪಿತವಾಗಿತ್ತು. ತದನಂತರ ಮುಂದೆ ಬರಬರುತ್ತ ಸರ್ವ ಸಮುದಾಯದಂತೆ ತಮ್ಮ ತಮ್ಮ ಜಾತಿಯ ಬುನಾದಿಯತ್ತ ಸಾಗಿದಂತೆ ತೋರುತ್ತದೆ, ವೀರಶೈವರ ರಾಜಕೀಯ ಪರಿಸ್ಥಿತಿಯನ್ನು ಹೀಗಿರುವಾಗ ಜಂಗಮರ ರಾಜಕೀಯ ಪರಿಸ್ಥಿತಿ ಹೀಗಿರಬೇಕು? ಆದುದರಿಂದ ಜಂಗಮರು ಸಮಾಜದಲ್ಲಿ ರಾಜಕೀಯವನ್ನು ತೋರಿಸಿದ್ದರು. ಅದು ಹೀಗೆ ಎಂದರೆ ಪ್ರಾಚೀನ ಕಾಲದಿಂದಲೂ ಜಂಗಮರು ಧರ್ಮಬೋಧನೆಗೆ ಕಾರಣರಾದರಂತೆ, ಧಾರ್ಮಿಕ, ಶಿಸ್ತು ಪರಿಪಾಲನೆಯ ಮೇಲೆ ಕಣ್ಣಿಟ್ಟು ದಾರಿ ತಪ್ಪಿದ್ದವರನ್ನು

ದಾರಿ ಹಚ್ಚಿ ಇಡೀ ತಮ್ಮ ಬದುಕನ್ನು ವೀರಶೈವ ಧರ್ಮಕ್ಕೆ ತ್ಯಾಗ ಮಾಡಿದ್ದರು. ಮುಂದೆ ತಮ್ಮ ಕಾಯಕದ ಹರವನ್ನು ಹೆಚ್ಚಾದಂತೆ ಒಬ್ಬರೂ ಒಂದೊಂದು ಕಾಯಕವನ್ನು ಪಡೆದುಕೊಂಡರು ಉದಾಹರಣೆಗಾಗಿ ಗಂಟೆಕಾಯಕ, ಗದ್ದುಗೆಕಾಯಕ, ಮಂಗಳ ಕಾಯಕ, ಮುಳ್ಳಾವಿ ಕಾಯಕ, ಆಸ್ತ್ರದ ಕಾಯಕ, ಹೀಗೆ ಹಲವಾರು ಪ್ರಕಾರದ ಕಾಯಕಗಳನ್ನು ಹುಟ್ಟು ಹಾಕಿ ಸಮಾಜದ ಕಾರ್ಯದಲ್ಲಿ ನಿರಂತರವಾಗಿ ತೊಡಗಿಸಿಕೊಂಡರು. ಇವರ ಉದ್ದೇಶ ಕೇವಲ ಧರ್ಮದ ಪರಿಪಾಲನೆಯಾಗಿತು. ಗಂಟೆ ಕಾಯಕದ ಜಂಗಮನು ಹಳ್ಳಿಗಳಿಗೆ ಹೋಗಿ ಧರ್ಮಾಚರಣೆಯ ಬಗೆಗೆ ವಿಚಾರಿಸುತ್ತಿದ್ದನು. ತನ್ನ ಸಂಶಯ ಬಂದಾಗ ಗಂಟೆ ಬಾರಿಸಿ ಊರಿನ ಮುಖಂಡರನ್ನು ಕೂಡಿ ಧರ್ಮಕ್ಕೆ ಚ್ಯೂತಿ ಬಾರದಂತೆ ನಡೆದುಕೊಳ್ಳುತ್ತೆವೆಂಬ ಭರವಸೆಯ ಪಡೆದುಕೊಂಡು ನಂತರ ಆ ಊರಿನ ಕಾಯಕ ಕಾರ್ಯ ಮುಗಿದಂತೆ, ಇವನ ನಂತರ ಒಂದು ತಿಂಗಳಿಗೆ ಅಥವಾ ಎರಡು ತಿಂಗಳಿಗೂ ಇಲ್ಲವೆ ೧೫ ದಿವಸಕ್ಕೆ ಒಂದು ಸಾರಿ ಗದ್ದುಗೆ ಕಾಯಕದ ಜಂಗಮ ಬಂದು ಮೇಲ್ವಿಚಾರಣೆಗೆ ತೊಡಗುತ್ತಿದ್ದನು. ಓಣಿ ಓಣಿಯಲ್ಲಿ ತಿರುಗಿ ನಿಂತು ವಿಚಾರಿಸುವದರಿಂದ ಗದ್ದುಗೆ ಕಾಯಕದ ಜಂಗಮರು ಮೇಲಿಂದ ಮೇಲೆ ಬಂದು ಧರ್ಮಾಚರಣೆಯ ಮೇಲ್ವಿಚಾರಣೆಯನ್ನು ಮಾಡಿಕೊಂಡು ಧರ್ಮ ಕಾಪಾಡುತ್ತಿದ್ದರು. ಇದನ್ನು ನೋಡಿದರೆ ಇದಕ್ಕೆ ಬಿಟ್ಟು ಬೇರೆ ರಾಜಕೀಯ ಇವರಿಗೆ ಏಕೆ ಬೇಕಾಗುವುದಿಲ್ಲ. ಇದರಿಂದ ಈ ರಂಗಕ್ಕೆ ಬಂದಿರುವುದಿಲ್ಲ ಎನ್ನಿಸುತ್ತದೆ.

ವೀರಶೈವ ಧರ್ಮವನ್ನು ಒಂದು ದೇಶ ಎಂದು ಭಾವಿಸಿದ್ದರೆ ಪಂಚಾಪೀಠಾಧ್ಯಕ್ಷರು/ ಪಟ್ಟದೇವರು, ಅದನ್ನು ಆಳುವ ರಾಜರುಗಳಿದಂತೆ. ಏಕೆಂದರೆ ಅವರಿಗೆ ಸಂಸ್ಥಾನ, ಸಿಂಹಾಸನ, ಪಟ್ಟಿ, ಸದರು, ಪಟ್ಟದ ಆನೆ, ಕುದುರೆ, ಕಿರೀಟ ಎಲ್ಲಾ ಉಂಟು. ಜನರ ನೀತಿ ಅನೀತಿಗಳ ವಿಮರ್ಶೆ ಮಾಡಿ ರಕ್ಷಿಸುವ ಹಕ್ಕುಗಳು ಅವರಿಗಿದೆ. ತಪ್ಪದವರಿಗೆ ಶಿಕ್ಷಿಸುವದು ತಪ್ಪಿ ಹಿಡಿದ ದಾರಿಯನ್ನು ಬಿಡಿಸುವುದು, ಶಿಕ್ಷಣವನ್ನು ದಯಪಾಲಿಸುವರು, ತನ್ನ ನಿತ್ಯಕಾರ್ಯವನ್ನು ನಿಷ್ಠೆಯಿಂದ ಮಾಡು ಎಂದು ಹೇಳುವ ಅಧಿಕಾರ ಪಡೆದುಕೊಂಡಿದ್ದಾರೆ. ಅಂತೇಯೆ ಹಿಂದು ಸಮಾಜದಲ್ಲಿ ಎಲ್ಲವೂ ಹೊಂದಿದ ರಾಜನಿಗೆಪ್ರಥಮ ಸ್ಥಾನವಿದ್ದರೂ ಜಂಗಮ ಸನ್ಯಾಸಿಯ ಅಥವಾ ಗುರುವಿನ ಮುಂದೆ ಬಾಗಲೆಬೇಕಾಗುತ್ತದೆ. ಅವರ ಹಿರಿಮೆಯನ್ನು ಒಪ್ಪಿಕೊಳಲೇ ಬೇಕಾಗುತ್ತದೆ. ಇಂತಹ ಶಕ್ತಿಯನ್ನು ಪಡೆದು ಕೊಂಡ ಜಂಗಮರು ರಾಜಕೀಯ ರಂಗದಲ್ಲಿನ ಜನರಿಗೆ ಸಲ್ಲಹ ಸೂಚನೆ ನೀಡುತ್ತಾ ಬಂದವರು ಇದನ್ನು ಗಮನಿಸಿದರೆ ಪ್ರಧಾನ ಮಂತ್ರಿ ಗಳಗಿಂತ ಹೆಚ್ಚಿನ ಅಧಿಕಾರ, ಹಕ್ಕುಗಳು ಇವರಿಗಿವೆ. ಹೀಗಾಗಿ ರಾಜಕೀಯ ಕ್ಷೇತ್ರಕ್ಕೆ

ಪ್ರವೇಶಿಸಲಿಲ್ಲ. ಮುಂದೆ ಜನಸಂಖ್ಯೆ ಬೆಳೆದಂತೆ ಎಲ್ಲರೂ ತಮ್ಮ ಕಾರ್ಯದಲ್ಲಿ ಏನು? ಪಾಲು ಇದೆ ಎಂದು ಸ್ವಾರ್ಥದಿಂದ ಹುಡಕಬೇಕಾದರೆ ಸಮಾಜಕ್ಕೆ ಅಪ್ಪಟವಾಗಿ ನೀಡುವ ಕೊಡಗೆಯಲಿ ಸ್ವಾರ್ಥ ತುಂಬಿದರೆ ಆ ಕಾಯಕಕ್ಕೆ ಬೆಲೆ ಸಿಗುವದಿಲ್ಲ ಹೀಗಾಗಿ ಜಂಗಮರ ಕಾಯಕಕ್ಕೆ ಅಷ್ಟು ಗೌರವ ಕೊಡದಂತೆ ಭಕ್ತಿಯನ್ನು ಕಡಿಮೆಯಾಗಿದಂತೆ ಆರಂಭವಾಯಿತು. ಇದರಿಂದ ಅವರುಗಳು ತಮ್ಮ ಇತರ ಕೆಲಸಗಳಲ್ಲಿ ಭಾಗಿಯಾಗಿಸಿಕೊಂಡು ಜೀವಿಸುತ್ತಿರುವರು. ಹೀಗಾಗಿ ಕೆಲವರು ತಮ್ಮ ಇಚ್ಛಾ ಬಲದಿಂದ ರಾಜಕೀಯ ರಂಗದಲ್ಲಿ ಜಿಲ್ಲೆಯ ಜಂಗಮರು ಭಾಗಹಿಸಿ ತಮ್ಮ ಸೇವೆ ಯನ್ನು ನೀಡಿರುವುದು ಇಲ್ಲಿ ಗಮನಿಸಬೇಕಾಗಿದೆ. ಕೆಲವೇ ಕೆಲವರು ಈ ಕ್ಷೇತ್ರವನ್ನು ಆರಿಸಿಕೊಂಡು ರಾಜಕೀಯದಲ್ಲಿ ಭಾಗವಹಿಸಿದನ್ನು ಕಾಣುತ್ತೇವೆ

ಜಂಗಮರು ಜಿಲ್ಲೆಯಲ್ಲಿ ಇತ್ತಿಚಿಗೆ ಮಾತ್ರ ರಾಜಕೀಯದಲ್ಲಿ ಭಾಗವಹಿಸಿ ಗೆದ್ದು ಬಂದಿರುವ ಜನಗಳು ತುಂಬ ಕಡಿಮೆಯಾಗಿದ್ದಾರೆ. ಆದರು ಊರಿನವರಾಗಲಿ, ಇಲ್ಲವೆ ಇತರರು, ಬಲದಿಂದ ಚುನಾವಣೆಯಲ್ಲಿ ನಿಂತು ಜಯಗಳಿಸಿದ್ದಾರೆ. ಆದರೂ ಪ್ರಮುಖ ಸ್ಥಾನವನ್ನೇ ಗಿಟಿಸಿಕೊಂಡು ಕೆಲಸ ಮಾಡಿರುವದು ಕಾಣುತ್ತೆವೆ. ಏಕೆ? ಕಡಿಮೆ ಜನರು ಈ ಕ್ಷೆತ್ರದಲ್ಲಿ ಭಾಗವಹಿಸಿದ್ದಾರೆ ಎನ್ನುವದಾದರೆ ಇವರಲ್ಲಿ ಅಷ್ಟು ಆರ್ಥಿಕ ಪರಿಸ್ಥಿತಿ ಇಲ್ಲದೇ ಕಾರಣ ವೇನ್ನಬೇಕು. ಜೊತೆಗೆ ಈ ಕ್ಷೆತ್ರ ನಮ್ಮಂಥವರಿಗೆ ಇಲ್ಲ ಎಂಬ ಭಾವನೆಯಿಂದ ಬರಲಿಕ್ಕಿಲ್ಲ ಎನ್ನಿಸುತ್ತದೆ. ಏಕೆಂದರೆ ಇಂದಿನ ಚುನಾವಣೆ ಆ ನಿಂತಿರುವ ವ್ಯಕ್ತಿಯ ಜನಸಂಖ್ಯೆ ಹೆಚ್ಚಿರುವ ಆಧಾರದ ಮೇಲೆ ಟಿಕೇಟ್ ಸಿಗುವುದರಿಂದ ಕಡಿಮೆ ಜನಸಂಖ್ಯೆ ಹೊಂದಿರುವ ಜಂಗಮರಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಸಾಧ್ಯವಿಲ್ಲ. ಸ್ಪರ್ಧಿಸಲು ಆಸೆ ಇದ್ದರು ಆರ್ಥಿಕ ಸಬಲತೆ ಬೇಕು. ಏಕೆಂದರೆ ಚುನಾವಣೆ ಕೇವಲ ಆರ್ಥಿಕತೆಯ ಮೇಲೆ ನಿರಭಾರವಾಗಿರುವುದರಿಂದ ಇವರು ಅತ್ತ ಕಡೆ ಹೆಚ್ಚಿನ ಗಮನಹರಿಸದಿರುವುದು ಕಾಣುತ್ತೇವೆ. ಹೀಗಾಗಿ ರಾಜಕೀಯ ಜೀವನವನ್ನು ನೋಡಿದರೆ ಅಷ್ಟು ಪ್ರಮುಖತೆಯಿಂದ ಕೂಡಿಲ್ಲವೆಂದು ಹೇಳಬೇಕು ಕೆಲವೇ ಕೆಲವರು ಈ ರಂಗದಲ್ಲಿ ಜಯಗಳಿಸಿದರು ಜಂಗಮ ಸಮುದಾಯಕ್ಕೆ ಅಷ್ಟು ಕೊಡುಗೆಯನ್ನು ನೀಡಿಲ್ಲ ಎನ್ನಿಸುತ್ತದೆ. ಅದಕ್ಕಾಗಿ ಜಂಗಮ ಜಗತ್ ರಕ್ಷಕನಿಗೆ ಇಂದು ಅವರ ಕಷ್ಟಕ್ಕೆ ಸಚಿವರಿಲ್ಲ ಶಾಸಕರಿಲ್ಲ. ಎಂದೇ ಹೇಳಬೇಕಾಗಿದೆ ಎಷ್ಟು ಓದಿದರೂ ನೌಕರಿಗೆ ಸೇರುವ ಶಕ್ತಿ ಇವರಿಗಿಲ್ಲ ಇತ್ತ ಕಡೆ ಜಂಗಮ ಕಾಯಕವೂ ಇಲ್ಲ ಅಲ್ಲದೆ ಯಾವ ಕೆಲಸಗಳಲ್ಲಿಯೊ ಪರಿಪೂರ್ವ ಅನುಭವವಿಲ್ಲ ಮತ್ತು ಸರಕಾರದವರ ಯಾವ ಸಹಕಾರವೂ ಇಲ್ಲ, ಮಠಾಧೀಶರ ನಿಗವು ಇಲ್ಲ. ಇದರಿಂದ ಇಂದು ಅವರ ಜೀವನ ಸಮಸ್ಯೆಯ ಸುಳಿಯಲ್ಲಿ

ಸಾಗುತ್ತಿದೆನ್ನಬಹುದಾಗಿದೆ. ಕೆಲವು ರಾಜಕಾರಣಿಗಳು ಇದ್ದರೂ ಮೇಲಿನ ಯಾವದಕ್ಕೆ ಗಮನ ಕೊಡದೆ ತಮ್ಮಷ್ಟಕ್ಕೆ ತಾವು ಇರುವದರಿಂದ ಜಂಗಮರು ಯಾವ ರಾಜಕೀಯಕ್ಕೆ ಲೆಕ್ಕಕೊಡದೆ ತಮ್ಮ ಪಾಡಿಗೆ ತಾವು ಇರುವದನ್ನು ನೋಡುತ್ತೇವೆ. ಕೆಲವು ತಮ್ಮ ವ್ಯಕ್ತಿತ್ವದ ಮೇಲೆ ಆರಿಸಿ ಬಂದರೂ ಒಬ್ಬರಿಂದ ಏನು ಮಾಡಲು ಸಾಧ್ಯವಿಲ್ಲ. ಜಿಲ್ಲೆಯ ರಾಜಕೀಯದಲ್ಲಿ ಕೆಲವರು ಭಾಗವಹಿಸಿ ರಾಜಕೀಯಕ್ಕೆ ಸಲ್ಲಿಸಿದ ಸೇವೆ ಗುರುತಿಸಬೇಕಾಗುತ್ತದೆ.

**೯.೧. ಕೋಟ್ರಯ್ಯಾ ಸ್ವಾಮಿ ಪರ್ವತ ಮಠ ಖಟಕ ಚಿಂಚೋಳಿ :** ಇವರು ಭಾಲ್ಕಿ ತಾಲೂಕಿನವರು ತುಂಬ ಸೀದಾ-ಸದಾ ಸರಳತೆಗೆ ಹೆಸರುವಾಸಿಯಾಗಿದ್ದವರು ಹೀಗಾಗಿ ಸರ್ವವರು ಇವರಿಗೆ ಅಪ್ಪಿಕೊಂಡವರು. ಜೊತೆ ಮಠದ ಮೂಲಕ ಜನಸೇವೆಯನ್ನು ಮಾಡಿದವರು ಯಾವುದೇ ಜನಾಂಗವಿರಲಿ, ಯಾವುದೇ ಕಷ್ಟವಿರಲಿ ಅದನ್ನು ಬಗೆಹರಿಸಿ ಸಲಹೆ ಸೂಚನೆಯನ್ನು ಕೊಟ್ಟು ಸಹಕರಿಸುವ ಮನಸ್ಸು ಅವರದು. ಹೀಗಾಗಿಯೇ ಅವರ ಗುಣದಿಂದಲೇ ರಾಜಕೀಯವನ್ನು ಪ್ರವೇಶಿದಂತೆಯಾಗಿದೆ. ನಿಜಾಮರ ಕಾಲದಲ್ಲಿನಿಂದ ರಾಜಕೀಯದಲ್ಲಿ ಸೇರಿಕೊಂಡವರು. ಇವರು ನಿಜಾಮರ ಕಾಲದಲ್ಲಿಯೇ ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಾಗಿ ಆಯ್ಕೆಯಾಗಿದ್ದರು. ತದನಂತರ ತಾಲೂಕಾ ಕಾಂಗ್ರೇಸ್ ಅಭಿವೃದ್ಧಿಯ ಅಧ್ಯಕ್ಷರಾಗಿ, ಗ್ರಾಮ ಪಂಚಾಯತ ಅಧ್ಯಕ್ಷರಾಗಿ, ಗ್ರಾಮ ಸೇವಕರಾಗಿ ಮತ್ತು ಡಿ.ಸಿ.ಸಿ. ಬ್ಯಾಂಕಿನ ಸ್ಥಾನಿಕ ಸದಸ್ಯರಾಗಿ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

**೯.೨. ಮಾಂತಯ್ಯಾ ಸ್ವಾಮಿ :** ಇವರು ಬೀದರ ಪಟ್ಟಣದವರು ಅನೇಕ ವರ್ಷಗಳಿಂದ ರಾಜಕೀಯ ದಲ್ಲಿ ಭಾಗವಹಿಸಿ ಬಿಜೆಪಿ ಪಕ್ಷದ ಕಾರ್ಯಕರ್ತರಾಗಿ ಜಿಲ್ಲೆಯಾದ್ಯಂತ ಕೆಲಸವನ್ನು ಮಾಡಿದವರು. ಇವರು ಮೊದಲಿನಿಂದಲೂ ರಾಜಕೀಯದಲ್ಲಿ ಆಸಕ್ತಿವುಳ್ಳವರಾಗಿದ್ದು ಸದಾ ರಾಜಕಾರಣಿಗಳ ಸನಿಯದಲ್ಲೇ ಇದ್ದುಕೊಂಡು ಅವರ ಸಮಾರಂಭಗಳಲ್ಲಿ ಭಾಗಿಯಾಗಿ ಸಮಾಜ ಸೇವೆಯನ್ನು ಮಾಡುವಲ್ಲಿ ತುಂಬ ಆಸಕ್ತಿವುಳ್ಳವರಾಗಿದ್ದಾರೆ. ಅಂತೆಯೇ ರಾಜಕೀಯಕ್ಕೆ ತುಂಬ ಅಪ್ಪಿಕೊಂಡಿದ್ದಾರೆ. ಮುಂದೆ ಜಿಲ್ಲಾ ಬಿಜೆಪಿ ಪಕ್ಷದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಇಂದಿಗೂ ಬಿಜೆಪಿಯ ಪಕ್ಷದೊಂದಿಗೆ ಸಹಕರಿಸಿತ್ತಿರುತ್ತಾರೆ. ರಾಜಕೀಯದಲ್ಲಿ ಅಷ್ಟೆ ಆಸಕ್ತಿವಹಿಸಿದೆ ಪತ್ರಿಕೆಯ ಸಂಪಾದಕರಾಗಿಯೂ ಸಮಾಜಕ್ಕೆ ಸೇವೆಯನ್ನಗೈದವರು ಇವರಾಗಿದ್ದಾರೆ.

**೯.೩. ಶ್ರೀಮತಿ ಶಕುಂತಲ ಪರ್ವತಮಠ :** ಇವರು ಭಾಲ್ಕಿ ತಾಲೂಕಿನ ಖಟಕಚಿಂಚೋಳಿ ಯವರು. ಇವರು ಕೋಟ್ರಯ್ಯಾನವರ ಸೊಸೆ. ಇವರು ರಾಜಕೀಯ ದಲ್ಲಿ ಆಸಕ್ತರು ಹೀಗಾಗಿ

ಇವರು ಜಿಲ್ಲಾ ಪಂಚಾಯಿತ ಸಮಾಜ ಕಲ್ಯಾಣ ಸ್ಥಾಯಿ ಕಮಿಟಿಯ ಅಧ್ಯಕ್ಷರಾಗಿ ಎರಡು ಬಾರಿ ಆರಿಸಿ ಬಂದು ಜಿಲ್ಲೆಯಾದ್ಯಂತ ಸೇವೆ ಮಾಡಿದ್ದಾರೆ. ನಂತರ ಸದ್ಯ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸದಾ ಹಸ್ನಮುಖಿಯಾಗಿ ಜನರ ಸಮಸ್ಯೆಗೆ ಸ್ಪಂದಿಸಿ ಅವುಗಳನ್ನು ಪರಿಹರಿಸಿಕೊಂಡು ಹೋಗುವ ಚಾತುರ್ಯ ಅವರಿಗುಂಟು.

**೯.೪. ರಾಜಶ್ರೀ ಶ್ರೀಕಾಂತ ಸ್ವಾಮಿ :** ಇವರು ಔರಾದ ತಾಲೂಕಿನ ಹೆಡಗಾಪೂರದವರು. ಇವರು ಚಿಕ್ಕ ವಯಸ್ಸಿನಲ್ಲಿಯೇ ದೊಡ್ಡ ಪದವಿಯನ್ನು ಪಡೆದವರು. ಅದಕ್ಕೆ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವಂತೆ ಜಿಲ್ಲಾ ಪಂಚಾಯತ ಅಧ್ಯಕ್ಷರಾಗಿ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

**೯.೫. ವಿದ್ಯಾವತಿ ಶಿವಯ್ಯಾ ಸ್ವಾಮಿ, ಯರನಳ್ಳಿ :** ಇವರು ಬೀದರ ತಾಲೂಕಿನವರು. ಇವರು ಕೃಷಿ ಉತ್ಪನ್ನ ಮಾರುಕಟ್ಟೆಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಸರಳ ಸಜ್ಜನಿಕೆಗೆ ಹೆಸರುವಾಸಿಯಾಗಿ ಯಾವುದೇ ಯೇಚು-ಪೇಚು ಅರಿಯದೇ ತಮ್ಮ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಅಲ್ಲದೆ ಇನ್ನು ಅನೇಕ ಜಂಗಮ ಯುವಕರು ರಾಜಕೀಯದಲ್ಲಿ ತೊಡಗಿಸಿಕೊಂಡಿದ್ದಾರೆ. ರಾಜಕುಮಾರ ಸ್ವಾಮಿ, ಜಗ್ಗಯ್ಯಾ ಸ್ವಾಮಿ, ಬಸವರಾಜ ಸ್ವಾಮಿ ಹೀಗೆ ಅನೇಕ ಜನರನ್ನು ಹೆಸರಿಸಬಹುದು.

## ೧೦. ಆರ್ಥಿಕ ಜೀವನ

ಪೂಜೆಗಿಂತ ಕಾಯಕ (ಕೆಲಸ) ಇಂದಿನ ದಿನಮಾನಗಳಲ್ಲಿ ತುಂಬ ಮುಖ್ಯವಾಗಿದೆ. ಏಕೆಂದರೆ ಈಗಿನ ದೈನಂದಿನ ಪ್ರತಿಯೊಂದು ಪೂರೈಕೆಗಳಿಗೆ ಮನುಷ್ಯನಿಗೆ ಅತಿ ಮುಖ್ಯವಾಗಿ ಆರ್ಥಿಕ ನೆರವು ಬೇಕಾಗುತ್ತದೆ. ಇದು ಇರಲಿಲ್ಲ ಎಂದರೆ ಜೀವನವೇ ಇಲ್ಲ. ಹೀಗಾಗಿ ಆರ್ಥಿಕ ನೆರವುನಿಂದಲೇ ಮಾನವನ ಜೀವನ ನಿಂತಿದೆ. ಕೇವಲ ಪೂಜೆಯನ್ನೇ ನಂಬಿ ಜೀವನ ಸಾಗಿಸುತ್ತಿದ್ದ ಸಾಕಷ್ಟು ಜಂಗಮ ಕುಟುಂಬಗಳು ಆ ವೃತ್ತಿಯಿಂದ ಅಥವಾ ಕಾಯಕದಿಂದ ಜೀವನ ಸಾಗಿಸುವುದು ದುಸ್ತರವಾಗಿದೆ. ಮಾನವನು ಬದುಕಬೇಕಾದರೆ ದುಡಿಮೆ ಮುಖ್ಯ. ದುಡಿಮೆಯಿಂದ ಧನ ಸಂಪಾದನೆಯಾಗುತ್ತದೆ. ಧನ ಸಂಪಾದನೆಯಿಂದ ಜೀವನ ಸಾಗಿಸಲು ಸಾಧ್ಯವಾಗುತ್ತದೆ. 'ಅದಕ್ಕೆ ಉದ್ಯೋಗಂ ಪುರುಷ ಲಕ್ಷಣಂ' ಎನ್ನುವುದಕ್ಕಿಂತ ಪೌರುಷದ ಲಕ್ಷಣವೂ ಆಗಿದೆ. ಆದರೆ ಕೇವಲ ಪೂಜೆ ಮಾಡುತ್ತ ಕುಳಿತರೆ ದೇವರು ಪ್ರತ್ಯೇಕ್ಷವಾಗಿ ವರ ಕೊಡುವುದು ಬೇಕು - ಬೇಡಗಳನ್ನು ಪೂರೈಸುವುದು ಕೇವಲ ನಮ್ಮ ಪುರಾಣ ಶಾಸ್ತ್ರಗಳಲ್ಲಿ

ಮಾತ್ರ ಸಾಧ್ಯ. 'ನಮ್ಮ ಭಾರತೀಯ ಪೌರಾಣಿಕ ಶಾಸ್ತ್ರಗಳಲ್ಲಿ ಮಾತ್ರ ನಾವು ದೆವ್ವ - ದೇವರನ್ನು ಸೃಷ್ಟಿ ಮಾಡಿಕೊಂಡಿದ್ದೇವೆ. ನಿಜ ಅರ್ಥದಲ್ಲಿ ಹೇಳಬೇಕಾದರೆ ದೆವ್ವ - ದೇವರು ಕೇವಲ ನಮ್ಮ ಕಲ್ಪನಾ ಲೋಕದಲ್ಲಿ ಸೃಷ್ಟಿಮಾಡಿಕೊಂಡ ವಿಚಾರಗಳು ದೆವ್ವ-ದೇವರು ಹೀಗೆ ನಾಣ್ಯದ ಎರಡು ಮುಖಗಳು ನಾವು ವಾಸ್ತು ಲೋಕದಲ್ಲಿ ಬದುಕುವುದಕ್ಕಿಂತ ವಾಸ್ತವ ಲೋಕದಲ್ಲಿ ಬದುಕುವುದು ಬಹಳ ಮುಖ್ಯವಾಗಿದೆ'(ಸಾಲಿಮಠ ಘನಮಠದಯ್ಯ:೨೦೦೨:೬). ಇಂದು ಈ ಮಾತು ಪ್ರತಿಯೊಂದು ಜೀವಿಗೂ ಬದುಕಲು ಬೇಕೇ ಬೇಕಾಗುತ್ತದೆ. ಆರ್ಥಿಕ ಸ್ಥಿತಿಯೇ ಸರ್ವಾಂಗೀಣ ಬದುಕನ್ನು ಅಥವಾ ಅಭಿವೃದ್ಧಿಯತ್ತ ಕರೆತರುವಲ್ಲಿ ಸಹಾಯಕವಾಗುತ್ತದೆ. ಯಾವುದೇ ಸಮಾಜವಿರಲಿ, ಸಮುದಾಯವಿರಲಿ ಮತ್ತೆ ಬೇರೆ ಯಾವುದೇ ಜನಾಂಗವಿರಲಿ ಅಲ್ಲಿ ಆರ್ಥಿಕತೆಯನ್ನು ಚೆನ್ನಾಗಿ ಇದ್ದಾಗ ಪ್ರತಿಯೊಂದು ಪಡೆಯುವಲ್ಲಿ ಆ ಸಮುದಾಯ ಯಶಸ್ವಿಯಾಗುತ್ತದೆ. ಹಂತ ಹಂತವಾಗಿ ಮುಂದೆ ಬರುತ್ತದೆ. ಆದರೆ ಆರ್ಥಿಕವಾಗಿ ವಿಕ್ ಇದ್ದಾಗ ಸಾಮಾಜಿಕವಾಗಿ ಮೇಲಿನ ಸ್ಥಾನದಲ್ಲಿ ಬಂದರೆ ಅದು ಕೇವಲ ತನ್ನ ಗೌರವವನ್ನು ಗುರುತಿಸುತ್ತದೆ. ಆದರೆ ಅದು ಆರ್ಥಿಕವಾಗಿ ಮತ್ತು ಯಾವುದೇ ಆಸೆಯನ್ನು ಇಡೇರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಇಂತಹ ವಿಚಾರಗಳನ್ನೇ ಒಳಗೊಂಡುದೇ ಜಂಗಮ ಸಮುದಾಯ. ಇವರು ಆರ್ಥಿಕವಾಗಿ ತುಂಬ ಹಿಂದುಳಿದವರಾಗಿದ್ದಾರೆ. ಏಕೆಂದರೆ ಜಂಗಮರು ಸಮಾಜದ ಮೊದಲನೆಯ ಸ್ಥಾನದಲ್ಲಿ ಬರುವರು. ಅವರಿಗೆ ಎಲ್ಲಾ ರೀತಿಯ ಪ್ರೀತಿ, ಗೌರವ ಸಲ್ಲಿಸಿದವರು ಹೀಗೆ ಹಿಂದುಳಿಯುತ್ತಾರೆ ಎಂಬ ಅಭಿಪ್ರಾಯಗಳು ಉಂಟು. ಆದರೆ ಸಮಾಜದಲ್ಲಿ ಇವರಿಗೆ ಮೊದಲಿನ ಸ್ಥಾನವಿದೆ ನಿಜ ಅದು ಹಿಂದೆ ಇತ್ತು ಇಂದು ಇಲ್ಲವಾಗಿದೆ. ಹೇಗೆ ಎಂದು ವಿವರಿಸುವದಾದರೆ ಪ್ರಾಚೀನ ಕಾಲದಲ್ಲಿ ಜಂಗಮನೇ ಸಮಾಜಕ್ಕೆ ದೇವರಾಗಿದರು. ಇವರನ್ನು ಕರೆಯದೇ ಪೂಜಿಸದೇ ಬೇರೆಯಾವ ಕಾರ್ಯಗಳು ನಡೆಯುತ್ತಿರಲಿಲ್ಲ. ಏಕೆಂದರೆ ಜಂಗಮ ಶಿವನ ರೂಪ ಇವನ್ನು ಜಗತ್ತಿನ ಜನರಿಗೆ ಉದ್ದೇಶವನ್ನು ಸಾರುತ್ತಾ. ಸಮಾಜವನ್ನು ವ್ಯವಸ್ಥಿತವಾಗಿ ಶುಚಿಯಾಗಿ ಪರಿವರ್ತಿಸುತ್ತಾ ಜನರಿಗೆ ವೀರಶೈವ ಅಥವಾ ಶಿವನ ಲೀಲೆಗಳನ್ನು ತಿಳಿಸುವ ಮತ್ತು ಜನ ಸೇವೆಯನ್ನು ಮಾಡುವ ಸರ್ವರು ನಮ್ಮವರು ಎಂಬ ತತ್ವದ ಮೂಲಕ ಸಮಾಜದ ತುಂಬ ಸಂಚರಿಸುತ್ತಾ ಸಾಗುತ್ತಿದ್ದರು. ನಂತರ ಒಂದೊಂದು ಪೀಠಗಳು ಒಂದೊಂದು ಊರಿನಲ್ಲಿ ಮಠ, ಪೀಠಗಳು ಸ್ಥಾಪಿಸಿ ಅದಕ್ಕೆ ಒಂದು ಜಂಗಮ ವ್ಯಕ್ತಿಯನ್ನು ನೇಮಿಸಿಟ್ಟು ಪ್ರತಿಯೊಂದು ರಂಗಗಳಲ್ಲಿ ನಡೆದ ವಿಚಾರಗಳನ್ನು ತಿಳಿಸುವದು ಮತ್ತು ನ್ಯಾಯುತವಾಗಿ ಬಗೆಹರಿಸುವ ಕೆಲಸ ಜಂಗಮರ ಪೀಠ ಮತ್ತು ಮಠದ

ಕೆಲಸವಾಗಿತ್ತು. ಅಂದರೆ ಜಂಗಮರ ಪೀಠ, ಮಠಗಳೇ ನ್ಯಾಯಲವಾಗಿದ್ದವು, ಜೊತೆಗೆ, ಕಾರ್ಯಾಂಗ, ಶಾಸಕಾಂಗ, ಶಿಕ್ಷಣ ಕ್ಷೇತ್ರ, ಪೋಲಿಸ ಕಛೇರಿ, ಹೀಗೆ ಹಲವರು ರೀತಿಯೊಳಗೆ ಆಡಳಿತವನ್ನು ನಡೆಸಿಕೊಂಡು ಸಮಾಜವನ್ನು ಕಾಪಾಡಿಕೊಂಡು ಬಂದಿದ್ದನ್ನು ಕಾಣುತ್ತೇವೆ. ಮುಂದೆ ಮೇಲಿನವುಗಳು ಸರಕಾರದವರು ಒಂದೊಂದು ಭಾಗ ಮಾಡಿಕೊಂಡು ಆಯಾ ಕ್ಷೇತ್ರಗಳಲ್ಲಿ ತಮ್ಮವರಿಗೆ ನೇಮಿಸಿಕೊಂಡು ಆಡಳಿತ ನಡೆಸುತ್ತಿರುವದು ಬಂತು. ಮಠ, ಪೀಠಗಳು ಭಕ್ತರನ್ನು ಸಾಮಾಜಿಕ ನೆಲೆಯಲ್ಲಿ ಕೊನೆಯವರೆಗೂ ನಡೆಸಿಕೊಂಡು ಹೋಗುವರೇ ಜಂಗಮರಾಗಿದ್ದರು. ಮುಂದೆ ಜನಸಂಖ್ಯೆ ಬೆಳೆದಂತೆ ಜಂಗಮರ ಸಂಖ್ಯೆಯು ಬೆಳೆಯಿತು. ಇದರಿಂದ ಅವರು ಮಾಡುವ ಸಮಾಜ ಸೇವೆಯ ಕಾಯಕದಿಂದ ಕುಟುಂಬವನ್ನು ನಡೆಸಿಕೊಂಡು ಹೋಗುವಲ್ಲಿ ವಿಫಲವಾದರು. ಈ ಜಂಗಮರಿಗೆ ಜೋಳಿಗೆಯೋ ಶ್ರೀ ರಕ್ಷಾ. ಇದು ಗುರುವಿನಿಂದ ಬಳವಳಿಯಾಗಿ ಬಂದ ಆಸ್ತಿ. ಅದಕ್ಕೆ ಹಿರಿಯರು, ಮಹತ್ಮರು ಹೇಳಿದಂತೆ ಸಿದ್ಧಾರೂಢರ ಜೋಳಿಗೆ ಜಗತ್ತಿಗೆಲ್ಲಾ ಹೋಳಿಗೆ ಎಂದು ನುಡಿದಂತೆ ಅಂದಿನಿಂದ ಇಂದಿನವರೆಗೆ ಜಂಗಮ ಜೋಳಿಗೆ ಹಾಕಿ ಸಾವಿರಾರು ಜನರನ್ನು ಸಂರಕ್ಷಣೆ ಮಾಡುತ್ತಾ ಬಂದದ್ದು ಬೇರೆ ಹೇಳಬೇಕಾಗಿಲ್ಲ. ಜಂಗಮ ಪೂರ್ವಿಜರು ಈ ಜೋಳಿಗೆಯಿಂದಲೇ ತಮ್ಮ ಸಂಸಾರವನ್ನು ನಡೆಸುತ್ತಾ ಬೇಡುತ್ತಾ ತಿನ್ನುತ್ತಾ ಶಿಷ್ಯರ ಮನೆಯಲ್ಲಿ ಭಿನ್ನವನ್ನು ತಿರಿಸುತ್ತಾ ಧರ್ಮ ಭೋದಿಸುತ್ತಾ, ಜ್ಞಾನದ ಸುಧೆಯನ್ನೇ ಸರ್ವರಲ್ಲಿ ಮೂಡಿಸುತ್ತಾ ನಡೆದವರು ಮುಂದೆ ಭವಿಷ್ಯವನ್ನು ಜನರಿಗೆ ತಿಳಿಸುತ್ತಾ ಅಂದರೆ ಜಗತ್ತಿನ ವಿಚಾರವನ್ನು ತಿಳಿಸಿಕೊಡುವ ಉಪಗ್ರಹದಂತೆ ಕಾಲಕಾಲಕ್ಕೆ ಮುಂದಿನ ಜಗತ್ತಿನ ವಾತಾವರಣ ವನ್ನು ಬಿತ್ತರಿಸುತ್ತಾ ಬೇಡುತ್ತಾ ನಡೆದವರು ಹೀಗೆ ನಡೆದಾಗ ನೆಲೆಯಿಲ್ಲದೆ ಸಂಚರಿಸುತ್ತಿರುವಾಗ ಆರ್ಥಿಕ ಪರಿಸ್ಥಿತಿ ಅಭಿವೃದ್ಧಿಯಾಗಲು ಸಾಧ್ಯವಾಗಿಲ್ಲ. ಜೋಳಿಗೆಯಿಂದಲೇ ಗೊತ್ತಾಗುತ್ತದೆ ಜಂಗಮರ ಆರ್ಥಿಕ ಪರಿಸ್ಥಿತಿ, ಕಾಲಕಾಲಕ್ಕೆ ಜೋಳಿಗೆಯಿಂದ ಭಿಕ್ಷಾಟನೆ ಮಾಡಿತಂದ ಕಾಂತಿಭಿಕ್ಷೆ, ದವಸ ಧಾನ್ಯದಿಂದ ತಮ್ಮ ಗುರುಕುಲಗಳಲ್ಲಿ ಲಕ್ಷಗಟ್ಟಲೇ ವಿದ್ಯಾರ್ಥಿಗಳಿಗೆ ಪ್ರಸಾದವನ್ನು ನೀಡಿ ವಿದ್ಯಾರ್ಜನೆಯನ್ನು ಕೊಟ್ಟ ಕೀರ್ತಿ ಜಂಗಮರಿಗೆ ಸಲ್ಲುತ್ತದ. ಅಷ್ಟೆ ಏಕೆ ? ನಮ್ಮ ನಾಡಿನಲ್ಲಿ ಗುರುಕುಲಗಳಿಂದ ಹಿಡಿದು ಇಂದಿನ ಹೊಸ ಪಾಠಶಾಲೆಗಳನ್ನು ಪ್ರಾರಂಭಿಸಿ ಕೋಟಿಗಟ್ಟಲೆ ಮಕ್ಕಳಿಗೆ ಪ್ರಸಾದ ವಿದ್ಯಾ ಕೊಟ್ಟು ಪರದೇಶಗಳಲ್ಲೂ ಸಹ ನಮ್ಮ ದೇಶದ ವಿದ್ಯಾರ್ಥಿಗಳಿಗೆ ಓದಲು ಎಷ್ಟೋ ಗುರುಕುಲಗಳು ಸಹಾಯ ಮಾಡಿವೆ. ಎಷ್ಟೋ ಇಂಜಿನಿಯರ, ಡಾಕ್ಟರ, ವಿಜ್ಞಾನಿಗಳು, ನ್ಯಾಯವಾದಿಗಳು ಈ ಜೋಳಿಗೆಯಿಂದ ತಂದು ಶೇಖರಿಸಿದ ಪ್ರಸಾದ ನಿಲಯಗಳಿಂದಲೇ

ಮುಂದೆ ಬಂದಿರುವುದುಂಟು. ಜನರಿಂದ ತಂದ ಜನರಿಗೆ ಪರಿಪಕ್ವವಾದ ರೀತಿಯೊಳಗೆ ಸಹಾಯ ನೀಡಿದವರು ಜಂಗಮ ಮೂರ್ತಿಗಳು ಇಂತಹ ಶ್ರೀಮಂತ ಜೋಳಿಗೆ ನಡೆಯದೆ ಹೋಯಿತು. ಮೊದಲಿನಿಂದಲೂ ಕೇವಲ ಪೂಜಾ, ಕ್ರಿಯಾ, ಕ್ರಮ, ಮಾಡುವದನ್ನು ಬಿಟ್ಟರೆ ಇವರು ಮತ್ತಾವದೇ ಕೆಲಸಗಳಲ್ಲಿ ತೊಡಗದೆ ಕಾರಣದಿಂದ ಇತರ ಕೆಲಸಗಳಲ್ಲಿಯೋ ಸರಿಯಾದ ಅನುಭವವಿರದರಿಂದ ಆರ್ಥಿಕವಾಗಿ ಮುಂದೆ ಬರಲು ಆಗುತ್ತಿಲ್ಲ. ಜೊತೆಗೆ ಬಂಡವಾಳ ಹಾಕಿ ಸರಿಯಾದ ಕೆಲಸಗಳಲ್ಲಿ ತೊಡಗಿಸಬೇಕೆಂದರೆ ಬಂಡವಾಳವಿಲ್ಲ. ಇತರ ಯಾವುದೇ ಸಹಕಾರ ಸಹಾಯವಿಲ್ಲ. ಹೀಗಾಗಿದರಿಂದ ಶಿಕ್ಷಣದಲ್ಲೂ ಹೆಚ್ಚಾಗಿ ಓದಿಕೊಂಡು ಹೋಗಲು ಯಾಗಲಿಲ್ಲ ಕೇಲವೆ ಕೆಲವರು ಓದಿಕೊಂಡಿದರೂ ಅವರಿಗೆ ಸರಕಾರದಿಂದ ಸಹಾಯವಾಗಲಿ ಸವಲತ್ತುಗಳಾಗಲಿ ಯಾವದೂ ಇಲ್ಲ ಹೀಗಾಗಿದರಿಂದ ಈ ಸಮುದಾಯವು ಆರ್ಥಿಕ ಪರಿಸ್ಥಿತಿಯಿಂದ ತುಂಬ ದೂರ ಸರಿದು ನಿಂತಿದೆ.। ಪ್ರಾಚೀನ ಕಾಲದಿಂದಲೂ ಇವರಿಗೆ ಯಾವ ವೃತ್ತಿಯಲ್ಲೂ ಪರಿಣತಿ ಇಲ್ಲದರಿಂದ ಅನೇಕ ನೌಕರಿಗಳನ್ನು ಆಶ್ರಯಿಸಬೇಕಾಯಿತು. ಏಕೆಂದರೆ ಧಾರ್ಮಿಕ ಮತ್ತು ಸಂಸ್ಕಾರ ವಿದ್ಯೆ ಇವುಗಳೇ ಇವರ ಪ್ರಮುಖ ಆಸ್ತಿಗಳಾಗಿದ್ದವು. ಇಂದು ಇವುಗಳಿಂದ ಬದುಕು ಸಾಗದಾಯಿತು. ಹೀಗಾಗಿ ಜಂಗಮರು ಹೆಚ್ಚು ಜನರು ಬಡತನದಲ್ಲಿ ಬಳಲುತ್ತಿದ್ದಾರೆ.। ಜೊತೆಗೆ ಇದರಲ್ಲಿ ಒಳ ಪಂಗಡಗಳು ಬೆಳೆದವು. ವಿರಕ್ತರು ಗುರು ಎಂಬ ಪೀಠ ಪರಂಪರೆ ಬೆಳೆದು ಬಂದ ಬಗೆಗಳು, ಸೂತ್ರಗಳು, ಗೋತ್ರಗಳ ಮೇಲು ಕೀಳು ಭಾವನೆಗಳು ಅವರಲ್ಲೇ ಹುಟ್ಟಿಕೊಂಡವು ಹೀಗಾಗಿದರಿಂದ ನಿಜವಾದ ಜಂಗಮರಿಗೆ ಭಕ್ತರು ಗುರುತಿಸುವಲ್ಲಿ ವಿಫಲರಾದ್ದರು. ಭಕ್ತರ ಭಕ್ತಿ ಕಡಿಮೆಯಾಯಿತು. ಭಕ್ತರಿಂದ ಟೀಕೆ ಟಿಪ್ಪಣೆಗಳು ಆರಂಭವಾದವು. ಮುಂದೆ ಯಾವ ಜಾತಿಯವನು ಜಂಗಮ ಅಥವ ಗುರುಗಳಾಗಬಹುದೆಂಬ ಧ್ವನಿಗಳು ಎಳಲು ಪ್ರಾರಂಭವಾದವು. ಇದರಿಂದ ಹುಟ್ಟಿನಿಂದ ಜಂಗಮರಾದ ಜಂಗಮರು ಟೀಕೆ ಟಿಪ್ಪಣೆಗೆ ಹೆದರಿ ತಮ್ಮ ಜಂಗಮ ಕಾಯಕವನ್ನು ತ್ಯಜಿಸಿ ಮನಸ್ಸಿಗೆ ಬಂದ ಹತ್ತು ಹಲವಾರು ಕೆಲಸಗಳಲ್ಲಿ ಸೇರುತ್ತಾ ನಡೆದರು.

ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯತೆಯಿಂದ ಎಲ್ಲಾ ಬಗೆಯ ಶೋಷಣೆಗೆ ಒಳಗಾಗುತ್ತ ಸಮಾಜದ ಮಲ್ವರ್ಗದವರು ಎಂದು ಹೇಳಿಸಿಕೊಂಡವರು ಆರ್ಥಿಕವಾಗಿ ಹಿಂದುಳಿತ್ತಾ ವೀರಶೈವ ಸಮಾಜದಲ್ಲಿ ಅಸ್ಪ್ರಶ್ಯತೆ ಜೀವನ ಮಾಡುವ ಸ್ಥಿತಿ ಇವರಿಗೆ ಒದಗಿದೆ. ಏಕೆಂದರೆ ವೀರಶೈವ ಸಮಾಜದಲ್ಲಿ ಜಂಗಮರು ಒಂದು ರತ್ನವಿದಂತೆ ತಾನು ಶುದ್ಧ ಇತರರಿಗೂ ಶುದ್ಧ ಮಾಡುವ ಕೆಲಸ ಜಂಗಮರದಾಗಿತ್ತು.

ವೀರಶೈವ ಎಂಬ ದೊಡ್ಡ ಸಮಾಜದಲ್ಲಿ ಜಂಗಮ ಪ್ರಾಣಿಗಳಿಂದ ಎಲ್ಲವು ಪಡೆಯುತ್ತಿತ್ತು. ಆದರೆ ಇಂದು ಅವನನ್ನು ನೂಕಿ ಸಾಗುವ ಸ್ಥಿತಿಯೊಳಗೆ ಸಾಗುತ್ತಿದೆ. ಇದರಿಂದ ಜಂಗಮ ಸಮುದಾಯವು ಹಂತ ಹಂತವಾಗಿ ಸರಿದು ನಿಲ್ಲುವ ಅಂಟಿನಲ್ಲಿ ಸಾಗುತ್ತಿದೆ. ಅದಕ್ಕಾಗಿ ಜಿಲ್ಲೆಯಲ್ಲಿ ಅನೇಕ ಜಂಗಮರು ತಮ್ಮ ಜಂಗಮ ಕಾಯಕವನ್ನು ಬಿಟ್ಟು ಚಾಹ ಹೋಟಲ್ ನಡೆಸುವದು, ಹೊಲಗದ್ದೆಗಳಲ್ಲಿ ಕೂಲಿಗಾಗಿ ಹೋಗುವುದು, ಕೆಲವರ ಹೊಲಗಳನ್ನು ಇಂತಿಷ್ಟು ಹಣವನ್ನು ಕೊಟ್ಟು ಹೊಲದ ಬೆಳೆಯನ್ನು ತೆಗೆದುಕೊಳ್ಳುವದು, ದನಕಾಯುವುದು, ಖಾಸಗಿ ಕಿರಾಣಿ ಅಂಗಡಿ, ಹೋಟಲ್, ಬಟ್ಟೆ ಅಂಗಡಿ, ಜೀಪ ನಡೆಸುವದು, ಲಾರಿ, ಮತ್ತು ಕಿನ್ನರ ಮಾಡುವದು ಹೀಗೆ ಅನೇಕ ವೃತ್ತಿಗಳಲ್ಲಿ ಜಂಗಮರು ತೋಡಗಿಸಿ ಕೊಂಡಿರುವರು(ಕೋಷ್ಟಕ ೨ ನೋಡಿ) ಕೆಲವೇ ಕೆಲವರು ತಿಳುವಳಿಕೆಯಿಂದ ಕೂಡಿದ ಜಂಗಮರು ತಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ನೀಡಿದರಿಂದ ಕೆಲವರೇ ಸರಕಾರಿ ನೌಕರಿಯನ್ನು ಅಲಂಬಿಸಿಕೊಂಡಿದ್ದಾರೆ. ಮುಂದೆ ವಿವಿಧ ವೃತ್ತಿಗಳಲ್ಲಿ ಅಥವಾ ಕಸುಬುಗಳಲ್ಲಿ ದುಡಿಯುತ್ತಿರುವರು.

**ಕೋಷ್ಟಕ ೨**

**ತಾಲೂಕುವಾರು ಕಸುಬುವಾರು ಜಂಗಮರ ಜನಸಂಖ್ಯೆ**

| ಕಸುಬುಗಳು | ಔರಾದ | | ಬ.ಕಲ್ಯಾಣ | | ಭಾಲ್ಕಿ | | ಹುಮನಾಬಾದ | | ಬೀದರ | | ಒಟ್ಟು |
|---|---|---|---|---|---|---|---|---|---|---|---|
| | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | |
| ಕೃಷಿ | ೧೦೭ | ೯ | ೧೧೫ | ೪ | ೨೪೧ | ೪ | ೧೬೧ | ೧೪ | ೬೭ | ೧ | ೭೨೧ |
| ಕೃಷಿ ಕೂಲಿಗಳಲ್ಲಿ | ೧೪೩ | ೪೧ | ೬೨ | ೩೩ | ೧೬೬ | ೪೦ | ೧೬೮ | ೩೨ | ೧೨೪ | ೧೨ | ೮೨೧ |
| ಜಂಗಮ ಕಾಯಕ | ೬೫ | ೩ | ೫೩ | ೦೧ | ೭೩ | ೭ | ೨೩ | ೨ | ೫೬ | ೧ | ೨೮೪ |
| ಸರಕಾರಿ ನೌಕರಿ | ೨೧ | ೪ | ೩೬ | ೧೪ | ೬೯ | ೭ | ೪೮ | ೪ | ೨೮ | ೧ | ೨೩೧ |
| ವ್ಯಾಪಾರ | ೫೬ | ೧ | ೮೨ | ೦ | ೧೦೮ | ೨ | ೪೮ | ೩ | ೭೦ | ೧ | ೩೭೦ |
| ಇತರೆ ಖಾ.ಕೆಲಸ | ೧೦೪ | ೦ | ೧೩೨ | ೦ | ೧೯೩ | ೦ | ೯೮ | ೦ | ೬೧ | ೦ | ೫೮೮ |
| ಒಟ್ಟು | ೪೯೬ | ೫೪ | ೪೮ | ೫೨ | ೮೫೦ | ೬೦ | ೫೪೬ | ೫೫ | ೪೦೬ | ೧೬ | ೩೦೧೫ |

ಬೀದರ ಜಿಲ್ಲೆಯ ಜಂಗಮರು ವಿವಿಧ ಕಸುಬುಗಳಲ್ಲಿ ತೊಡಗಿಸಿದ್ದು ನೋಡಿದರೆ ಬಹುತೇಕ ಜನರು ಕೃಷಿ ಕೂಲಿಯಲ್ಲಿ ಶೇ.೨೬ರಷ್ಟು ದುಡಿಯುತ್ತಿದ್ದಾರೆ. ಶೇ.೨೪ರಷ್ಟು ಜನರು ಕೃಷಿಯನ್ನು ಮಾಡುತ್ತಿದ್ದಾರೆ. ತಮ್ಮ ಮೂಲ ಜಂಗಮ ವೃತ್ತಿಯಿಂದ ಜೀವನ ಸಾಗದ ಕಾರಣದಿಂದ ಮನೆಗೆ ಒಬ್ಬರಿಗೆ ಮಾತ್ರ ಜಂಗಮ ಕಾಯಕ ಮಾಡುವಲ್ಲಿ ತೊಡಗಿಸಿ ಉಳಿದವರು ಇತರ ಕೆಲಸಗಳಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ. ಹೀಗಾಗಿ ಜಂಗಮ ಕಾಯಕ ಮಾಡುವವರು ಶೇ. ೯ರಷ್ಟು ಇದ್ದಾರೆ. ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ಶೇ.೧೨ರಷ್ಟು, ಖಾಸಗಿ ಇತರೆ ಕೆಲಸಗಳಲ್ಲಿ ಶೇ.೨೦ರಷ್ಟು ಇದ್ದಾರೆ. ಸರ್ಕಾರಿ ನೌಕರಿ ಸೇವೆಯನ್ನು ಸಲ್ಲಿಸುವವರು ಕೇವಲ ಶೇ.೮ರಷ್ಟು ಕಂಡುಬರುತ್ತಾರೆ.

ಒಟ್ಟಾರೆ ಈ ಸಮುದಾಯವು ಹಲವು ಕಸುಬುಗಳನ್ನು ಗಮನಿಸಿದರೆ ಆರ್ಥಿಕವಾಗಿ ಪ್ರಬಲವಿಲ್ಲದ್ದು ತಿಳಿಯುತ್ತದೆ. ಹೀಗಾಗಿ ಈ ಸಮುದಾಯವು ಅತ್ತಕಡೆ ಮೇಲುವರ್ಗದಲ್ಲೂ ಇಲ್ಲ, ಇತ್ತಕಡೆ ಕೆಳವರ್ಗದಲ್ಲಿ ಇಲ್ಲದಂತೆ ಸಮುದಾಯ ವಾಸಿಸುತ್ತದೆ.(ವೃತ್ತಚಿತ್ರ೨)

**ವೃತ್ತಚಿತ್ರ ೨. ಬೀದರ ಜಿಲ್ಲೆಯ ತಾಲೂಕುವಾರು ಜಂಗಮರ ಕಸುಬುಗಳ ಪ್ರಮಾಣ**




**೧೦.೧.ಕೃಷಿ :** ಭಾರತ ಮೂಲತ ಕೃಷಿ ಪ್ರಧಾನವಾದ ದೇಶ. ಸುಮಾರು ೭೦ರಷ್ಟು ಜನರು ಬೇಸಾಯದಲ್ಲಿ ತೊಡಗಿಸಿಕೊಂಡಿದ್ದರೆ. ಇಲ್ಲಿನ ಜನರು ೭೫ರಷ್ಟು ಬೇಸಾಯವು ಒಣಬೇಸಾಯ ವಾಗಿದೆ. ಮಳೆಯ ಮೇಲೆ ಅವಲಂಬಿತರಾಗಿದ್ದಾರೆ. ಈಗಾಗಿ ಇಡೀ ರೈತರ ಜೀವನ ಮಳೆಯ ಮೇಲೆ ನಿರ್ಭರಿತವಾಗಿದೆ. ಭಾರತ ದೇಶ ಕೃಷಿ ಪ್ರಧಾನವಾದ ಹಳ್ಳಿಗಳ ದೇಶ ಎಂಬಂತೆ ಬೀದರ ಜಿಲ್ಲೆಯೂ ಇದಕ್ಕೆ ಹೊರತಾಗಿಲ್ಲ. ಜಿಲ್ಲೆಯ ೫ ತಾಲೂಕಿನ ೬೨೩ಹಳ್ಳಿಗಳಲ್ಲಿ ಹೆಚ್ಚಿನ ಜನಸಂಖ್ಯೆ ಹಳ್ಳಿಗಳಲ್ಲಿ ವಾಸವಾಗಿದ್ದು, ಕೃಷಿ ಮೇಲೆ ಅವಲಂಬಿತರಾಗಿದ್ದಾರೆ. ಬೀದರ ಜಿಲ್ಲೆಯ ಜಂಗಮರನ್ನು ವ್ಯವಸಾಯಕ್ಕೆ ಹೋಲಿಸಿದಾಗ ಬಹಳಷ್ಟು ಜಂಗಮರು ಒಣಬೇಸಾಯವನ್ನು ಹೊಂದಿದ್ದಾರೆ (೧೭೫ ಹಳ್ಳಿ ಒಳಗೊಂಡಂತೆ ಕೋಷ್ಠಕ ೩ ನೋಡಿ).

**ಕೋಷ್ಠಕ ೩**

**ಬೀದರ ಜಿಲ್ಲೆಯ ಜಂಗಮರ ಒಣ ಮತ್ತು ನೀರಾವರಿಯ ಭೂ ಹಿಡುವಳಿ**

**(ಎಕರೆಗಳಲ್ಲಿ)**

| ಕ್ರ.ಸಂ. | ತಾಲೂಕುಗಳು | ಕುಟುಂಬಗಳು | ಒಣ | ನೀರಾವರಿ | ಒಟ್ಟು |
|---|---|---|---|---|---|
| ೧ | ಔರಾದ | ೨೬೩ | ೧೫೨೮ | ೬೩ | ೧೫೯೧ |
| ೨ | ಬಸವಕಲ್ಯಾಣ | ೨೬೧ | ೧೯೨೩ | ೩೦೨ | ೨೨೨೫ |
| ೩ | ಭಾಲ್ಕಿ | ೪೨೬ | ೧೭೬೨ | ೪೪೧ | ೨೨೦೨ |
| ೪ | ಬೀದರ | ೨೨೭ | ೭೭೧ | ೧೮೮ | ೯೫೯ |
| ೫ | ಹುಮನಾಬಾದ | ೩೦೬ | ೬೯೩ | ೨೯೪ | ೯೮೭ |
| | ಒಟ್ಟು | ೧೪೮೩ | ೫೬೭೫ | ೧೨೮೭ | ೬೯೬೨ |

ಜಂಗಮರ ಕೃಷಿಯನ್ನು ನೋಡಿದರೆ ಶೇ.೮೧ರಷ್ಟು ಜನರು ಒಣಬೇಸಾಯವನ್ನು ಅವಲಂಬಿಸಿದ್ದಾರೆ. ಶೇ.೧೮ರಷ್ಟು ಮಾತ್ರ ನೀರಾವರಿಯನ್ನು ಹೊಂದಿದ್ದಾರೆ. ೫ ತಾಲೂಕುಗಳನ್ನು ಒಣಬೇಸಾಯಕ್ಕೆ ಹೋಲಿಸಿ ನೋಡಿದಾಗ ಅತಿ ಹೆಚ್ಚು ಭಾಲ್ಕಿ, ಅತಿ ಕಡಿಮೆ ಹುಮನಾಬಾದ ತಾಲೂಕುಗಳು ಹೊಂದಿವೆ. ನೀರಾವರಿಯಲ್ಲಿ ಅತಿ ಹೆಚ್ಚು ಭಾಲ್ಕಿ, ಔರಾದ ಅತಿ ಕಡಿಮೆ ಹೊಂದಿದ ತಾಲೂಕುಗಳಾಗಿವೆ. ಇವರ ಕೃಷಿ ಸಂಪೂರ್ಣವಾಗಿ ಮಳೆಯ ಮೇಲೆ ನಿರ್ಭರವಾಗಿರುವುದರಿಂದ ಸಮಯಕ್ಕೆ ಸರಿಯಾಗಿ ಮಳೆಯಾಗದರಿಂದ ಅನೇಕ ರೈತರು ಆರ್ಥಿಕವಾಗಿ ಮುಂದುವರಿಯದೇ ಇದ್ದ ಗದ್ದೆಗಳಲ್ಲಿ ಬೇಸಾಯ ಕೂಲಿ ಮಾಡಿಕೊಂಡು ಸಾಗುತ್ತಿದ್ದಾರೆ. ಹೆಚ್ಚಿನ ಬಂಡವಾಳ ಹಾಕಿ ನೀರಾವರಿ ಮಾಡಿ ಆರ್ಥಿಕ ಬೆಳೆಗಳನ್ನು ಬೆಳೆಸ ಬೇಕಾದರೆ ಆರ್ಥಿಕ ಮಟ್ಟ ಸರಿಯಿರದೇ, ಕೃಷಿಯಲ್ಲಿ ಹೆಚ್ಚಿನ ಅನುಭವವಿರದ ಕಾರಣಕ್ಕಾಗಿಯೇ ಇವರಲ್ಲಿ ಕೃಷಿ ತಕ್ಕಮಟ್ಟಿಗೆ ಕಂಡುಬರುತ್ತದೆ.

ಬೀದರ ಜಿಲ್ಲೆಯ ಜಂಗಮರ ಒಟ್ಟು ಕುಟುಂಬದಲ್ಲಿ ದೊಡ್ಡ ಗಾತ್ರದ ಕುಟುಂಬಗಳು ಶೇ.೨ರಷ್ಟು ಇದ್ದಾರೆ. ಅಂದರೆ ಈ ಗುಂಪಿನಲ್ಲಿ ಬರುವ ಕುಟುಂಬಗಳು ೨೫ ಎಕರೆಕ್ಕಿಂತಲೂ ಹೆಚ್ಚಿನ ಭೂಮಿಯನ್ನು ಹೊಂದಿರುತ್ತವೆ. ೧ ರಿಂದ ೨೫ ಎಕರೆ ಗಾತ್ರದ ಭೂಮಿ ಇರುವಂತಹ ಮಧ್ಯಮ ಗಾತ್ರದ ರೈತರ ಕುಟುಂಬಗಳು ಶೇ.೯ರಷ್ಟು ಇವೆ. ೫ ರಿಂದ ೧೦ ಇರುವಂತಹ ಅರೆ ಮಾಧ್ಯಮ ಗಾತ್ರದ ರೈತರ ಕುಟುಂಬಗಳು ಶೇ.೧೫ರಷ್ಟು ಹೊಂದಿವೆ. ೨ ೧/೨ ಎಕರೆಯಿಂದ ೫ ಎಕರೆ ಭೂಮಿ ಹೊಂದಿರುವ ಸಣ್ಣ ಗಾತ್ರದ ರೈತರ ಕುಟುಂಬಗಳು ಶೇ.೨೭ರಷ್ಟು ಹೊಂದಿವೆ. ಅತಿ ಸಣ್ಣ ಗಾತ್ರದ ರೈತರ ಕುಟುಂಬಗಳು ಶೇ.೨೫ರಷ್ಟು ಕಂಡುಬರುತ್ತವೆ. ಇನ್ನು ಭೂಮಿಯಿಲ್ಲದೆ ಕೃಷಿ ಕೂಲಿಯ ಮೇಲೆ ಜೀವನ ಸಾಗಿಸುತ್ತಿರುವ ಕುಟುಂಬಗಳು ಶೇ.೨೨ರಷ್ಟು ಇದ್ದಾರೆ(೧೭೫ ಹಳ್ಳಿ ಒಳಗೊಂಡಂತೆ ಕೋಷ್ಟಕ ೩ ನೋಡಿ).

**ಕೋಷ್ಟಕ ೪**

## ಬೀದರ ಜಿಲ್ಲೆಯ ಜಂಗಮರ ಶ್ರೇಣಿಕೃತ ಭೂ ಹಿಡುವಳಿ

| ಕ್ರ.ಸಂ. | ತಾಲೂಕುಗಳು | ಕುಟುಂಬಗಳು | ಭೂ ಶ್ರೇಣಿಗಳು | | | | | |
|---|---|---|---|---|---|---|---|---|
| | | | *ಎ | *ಬಿ | *ಸಿ | *ಡಿ | *ಇ | *ಎಫ್ |
| ೧ | ಔರಾದ | ೨೬೩ | ೯ | ೪೦ | ೪೧ | ೬೮ | ೫೮ | ೪೭ |
| ೨ | ಬಸವಕಲ್ಯಾಣ | ೨೬೧ | ೬ | ೨೧ | ೨೮ | ೮೩ | ೫೯ | ೬೩ |
| ೩ | ಭಾಲ್ಕಿ | ೪೨೬ | ೭ | ೪೨ | ೮೧ | ೯೫ | ೧೧೯ | ೮೨ |
| ೪ | ಬೀದರ | ೨೨೭ | ೩ | ೧೬ | ೩೪ | ೬೨ | ೬೪ | ೫೨ |
| ೫ | ಹುಮನಾಬಾದ | ೩೦೬ | ೧ | ೧೫ | ೩೬ | ೮೪ | ೭೩ | ೮೬ |
| | ಒಟ್ಟು | ೧೪೮೩ | ೨೬ | ೧೩೪ | ೨೨೦ | ೪೦೨ | ೩೭೩ | ೩೩೦ |

*ಎ= ಶೇ ೨ ದೊಡ್ಡ ಭೂ ಹಿಡುವಳಿದಾರರು ೨೫.೧ ಎಕರೆಯಿಂದ ಮೇಲ್ಪಟ್ಟ ಕುಟುಂಬಗಳು

*ಬಿ= ಶೇ.೯ ಮಧ್ಯಮ ಭೂ ಹಿಡುವಳಿದಾರರು ೧೦.೦೦ ಎಕರೆಯಿಂದ ೨೫ ಎಕರೆ ಮೇಲ್ಪಟ್ಟ ಭೂ ಹಿಡುವಳಿದಾರರ ಕುಟುಂಬಗಳು

*ಸಿ= ಶೇ.೧೫ ಅರೆ ಮಧ್ಯಮ ಭೂಹಿಡುವಳಿದಾರರು ೫.೦೧ ಎಕರೆಯಿಂದ ೧೦ ಎಕರೆ ಮೇಲ್ಪಟ್ಟ ಭೂ ಹಿಡುವಳಿದಾರರ ಕುಟುಂಬಗಳು

*ಡಿ= ಶೇ.೨೫ ಸಣ್ಣ ಭೂ ಹಿಡುವಳಿದಾರರು ೨.೫೧ ಎಕರೆಯಿಂದ ೫ ಎಕರೆಯ ಭೂ ಹಿಡುವಳಿದಾರರ ಕುಟುಂಬಗಳು

*ಇ= ಶೇ.೨೫ ಅತಿ ಸಣ್ಣ ಭೂ ಹಿಡುವಳಿದಾರರು ೨.೫೦ ಮೇಲ್ಪಟ್ಟ ಭೂ ಹಿಡುವಳಿದಾರರ ಕುಟುಂಬಗಳು

*ಎಫ್= ಶೇ.೨೨ ಭೂ ರಹಿತ ಕುಟುಂಬಗಳು(ವೃತ್ತ ಚಿತ್ರ-೩)

ವೃತ್ತಚಿತ್ರ ೩. ಬೀದರ ಜಿಲ್ಲೆಯ ಜಂಗಮರ ಶ್ರೇಣಿಕೃತ ಭೂಹಿಡುವಳಿಗಳ ಪ್ರಮಾಣ




ಜಂಗಮರ ಭೂ ಶ್ರೇಣಿಯನ್ನು ಗಮನಿಸಿದರೆ ಹೆಚ್ಚಿನ ಭೂಮಿಯನ್ನು ಹೊಂದಿರಲಾರದಂತಹ ಕುಟುಂಬಗಳೇ ಕಂಡುಬರುತ್ತವೆ. ಮೂಲತಃ ಇವರು ರೈತರಂತೂ ಇಲ್ಲವೇ ಇಲ್ಲ. ಕೇವಲ ಧರ್ಮಪ್ರಚಾರ ಮಾಡಿ ಸಮಾಜದ ಸೇವೆ ಗೈಯುತ್ತಾ ಬಂದ ಜನಾಂಗ. ಮುಂದೆ ಹಂತ ಹಂತವಾಗಿ ವ್ಯವಸಾಯದಲ್ಲಿ ಪ್ರವೇಶಿಸಿ ಅಥವಾ ಇನ್ನೊಬ್ಬರಿಗೆ ಹಣವನ್ನು ಕೊಟ್ಟು ತುಂಡು ಬೇಸಾಯ ಮಾಡುವುದರ ಮೂಲಕ ಸ್ವಲ್ಪ ಭೂಮಿಯನ್ನು ಪಡೆದು ಕೃಷಿಯಲ್ಲಿ ತೊಡಗಿದ್ದು ಕಂಡುಬರುತ್ತದೆ.

**೧೦.೨. ಪಶುಸಂಪತ್ತು:** ಬೀದರ ಜಿಲ್ಲೆಯ ಜಂಗಮ ಸಮುದಾಯವು ಹೆಚ್ಚಾಗಿ ಒಕ್ಕಲುತನ ಮತ್ತು ಜಂಗಮ ಕಾಯಕದ ಮೇಲೆ ಅವಲಂಬಿತವಾಗಿದ್ದರು ಬೇಸಾಯದೊಡನೆ ಇನ್ನಿತರ ಕೆಲಸಗಳೊಂದಿಗೆ ಪ್ರಾಣಿಗಳನ್ನು ಸಾಕುತ್ತಿರುವರು. ಕಷ್ಟಕಾಲದಲ್ಲಿ ಅವುಗಳನ್ನು ಮಾರಿಕೊಂಡು ತಮಗೆ ಒದಗುವ ಸಮಸ್ಯೆಗಳನ್ನು ನಿವಾರಣೆ ಮಾಡಿಕೊಳ್ಳಲು ಸಹಾಯಕವಾಗಿರುತ್ತವೆ ಎಂದು ಪಶುಸಂಪತ್ತಿನಲ್ಲ ಬಹುತೇಕ ಜಂಗಮರು ಎಮ್ಮೆ, ಆಕಳು, ಎತ್ತುಗಳು ಹೊಂದಿರುತ್ತಾರೆ. ಎಮ್ಮೆ ಹೆಚ್ಚಿನ ಪ್ರಮಾಣದಲ್ಲಿ ಸಾಕಿರುತ್ತಾರೆ. ನಂತರ ಆಕಳು. ಏಕೆಂದರೆ ಪ್ರತಿ ಎಮ್ಮೆ ಆಕಳು ಪ್ರತಿದಿನಕ್ಕೆ ೪ ಲೀಟರ್‌ನಿಂದ ೫ ಲೀಟರ್‌ವರೆಗೆ ಹಾಲನ್ನು ಕೊಡುತ್ತವೆ. ಇದರಿಂದ ಬಂದ ಹಣವನ್ನು ತಮ್ಮ ದೈನಂದಿನ ಜೀವನಕ್ಕೆ ಉಪಯೋಗಿಸಿಕೊಳ್ಳುತ್ತಾರೆ. ಹೀಗಾಗಿ ಇವರಲ್ಲಿ ಹೈನುಗಾರಿಕೆ, ಹಾಲಿನ ವ್ಯಾಪಾರ ನೋಡಬಹುದು. ಪಶುಸಂಗೋಪನೆಯಿಂದ ಅವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾ ಬದುಕುತ್ತಿದ್ದಾರೆ. ನಂತರ ಎತ್ತುಗಳನ್ನು ತಮ್ಮ ಹೊಲವನ್ನು ಉಳಲು ಮತ್ತು ಬಿತ್ತಲು ಉಪಯೋಗಿಸುತ್ತಾರೆ.

## ಕೋಷ್ಟಕ ೫

## ಜಂಗಮರ ತಾಲೂಕುವಾರು ಪಶುಸಂಪತ್ತು

| ಕ್ರ.ಸಂ. | ತಾಲೂಕುಗಳು | ಎತ್ತುಗಳು | ಎಮ್ಮೆಗಳು | ಆಕಳು | ಕುರಿ | ಮೇಕೆ | ಒಟ್ಟು |
|---|---|---|---|---|---|---|---|
| ೧ | ಔರಾದ | ೧೨೨ | ೧೫೪ | ೧೨೮ | ೦೭ | ೦೩ | ೪೧೨ |
| ೨ | ಬಸವಕಲ್ಯಾಣ | ೬೬ | ೯೪ | ೮೬ | ೦೧ | --- | ೨೪೭ |
| ೩ | ಭಾಲ್ಕಿ | ೧೨೮ | ೨೨೫ | ೧೭೦ | -- | --- | ೫೨೩ |
| ೪ | ಬೀದರ | ೪೩ | ೧೪೮ | ೧೦೨ | ೦೩ | --- | ೨೯೬ |
| ೫ | ಹುಮನಾಬಾದ | ೧೦೨ | ೧೬೬ | ೧೫೬ | ೦೪ | --- | ೪೨೮ |
| | **ಒಟ್ಟು** | **೪೬೧** | **೭೮೫** | **೬೪೨** | **೧೫** | **೦೩** | **೧೯೦೬** |

ಬೀದರ ಜಿಲ್ಲೆಯ ಜಂಗಮರು ಶೇ.೨೪ರಷ್ಟು ಎತ್ತುಗಳು ಶೇ.೪೧ರಷ್ಟು ಎಮ್ಮೆಗಳು, ಶೇ.೩೧ರಷ್ಟು ಆಕಳುಗಳು ಸಾಕುವುದುಂಟು. ಹೀಗಾಗಿ ಹೈನುಗಾರಿಕೆಯಲ್ಲಿ ಈ ಮೂರು ಪಶು ಸಂಪತ್ತನ್ನು ಬಳಸಿಕೊಳ್ಳುತ್ತಾರೆ. ಕೆಲವರು ಕುರಿ, ಮೇಕೆಗಳು ಸಾಕುವುದುಂಟು ಹೇಗೆ ಎಂದು ವಿವರಿಸುವುದಾದರೆ ಜಂಗಮರ ಮನೆಯಲ್ಲಿ ಮೇಕೆ ಆಡುಗಳು ಹೇಗೆ ಸಾಕುತ್ತಾರೆ ಎಂಬ ಪ್ರಶ್ನೆಗಳು ಉಂಟು. ಇವರು ಇನ್ನೊಬ್ಬರ ಮನೆಯಲ್ಲಿ ಕುರಿ, ಮೇಕೆಯನ್ನು ಇಟ್ಟು ಪಾಲುಗಾರಿಕೆ ಯಲ್ಲಿ ಸಾಕುತ್ತಾ ಬರುವುದು ಕೆಲವೊಂದು ತಾಲೂಕುಗಳಲ್ಲಿ ಒಂದರಷ್ಟು ಮಾತ್ರ ಕಂಡುಬರುತ್ತದೆ.

ಒಟ್ಟಿನಲ್ಲಿ ಜಂಗಮ ಸಮೂದಾಯದ ಆರ್ಥಿಕ ಪರಿಸ್ಥಿತಿ ತುಂಬ ಕೆಳಮಟ್ಟದಲ್ಲಿ ಕಂಡುಬರುವುದು. ಏಕೆಂದರೆ ತುಂಬ ಶುದ್ಧ ರೂಪದಲ್ಲಿ ಹೇಳುವಂತಹದು ಅವರಲ್ಲಿ ಇದ್ದದೇನು? ವಿಭೂತಿ, ರುದ್ರಾಕ್ಷಿ, ಕಾವಿಬಟ್ಟೆ, ಮನೆಯಲ್ಲಿ ಒಂದು ಸಮಾಧಿ ಸಮಾಧಿಯ ಮೇಲೆ ಒಂದು ನಂದಿ ಇರುತ್ತದೆ. ಹೊರೆತು ಮತ್ತೆನ್ನು ಕಾಣಿಸುವದಿಲ್ಲ. ಕೆಲವು ಜಂಗಮರು ಶ್ರೀಮಂತರು ಇದ್ದಾರೆ. ಆದರೆ ಅವರು ಕೆಳಜಂಗಮರ ಬಗ್ಗೆ ಅನುಕಂಪ ಗೌರವವಿಲ್ಲ ಅಂದರೆ ತಮ್ಮ ತಮ್ಮ ವರಿಗೆ ಆಗದೆ ಇದ್ದಾಗ ಆರ್ಥಿಕವಾಗಿ ಹೇಗೆ ಮುಂದೆ ಬರಬೇಕು ? ಹೀಗೆ ಅನೇಕ ಪ್ರಶ್ನೆಗಳು ಸವಾಲುಗಳು ಬರುತ್ತದೆ. ಆದ್ದರಿಂದ ಸಾಮಾಜಿಕ, ಧಾರ್ಮಿಕ ಹೊಣೆಗಾರಿಕೆಯನ್ನು ತುಂಬ ಕಾಳಜಿಯಿಂದ ಹೊತ್ತು ಸರಿಯಾಗಿ ನಿರ್ವಹಿಸಿಕೊಂಡು ಹೋಗಬೇಕು. ಮೊದಲಿನಂತೆ ಶುದ್ಧ ನಡೆ- ನುಡಿ, ಚಾರಿತ್ರ್ಯ ಕಾಯಿದುಕೊಂಡು ಬರಬೇಕು. ಭಕ್ತರಿಂದ ವಿಶ್ವಾಸಗಳಿಸಬೇಕು ಮುಂದೆ ಜಂಗಮ ಪೀಳಿಗೆಯು ಆರ್ಥಿಕವಾಗಿ ಮುಂದೆ ಬರುವಂತೆ ವಿಧಾಯಕ ಕಾರ್ಯಗಳನ್ನು ಮಾಡಬೇಕಾಗಿದೆ.

ಒಟ್ಟಿನಲ್ಲಿ ಜಂಗಮ ಗುರುಗಳು ಪಟ್ಟದ್ದೇವರುಗಳು ಇಂದಿಗೂ ಅನೇಕ ಸಮಾಜದ ಹಲವಾರು ರಂಗಗಳಲ್ಲಿ ಸೇವೆ ಸಲ್ಲಿಸುತ್ತಿವೆ. ಆದರೆ ಜಂಗಮ ಕುಟುಂಬಗಳು ಸಮಾಜದ ಆರ್ಥಿಕ ಸ್ಥಿತಿಯಿಂದ ಬಳಲುತ್ತಿವೆ. ಅದನ್ನು ಹೊಗಲಾಡಿಸಬೇಕಾದರೆ ಅನೇಕ ರೀತಿಯೊಳಗೆ

ಬದಲಾವಣೆ ತಂದು ಹಲವಾರು ವೃತ್ತಿಗಳಲ್ಲಿ ಭಾಗವಹಿಸುವಂತೆ ಮಾಡಿ ಮಠಧೀಶ್ವರರು, ವೀರಶೈವ ಗಣ್ಯರು ಇವರನ್ನು ಅರಿತು ಸಹಕಾರ ಮಾಡುವದರಿಂದ ಇವರ ಆರ್ಥಿಕ ಸ್ಥಿತಿಯನ್ನು ಬೆಳೆಸಬಹುದಾಗಿದೆ. ಸಮಾಜದಲ್ಲಿ ದೊಡ್ಡ ಸ್ಥಾನವಿದೆ ನಿಜ. ಆದರೆ ಆರ್ಥಿಕವಾಗಿ ನೋಡಿದರೆ ತುಂಬ ಹಿಂದುಳಿದಿದ್ದಾರೆ. ತಮ್ಮ ಅಭಿವೃದ್ಧಿಯನ್ನು ಬಿಟ್ಟು ಇನ್ನೊಬ್ಬರ ಏಳಿಗ್ಗೆಗೆ ದುಡಿದ ಕಾರಣವೆಯಾಗಿದೆ ವಿನಹ ಮತ್ತೆ ಬೇರೆ ಕಾರಣವಿಲ್ಲ. ಇಂದಾದರೂ ಜಂಗಮರು ತಿಳಿದು ಪರಿವರ್ತನೆಯ ಸಮಾಜ ಜೊತೆಗೆ ಸಾಗಬೇಕಾಗಿದೆ.

### ಅಡಿಟಿಪ್ಪಣಿಗಳು

೧. ಗುಬ್ಬಣ್ಣ ಶಿವಾನಂದ(ಲೇ), ೧೯೮೪, **ಲಿಂಗಾಯತ ಸಂಸ್ಕಾರಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೧೮, ೬೦, ೯೪, ೧೦೪.

೨. ತೋಟಪ್ಪ ಶಾಸ್ತ್ರಿಗಳು, ೧೯೫೫, **ಶಿವಾಚಾರ ನವರತ್ನ ಅಥವಾ ಭಕ್ತ ಮಹೇಶ್ವರ ಕೈಪಿಡಿ,** ಪು.೩೩, ೫೫, ೪೦, ೭೪.

೩. ಮಾತೆ ಮಹಾದೇವಿ, ೧೯೯೫, **ಬಸವಧರ್ಮದ ಸಂಸ್ಕಾರಗಳು,** ವಿಶ್ವಕಲ್ಯಾಣ ಮಿಷನ್, ಬಸವ ಮಂಟಪ, ಬೆಂಗಳೂರು, ಪು.೩೩-೩೪.

೪. ಹಿರೇಮಠ ಶಿವಲಿಂಗಯ್ಯ ಚನ್ನಯ್ಯ, ೧೯೬೮, **ವೀರಶೈವ ಧರ್ಮ ಸಿಂಧು,** ಮಲ್ಲಪ್ಪ ವಿರುಪಾಕ್ಷಪ್ಪ ಅರಳಿ ಪ್ರಕಾಶನ, ಪುಸ್ತಕ ವ್ಯಾಪಾರಿಗಳು, ಗದಗ, ಪು.೨೧, ೩೯

೫. ತಿಪ್ಪೇರುದ್ರಸ್ವಾಮಿ ಎಚ್., ೧೯೬೩, **ಶರಣರ ಅನುಭವ ಸಾಹಿತ್ಯ,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು.೧೬೨.

೬. ಗದ್ದಗಿಮಠ ಬಿ. ಎಸ್., ೧೯೬೯, **ಕನ್ನಡ ಜಾನಪದ ಗೀತೆಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೭೮.

೭. ಸಾಲಿಮಠ ಪುರೋಹಿತ ಚನ್ನವೀರಶಾಸ್ತ್ರಿ, ೧೯೫೫, **ವೀರಶೈವ ದಶರತ್ನ ಅಥವಾ ಪುರೋಹಿತ ಕೈಪಿಡಿ,** ಬಿ.ಸಿ.ಶಾಬಾದಿಮಠ ಸುಪ್ರಸಿದ್ಧ ಪುಸ್ತಕ ವ್ಯಾಪಾರಿಗಳು, ಗದಗ, ಪು.೧೯೧, ೧೯೨, ೧೯೩, ೨೬೮, ೫೯೧, ೫೯೨, ೧೯೫, ೧೯೬.

೮. ಹೆಬ್ಬಾಳೆ ಜಗನ್ನಾಥ, ೨೦೦೦, **ಓದೊರೆ ಬಾಧರೆಗೆ,** ಕನ್ನಡ ಬರಹಗಾರರ ಕಲಾವಿದರ ಸಂಘ, ಬೀದರ, ಪು.೨೬.

೯. ಸಾಲಿಮಠ ಘನಮಠದಯ್ಯ, ೨೦೦೨, **ಆರ್ಶೀವಾದ,** ಜಂಗಮ ಸಮಾಜದ ಮುಖ್ಯವಾಣಿ ಮತ್ತು ಧಾರ್ಮಿಕ ಮಾಸ ಪತ್ರಿಕೆ ಮಸ್ಕಿ, ಪು.೬.

ಅಧ್ಯಾಯ ೫

# ಜಂಗಮ ಧಾರ್ಮಿಕ ಮತ್ತು ಶೈಕ್ಷಣಿಕ ಜೀವನ

೧. ಪಂಚಾಚಾರಗಳು
- ೧.೧. ಲಿಂಗಾಚಾರ -ಸದಾಚಾರ
- ೧.೨. ಶಿವಾಚಾರ
- ೧.೩. ಗಣಾಚಾರ
- ೧.೪. ಭೃತ್ಯಚಾರ

೨. ಷಟಸ್ಥಲಗಳು
- ೨.೧. ಭಕ್ತ ಸ್ಥಲ
- ೨.೨. ಮಹೇಶ ಸ್ಥಲ
- ೨.೩. ಪ್ರಸಾದಿ ಸ್ಥಲ
- ೨.೪. ಪ್ರಾಣಲಿಂಗ ಸ್ಥಲ
- ೨.೫. ಶರಣ ಸ್ಥಲ
- ೨.೬. ಐಕ್ಯ ಸ್ಥಲ

೩. ಅಷ್ಟಾವರಗಳು
- ೩.೧. ಗುರು
- ೩.೨. ಲಿಂಗ
- ೩.೩. ಜಂಗಮ
- ೩.೪. ಪಾದೋದಕ
- ೩.೫. ಪ್ರಸಾದ
- ೩.೬. ವಿಭೂತಿ
- ೩.೭. ರುದ್ರಾಕ್ಷಿ
- ೩.೮. ಮಂತ್ರ

೪. ಧಾರ್ಮಿಕ ಕಾಯಕದ ಜಂಗಮರು
- ೪.೧. ಕಾಲಜ್ಞಾನದ ಜಂಗಮ
- ೪.೨. ಗಂಟೆ ಕಾಯಕದ ಜಂಗಮ
- ೪.೩. ಕಂತೇ ಭೀಕ್ಷದ ಜಂಗಮ
- ೪.೪. ಸ್ವುವಿ ಬಾ ಸಂಗಯ್ಯಾ ಕಾಯಕದ ಜಂಗಮ
- ೪.೫. ತಕ್ಕೆ ಕಾಯಕದ ಜಂಗಮ
- ೪.೬. ಮುಳ್ಳ ಹಾವಿಗೆ ಕಾಯಕದ ಜಂಗಮ
- ೪.೭. ಅಸ್ತ್ರ ಕಾಯಕದ ಜಂಗಮ

ನಿರಂತರ ಪರಿವರ್ತನಶೀಲವಾದ ಜಗತ್ತಿನ ಹೋರಾಟದಲ್ಲಿ ಮಾನವ ವಿಕಾಸಪರವಾದ ಮಾರ್ಗವನ್ನವಲಂಬಿಸಿ ಮುನ್ನಡೆಯುತ್ತಾ ಬಂದಿದ್ದಾನೆ. ಆದಿ ಮಾನವ ಅನಾಗರಿಕ ಸ್ಥಿತಿಯಿಂದ ಇಂದಿನ ವೈಜ್ಞಾನಿಕ ಯುಗದ ಆಧುನಿಕ ಮಾನವ ಮಹತ್ಸಾಧನೆಗಳವರೆಗೂ ಬೆಳೆದು ಬಂದಿರುವ ಪ್ರಗತಿನ್ನು ಸ್ಥೂಲವಾಗಿ ವೀಕ್ಷಿಸಿದರೂ ಸಾಕು ಈ ಅಂಶ ಮನದಟ್ಟಾಗುತ್ತದೆ. ಮರದ ಪೊಟರೆಗಳಲ್ಲಿ ಗುಹೆಗಳಲ್ಲಿ ವಾಸಿಸುತ್ತಿದ್ದವನು ಇಂದು ಸೃಷ್ಟಿ ಶಕ್ತಿಯ ನೂರಾರು ಮುಖಗಳನ್ನು ಅವಿಷ್ಕರಿಸಿದ್ದಾನೆ. ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸಿದ್ದಾನೆ. ಚರ್ಮವನ್ನೋ ಮರದೆಲೆಯನ್ನೋಸುತ್ತಿ ಕೊಳ್ಳುತ್ತಿದ್ದವನು ನಾಗರಿಕತೆಯ ತುತ್ತತುದಿಯನ್ನು ಮುಟ್ಟಿದ್ದಾನೆ. ಪ್ರಾಣಿಗಳಂತೆ ಕೂಗಿಯೋ ತೇಗಿಯೋ ತನ್ನ ಭಾವನೆಗಳನ್ನು ಹೇಳುತ್ತಿದ್ದವನು. ಇಂದು ನೂರು ಭಾಷೆಗಳನ್ನು ತಿಳಿದು ಕೊಂಡಿದ್ದಾನೆ. ಭಾವನೆಗಳ ಶಿಖರವನ್ನೇರಿದ್ದಾನೆ ಅಂದಿನಿಂದ ಇಂದಿನವರೆಗೂ ಹೀಗೆ ಆತನನ್ನು ಎಡೆ ಬಿಡದೆ ಮುನ್ನಡೆಸಿಕೊಂಡು ಬರಲು ಕಾರಣವಾಗಿರುವ ಶಕ್ತಿ ಯಾವುದು । ಅದರ ಈ ಸತತ ಸಾಧನೆಯ ಗುರಿ ಏನು ? ಸ್ಫೂರ್ತಿ ಯಾವುದರಿಂದ ? ಈ ಮೊದಲಾದ ಪ್ರಶ್ನೆಗಳು ವಿಚಾರವಂತ ಮನಸ್ಸುಗಳಲ್ಲಿ ಮೂಡದೇ ಇರುವುದಿಲ್ಲ. ಮಾನವ ಶಾಸ್ತ್ರಜ್ಞರೂ ಈ ಪ್ರಶ್ನೆಗಳನ್ನು ಎದುರಿಸಿದ್ದಾರೆ ಅವುಗಳಿಗೆ ಮಾನವ ಶಾಸ್ತ್ರಜ್ಞರು ಈ ಪ್ರಶ್ನೆಗಳನ್ನು ಎದುರಿಸಿದ್ದಾರೆ ಅವುಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದನ್ನು ನೋಡುತ್ತೇವೆ(ತಿಪ್ಪೇರುದ್ರಸ್ವಾಮಿ ಎಚ್.:೧೯೬೯:೧).

ಮಾನವ ಮುಂದೆ ನಾಗರಿಕತೆಯತ್ತ ಸಾಗುತ್ತಿರುವದನ್ನು ನೋಡಿದರೆ ಮಾನವ ಇತರ ಪ್ರಾಣಿಗಳಂತೆ ಒಂದು ಪ್ರಾಣಿಯಾದರೆ ಆದರೆ ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಇತರ ಪ್ರಾಣಿಗಳಿಗಿಂತ ವಿಶಿಷ್ಟನಾದವನು. ಮಾನವ ಜೀವನದ ಬಹುಮುಖ ಏಳಿಗೆಗೆ ಕಾರಣವೇನು? ಶಕ್ತಿಯಾವದೂ ಎನ್ನುವದಾದರೆ ಅಂತರಂಗದ ಅವಲೋಕನ ಎನ್ನಬಹುದು. ಈ ಅಂತರಂಗದ ಅವಲೋಕನದಿಂದ ಉಂಟಾದ ವಿವೇಚನೆ ಮತ್ತು ವಿವೇಕಗಳ ಫಲವಾಗಿದೆ. ಜೊತೆಗೆ ಈ ಕುತೂಹಲವೇ ಮಾನವನ ಎಲ್ಲಾ ಕಾರ್ಯ ಪ್ರಗತಿಗಳಿಗೂ ಮೊದಲಾದದ್ದು. ಅಂತೆಯೇ ಮಾನವ ಜನಾಂಗದ ಶೈವಾವಸ್ಥೆಯಲ್ಲಿಯೇ ಆತನನ್ನು ಪ್ರಗತಿ ತೊಟ್ಟಿಲಲ್ಲಿಟ್ಟು ಜೋಗುಳವಾಡಿ

ಬೆಳೆಸಿದ ತಾಯಿ ಈ ಕುತುಹಲ ಎಂದು ಬಲ್ಲವರ ಮಾತು.

ಕುತುಹಲದ ಮೂಲಕವಾಗಿ ಪ್ರಗತಿಯಾದ ಕ್ರಿಯೆಗಳಲ್ಲಿ ಆನಂದ ಪಡೆಯಲು ಹವಣಿಸುತ್ತಾನೆ. ಆದ್ದರಿಂದ ಆನಂದ ಒಂದು ಮಟ್ಟದಲ್ಲಿ ಸಾಕ್ಷೇಕ್ಷವಾದದು. ಇದು ಒಂದು ಸಮಯದಲ್ಲಿ ಆನಂದ ದಾಯಕವಾದ ವಸ್ತುವೇ ಇನ್ನೊಮ್ಮೆ ಮಸ್ತ್ಯೇವೋದೋ ಸಂದರ್ಭದಲ್ಲಿ ದುಃಖವಾಗಿರಬಹುದು. ಅಂದರೆ ಆನಂದ ಎನ್ನುವದು ವಸ್ತುಗಳಲ್ಲಿಲ್ಲ. ಅದು ಅನುಭವಿಸುವ ಮನೋರ್ಥದಲ್ಲಿದೆ. ಮನಸ್ಸಿನ ಸಂಸ್ಕಾರ ಹೆಚ್ಚಾದಂತೆಲ್ಲಾ ಉದಾತ್ತವಾದೆಂತೆಲ್ಲಾ, ಉನ್ಮುಖ ಗೊಂಡಂತೆಲ್ಲಾ, ಆನಂದದ ಪರಿಧಿಯೂ ಹಿಗ್ಗುತ್ತಾ ಹೋಗುತ್ತದೆ. ಲೌಕಿಕವಸ್ತುಗಳನ್ನು ಅವಲಂಬಿಸಿದರೂ ಅದಕ್ಕೆ ಅತೀತವಾದ ಅಖಂಡ ಆನಂದದ ಅನುಭವವನ್ನು ಪಡೆಯಲು ಸಮರ್ಥವಾಗುತ್ತದೆ. ಆಗ ಆನಂದದ ಅನ್ವೇಷಣೆಯ ಪರಮಗುರಿ ಅಲ್ಲಿ ಈಡೇರುತ್ತದೆ. ಇದನ್ನು ಸಾಧಸಿಕೊಡುವ ಪ್ರಯತ್ನದಲ್ಲಿ ಮೈವತ್ತ ಬಗೆ ಬಗೆಯ ಪ್ರಯೋಗಗಳಿಂದ ವಿವಿಧ ಮುಖವಾಗಿ ಬೆಳೆದು ಬಂದ ವ್ಯಾಪಕವಾದ ಶಕ್ತಿಯೆಂದರೆ 'ಧರ್ಮ' ಎಂದು ಹೇಳಲಾಗಿದೆ. ಆದ್ದುರಿಂದ ಧರ್ಮದ ಉಗಮ ಇರುವದು ಆನಂದದ ಅನ್ವೇಷಣೆಯಲ್ಲಿ : ಬಿಡುಗಡೆಯ ಬಹಕೆಯಲ್ಲಿ ಪೂರ್ಣತ್ವದ ಅಭಿಕ್ಷೆಯಲ್ಲಿ ವಾಸ್ತವವಾಗಿ ಇವು ಮೂರು ಬೇರೆ ಬೇರೆಯಲ್ಲಿ ತ್ರಿತ್ವಮುಖವಾದ ಏಕಪತ್ಯ(ಅವರೇ:೫). ಆದರಿಂದ ಅನೇಕ ಧರ್ಮಗಳು ಈ ಹಿನ್ನಲೆಯೊಳಗೆ ಬೆಳೆದು ಬಂದುದ್ದನ್ನು ಕಂಡುಕೊಳ್ಳಬಹುದಾಗಿದೆ. ಆದರಿಂದ ಧರ್ಮ ಎಂದರೇನು? ಎನ್ನುವುದು ಗಮನಿಸಬೇಕಾಗುತ್ತದೆ.

'ಧರ್ಮಾರಕ್ಷತಿ ರಕ್ಷಿತ' ಎಂಬ ಮಾತಿನಂತೆ ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತದೆ. ಧರ್ಮ ಎಂಬ ಪದ ಸಂಸ್ಕೃತದ 'ಧೃ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಧರಿಸು, ಎತ್ತಿಹಿಡಿ, ಪೋಷಿಸು 'ಧ್ರಿಯತೇ ಅನೇನ ಇತಿ ಧರ್ಮ' ಅಂದರೆ ಎತ್ತಿಹಿಡುಯುವಂತಹದು, ಧರಿಸುವಂತಹದು, ಸ್ಥಿರವಾಗಿ ನಿಲ್ಲುವಂತಹದ್ದು ಎನ್ನಬಹುದು. ಮುಂದೆ ಧರ್ಮ ಎಂಬ ಮಾತಿನ ಅರ್ಥ ಹಂತಹಂತವಾಗಿ ವಿಶಾಲವಾಗುತ್ತಾ ನಡೆಯಿತು. ಆಚಾರ : ಪರಮೋಧರ್ಮ: ಸಧರ್ಮೇ ನಿಧನಂ ಶ್ರೇಯ: ಇಲ್ಲಿ ಸಾಂಪ್ರಾದಾಯಿಕ ಅರ್ಥವಿದ್ದರೂ, ಅದನ್ನು ದಾಟಿದ ವ್ಯಾಪಕ ಅರ್ಥ ಅಲ್ಲಿ ಕಂಡುಕೊಳ್ಳಲು ಸಾಧ್ಯ. ಧರ್ಮಕ್ಕೆ ಸಂವಾದಿಯಾಗಿ ಇಂಗ್ಲೀಷನಲ್ಲಿ Religion ಎಂಬ ಪದವಿದೆ. Religion ಮತ್ತು Relegere ಈ ಶಬ್ದಗಳಿಂದ Religion ಎಂಬುದರ ನಿಷ್ಪತ್ತಿಯನ್ನು ಕಂಡುಬರುತ್ತದೆ. ಆದರೆ ಧರ್ಮದ

ಅರ್ಥವ್ಯಾಪ್ತಿ ಬೆಳೆದಂತೆಲ್ಲಾ Religion ಎಂಬುದೂ ತುಂಬ ವ್ಯಾಪಕವಾದ ಅರ್ಥವನ್ನು ಪಡೆದುಕೊಂಡಿದ್ದು ಇಂದು ನೋಡುತ್ತೇವೆ. ಒಟ್ಟಿನಲ್ಲಿ ಧರ್ಮ ಇಹಪರಗಳೆರಡನ್ನೂ ಸಮನ್ವಯಗೊಳಿಸುವ ವ್ಯಾಪಕದೃಷ್ಟಿ ಗೋಚರಿಸುವುದು ತಿಳಿದುಕೊಳ್ಳಬೇಕಾಗಿದೆ. ಧರ್ಮಕ್ಕೆ ವ್ಯವಹಾರಿಕ ಅರ್ಥಗಳು ಸಾಕಷ್ಟಿದ್ದರೂ ಧರ್ಮ ಪದದ ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಗಳು ಬೇರೆಯೇ ಇವೆ.

"ಧ್ರೀಯತೇ ಅನೇನ ಇತಿ ಧರ್ಮ ಎಂಬುದಾಗಿ
ದೃಷ್ಟಿ ಸಮಷ್ಠಿಯ ವ್ಯವಸ್ಥಾಪಿಸ ಬಲ್ಲೊಡದು ಧರ್ಮ
ವ್ಯಕ್ತಿ ಸಮಾಜವ ಸೌಹಾರ್ದತೆ ಸುಮಧುರ
ಮಿದು ಶೃಂಖಲೆಯಿಂ ಬಂಧಿಸಬಲ್ಲೊಡದು ಧರ್ಮವಯ್ಯಾ !
ಇಂತಿದು ಜೀವನವ ಸಂಜೀವಿನಿಸಿ.
ಪತಿತರ ಪಾವನಿಸಿ, ಮಾನವ ಕೋಟಿಯ ಬಾಳ ಉದ್ದೀಪಿಸಿ
ವರ್ಣ ವರ್ಗ ಜಾತಿ ಭೇದವೆಣಿಸದೆ ಲೋಕವ ಎತ್ತಿ ಹಿಡಿದು
ಚೇತನಿಸಬಲ್ಲೊಡಿದು ಧರ್ಮವಯ್ಯಾ ಸಚ್ಚಿದಾನಂದ"(ಮಾತೆಮಹಾದೇವಿ:೧೨೦).

ಧರ್ಮ ಎಂದರೆ that which upholds ಎತ್ತಿ ಹಿಡಿಯುವುದು. ಅಸ್ಥಿ ಪಂಜರವು ಮಾನವ ದೇಹವನ್ನು ಎತ್ತಿ ಹಿಡಿಯುತ್ತದೆಂದಾಗ ಅದು ಮಾನವ ದೇಹಕ್ಕೆ ಆಧಾರಭೂತವಾಗಿ ಮೂಲ ಸ್ತಂಭವಾಗಿದೆ ಎಂಬ ಅರ್ಥ ಕೊಡುತ್ತದೆ. ಹಾಗೆಯೇ ವ್ಯಷ್ಠಿ - ಸಮಷ್ಠಿ, ವ್ಯಕ್ತಿ ಸಮಾಜ ಇವುಗಳು ಧರ್ಮದಾಧಾರದ ಮೇಲೆ ಅದರ ಆಸ್ತಿಭಾರದ ಮೇಲೆ ನಿಂತಿವೆ. ಮಾನವನ ಐಹಿಕ ಮತ್ತು ಆಮುಸ್ಥಿಕ ಸುಖದಲ್ಲಿ ತಂದಿರುವ ಸಾಧನವೇ ಧರ್ಮ ಎಂದಿದ್ದಾರೆ. ಅಂದರೆ ಪುಣ್ಯ - ಪಾಪ, ಶಿವ - ಹರ, ವಿಚಾರ - ಆಚಾರ ಅನುಭವ, ಪ್ರಾಪಂಚಿಕ - ಪಾರಮಾರ್ಥಿಕ, ಹುಟ್ಟು - ಸಾವು ಸಾಕ್ಷಾತ್ಕಾರದ ಸಾಧನೆಯ ಸಮಷ್ಠಿ ರೂಪ ಧರ್ಮ. ಧರ್ಮವು ಪತಿತರನ್ನು ಪಾವನಿಸಿ, ಜಾತಿಯನಳಿಸಿ ನೀತಿಯನಳವಡಿಸಿ, ಮಾನವ ಮಾನವರನ್ನು ಸಮತಾ ಭಾವನೆಯಿಂದ ಕಂಡು, ತನ್ನ ಕರ್ತವ್ಯವನ್ನು ಮಾಡುವುದುಂಟು? ಕೆಳಗೆ ಬಿದ್ದವರ ಎತ್ತಿ ಹಿಡಿಯುತ್ತದೆ. ನೀಚರನ್ನು ಉಚ್ಚರನ್ನಾಗಿಸುತ್ತದೆ. ದುರ್ಮಾರ್ಗಿಗಳನ್ನು ಸನ್ಮಾರ್ಗಕ್ಕೊಯ್ಯುತ್ತದೆ. ಹೆಣ್ಣು - ಗಂಡಡೆನ್ನದೆ ಮೇಲು ಕೀಳೆನ್ನದೆ ತನ್ನಲ್ಲಿ ಇಂಬಿಕ್ಕಿಕೊಂಡು ಬಾಳಿಸಲು ಕಲಿಸುತ್ತದೆ. ಹೀಗೆ ವಿಶಾಲ ವ್ಯಾಪ್ತಿಯುಳ್ಳದೇ ಧರ್ಮ. 'ಧಾರಣತ್ ಧರ್ಮ ಮಿತ್ಯಾಹು' ಯಾವುದಕ್ಕೆ ಸರ್ವವನ್ನು ಲೇಪಿಸುವ (ಧಾರಣ) ಮಾಡುವ ಶಕ್ತಿ ಇರುತದ್ದೇಯೋ ಅದುವೇ ಧರ್ಮ. ಅದಕ್ಕಾಗಿ ಭಾರತೀಯರಲ್ಲಿ ಧರ್ಮವು ಜೀವನದಲ್ಲಿ ಹಾಸುಹೊಕ್ಕಾಗಿದೆ. ಮನುಷ್ಯನ ಜೀವನದಿಂದ,

ಭಿನ್ನವಾದ ವಸ್ತುವಲ್ಲ. ಭಾರತೀಯ ಕಲೆ, ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಹೀಗೆ ಪ್ರತಿಯೊಂದು ರಂಗಗಳಲ್ಲಿ ಧರ್ಮಕ್ಕೆ ಮಹತ್ವವಿದೆ. ಆದರೆ ಪಾಶ್ಚಿಮಾತ್ಯರ ಜೀವನದಲ್ಲಿ ವಿಜ್ಞಾನ, ಕಲೆ, ಸಾಹಿತ್ಯ, ರಾಜಕೀಯ, ಆರ್ಥಿಕ ಇವುಗಳೆ ಆವರಿಸಿಕೊಂಡಿವೆ. ಹೀಗಾಗಿ ಅಲ್ಲಿ ಧರ್ಮವು ಜೀವನದಿಂದ ಬೇರೆಯಾಗಿದೆ ಎನ್ನಬಹುದು. ಭಾರತೀಯ ಜೀವನದಲ್ಲಿ ಧರ್ಮವು ಹೃತ್ವರೂಪವಾಗಿದೆ. ಧರ್ಮವಿಲ್ಲದೇ ಜೀವನವೇ ಇಲ್ಲ. ಆದ್ದರಿಂದ ಪ್ರತಿಯೊಂದು ಕ್ಷೇತ್ರವು ಧರ್ಮದ ಕೈ ಹಿಡಿದುಕೊಂಡೇ ಸಾಗುತ್ತದೆ. ಇಂತಹ ಧರ್ಮಗಳಲ್ಲಿ ವೀರಶೈವ ಧರ್ಮವೇ ಪರಿಪೂರ್ಣ ಧರ್ಮ. ಸಕಲ ಜೀವರಿಗೆ ಲೇಸು ಬಯಸುವವದೇ ವೀರಶೈವ ಧರ್ಮ.

ವೀರಶೈವ ಧರ್ಮಕ್ಕೆ ತುಂಬ ಪ್ರಾಚೀನವಾದ ಇತಿಹಾಸವಿದೆ. ಈ ವಿಚಾರಗಳಲ್ಲಿ ಅನೇಕ ವಾದವಿವಾದಗಳು ಇದ್ದರೂ ಪ್ರಾಚೀನತೆಯನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದ್ದರಿಂದ ಧರ್ಮ ಬಿಟ್ಟು ಯಾರೂ ಜೀವಿಸಲಾರರು. ಧರ್ಮವು ಎರಡು ರೀತಿಯಿಂದ ನೋಡಬಹುದು. ಒಂದು ಸಾಮಾನ್ಯ ಧರ್ಮ ಇನ್ನೊಂದು ವಿಶೇಷ ಧರ್ಮ. ಸಮಷ್ಟಿಧರ್ಮ ಮತ್ತು ವ್ಯಷ್ಠಿ ಧರ್ಮ ಹೀಗೆ ಹೇಳಬಹುದು. ಸಮಾನ್ಯ ಧರ್ಮಕ್ಕೆ ಜಾತಿ-ಮತ-ಪಂಥ, ಕಾಲ ದೇಶಗಳ ಪರಿಮಿತಿ ಇಲ್ಲ. ಆದರೆ ವಿಶೇಷ ಧರ್ಮವು ಒಂದು ವಿಶಿಷ್ಟ ಮತವಾಗಿದ್ದು ಅದು ಒಂದು ನಿರ್ದಿಷ್ಟ ಪಂಥಕ್ಕೆ ಅನ್ವಯಿಸುತ್ತದೆ. ಅದು ಸಮಾಜದ ಸ್ವರೂಪದಲ್ಲೂ ಇರಬಹುದು. ಇಲ್ಲವೆ ವೈಯಕ್ತಿಕವಾಗಿಯೂ ಇರಬಹುದು. ಸಾಮಾನ್ಯ ತತ್ವಗಳನ್ನು ಸಮಾನ್ಯ ಧರ್ಮವು ಒಳಗೊಂಡಿದ್ದರೆ, ವಿಶೇಷ ಧರ್ಮವು ತನ್ನದೇ ಆದ ವಿಶಿಷ್ಟ ತತ್ವಗಳನ್ನು ಆಚಾರ-ವಿಚಾರಗಳನ್ನು ಒಳಗೊಂಡಿರುತ್ತದೆ.

ಒಟ್ಟಿನಲ್ಲಿ ಧರ್ಮ ಎಂಬ ಪದವು ದೇವರನ್ನು ಗೌರವಿಸುವುದು ಎಂಬರ್ಥವು ಕೂಡ ನೀಡುತ್ತದೆ. ಚೇರಿ ಎಂಬ ತತ್ವಜ್ಞಾನಿಯು ಹೇಳಿದ ಪ್ರಕಾರ 'ದೇವರು ಹಾಗೂ ಮನುಷ್ಯನ ನಡುವಣ ವ್ಯವಹಾರವೇ ಧರ್ಮ' ಎಂದರೆ ಟಾಲ್‌ಸ್ಟಾಯ್ 'ಮನುಷ್ಯನ ತನ್ನ ವರ್ತನೆಗೆ ಯಾವುದರಿಂದ ಮಾರ್ಗದರ್ಶನ ಪಡೆಯುವನೋ ಅಂಥದೊಂದು ಸಂಬಂಧವನ್ನು ಯಾವುದರೊಡನೆ ತನಗೆ ಬಾಂಧವ್ಯವಿರುವುದೆಂದು ಭಾವಿಸುವನೋ ಅದುವೇ ಧರ್ಮ' ಎಂದು ಅರ್ಥೈಸಿದ್ದಾರೆ(ಬ್ಯಾಳಿ ಕೆ.ಬಿ.:೧೯೯೪:೧೧). ಆನಂದಕ್ಕೆ ಅನ್ಯೋನ್ಯತೆಯನ್ನು ತರುವ ಕೆಲಸವನ್ನು ಧರ್ಮ ಮಾಡುತ್ತದೆ ಎನ್ನಬಹುದು. ಇಂತಹ ಧರ್ಮಗಳಲ್ಲಿ ವೀರಶೈವ ಧರ್ಮವೇ ಪರಿಪೂರ್ಣ ಧರ್ಮ. ಅನೇಕ ಧರ್ಮಗಳಿಗೆ ಜನ್ಮ ಭೂಮಿಯಾದಂತೆ ಭಾರತದೇಶ

ವೀರಶೈವ ಧರ್ಮಕ್ಕೂ ಜನ್ಮ ಭೂಮಿಯಾಗಿದೆ. ಇದು ಅನಾದಿಕಾಲದ ಧರ್ಮ ಎಂದೂ, ಶೈವದಿಂದ ವೀರಶೈವ ಎಂದು, ಬಸವಧರ್ಮ ಎಂದೂ ಇತ್ತೀಚಿಗೆ ಇದನ್ನು ನಿಸರ್ಗ ಧರ್ಮ ಎಂದೂ ಅನೇಕರು ತಮ್ಮ ತಮ್ಮ ಅಭಿಮತ ವ್ಯಕ್ತಪಡಿಸಿದ್ದಾರೆ. ಶಿವನಿಂದ ಉದ್ಭವವಾದ ಈ ಧರ್ಮವನ್ನು ಪಂಚಾಚಾರ್ಯರು ಪಂಚಪೀಠಗಳನ್ನು ಸ್ಥಾಪಿಸಿ ಪ್ರಚಾರ ಪ್ರಸಾರ ಮಾಡಿದ್ದು ಮಾಡುತ್ತಾ ಬಂದದ್ದು ಥರ್ಸಟನ್, ಫಾರ್ಕ್ಸ್ಹಾರ್, ಬ್ರೌನ್, ಭಾಂಡಾರಕರ್, ಅನಂತಕೃಷ್ಣ ಅಯ್ಯಾರ್, ಜೋಯಿಸರ ಪ್ರಾಚೀನತೆಯನ್ನು ಮತ್ತು ಪಂಚಪೀಠದ ಪ್ರಾಚೀನತೆಯನ್ನು ಒಪ್ಪಿ ಅಭಿಪ್ರಾಯ ವ್ಯಕ್ತಪಡಿಸಿದ್ದು ನೋಡಬಹುದಾಗಿದೆ(ಅವರೇ:೭).

ಅಲಹಾಬಾದ, ಮದ್ರಾಸ್ ಹೈಕೋರ್ಟಗಳ ತೀರ್ಪಿನಲ್ಲಿ ಪಂಚಪೀಠಗಳ ಪ್ರಾಚೀನತ್ವವನ್ನು ಒಪ್ಪಿ ಈ ಪೀಠಗಳು ವೀರಶೈವ ಸಮಾಜಕ್ಕೆ ಭೂಷಣಪ್ರಾಯವಾದುದು ಎಂದು ತೀರ್ಮಾನಿಸಿದ್ದು ನೋಡಬಹುದಾಗಿದೆ. ಆದ್ದರಿಂದ ಶೈವಧರ್ಮದ ಬೆಳವಣಿಗೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸಿದ ಶಾಲೆಯೊಂದರ ವೀರಶೈವ ಎಂದು ಕೆಲವು ವಿದ್ವಾಂಸರ ಮತ, ಕೆಲವು ಧರ್ಮಗಳಲ್ಲಿ ಜ್ಞಾನ ಪ್ರಧಾನವಾದರೆ ಕೆಲವರಲ್ಲಿ ಕ್ರಿಯೆ ಆದರೆ ವೀರಶೈವರಲ್ಲಿ ಜ್ಞಾನ ಮತ್ತು ಕ್ರಿಯೆ ಎರಡು ಮುಖ್ಯವಾಗಿವೆ. ಇವರಲ್ಲಿ ಯಾವುದೇ ಜಾತಿ ಸೂತಕ, ಜನನ ಸೂತಕ, ಪ್ರೇತಸೂಚಕ, ರಜತ್ ಉಚ್ಚಿಷ್ಟ ಎಂಬ ಪಂಚಸೂತಕಗಳು ಇವರಲಿಲ್ಲ. ಪಂಚಾಚಾರ ಷಟ್‌ಸ್ಥಲ್, ಅಷ್ಟಾವರಣ ನಿಷ್ಠನಾಗಿರುವನು. ಈ ಮೂರು ತತ್ವಗಳನ್ನು ತನು ಮನದಿಂದ ಜಂಗಮರು ಅಪ್ಪಿ ತಾವು ಅದರಂತೆ ನಡೆದು ಭಕ್ತರನ್ನು ನಡೆಸುತ್ತಾ, ಬೆಳೆಸುತ್ತಾ ಬಂದಿದ್ದಾರೆ. ಅವುಗಳು ಕೆಳಗಿನಂತೆ ನೋಡಬಹುದು.

## ೧. ಪಂಚಾಚಾರಗಳು

ಯಾವುದೇ ಧರ್ಮದ ವಿವೇಚನೆ ಪೂರ್ಣಗೊಳ್ಳಬೇಕಾದರೆ ಅಥವಾ ಸರ್ವ ವ್ಯಾಪಿಯಾಗಿ ಪ್ರಸಾರವಾಗಬೇಕಾದರೆ ಮುಖ್ಯವಾಗಿ ಮೂರು ಅಂಶಗಳನ್ನು ಹೊಂದಿರಬೇಕಾಗುತ್ತದೆ. ಒಂದು ತಾತ್ವಿಕ ವಿವೇಚನೆ, ಧಾರ್ಮಿಕ ಆಚರಣೆ, ನೈತಿಕ ನೇಮಗಳು. ವೀರಶೈವಧರ್ಮದ ಈ ತಾತ್ವಿಕ ಚಿಂತನೆ ಮತ್ತು ಧಾರ್ಮಿಕ ಮಾರ್ಗಗಳಿಗೆ ಪೂರಕವಾಗಿ ನೈತಿಕ ನೇಮಗಳು ಬೆಳೆದು ಬಂದಿವೆ. ಅವೇ ಪಂಚಾಚಾರ ಎಂದು ಪಾರಿಭಾಷಿಕವಾಗಿ ಕರೆಯುವ ಐದು ಆಚಾರಗಳಲ್ಲಿ ಈ ಧರ್ಮದ ನೈತಿಕ ನಿರೂಪಣೆಯ ವ್ಯಾಪಕವಾದ ಸ್ವರೂಪವನ್ನು ಶರಣರು ಪ್ರತಿಪಾದಿಸಿದ್ದಾರೆ. ಈಗ ಅಷ್ಟವರಣವೆ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲ ಮಾರ್ಗದಲ್ಲಿ ನಡೆದರೆ

ಅವನಿಗೆ ಲಿಂಗಾಂಗ ಸಾಮರಸ್ಯ ಸಿದ್ಧಿಸುವುದು ಎಂದು ಚನ್ನಬಸವಣ್ಣನವರು ಹೇಳಿದುಂಟು. ಹಾಗೆಯೇ ಇವುಗಳ ಕುರಿತು ಶ್ರೀ ಶಿವಾನಂದ ಸ್ವಾಮಿಗಳು ಹಾಡಿನ ಮೂಲಕ ಪಂಚಾಚಾರ ಷಟಸ್ಥಲ ಮತ್ತು ಅಷ್ಟಾವರಗಳ ಮಹತ್ವ ಎಚ್ಚರಿಸುತ್ತಾರೆ.

ಲಿಂಗ ಪೂಜೆ ಮಾಡಬೇಕ ತಂಗೆಮ್ಮಾ
ಲಿಂಗ ಪತಿ ತಿಳಯಬೇಕಮ್ಮಾ
ಶರಣ ಸತಿ ಲಿಂಗ ಪತಿಯಮ್ಮಾ
ಲಿಂಗ ಹೋದ ಮೇಲೆ ನೀ ರಂಡಿ ಮುಂಡೆಮ್ಮಾ
ಕಂಡ ಕಂಡ ಕಲ್ಲಿಗೆ ಹಣೆ ಹಚ್ಚಬೇಡಮ್ಮಾ
ಹಣೆ ಹಚ್ಚಿದರೆ ಹೋಯಿತು ನಿನ್ನ ಪತಿವ್ರತವಮ್ಮಾ
ಅಷ್ಟಾವರಣವೇ ನಿನಗೆ ಅಂಗವಮ್ಮಾ
ಅಂಗ ಬಿಟ್ಟ ಮೇಲೆ ನೀ ಮಂಗವಮ್ಮಾ
ಪಂಚಾಚಾರವೇ ನಿನಗೆ ಪ್ರಾಣವಮ್ಮಾ
ಪ್ರಾಣ ಹೋದ ಮೇಲೆ ನೀ ಹೆಣವಮ್ಮಾ
ಷಟ್‌ಸ್ಥಲವೇ ನಿನಗೆ ಆತ್ಮವಮ್ಮಾ
ಆತ್ಮ ಹೋದ ಮೇಲೆ ನೀ ಜಡವಮ್ಮಾ
ಧರೆಯೋಳು ಹುಲಸೂರ ಗುರು ಬಸವೇಶನಮ್ಮಾ
ಮರೆಯದೆ ನೀ ಪಾದವ ಹಿಡಿಯಬೇಕಮ್ಮಾ

**ಹಾಡಿದವರು :** ಶ್ರೀ ಶಿವಾನಂದ ಸ್ವಾಮಿಗಳು

ಇದು ವೀರಶೈವ ಧರ್ಮದ ಪೂರ್ಣ ಸ್ವರೂಪವನ್ನು ಸೂಚ್ಯವಾಗಿ ನಿರೂಪಿಸುತ್ತದೆ. ಜೀವನದ ಕೊನೆಯ ಗುರಿ ಲಿಂಗಾಂಗ ಸಾಮರಸ್ಯ ಈ ಮಾರ್ಗದಲ್ಲಿ ನಡೆಯುವ ಭಕ್ತನಿಗೆ ಅಂಗ, ಪಂಚಾಚಾರಗಳು ಪ್ರಾಣ ಎಂದು ಹೇಳಲಾಗಿದೆ. ಈ ಮಾತು ತುಂಬ ಮಹತ್ವದಾಗಿವೆ. ಇಲ್ಲಿ ಪಂಚಾಚಾರಗಳಿಗೆ ನೈತಿಕ ನಿಯಮಗಳಿಗೆ ಕೊಟ್ಟಿರುವ ಮಹತ್ವ ಗಮನಿಸಬೇಕಾಗಿದೆ. ಹೇಗೆ ಎಂದರೆ ವೀರಶೈವ ಧರ್ಮ ಆಚಾರಣೆಯಲ್ಲಿ ನೀತಿಗೆ ತುಂಬ ಮಹತ್ವ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದು ಕಾಣುತ್ತೇವೆ. ನೈತಿಕ ನಿಷ್ಠೆಯಿಲ್ಲದೆ ವ್ಯಕ್ತಿಗಾಗಲಿ ಅಥವಾ ಸಮಾಜಕ್ಕಾಗಲಿ ಮೂಡಿರುವ ಕ್ರಿಯೆ ನಂಬುಗೆಯಿಂದ ಇರುವುದಿಲ್ಲ. ಹೀಗಾಗಿ ಪಂಚಾಚಾರವೇ ಪ್ರಾಣ ಎಂಬ ಮಾತು ನೈತಿಕತೆಯ ವಿಶಾಲ ಅರ್ಥ ಸೂಚಿಸುತ್ತದೆ. ಅಷ್ಟಾವರ್ಣಗಳಿಗೆ ಚೇತನವನ್ನೀಯುವ ಶಕ್ತಿ ಪಂಚಾಚಾರಗಳು: ಅಂದರೆ ನೈತಿಕ ಜೀವನ. ನೀತಿನೇಮಗಳ ಬುಡವಿರಲಾರವೆ

ಅಷ್ಟಾವರಣಗಳು ಕಟ್ಟು ಸಂಪ್ರದಾಯ ಡಾಂಬಿಕ ಆಚರಣೆ ಆಗುತ್ತವೆ ಹೊರೆತು ಚೇತನವನ್ನು ತಂದುಕೊಡಲಾರವು. ಇದರಿಂದ ನೈತಿಕ ಜೀವನಕ್ಕೆ ವೀರಶೈವ ಧರ್ಮವು ಕೊಟ್ಟ ಕಾಣಿಕೆ ತುಂಬ ಮಹತ್ವದಾಗಿದೆ. ಅಂತೆಯೇ ಪಂಚಾಚಾರ ಜಂಗಮ ಗುರುಗಳು ತಮ್ಮ ಜೀವನಪರಿಯಂತ ನಡೆನುಡಿಗಳಲ್ಲಿ ಸೇರಿಸಿಕೊಂಡು ಭಕ್ತರನ್ನು ಸನ್ನಮಾರ್ಗದೆಡೆಗೆ ಕರೆತರಲು ಹಗಲು- ಇರುಳು ಶ್ರಮಿಸುತ್ತಾ ಬಂದಿರುವುದು ನೋಡುತ್ತೇವೆ. ಜೊತೆಗೆ ಪ್ರಸಾರ ಪಡೆಸುತ್ತಾ ಇಂದಿಗೂ ಜಂಗಮರು ಮನೆ-ಮಠಗಳಲ್ಲಿ ಬೆಳೆಸುತ್ತಿರುವುದು ಮಹತ್ವದಾಯಕ ಕ್ರಿಯೆಯಾಗಿವೆ. ಪಂಚಾಚಾರಗಳು ಮುಖ್ಯವಾಗಿ ನೈತಿಕ ನಿಯಮಗಳನ್ನು ಕುರಿತವುಗಳಾಗಿರುವುವು. ಇವುಗಳ ಸ್ವರೂಪವನ್ನು ಚನ್ನಬಸವಣ್ಣನವರು ತಮ್ಮ ಒಂದು ವಚನಗಳಲ್ಲಿ ಹೀಗೆ ಹೇಳಿದ್ದಾರೆ :

"ಲಿಂಗಾಚಾರ ಸದಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೆಂಬ
ಪಂಚಾಚಾರದ ಆಚರಣೆಯೆಂತೆಂದಡೆ :
ಲಿಂಗವಲ್ಲದೆ ಅನ್ಯವನರಿಯದಿರುವೇ ಲಿಂಗಾಚಾರ :
ಸಜ್ಜನಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ನೀಡಿ
ಸತ್ಯ ಶುದ್ಧನಾಗಿಯದೇ ಸದಾಚಾರ ;
ಶಿವಭಕ್ತರಲ್ಲಿ ಕುಲಗೋತ್ರ ಜಾತಿ ವರ್ಣಾಶ್ರಮವನರಸದೆ
ಅವರೊಕ್ಕುದ ಕೊಂಬುದೆ ಶಿವಾಚಾರ ;
ಶಿವಾಚಾರದ ನಿಂದೆಯ ಕೇಳದಿಹುದೇ ಗಣಾಚಾರ ;
ಶಿವಶರಣರೆ ಹಿರಿಯರಾಗಿ ತಾನೆ ಕಿರಿಯನಾಗಿ
ಭಯಭಕ್ತಿಯಿಂದ ಆಚರಿಸುವುದೆ ಭೃತ್ಯಾಚಾರ
ಇಂತೀ ಪಂಚಚಾರವುಳ್ಳ ಭಕ್ತರ ಒಕ್ಕುದನಿಕ್ಕಿ ಸಲಹಯ್ಯಾ
ಪ್ರಭುವೆ ಕೂಡಲಚನ್ನಸಂಗಮದೇವಾ"(ಮಲ್ಲಾಪುರ ಬಿ.ವಿ.:೧೯೮೭:೭೦).

ಇಲ್ಲಿ ಚನ್ನಬಸವಣ್ಣನವರು ಪಂಚಾಚಾರಗಳನ್ನು ಒಂದನ್ನೆ ಅವಲಂಬಿಸಿ ಇನ್ನೆಂದಕ್ಕೇರಿಸಿ ಎರಡರಿಂದಲೂ ಅತೀತರಾಗಬೇಕೆಂಬುದನ್ನು ಹೇಳಿದ್ದಾರೆ. ಒಟ್ಟಿನಲ್ಲಿ ಪಂಚಾಚಾರಗಳ ಸ್ವರೂಪ ವಿವರಿಸಿದ್ದಾರೆ.

**೧.೧. ಲಿಂಗಾಚಾರ - ಸದಾಚಾರ :** ಲಿಂಗಾಚಾರವೆಂದರೆ ದೇವನೊಬ್ಬನೇ ಎಂದೊಪ್ಪಿ ಅವನನ್ನು ಸರ್ವ ಸಮ್ಮತವಾದ ಒಂದೆ ತಳಹದಿಯ ಮೇಲೆ ಪೂಜಿಸುವುದು ಗುರು ಕೊಟ್ಟ ಇಷ್ಟ ಲಿಂಗವನ್ನು ಲಿಂಗದಲ್ಲಿ ಧರಿಸಿಕೊಂಡು ನಿಷ್ಠೆಯಿಂದ ಆರಾಧಿಸುತ್ತಾ ಇರಬೇಕು. ಇಷ್ಟಲಿಂಗವನ್ನು ಬಿಟ್ಟು ಬೇರೆ ಯಾವ ಮೂರ್ತಿ ಪೂಜಿಸದೆ ನಮ್ಮ ಭಕ್ತಿ - ಭಾವಗಳು

ಶಿವಲಿಂಗ ಪೂಜೆಯಲ್ಲೇ ಇಟ್ಟು ಶಿವನು ಪತಿಯೆಂದೂ, ನಾವು ಆತನ ಹೆಂಡತಿಯೆಂದೂ ತಿಳಿದು, ಗರತಿಯೂ ಹೇಗೆ ತನ್ನ ಗಂಡನಲ್ಲಿ ಪ್ರೇಮ-ಭಕ್ತಿ ವಿಶ್ವಾಸವನ್ನಿಟ್ಟು ನಡೆದುಕೊಳ್ಳುವಂತೆ ಹಾಗೆ ನಾವುಗಳು ಶಿವಲಿಂಗ ಮತ್ತು ಶಿವಸ್ವರೂಪಿಗಳಾದ ಗುರು - ಜಂಗಮಗಳ ಶಿವಾ ಅನ್ಯ ಯಾವ ಮೂರ್ತಿಗಳಲ್ಲಿಯೂ ಅಥವಾ ಹತ್ತು ಹಲವಾರು ದೇವರ ಪೂಜೆಮಾಡಿ ಸಮಯ ಕಳೆಯಬಾರದು. ಏಕದೇವೋಪಾಸನೆಯಲ್ಲಿ ವಿಶ್ವಾಸವಿಡಬೇಕೆಂದು ಇದರ ತಾತ್ಪರ್ಯವಾಗಿದೆ. ಬಸವಣ್ಣನವರು ಲಿಂಗ ಮತ್ತು ನಮ್ಮ ಸಂಬಂಧ ಕುರಿತು ಒಂದು ವಚನದಲ್ಲಿ ತುಂಬ ಮಾರ್ಮಿಕವಾಗಿ ತಿಳಿಸಿದ್ದಾರೆ.

"ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ
ನಂಬಬಲ್ಲ ಭಕ್ತರಿಗೆ ದೇವನೊಬ್ಬನೇ ಕಾಣಿರೋ
ಬೇಡ ; ಬೇಡ ; ಅನ್ಯದೈವದ ಸಂಗಹೊಲ್ಲ !
ಅನ್ಯ ದೈವವೆಂಬುದು ಹಾದರ ಕಾಣಿರೋ !
ಕೂಡಲಸಂಗಮ ದೇವರು ಕಂಡರೆ ಮೂಗ ಕೊಯ್ಯುವ ಕಾಣಿರೋ"

(ಶಾಸ್ತ್ರಿ ತೋಟಪ್ಪ, ಕೈಪಿಡಿ:೧೫೨)

ಹೀಗೆ ಶಿವಭಕ್ತನು ಇಷ್ಟಲಿಂಗದ ಹೊರತು ಬೇರೆ ಯಾವ ದೇವರ ಪೂಜೆಯನ್ನು ಮಾಡಬಾರದು. ಅಂದರೆ ಉಳಿದ ದೇವರುಗಳನ್ನು ದ್ವೇಷಿಸಬಾರದೆಂದರ್ಥ ಅಂದರೆ ಲಿಂಗಾಚಾರ. ಲಿಂಗದ ಸಿದ್ಧಿಗಾಗಿ ಇರುವ ಆಚಾರ, ಲಿಂಗವೇ ಆಚಾರ ಎಂದು ಎರಡು ರೀತಿಯೊಳಗೆ ನೋಡಬಹುದು. ಇವೆರಡೂ ಲಿಂಗ ಚಿತ್ತದಲ್ಲಿ ಗೊತ್ತು ಕಟ್ಟುವ ಕೇಂದ್ರೀಕರಣ ಶಕ್ತಿ, ಅಂಗದ ಮೇಲೆ ಲಿಂಗ ಸಂಬಂಧವಾದ ಮೇಲೆ ಇನ್ನೊಂದರ ಬೇಕಾಗಿಲ್ಲ ಎಂಬುದೇ ಇದರ ಅರ್ಥ.

"ಅಟ್ಟವನೇರುವುದಕ್ಕೆ ನಿಚ್ಚಣಿಕೆಯೇ ಸೋಪಾನವಯ್ಯಾ ಹರಪದವನೇರುವುದಕ್ಕೆ ಶ್ರೀ ಗುರು ಹೇಳಿದ ಸದಾಚಾರವೇ ಸೋಪಾನವಯ್ಯಾ" ಎಂದು ಶರಣರ ನುಡಿಯಂತೆ ಲಿಂಗಾಚಾರ ಸದಾಚಾರಗಳೆರಡೂ ಇಲ್ಲಿ ಜೊತೆ ಜೊತೆಯಲ್ಲಿಯೇ ನಡೆಯುತ್ತವೆ. ಒಳ್ಳೆಯ ಉದ್ಯೋಗವನ್ನು ಮಾಡಿ ಹಣವನ್ನು ತನ್ನಷ್ಟಕ್ಕೆ ಉಳಿಸಿ ಉಳಿದ್ದನ್ನು ಗುರು - ಲಿಂಗ - ಜಂಗಮ ಸೇವೆಗೆ ಒಪ್ಪಿಸುವುದು ಬಡಜನರ ಹೊಟ್ಟೆ - ಬಟ್ಟೆಗಾಗಿ ದಾನ - ಧರ್ಮ ಮಾಡುವುದು ಪರರ ಹಿತಕ್ಕಾಗಿ ಶ್ರಮಿಸುವುದು, ಸಕಲ ಜೀವಾತ್ಮದಲ್ಲಿ ಪ್ರೇಮವಿಡುವುದು, ಯಾವುದೇ ವಸ್ತುವಿರಲಿ ಭೇದಭಾವ ಮಾಡದಿರುವುದು ಇದೇ ಸದಾಚಾರ. ಏಕೆಂದರೆ ಲಿಂಗಾಚಾರದ ಮುನ್ನಡೆ

ಸದಾಚಾರವಾಗಿದೆ. ಹೀಗಾಗಿ ಪಂಚಾಚಾರ ಗಳಲ್ಲಿ ಸದಾಚಾರ ಬಹಳ ವಿಶಾಲವಾದದ್ದು. ಮಾಡುವ ಕಾಯಕವೆಲ್ಲ ಸರಿಸಮಾನ ತಾನು ಮಾಡುವ ಕಾಯಕದಿಂದ ಕುಲವನ್ನು ಎಣಿಸಬಾರದು. ಅದಕ್ಕಾಗಿ ಲಿಂಗಾಚಾರಿಯಾದ ಮತ್ತು ಲಿಂಗಾಧಾರಿಯಾದ ನಂತರ ಕಡ್ಡಾಯವಾಗಿ ಸದಾಚಾರಿಯಾಗಿರಬೇಕು. ಸದಾಚಾರವೇ ದೇವರು. ಯಾವಾಗಲು ಆಚಾರ ಮುಖ್ಯವೆಂದು ತಿಳಿಸಿ ಹೇಳುತ್ತದೆ. ಸದ್ಗುಣ, ಸಭ್ಯಾಚಾರದಿಂದ ಅಂತರಂಗ ಶುದ್ಧತೆ, ಧರ್ಮಮದಲ್ಲಿ ಸದಭಿಮಾನಿಗುಣವಾಗುವಂತೆ ಮಾಡುತ್ತದೆ. ಇಂತಹ ಲಿಂಗಾಚಾರ ಸದಾಚಾರ ತತ್ವವನ್ನು ಗುರು ಜಂಗಮರು ಭಕ್ತರ ಮನದಲ್ಲಿ ಅಂಕುರಿಸುತ್ತಾರೆ. ಮನಸ್ಸು ಚಂಚಲತೆಯಿಂದ ದೂರ ಮಾಡಿ ಏಕಾಗ್ರತೆಯನ್ನು ಮೂಡಿಸಲು ಶರಣರು ಹಾಕಿಕೊಟ್ಟ ತತ್ವಗಳ ಮೇಲೆ ಜಂಗಮರು ನಡೆದು ಭಕ್ತರಿಗೆ ದಾರಿದೀಪವಾಗಿದ್ದಾರೆ.

**೧.೨. ಶಿವಾಚಾರ :** ಶಿವಾಚಾರವೆಂದರೆ ಸಾಮಾಜಿಕ ಸಮಾನತೆ, ಶಿವಾಚಾರದಲ್ಲಿ ಕಂಡು ಬರುವ ಪ್ರಮುಖವಾದ ಅಂಶವಾದರೆ ಇನ್ನೊಂದು ವೈಯಕ್ತಿಕ ವಿಕಾಸವನ್ನು ಮಾಡುವುದು. ವೈಯಕ್ತಿಕವಾದ ವಿಕಾಸದಿಂದ ಅದು ನಡೆನುಡಿಗಳಲ್ಲಿ ಅಳವಡಬೇಕು, ಅಧ್ಯಾತ್ಮಿಕ ಅನುಭವದ ಆಧಾರದ ಮೇಲೆ ಬೆಳೆಯಬೇಕು. ಅಲ್ಲದೆ ಇಲ್ಲಿ ಲಿಂಗ ಸಂಸ್ಕಾರದ ಮೇಲೆ ಸಮಾಜ ಸಂಘಟನೆಯಾಗುತ್ತದೆ. ಇದು ತುಂಬ ವಿಶೇಷವಾದ ತತ್ವ. ಏಕೆಂದರೆ ಶಿವಾಚಾರದಿಂದ ಸಮಾಜದಲ್ಲಿ ಐಕ್ಯತೆ ಬೆಳೆಯುತ್ತದೆ. ಅದಕ್ಕೆ ಚೆನ್ನಬಸವಣ್ಣನವರು ಕೆಳಗಿನ ವಚನದಲ್ಲಿ ಶಿವಾಚಾರದ ಕುರಿತು ವರ್ಣಿತವಾಗಿದ್ದು ನೋಡಬಹುದು:

"ಗುರು ಮಾರ್ಗಚಾರದಲ್ಲಿ ನಿಂದ ಶಿವಲಾಂಛನಧಾರಿಯಂ
ಪರಶಿವಲಿಂಗವೆಂದು ಭಾವಿಸಿ ಅರ್ಥಪ್ರಾಣಾಭಿಮಾನವನ್ನು
ನೆರೆ ಒಪ್ಪಿರುವುದೇ ಶಿವಾರವೆಂಬೆನಯ್ಯಾ
ಶಿವಭಕ್ತರಲ್ಲಿ ಜಾತಿ ವರ್ಣ ಆಶ್ರಮವನರಸದೆ
ಅವರೊಕ್ಕುದ ಕೊಂಬುದೇ ಶಿವಾಚಾರ ...............!"

ಸರ್ವರೂ ಶಿವಸ್ವರೂಪವೆಂದು ತಿಳಿದು ಮೇಲು-ಕೀಳು ಮಾಡದೇ, ಆಚಾರ-ವಿಚಾರ ನೋಡಬೇಕಾಗಿದೆ. ಅವನ ಜಾತಿ, ವರ್ಣ, ಕಸುಬು ಇವುಗಳು ಎಣಿಸಕೂಡದು. ಸರ್ವರೂ ಶಿವನ ಮಕ್ಕಳು, ಶಿವಾಚಾರದಲ್ಲಿ ಲಿಂಗಾಂಗಿ ತಾನು ಆದಕಾರಣ ವಿಶ್ವಕುಟುಂಬ ಎಂಬ ಅಭಿಮಾನ ಭಾವನೆ ಮೂಡಬೇಕು. ಹೀಗಾದಾಗ ಸಾಮಾಜಿಕ ಸಂಘಟನೆಯಾಗುವಲ್ಲಿ ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷತ್ ಶಿವನೆಂದು ವಂದಿಸಿ ಅವನಿಗೆ

ಪ್ರೋತ್ಸಾಹಿಸಬೇಕು. ನಡೆಯೊಂದಾದರೆ ನುಡಿಯೊಂದಾದರೆ ಸಮಾಜದಲ್ಲಿ ಪ್ರಗತಿ ಸಾಧಿಸಲು ಸಾಧ್ಯವಿಲ್ಲ. ಹೇಗೆ ಎತ್ತು ಎರೆಗೆ ಕೋಣ ಕೆರೆ ಎಳೆದುಕೊಂಡು ಹೋದಂತೆಯಾಗಿ ಇಡೀ ಸಮಾಜವನ್ನು ಇದೆ ಸ್ಥಿತಿಯಲ್ಲಿ ಮುನ್ನಡೆಯುತ್ತದೆ. ಹೀಗಾಗಿ ಗುರುಗಳು ಸಮಾಜವನ್ನು ಸನ್ಮಾರ್ಗದಡೆಗೆ ಕರೆದುಕೊಂಡು ಹೋಗುವ ದಿಕ್ಸೂಚಿಯಾಗಿ ಕೆಲಸ ಮಾಡುತ್ತಿದ್ದಾರೆ. ಇದು ವವನ ಪರಮ ಕರ್ತವ್ಯವಾಗಿದೆ ಎನ್ನಬಹುದು.

**೧.೩. ಗಣಾಚಾರ :** ಶಿವಾಚಾರದ ನಿಂದೆ ಅಂದರೆ ದೇವರ ನಿರಾಕರಣೆ, ಅನ್ಯಾಯ ಅತ್ಯಾಚಾರ ಧರ್ಮ, ನೀತಿ, ತತ್ವ ತಿರಸ್ಕಾರ ಮುಂತಾದವುಗಳು ಕೇಳದಿರುವುದು ಗಣಾಚಾರ ಅರ್ಥಾತ್ ತತ್ವನಿಷ್ಠೆ, ಗಣಾಚಾರದಲ್ಲಿ ಪ್ರಮುಖವಾದ ಅಂಶ. 'ಶಿವನಿಂದೆಯ ಕೇಳದಿಹುದೇ ಗಣಾಚಾರ. ಅಷ್ಟಾವರ್ಣಗಳ ಮೇಲೆ ನಿಂದೆ ಕುಂದುಗಳು ಬಂದು ತಟ್ಟಿದಲ್ಲಿ ಗಣಸಮೂಹದೊಡಗೂಡಿ ಆ ಸ್ಥಲವ ತ್ಯಜಿಸುವುದೇ ಗಣಾಚಾರವೆಂಚಿನಯ್ಯಾ' ಎಂಬ ಶರಣರ ನುಡಿಮುತ್ತುಗಳು ಕೇಳಿಬರುತ್ತವೆ. ಗಣಾಚಾರವೆಂದರೆ Fighting against the evils in or out side the body ಈ ದೋಷಗಳು ದೇಹದೊಳಗೂ ಹೋರಗೂ, ರಾಷ್ಟ್ರದೊಳಗೂ ಹೋರಗೂ ಎಲ್ಲಿದ್ದರೂ ಹೋರಾಡಿ ತೆಗೆಯುವುದೇ ಗಣಾಚಾರ. ಗಣ ಎಂದರೆ ಸಮೂಹ 'Society', ಗಣಾಚಾರವೆಂದರೆ Social spirit ತತ್ವಾಭಿಮಾನ, ರಾಷ್ಟ್ರಾಭಿಮಾನ, ಅವ್ಯವಹಾರಿಕ ಅತ್ಯಾಚಾರವನ್ನು ತಡೆಗಟ್ಟುವಿಕೆ. ಪ್ರಜಾಪ್ರಭುತ್ವದಲ್ಲಿ ಸಮಾಜವೇ ಸರ್ವಸ್ವ ಅದೊಂದು ದೊಡ್ಡ ಕುಟುಂಬದಂತೆ ಇದನ್ನು ರಕ್ಷಿಸಿ ಕಾಪಾಡಿಕೊಂಡು ಹೋಗುವುದೇ ನಮ್ಮ ಧರ್ಮ.

ಗಣಾಚಾರವೆಂದರೆ ತತ್ವನಿಷ್ಠೆ, ಗಣಾಚಾರದ ನಿಂದೇ ಕೇಳದಿರುವುದೇ ಗಣಾಚಾರ. ಸರ್ವರು ಸಮಾನರು. ಇದಕ್ಕೆ ಧಕ್ಕೆ ಬಂದರೆ ನ್ಯಾಯಕ್ಕಾಗಿ ಹೋರಾಟ ಮಾಡುವುದು. ಮಹಾತ್ಮರ, ಸದ್ಭಕ್ತರ ನಿಲುವನ್ನು ನಿಂದಿಸಿದರೆ ಕೇಳಬಾರದು. ಪ್ರತಿಭಟಿಸಬೇಕು. ಹೋರಾಟ ಮಾಡಬೇಕು ಎಂದು ಹೇಳುತ್ತದೆ. ಕೆಲವರು ಇನ್ನೊಬ್ಬರ ನಿಂದೆ ಮಾಡುವುದು, ಜಗಳ ಹುಟ್ಟುವ ಕಾಯಕದವರಾಗಿರುತ್ತಾರೆ. ಅದಕ್ಕೆ ಅಂತಹವರು ಇದ್ದಾಗ ಹೇಗೆ ಜೀವಿಸಬೇಕು - ನಡೆದು ಕೊಂಡು ಹೋಗಬೇಕು ಎಂಬುದನ್ನು ಬಸವಣ್ಣನವರು ತಮ್ಮ ವಚನದಲ್ಲಿ ತುಂಬ ಚೆನ್ನಾಗಿ ತಿಳಿಸಿದ್ದಾರೆ.

"ಒಂದಕ್ಕೊಂಬತ್ತ ನುಡಿದು ಕಣ್ಣು ಕೆಂಪನೆ ಮಾಡಿ
ಗಂಡು ಗೆದರಿ ಮುಡುಹಿಕ್ಕಿ ಕೆಲೆವವರ ಕಂಡೊಡಂಜುವೆ ಒಸರಿಸುವೆ
ಓಡಿದೆನೆಂಬ ಭಂಗವಾದದಾಗಲಿ

ನಮ್ಮ ಕೂಡಲ ಸಂಗನ ಶರಣರ ಅನುಭಾವವಿಲ್ಲದವರ
ಹೊಲ ಮೇರೆಯ ಹೊಂದೆ, ಹೊಲನ ಬಿಟ್ಟೋಡುವೆ !"

ಒಂದು ಮಾತಿಗೆ ಹತ್ತು ಮಾತನಾಡುವುದು (ಜಗಳ) ಕಣ್ಣು ಕೆಂಪಗೆ ಮಾಡಿಕೊಂಡು ಜಗಳ ಮಾಡುವರ ಹತ್ತಿರ ಹೋಗಕೂಡದು. ದುಷ್ಟರೊಡನೆ ಹೋರಾಟದಲ್ಲಿ ಭಾಗಿಯಾಗಬಾರದು. ಅನುಭಾವವಿಲ್ಲದವನ ಜೊತೆ ತರ್ಕಜ್ಞಾನದ ವಿಚಾರ ಮಾಡಬಾರದು. ಅದಕ್ಕೆ ಅಣ್ಣನವರು ದುರ್ಜನರ ಸಹವಾಸ ಬಚ್ಚಲ ಗೊಜ್ಜಿಗೆ ಸರಿ ಎನ್ನುತ್ತಾರೆ. ಶಿವಾಚಾರ ಮತ್ತು ಗಣಚಾರಗಳು ಸಾರ್ವತ್ರಿಕ ಸಂಘಟನೆ, ರಾಷ್ಟ್ರೀಯತ್ವ ಮತ್ತು ಮಾನವೀಯತೆ ಬೆಳೆಸುವುದು ಗಣಾಚಾರದಲ್ಲಿ ವೈಯಕ್ತಿಕ ಬಾಳಿಗಿಂತ ಸಾರ್ವತ್ರಿಕ ಶ್ರೇಯಸ್ಸೇ ಪ್ರಮುಖವಾಗಿರುತ್ತದೆ.

**೧.೪. ಭೃತ್ಯಾಚಾರ :** ಶಿವಭಕ್ತರೆಲ್ಲರೂ ನಮ್ಮವರೆಂದು ಭೇದ-ಭಾವಮಾಡದೆ ಒಳ್ಳೆ ನಮ್ರ ಭಾವದಿಂದ ನಡೆದು ಸರ್ವರ ದು:ಖದಲ್ಲಿ ಭಾಗಿಯಾಗಿ ದೊಡ್ಡವರು - ಸಣ್ಣವರು ಎನ್ನುವುದನ್ನು ಭೇದ ಮಾಡದೆ ನಾನು ಎನ್ನುವುದನ್ನು ತೊಲಗಿಸಿ, ನೀನು ಅನ್ನುವುದನ್ನು ಬರಮಾಡಿಕೊಂಡು ಭೂಮಿಯ ಮೇಲಿನ ಪ್ರತಿಯೊಂದು ಜೀವಿ ಶಿವನ ಸ್ವರೂಪವೆಂದು, ಸೇವೆಯನ್ನು ಮಾಡಲು ಬದ್ಧನಾಗುವುದೇ ಭೃತ್ಯಾಚಾರವಾಗುತ್ತದೆ. ಈ ಭೃತ್ಯಾಚಾರವು ಎರಡು ಪ್ರಕಾರವಾಗಿರುವುದು ಒಂದು ಭೃತ್ಯಾತ್ವ ಎರಡನೆಯದು ವೀರಭೃತ್ಯತ್ವವೆಂಬುದಾಗಿ, ಗುರುಲಿಂಗ ಜಂಗಮರ ವಿಚಾರದಲ್ಲಿ ತುಂಬ ನಮ್ರ ಭಾವದಿಂದ ವರ್ತಿಸುವುದು. ಜೊತೆಗೆ ಯಾವನು ಗುರುವಿಗೆ ಶರೀರವನ್ನು ಶಿವನಿಗೆ ಮನಸ್ಸನ್ನು ಜಂಗಮನಿಗೆ ಧನವನ್ನು ಸಮರ್ಪಿಸಿ, ಪರಮಾನಂದದಿಂದ ಶ್ರೇಷ್ಠವಾದ ಮೋಕ್ಷ ಹೊಂದಲು ಇಚ್ಛೆಪಡುವನು ಅವನೇ ಭೃತ್ಯನೆನೆಸಿಕೊಳ್ಳುವನು. ಅವನ ಈ ಆಚರಣೆಯೇ ಶಿವಾನುಗ್ರಹ ಸಾಧನವಾದ ವೀರಭೃತ್ಯಾಚಾರವೆನಿಸುವುದು. ಭೃತ್ಯಾಚಾರ ಆಧ್ಯಾತ್ಮಿಕ ಸಾಧನೆಯ ಪ್ರಾರಂಭವೂ ಹೌದು, ಕೊನೆಯೂ ಹೌದು. ಶಿವಶರಣರ ಹಿರಿಯನಾಗಿ, ತಾನೆ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವುದೇ ಭೃತ್ಯಾಚಾರ ಎಂಬ ಮಾತು ಸಾಧಕನ ಅಹಂಕಾರ ನಿರಸನಕ್ಕೆ ಕಾರಣವಾಗಿದೆ.

"ದಾಸತ್ವವು, ಪರರಾಸತ್ವವು, ಸ್ವಾಮಿ ಭೃತ್ಯತ್ವವು, ವೀರಭೃತ್ಯವು, ಸಜ್ಜನತ್ವವು, ಸಕಲಾವಸ್ಥೆಯು, ಗುರುಪೂಜಿತವವು, ಲಿಂಗಾರ್ಚಕತ್ವವು, ಜಂಗಮಾರಾಧನತ್ವವು, ಭಕ್ತಿಕಾಂಕ್ಷಿತ್ವವು, ಸ್ವಗೃಹ, ಸ್ವಾಧೀನ, ಸ್ವದೇಹವು ಲಿಂಗ ಜಂಗಮ ಭಕ್ತರಿಗೆ ಸಮರ್ಪಣವು, ಇಂತೀ ಭಕ್ತಿ ಮುಖವಾಗಿ ದೇವಭಕ್ತರೇ ಹಿರಿದು ತಾ ಕಿರಿದಾಗಿ ಭಯ ಭೃತ್ಯಾತ್ವವೇ ಭೃತ್ಯಾಚಾರವು" (ತಿಪ್ಪೇರುದ್ರ ಸ್ವಾಮಿ:೧೯೬:೨೯೪) ಎಂಬ ಈ ಎಲ್ಲಾ ಅಂಶಗಳಲ್ಲಿ

ಸಮರ್ಪಣ ಭಾವದಿಂದ ನಡೆಯುವುದೇ ಭೃತ್ಯಾಚಾರ. ಆದ್ದರಿಂದ ಇದು ತುಂಬ ವಿಶಾಲವಾಗಿ ಕಂಗೋಳಿಸುತ್ತದೆ. ಅಂತೆಯೇ ಇಲ್ಲಿ ಎಲ್ಲಾವು ನೀನೆ ಎಂಬ ಭಾವನೆ ನಿಲ್ಲುತ್ತದೆ. ಅದಕ್ಕೆ ಭೃತ್ಯಾಚಾರದ ಸಾಕಾರಮೂರ್ತಿ ಎನ್ನಿಸಿಕೊಂಡ ಬಸವಣ್ಣವನರು ಹೀಗೆ ಹೇಳುತ್ತಾರೆ. 'ಬ್ರಹ್ಮ ಪದವಿಯನ್ನು, ವಿಷ್ಣುಪದವಿಯನ್ನು, ರುದ್ರಾಪದವಿಯನ್ನು ಮತ್ತಾವ ಪದವಿಯನ್ನೊಲ್ಲೇ ಸದ್ಭಕ್ತರ ಪಾದವನರಿದಿಪ್ಪು' ಈ ಮಹಾ ಪದವಿ ಬೇಡಿಕೆ ಅವರದು. ಅದಕ್ಕೆ ಸದುವಿನಯವೇ ಸದಾ ಶಿವನ ಒಲುಮೆ ಎಂದು ತಿಳಿದು ಅದನ್ನು ಜೀವನದಲ್ಲಿ ಗೆದ್ದು ತೋರಿಸಿದರು. ಇಂತಹ ಅನೇಕ ಮಾತುಗಳು ಶರಣರ ಜೀವನದಿಂದ ತೆಗೆದುಕೊಳ್ಳಬಹುದು.

ಒಟ್ಟಿನಲ್ಲಿ ಪಂಚಾಚಾರಗಳ ವಿವೇಚನೆಯಿಂದ ಶರಣರ ಧಾರ್ಮಿಕ ಸಾಧನೆಯ ವ್ಯಾಪಕತೆಯನ್ನು ನೋಡಬಹುದಾಗಿದೆ. ವೈಯಕ್ತಿಕ ಹಿತವನ್ನು ಸಾಧಿಸುವುದರ ಜೊತೆಗೆ ಧಾರ್ಮಿಕ ಆಚರಣೆಗಳು ಸಾಮಾಜಿಕ ಹಿತವನ್ನೇ ಸಾಧಿಸಬೇಕು ಎಂಬುದು ಅವರ ಆಚಾರಗಳ ಉದ್ದಕ್ಕೂ ಅವರ ಸಾಧನೆ ಹೊಳೆಯುತ್ತದೆ. ಇಂತಹ ವಿಶಾಲವಾದ ತತ್ವಗಳನ್ನು ಜಂಗಮ ಮಠಾಧೀಶರು, ಮಠದ ಜಂಗಮರು ತಮ್ಮ ಜೀವನದ್ದುದಕ್ಕೆ ನಡೆದು ಭಕ್ತರಿಗೆ ಪಂಚಾಚಾರಗಳ ಲಕ್ಷಣಗಳನ್ನು ಅವರ ಮನದಾಳದಲ್ಲಿ ತುಂಬಿ ಅದರಂತೆ ನಡೆಯಲು ಪ್ರೇರಣೆ ನೀಡಿ ಅವರ ಜೀನ ಶುಚಿಗೊಳಿಸಿದರು. ಅದಕ್ಕೆ ಚನ್ನಬಸವಣ್ಣನವರು ಈ ಪಂಚಾಚಾರಗಳು ತಂದು ಸರಳವಾಗಿ ತಿಳಿಸಿದ್ದಾರೆ.

"ಲಿಂಗವೇ ಪರವೆಂದರಿದು ಅನ್ಯದೇವರ ಭಜನೆಯ್ಗಿದಿರ್ಪುದೇ ಲಿಂಗಾಚಾರ ಸತ್ಕ್ರಿಯೆಯಿಂದ ಧನ ಸಂಪಾದಿಸಿ, ಗುರು, ಲಿಂಗ, ಜಂಗಮ, ದಾಸೋಹ, ದಾನ, ಪರೋಪಕಾರ ಮಾಡುವುದೆ ಸದಾಚಾರ ! ಅಂಗದ ಮೇಲೆ ಲಿಂಗವಿರ್ಪ ಶಿವಭಕ್ತನೇ ಶಿವರೂಪವೆಂದರಿದು ಅವರ ಮಂದಿರವ ಪೊಕ್ಕು ಮಿಕ್ಕಿದನುಂಬುದೇ ಶಿವಾಚಾರ ! ಶಿವನಿಂದೆಯ ಕಿವಿಗೊಟ್ಟು ಕೇಳದಿರ್ಪುದೇ ಗಣಾಚಾರ! ಶಿವಭಕ್ತರ ಶಿಶುವ ತೊಟ್ಟಿಲಲ್ಲಿರ್ಪುದ ಕಂಡು ಯಜಮಾನನೆಂದರಿದು ನಮ್ಮ ಭಾವದಿಂದ ನಡೆದುಕೊಳ್ಳುವುದೇ ಭೃತ್ಯಾಚಾರ ! ಇಂತೀ ಪಂಚಾಚಾರ ಸಂಯುಕ್ತವಾಗಿ ನಡೆಯುವ ಶಿವಭಕ್ತ ನೊಕ್ಕಿ ಮಿಕ್ಕಿದನಿಕ್ಕಿ ಸಲಹೋ ಕೂಡಲ ಚನ್ನಸಂಗಮದೇವ !(ಶಾಸ್ತ್ರಿ ತೋಟಪ್ಪ:೧೪೫)ಎಂದು ಪಂಚಾಚಾರ ತತ್ವಗಲ ಸ್ವರೂಪವನ್ನು ತಿಳಿ ಹೇಳಿದ್ದಾರೆ.

## ೨. ಷಟಸ್ಥಲಗಳು

ಷಟ್‌ಸ್ಥಲಗಳಲ್ಲಿ ತಾತ್ವಿಕ ಸಿದ್ಧಾಂತ ಮತ್ತು ಆಚರಣೆಯ ಮಾರ್ಗಗಳೆರಡೂ ಇಲ್ಲಿ ಸಮಾವೇಶ ಗೊಳ್ಳುತ್ತವೆ. ಸಾಧಕನ ಅಧ್ಯಾತ್ಮಿಕ ಅನುಭವನದ ವಿಕಾಸವನ್ನು ತಳಹದಿಯನ್ನಾಗಿ ಉಳ್ಳ

ಇದರ ವಿವೇಚನೆಯಲ್ಲಿ ವೀರಶೈವ ಧರ್ಮದ ಸಾರವೆಲ್ಲಾ ಒಳಗೊಂಡಿದೆ. ಇವರಿಗಿಂತ ಅಂದರೆ (ಶರಣರಿಗಿಂತ) ಹಿಂದೆಯೇ ಷಟ್‌ಸ್ಥಲವನ್ನು ಕುರಿತು ಉಲ್ಲೇಖ ಕಂಡು ಬಂದರೂ ಅದಕ್ಕೊಂದು ವಿಶಾಲತೆಯನ್ನು ತಂದು ಕೊಟ್ಟವರು ಶರಣರು.

'ಸ್ಥಲ' ಎನ್ನುವ ಮಾತಿಗೆ ಸ್ಥಾನ ಮೆಟ್ಟಿಲು ಎಂಬ ರೂಢವಾದ ಅರ್ಥವಿದೆ. ಸಾಧಕ ತನ್ನ ಕೊನೆಯ ಗುರಿಯನ್ನು ಸೇರುವ ಮಾರ್ಗದಲ್ಲಿ ನಿರ್ಮಿತವಾದ ವಿವಿಧ ಹಂತಗಳು ಎಂಬರ್ಥ ಇದಕ್ಕಿದೆ. ಆದರೆ ಅಷ್ಟೇ ಅಲ್ಲದೆ ಸ್ಥಲ ಶಬ್ದಕ್ಕೆ ಒಂದು ವಿಶಿಷ್ಟವಾದ ಅರ್ಥವನ್ನು ವೀರಶೈವ ಧರ್ಮ ಕಲ್ಪಿಸಿಕೊಂಡಿದೆ. ಚರಾಚರವಾದ ಈ ಜಗತ್ತು ಯಾವುದರಲ್ಲಿ ಹುಟ್ಟಿ ಯಾವುದರಲ್ಲಿ ಲಯವಾಗು ತ್ತದೆಯೋ ಆ ಏಕಮೇವಾದ್ವಿತೀಯವಾದ ಪರಶಿವ ಬ್ರಹ್ಮವನ್ನೆ ಸ್ಥಲ ಎಂದು ಇಲ್ಲಿ ಕರೆಯಲಾಗಿದೆ (ತಿಪ್ಪೇರುದ್ರಸ್ವಾಮಿ:೧೯೬೯:೧೩೨). ಈ ಆರು ಸ್ಥಲಗಳಲ್ಲಿಯೇ ನೂಱ ಒಂದು ಸ್ಥಲಗಳಾಗಿ ಸಿದ್ಧಾಂತ ಶಿಖಮಣಿಯಲ್ಲಿ ಶ್ರೀ ರೇಣುಕರು ನಿರೂಪಿಸಿದ್ದಾರೆ.

**೨.೧. ಭಕ್ತ ಸ್ಥಲ :** ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತವಚನವ ನುಡಿಯಬೇಕು. ಸಕಲ ಪ್ರಾಣಿಗಳು ತನ್ನಂತೆ ಭಾವಿಸುವುದು. ಗುರು ಲಿಂಗ ಜಂಗಮಕ್ಕೆ ತನು ಮನ ಧನಗಳ ಸೇವೆಯಿಸಬೇಕು. ಅಪಾತ್ರದಾನವ ಮಾಡಲಾಗುವುದು. ಸಕಲೇಂದ್ರಿಯಂಗಳ ತನ್ನ ವಶವ ಮಾಡುವುದು. ಇದೇ ಮೊದಲಲ್ಲಿ ಬೇಹ ಶೌಚನೋಡಾ, ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ, ಇದೇ ಸಾಧನ ನಮ್ಮ ಕೂಡಲ ಚೆನ್ನಸಂಗಯ್ಯಾನಲ್ಲಿ(ಎಂ. ಆರ್. ಶ್ರೀನಿವಾಸ ಮೂರ್ತಿ:೧೯೧೧:೧೪೨) ಎಂದು ಭಕ್ತಸ್ಥಲದ ಮುಖ್ಯ ಲಕ್ಷಣಗಳನ್ನು ತಿಳಿ ಹೇಳಿದ್ದಾರೆ. ಗುರುಗಳು ದೀಕ್ಷಾಕಾಲದಲ್ಲಿ ನೀಡಿರುವ ಇಷ್ಟಾಲಿಂಗ ಬಿಟ್ಟು ಇತರ ಸ್ಥಾವರಲಿಂಗಗಳಿಗೆ ಸಾಗಕೂಡದು. ಏಕೆಂದರೆ ಗುರುಕೊಟ್ಟ ಇಷ್ಟಲಿಂಗವೇ ಪರದೈವ. ಬ್ರಹ್ಮರಂಧ್ರದ ಚಿತ್ಕಳೆಯನ್ನು ಗುರು ಆಕರ್ಷಿಸಿ ಆತ್ಮಕ್ಕೆ ಭಾವಲಿಂಗನ್ನಾಗಿ ಮಾಡಿಕೊಟ್ಟಿರುವಾಗ ಬೇರೆಯಾವದು ಬೇಕಿಲ್ಲ. ಇಷ್ಟಲಿಂಗವನ್ನು ಯಾವಾಗಲೂ ಅಂಗದ ಮೇಲಿಟ್ಟು ಶಾಸ್ತ್ರೋಕ್ತವಾಗಿ ಪೂಜಿಸು ದಿನ ಬೆಳಿಗ್ಗೆ ಇಷ್ಟಲಿಂಗ ದರ್ಶನ ಪಡೆದು ಧನ್ಯನಾಗು ಎಂದು ತಿಳಿಸುವುದುರ ಜೊತೆಗೆ ಗುರುಲಿಂಗ ಜಂಗಮಕ್ಕೆ ತನ್ನ ಚಿತ್ತಶುದ್ಧಕಾಯಕದಿಂದ ಸೇವೆಗೈಯಬೇಕು. ಮತ್ತು ಶಿವಲಾಂಛನಗಳಾದ ಭಸ್ಮ ರುದ್ರಾಕ್ಷಿ ಮುಂತಾದವುಗಳಲ್ಲಿಯೇ ವಿಶೇಷ ಭಕ್ತಿ ವಿಶ್ವಾಸವುಳ್ಳವರಾಗಿರುವುದು ಅವಶ್ಯ. ಆತ್ಮ ಜಾಗೃತಿಯ ಎಚ್ಚರಿಕೆಯ ಮಾತು ಭಕ್ತಸ್ಥಲದಲ್ಲಿ ಬಹಳ ಅಗತ್ಯ. ಏಕೆಂದರೆ ಮನಸ್ಸು ನೂರಾರು ಕಡೆ ಸಂಚರಿಸುತ್ತಿರುತ್ತದೆ. ಎರದೆಲೆಯಂತೆ ಒಳಗೊಂದು ಹೊರಗೊಂದಾಗಿ ವಿಚಾರ ಮಾಡುವುದರಿಂದ ತನ್ನ ದು:ಖ - ಕಷ್ಟಕ್ಕೆ ತಾನೇ ಬಲಿಯಾಗುತ್ತಾನೆ. ಅಷ್ಟೆ ಅಲ್ಲ ತನ್ನ

ಮನಸ್ಸಿನಿಂದ ತಾಮಸದಿಂದ ತಾನೇ ಅಂಧಕಾರವನ್ನು ನಿರ್ಮಿಸಿಕೊಳ್ಳುತ್ತಾನೆ. ಆದ್ದರಿಂದ ಮನಸ್ಸಿನ ಮರಮವನ್ನು ತಿಳಿದು ಅತೀತವಾಗಲು ಯಾವಾಗಲು ಶ್ರಮಿಸಬೇಕು. ಆದ್ದರಿಂದ ಸಾಧು - ಸಜ್ಜನರ ಸಹವಾಸ ಮಾಡಿ - ಅನುಭವಿಸಿದ ವಿಚಾರಗಳನ್ನು ತಿಳಿದುಕೊಂಡು ಸಾಗಬೇಕು.

ಸಮಾಜಕ್ಕೆ ಒಳ್ಳೆಯದಾಗಲಿ ಅಥವಾ ವೈಯಕ್ತಿಕ ಬೆಳವಣಿಗೆಗಾಗಲಿ ಇಂತಹ ಅಚಲ ಮನಸ್ಸು ನಿಷ್ಠೆ ಪ್ರಮುಖವಾದದು. ಪರಿಶೀಲಿಸಿ ನಿರ್ಧರಿಸಬೇಕು. ಸತ್ಯದಕಡೆ ಅವಲಂಬಿತನಾಗಿ ಎಷ್ಟೇ ಕಷ್ಟ ಒದಗಿದರೂ ಹಿಂಜರಿಯದೇ ಸತ್ಯದಿಂದ ಆ ದಾರಿಯಲ್ಲಿ ಪ್ರವೇಶಿಸಬೇಕು. ಅಲ್ಲದೆ ನೈತಿಕ ಆಚಾರಣೆಗಳನ್ನು ಧೃಡವಾಗಿ ಬೆಳವಣಿಗೆಯುತ್ತಾ ಒಯ್ಯುವುದೇ ಭಕ್ತಸ್ಥಲದ ಪರಮ ಗುರಿಯಾಗಿದೆ. ಅದಕ್ಕೆ ಶರಣರು ತತ್ವನಿಷ್ಟೆಯನ್ನು ಪಾಲಿಸಿಕೊಂಡು ಹೋಗುವರಿಗೆ ಕಿವಿ ಮಾತು ಹೇಳುತ್ತಾರೆ.

> ಶಿವಭಕ್ತರ ನಡೆ ಶುದ್ಧ, ನುಡಿ ಶುದ್ಧ, ಶಿವಭಕ್ತರ ನೋಟ ಶುದ್ಧ ಮಾಟ ಶುದ್ಧ
> ಶಿವಭಕ್ತರ ನೆನಹು ಶುದ್ಧ, ಅನುಭಾವ ಶುದ್ಧ,
> ಶಿವಭಕ್ತರ ಕಾಯ ಶುದ್ಧ ಪ್ರಾಣ ಶುದ್ಧ, ಇದು ಕಾರಣ
> ಶಿವಭಕ್ತನೇ ಶಿವನೆಂದು ನಂಬುವುದು, ನಂಬಿದವರು
> ಶಿವನಪ್ಪುದು ತಪ್ಪದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ!!(ಅವರೇ:೧೪೪)

ಹೀಗೆ ಶರಣರು ಷಟಸ್ಥಲದ ಸಾಧಕನಿಗೆ ಹೇಳುತ್ತಾರೆ. ತತ್ವಕ್ಕೆ ತಲೆಬಾಗಿ ನಡೆಯುತ್ತಿದ್ದಂತೆ ಸದ್ಭಕ್ತಿ ದೃಢಪಟ್ಟು ನಿಷ್ಠಾಭಕ್ತಿಯಾಗಿಯೂ ಪರಿಣಮಿಸುತ್ತದೆ. ಈ ನಿಷ್ಠಭಕ್ತಿಯ ದೆಸೆಯಿಂದ ವೀರವೃತಿಯಾಗಿ ಪ್ರಾಣಹೋದರೂ ವೃತವನ್ನು ಬಿಡಲಾರದವನ್ನಾಗುತ್ತಾನೆ. ಹೀಗೆ ಮುಂದೆ ಸಾಗುತ್ತ ಎಂದ ಮೆಟ್ಟಲೇ ಮಹೇಶ್ವರ ಸ್ಥಲಕ್ಕೆ ಹೋಗುತ್ತಾನೆ. ಅದಕ್ಕೆ ಇವುಗಳಿಗೆ ಸ್ಥಲ ಎಂದು ಕರೆಯುತ್ತಾರೆ.

**೨.೨. ಮಹೇಶ್ವರ ಸ್ಥಲ :** "ಪರಸ್ತ್ರೀ ಪರಧನದಾಸೆಯ ಬಿಟ್ಟು ಶುದ್ಧವಾಗಿ ಲಿಂಗನಿಷ್ಠೆಯುಳ್ಳತನು ಮಹೇಶ್ವರಸ್ಥಲ ನೋಡಾ ಆ ಪ್ರಮಾಣ ಕೂಡಲ ಸಂಗಮದೇವ"(ಶಾಸ್ತ್ರಿ ತೋಟಪ್ಪ ಕೈಪಿಡಿ:೧೬೧). ಭಕ್ತಸ್ಥಲದ ಆಚಾರ-ವಿಚಾರಗಳು ಮನಸ್ಸಿನಲ್ಲಿ ಧೃಡಪಟ್ಟಾಗ ಲಿಂಗಪೂಜೆಯಲ್ಲಿ ನಿಷ್ಠೆಯು ಬೆಳೆಯುವುದು ನಂತರ ಪರಸ್ತ್ರೀ, ಪರಧನ ಇಷ್ಟಪಡುವಲ್ಲಿ ಅಷ್ಟೆ ಅಲ್ಲ ಕನಸಿನಲ್ಲು ನೆನಸಬಾರದು. ಇದರಿಂದ ಸದಾ ಶಿವಪುಜೆ ಶಿವಭಜನೆ, ಶಿವ ಪುರಾಣ ಶ್ರವಣ ಸೇವಾನುಭವಗೋಷ್ಟಿ, ಸಜ್ಜನರ ಸಹವಾಸದಲ್ಲಿ ಸತ್‌ಶುದ್ಧ ಕ್ರಿಯೆಗಳಲ್ಲಿ

ತೊಡಗಬೇಕು. ಇಂತಹ ಸ್ಥಿತಿಯನ್ನು ನಿರ್ಮಾಣ ಮಾಡಿಸಿ ನಡೆಸುವುದೇ ಮಹೇಶ್ವರಸ್ಥಲ.

"ನಿಷ್ಠೆ ನೆಲೆಗೊಳ್ಳಬೇಕು ಗುರುಭಕ್ತಿ ಮಾಡುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಲಿಂಗಪೂಜೆ ಮಾಡುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಜಂಗಮ ವನರ್ಜಿಸುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಪಾದೋದಕ ಪ್ರಸಾದವ ಕೊಂಬಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ನಮ್ಮ ಅಖಂಡೇಶ್ವರನ ಒಲಿಸುವಲ್ಲಿ"

ಇಲ್ಲಿ ಶರಣರು ನಿಷ್ಠೆಭಕ್ತಿಗೆ ತುಂಬ ಮಹತ್ವ ಕೊಟ್ಟಿರುವುದು ಕಾಣುತ್ತೇವೆ. ಏಕೆ? ನಿಷ್ಠೆ ಇಷ್ಟು ಒತ್ತಿ ಹೇಳಬೇಕಾದರೆ ನಿಷ್ಠೆ ಎಂತಹ ಶಕ್ತಿಯಾಗಿದೆ ಎಂಬುದನ್ನು ಅರಿಯಬೇಕು. ಏಕೆಂದರೆ ಮನುಷ್ಯ ಸ್ವಾಭಾವವು ಚಂಚಲವಾದದ್ದು. ಮೊದಲಿದ್ದ ಮನಸ್ಸು ಉತ್ಸಾಹ, ಶ್ರದ್ಧೆಗಳು ಬರಬರುತ್ತಾ ಕಣ್ಮರೆಯಾಗಿ ಕೊನೆ ಹಂತದೊಳಗೆ ಆದೃಶ್ಯವೇ ಆಗಬಹುದೆಂದು ಇಷ್ಟು ಒತ್ತು ಕೊಟ್ಟ ಹೇಳಿದ್ದಾರೆ. ಅದಕ್ಕೆ ಮಾಡವ ಕ್ರಿಯೊಳೊಳಗಾಗಿ ಗುರು - ಲಿಂಗ, ಜಂಗಮ, ಪಾದೋದಕ ನಿಷ್ಠೆಯಿಂದ ನಡೆದುಕೊಂಡು ಪರಮಾತ್ಮನನ್ನು ಪಡೆಯುವುದಾಗಿದೆ.

**೨.೩. ಪ್ರಸಾದಿಸ್ಥಲ :** ಇಲ್ಲಿ ಸಾಧಕನ ಅಂತರಂಗ ಶಾಂತಿಯುತವಾಗಿ ಜ್ಞಾನೋದಯವಾಗುವುದರಿಂದ ಪ್ರತಿಯೊಂದರಲ್ಲಿ ಶಿವನನ್ನು ಕಾಣುವ ಪ್ರವೃತ್ತಿ, ಎಲ್ಲವು ಶಿವನ ಕಾರ್ಯಗಳನ್ನಾಗಿ ತಿಳಿಯುವ ಬುದ್ದಿ, ಎಲ್ಲವು ಶಿವನ ಮೂಲಕ ಬರುವುದು ಶಿವನ ಪ್ರಸಾದ ಎಂದು ತಿಳಿಯುವ ಜ್ಞಾನ ಈ ಪ್ರಸಾದಿಸ್ಥಲದಲ್ಲಿ ಮಾಡುತ್ತದೆ. ಮತ್ತು ತಾನು ಇಡುವ - ಉಡುವ ತೊಡುವ, ಭೋಗಿಸುವ ಮುಂತಾದವು ಶಿವನ ಕೃಪೆಯಿಂದ ಬಂದವುಗಳು ಎಂದು ತನ್ನ ಕಣ್ಣು - ಮೂಗು - ಕಿವಿ - ನಾಲಿಗೆ ಪ್ರತಿಯೊಂದು ದೇಹದ ಅವಯಗಳು ಆ ಪರಶಿವನೆ ಮೂಡಿಸುತ್ತಿದ್ದಾನೆಂದು ಅರಿಯುವುದು, ಶಿವಸ್ವರಣೆಯಿಲ್ಲದೆ ಶಿವನಿಗೆ ಸಮರ್ಪಿಸದೆ ಯಾವ ಅವಯವಗಳಿಂದ ಯಾವುದನ್ನು ಅನುಭವಿಸುವುದಿಲ್ಲವೆಂದ ವಿಶ್ವಾಸ ಉಂಟಾಗುವ ಲಕ್ಷಣವೇ ಪ್ರಸಾಧಿಸ್ಥಲ.

ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬುದು. ಅದು ಲಿಂಗಾರ್ಪಿತವೇ? ಅಲ್ಲ. ಅರ್ಪಿತವ ಮಾಡದೆ ಅನರ್ಪಿತವ ಹೊನ್ನದೆ ಅರ್ಪಿಸಬೇಕು. ಅರ್ಪಿಸುವ ಈ ಭೇಧವಿಲ್ಲದನ್ನಕ್ಕ ಶರಣನೆನಿಸಬಾರದು ಕೂಡಲ ಚೆನ್ನಸಂಗಯ್ಯಾ, ಶರಣರು ಹೇಳಿದಂತೆ. ಅಂದರೆ ಇಲ್ಲಿ ನಾನು ಮೊದಲು ಅನುಭವಿಸಿ ಅನಂತರ ಲಿಂಗಕ್ಕೆ ಅರ್ಪಿತವೆಂದರೆ ಅದು ಅರ್ಪಿತವೇ? ಯಾವ ಅರ್ಪಿತ, ಯಾರಿಗೆ ಪ್ರಸಾದ ಮೊದಲು ಅನುಭವಿಸುವುದು ಲಿಂಗವೋ ಅಥವಾ ನೀನೋ ಏಕೆಂದರೆ ಸಕಲೇಂದ್ರಿಯಗಳಲ್ಲಿ ಕುಳಿತಿರುವ ಲಿಂಗದೇವನು

ಮೊದಲು ತಾನು ಸವಿದು ನಿನಗೆ ಪ್ರಸಾದವನ್ನು ಕೊಡುವಲ್ಲಿ ಅದಕ್ಕೆ ನೀನು ಲಿಂಗದೊಳು ತಿಳಿ. ಇದರಿಂದ ತಿಳಿಯುವುದೇನೆಂದರೆ ಸಂಪೂರ್ಣವು ಆ ದೇವರ ಪ್ರಸಾದವೇ ಹೊರತು ಅವನಿಗೆ ಅನಿರ್ದಿತ ವೆಂಬುದು, ಯಾವುದೂ ಇಲ್ಲವೇ ಇಲ್ಲ ಎಂದು ಕಂಡುಕೊಳ್ಳಬಹುದು. ಅದಕ್ಕಾಗಿ ನಿಜವಾದ ಪ್ರಸಾದಿ ಯಾವುದು ಇಷ್ಟಪಡಬೇಕಿಲ್ಲ. ನಿಜವಾದ ಪ್ರಸಾದಿ ಲಿಂಗ ಪ್ರಸಾದವನ್ನೇ ಸೇವಿಸುತ್ತಿದ್ದೇನೆ ಎಂದು ತಿಳಿದು ಕೊಳ್ಳುತ್ತಾನೆ. ಆದ್ದರಿಂದ ಸಕಲ ಪದಾರ್ಥಗಳೆಲ್ಲ ತಾವಾಗಿಯೋ ಲಿಂಗಾರ್ಪಿತವಾಗುತ್ತವೆ. ಹೂ, ಹಣ್ಣು, ಕಾಯಿ ಇವುಗಳು ತಂದು ಲಿಂಗದೇವನಿಗೆ ಅರ್ಪಿತಮಾಡವ ಅವಶ್ಯಕತೆಯು, ಅವು ಎಲ್ಲಿಯಿರುತ ವೆಯೋ ಅಲ್ಲಿಂದಲೇ ಲಿಂಗಕ್ಕೆ ಅರ್ಪಿತಗಳಾಗುತ್ತಿವೆ. ಅಂದರೆ ಸಕಲ ಕರ್ಮೇಂದ್ರಿಯಗಳೂ, ಜ್ಞಾನೇಂದ್ರಿಯಗಳೂ ಲಿಂಗದೇವನ ಅಧಿನವುಗಳುಯಾಗಿದ್ದರಿಂದ ನನ್ನದೇನು ಎಂಬ ಪ್ರಶ್ನೆ ಬರುತ್ತದೆ. ಹೀಗಾಗಿ ಪ್ರಸಾದಿಗೆ ತನ್ನದೆಂಬ ಅಹಂಕಾರ ಹೋಗುತ್ತದೆ. ಆಗ ಅವನಲ್ಲಿ ವಿಶಾಲ ಭಾವನೆ ಹುಟ್ಟಿ ಜಗಭರಿತನಾಗುತ್ತಾನೆ. ಹೀಗೆ ಪ್ರಸಾದಿ ಅವಧಾನ ಭಕ್ತಿಯನ್ನು ಒಲಿಸುತ್ತಾ ಪಂಚಜ್ಞಾನೇಂದ್ರಿಯ ಗಳನ್ನು ನಿವೃತ್ತಿ ಹೊಂದಿಸಿ ಸರ್ವಾಂಗ ಲಿಂಗತತ್ವದಲ್ಲಿ ಅಡಗಿ ನಿರಹಂಕಾರಹಸ್ತದಿಂದ ಇಚ್ಛಾಶಕ್ತಿಯಿಂದ ಶಿವಲಿಂಗವನ್ನು ಪೂಜಿಸುತ್ತಾನೆ. ಇದರಿಂದ ಅಂತರಂಗ ಚಿರಶಾಂತಿಯನ್ನು ಪಡೆದು ದೈವಗುಣವಾದ ಪ್ರೇಮವನ್ನು ಸರ್ವರ ಮೇಲೂ ಬೀರುತ್ತಾನೆ. ಮುಂದೆ ಪಂಚವಾಯುಗಳನ್ನು ನಿವೃತ್ತಗೊಳಿಸಿ ಶುಚಿಯಾಗಿ ಅನುಭವ ಭಕ್ತಿಯನ್ನು ತುಂಬಿ ತುಳುಕುತ್ತದೆ. ಅದು ಸ್ವಂತಧ್ಯಾನದಿಂದ ಯೋಗ ಸಮಾಧಿಯಿಂದ ಕೂಡಬೇಕು. ಹೀಗೆ ಮುಂದೆ ಸಾಗಿದಂತೆ ಬರುವ ಸ್ಥಲವೇ ಪ್ರಾಣ ಲಿಂಗಸ್ಥಲ.

**೨.೪. ಪ್ರಾಣಲಿಂಗ ಸ್ಥಲ :** ತನ್ನ ಪ್ರಾಣದ ಮೇಲೆ ತನಗೆ ಎಷ್ಟು ಜೀವ ಹೊಂದಿರುತ್ತಾನೋ ಅಷ್ಟೇ ಲಿಂಗದ ಮೇಲೆ ಪ್ರೇಮವನ್ನಿಡುವುದು. ಎರಡರಲ್ಲಿ ಭೇದ ಮಾಡದೆ ಲಿಂಗದೊಳಗೆ ಭಕ್ತಿಯನ್ನಿಟ್ಟಿರು ವುದು. ಎಷ್ಟೇ ಕಷ್ಟ-ಸುಖ ಒದಗಿ ಬಂದರೂ ಅವು ಎಲ್ಲವೂ ಆ ಪರಮಾತ್ಮನಿಂದಲೇ ಬಂದವುಗಳೆಂದು ತಿಳಿದು ಅವುಗಳಿಗಾಗಿ ಹಿಗ್ಗದೆ - ತಗ್ಗದೆ ಇರುವುದು ಹೀಗೆ ಲಿಂಗದ ಮೇಲೆ ನಿಷ್ಟೆಯಿಂದ ನಡೆದುಕೊಂಡು ಸಾಗುವವನೇ ಪ್ರಾಣಲಿಂಗಿ ಎಂದು ಕರೆದುಕೊಳ್ಳುತ್ತಾನೆ. ಈ ಸ್ಥಲದಿಂದ ಜ್ಞಾನ ಪ್ರಧಾನವಾಗಿ ಕರ್ಮ ಮಾಯವಾಗುತ್ತದೆ. ಇಲ್ಲಿಯವರೆಗೆ ದೇಹ ಮನಸ್ಸುಗಳ ಶಿಕ್ಷಣವಾಗಿತ್ತು ಹೇಗೆ ಎಂದರೆ ಸುತ್ತು ಸುಳಿಯುವ ಮನವನ್ನು ಒಂದು ಕಡೆಗೆ ತಂದು ಹೊರಗಿನ ದೇವರು ಒಳಗಿರುವನೆಂದು ತೋರಿಸಿಕೊಟ್ಟಿರುವ ಕಾರಣದಿಂದ ಆತ್ಮಸ್ವರೂಪ ಜ್ಞಾನವಾಗುತ್ತದೆ.

"ಸುಗುಣವೇ ಲಿಂಗ ಪ್ರಾಣಿಯಯ್ಯಾ, ದುರ್ಗುಣವೇ ವಾಯುಪ್ರಾಣಿಯಯ್ಯಾ
ಸಗುಣ ನಿರ್ಗುಣ ಎಂಬುಭಯವನತಿಗಳೆದು ಸುಖ ದು:ಖಾದಿಗಳ
ಸಮಾನ ಗಂಡು, ಹಾಸ್ಯ ವಿಸ್ಮಯ, ವಿರಹ, ಕರಣ, ಹೇಸಿಕೆ, ಇಂತೀ
ಪ್ರಾಣದ ವಿಷಯ ಭ್ರಾಂತಿಗಳನತಿಗಳೆಗು ಪ್ರಾಣದ ಪೂರ್ವಾಶ್ರಯವನಳಿದು
ಲಿಂಗದ ನೆನಹು ಸಂಬಂಧಿಸಿ, ಲಿಂಗವೇ ಪ್ರಾಣವಾಗಿರಬಲ್ಲಡೆ
ಪ್ರಾಣಲಿಂಗಸ್ಥಲವೆಂಚಿನಯ್ಯಾ ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ"

(ಎಂ.ಆರ್.ಶ್ರೀನಿವಾಸಮೂರ್ತಿ:೧೯೬೦:೧೫೬)

ಈ ವಚನದಲ್ಲಿ ಪ್ರಾಣಲಿಂಗಿಯ ಸ್ವರೂಪವನ್ನು ಕಂಡುಕೊಳ್ಳಬಹುದು. ಇಲ್ಲಿ ಸಂಪೂರ್ಣನಾಗಿ ಸಾಧಕನು ಲಿಂಗದ ಬೆಳಕನ್ನು ನೋಡುವವನಾಗುತ್ತಾನೆ. ಇಷ್ಟಲಿಂಗ ಪ್ರಾಣಲಿಂಗಗಳೆರಡೂ ಒಂದಾಗುವುದೇ ಈ ಸ್ಥಲದ ಪರಮ ಗುರಿ. ಅದಕ್ಕೆ ಶರಣರು,

"ಅಂಗದ ಮೇಲೆ ಆಯಾತವಾದುದೇ ಇಷ್ಟಲಿಂಗ
ಇಷ್ಟಲಿಂಗವಿಡಿದು ಪ್ರಾಣಲಿಂಗ ಸ್ವಾಯತ
ಪ್ರಾಣಲಿಂಗ ಉದಿಸಿದಲ್ಲದೆ ಇಷ್ಟಲಿಂಗ ಕಾಣಬಾರದು,
ಈ ಭೇದವ ಭೀದಿಸಬಲ್ಲದೆ ಕೂಡಲಚನ್ನಸಂಗಯ್ಯಾನಲ್ಲಿ ಲಿಂಗೈಕ್ಯವು"

ಅಂದರೆ ಅಂಗದ ಮೇಲೆ ಕುರುಹಾಗಿಟ್ಟ ಇಷ್ಟಲಿಂಗವನ್ನು ಅನುಸಂಧಾನ ಮಾಡುತ್ತಾ ಅಲ್ಲಿ ಆಯಾತವಾದುದನ್ನು ಸ್ವಾಯತ ಮಾಡಿಕೊಳ್ಳಬೇಕು. ಅದಕ್ಕೆ ಸಹಾಯಕವಾದ ಅಂತರಂಗದ ಯೋಗಸಾಧನೆಯನ್ನು ಪ್ರಾಣಲಿಂಗಿ ಸ್ಥಲದಲ್ಲಿ ಕಾಣುತ್ತೇವೆ ಎಂದು ಚನ್ನಬಸವಣ್ಣನವರ ಮತ (ತಿಪ್ಪೇರುದ್ರಸ್ವಾಮಿ:೧೯೭೬:೧೬೪). ಪ್ರಾಣಲಿಂಗಿ ಸ್ಥಳದಲ್ಲಿ ಭಕ್ತನು ತನ್ನ ಅಂತ ಶಕ್ತಿಯ ಸ್ವರೂಪ ವನ್ನು ತನ್ನದಾಗಿಸಿಕೊಳ್ಳುತ್ತಾನೆ. ಇಷ್ಟಲಿಂಗೋಪಾಸನೆ ಒಳಹೊರಗನ್ನು ಮುಟ್ಟಿ ಸರ್ವಾಂಗಲಿಂಗವಾಗಿ ಪರಿಣಮಿಸುತ್ತದೆ. ಅಲ್ಲಮ ಪ್ರಭುರವರ ಮಾತಿನಲ್ಲಿ ನೋಡುವುದಾದರೆ ಪ್ರಾಣಲಿಂಗ ಪೂಜೆ ವಿರಾಟ್ ವೈಭವವನ್ನು ಕಂಡುಕೊಳ್ಳುತ್ತೇವೆ.

"ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ,
ಆಕಾಶ ಗಂಗೆಯಲ್ಲಿ ಮಜ್ಜನ,
ಹೂವಿಲ್ಲದ ಪರಿಮಳದ ಪೂಜೆ,
ಹೃದಯ ಕಮಲದಲ್ಲಿ ಶಿವ ಶಿವಾ ಎಂಬ ಶಬ್ದ
ಇದು ಅದ್ವೈತ ಕಾಣಾ ಗುಹೇಶ್ವರ"(ಎಲ್.ಬಸವರಾಜು:೧೯೬೦:೧೦೨)

ಅಂದರೆ ಪ್ರಾಣಲಿಂಗ ಪೂಜೆಯಿಂದ ಶಿವಯೋಗ ಸಮಾಧಿಯ ಸುಖ ಲಭಿಸುತ್ತದೆ.

ಏಕೆಂದರೆ ಪ್ರಾಣಲಿಂಗಿಯಲ್ಲಿ ಅನುಭಾವ ಪ್ರಧಾನವಾಗಿ ಪರಿಣಮಿಸುತ್ತದೆ. ಅನುಭಾವ ಭಕ್ತಿಯಿಂದ ಶಿವಯೋಗ ದಲ್ಲಿ ಬೆರೆತು ಅನುಪಮ ಸುಖಿಯಾಗುತ್ತಾನೆ. ಇಲ್ಲಿ ದುರ್ಭಾವ ಪ್ರಕೃತಿಯಳಿದು ಪ್ರಶಾಂತವಾದ ಮನಸ್ಸು ದೊರೆಯುತ್ತದೆ. ಸುಗುಣಗಳನ್ನು ಗಟ್ಟಿಗೊಳಿಸಿ ದುರ್ಗುಣಗಳನ್ನು ಅಳಿದುಹಾಕಿ ಪ್ರಾಣದ ಪೂರ್ವಾಶ್ರಯರ್ವಳಿದು ಲಿಂಗದ ನೆನಹು ಸಂಬಂದಿಸಿ ಲಿಂಗವೇ ಪ್ರಾಣವಾಗಿ ಪ್ರಾಣವೇ ಲಿಂಗವಾಗಿ ಪ್ರಾಣಲಿಂಗಿ ಪರಿಣಮಿಸುವನು. ಇದರಿಂದ ಇದಕ್ಕೆ ಅನುಭವ ಭಕ್ತಿಯ ಸ್ಥಲವೆಂದು ಕರೆಯು ವುದುಂಟು. ಇದು ಒಂದು ಕಡೆ ಶೃದ್ಧೆ ನಿಷ್ಠೆಗಳ ತಳಹದಿಯ ಮೇಲೆ ನಿಂತು, ಇನ್ನೊಂದು ಕಡೆ ಶರಣ ಐಕ್ಯಸ್ಥಲಗಳ ಆನಂದ ಷಟ್‌ಸ್ಥಲಮಾರ್ಗದಲ್ಲಿ ಕೇಂದ್ರ ಬಿಂದುವಾಗಿದೆ. "ಲಿಂಗಬಾಹ್ಯ ಪರಂ ನಾಸ್ತಿ" ಎಂಬ ಮನಸ್ಸು ಪಡೆಯುತ್ತಾನೆ ಅಥವಾ ಭಾವನೆಗಳು ಹೊಂದುತ್ತಾನೆ ಇದಕ್ಕೆ ಶರಣಸ್ಥಲವೆಂದು ಕರೆಯುತ್ತಾರೆ.

**೪.೫. ಶರಣಸ್ಥಲ :** "ಲಿಂಗವೇ ಪತಿಯಾಗಿ ತಾನು ಸತಿಯೆಂಬ ಭಾವದಲ್ಲಿ ಆಚರಿಸಿ ಪಂಚೇಂದ್ರಿಯ ಸುಖಗಳ ಬಯಸದಿಹುದೀಗ ಶರಣಸ್ಥಲ ನೋಡಾ ಆ ಪ್ರಮಾಣ ಕೂಡಲ ಸಂಗಮದೇವ" ಎಂದು ಬಸವಣ್ಣನವರು ಶರಣಸ್ಥಲ ಕುರಿತು ಹೇಳುತ್ತಾರೆ. ಭಕ್ತನು ಲಿಂಗದೇವನ ಹೆಂಡತಿಯೆಂದೂ, ತನ್ನ ಗಂಡನೆಂದೂ ನಂಬಿಕೊಂಡು ನಡೆದುಕೊಳ್ಳುವವನೋ ದೇಹ ಸಂಸಾರಾದಿ ಮೋಹಗಳನ್ನು ಬಿಟ್ಟವನು. ಪಂಚೇಂದ್ರಿಯ ಭೋಗದಿಂದ ದೂರ ಸರಿದವನು, ಸರ್ವವೂ ಲಿಂಗವೆಂದು ತಿಳಿದು ಶಿವನೇಗತಿಯೆಂದು ಶಿವನಿಗೆ ಶರಣಾಗತಿಯಾಗಿ ನಡೆದುಕೊಳ್ಳುತ್ತಿರುವವನೋ ಶರಣನಾಗುತ್ತಾನೆ. ಶರಣ ಎಂದರೆ ಶಿವನಿಗೆ ಶರಣು ಹೋದವನು ಎಂಬ ಸಮನಾರ್ಥದಲ್ಲಿಯೂ ಬಳಸಿರುವುದುಂಟು. ಆದರೆ ಶರಣಸ್ಥಲದಲ್ಲಿ ಇದಕ್ಕ ಕೊಟ್ಟಿರುವ ಅರ್ಥವೇ ಬೇರೆ ಹೀಗೆ ಎಂದರೆ ಮೊದಲು ನಾಲ್ಕು ಹಂತಗಳನ್ನು ದಾಟಿ ಶಿವಯೋಗದ ತುತ್ತ ತುದಿಯಲ್ಲಿ ನಿಂತ ಎಂಬ ಅನುಭವಿ ಎಂಬ ಅರ್ಥದಲ್ಲಿ ಕಂಡು ಬರುತ್ತದೆ. ಅದಕ್ಕೆ ಚನ್ನಬಸವಣ್ಣನವರು ಶರಣನ ಲಕ್ಷಣವನ್ನು ಹೇಳುತ್ತಾರೆ.

"ದೇಹಿಯಲ್ಲ ನಿರ್ದೇಹಿಯಲ್ಲ, ಬೋಧಕನಲ್ಲ, ನಿರ್ಬೋಧಕನಲ್ಲ
ಕಾಮಿಯಲ್ಲ, ನಿಃಕಾಮಿಯಲ್ಲ; ಆಸೆಮಿಡಿದು ಬಂದ ಅನಿಮಿಷನಲ್ಲ
ಅವಗುಣವಿಲ್ಲದ ನಿರ್ಗುಣಿ ನೋಡಯ್ಯಾ ಎಂದು ಹೇಳಿದ್ದಾರೆ".

ಇಹಪರನಲ್ಲ, ಪರಾಪರನಲ್ಲ, ಕಾಮಿಸಿ ಕಾಮಿಯಲ್ಲ, ಭಾವಿಸಿ ಭಾವಿಯಲ್ಲ. ಅನಾಮಯ ನಿರಂಜನಾಗುತ್ತಾನೆ. ಭಾವಲಿಂಗ ಭರಿತನಾಗಿ ಆನಂದ ಮತ್ತು ಸಮರಸ ಭಕ್ತಿಗಳಿಂದ

ಕೂಡಿರುತ್ತಾನೆ. ಜಗತ್ತಿನಲ್ಲಿ ಜ್ಞಾನಮುಖದಿಂದ ವರ್ತಿಸುತ್ತಾನೆ. ಸಂಶಯರಹಿತವಾಗಿ, ನಿರ್ಭೀತನಾಗಿ, ಆತ್ಮವಿಶ್ವಾಸಿ ಯನ್ನಾಗಿ, ಪ್ರಪಂಚವನ್ನು ಇದೆಯೋ ಇಲ್ಲವೋ ಎಂಬುವ ರೀತಿಯೊಳಗೆ ಕಾಯವನ್ನು ಮಾಡಿಕೊಂಡು ಹೋಗುವ ನಿರಾಭಾರಿಯಾಗುತ್ತಾನೆ. ಹೀಗಾಗಿ ತಾನು ಕಂಡ ಬೆಳಕನ್ನು ಇತರರಿಗೂ ತಿಳಿಸುವ ಸಾಹಸ ಸಾಧಕನಲ್ಲಿ ಇರಬೇಕು. ಇಲ್ಲವಾದರೆ ತನ್ನಷ್ಟಕ್ಕೆ ತಾನೇ ಉದ್ಧಾರವಮಾಡಿಕೊಳ್ಳು ವುದಾದರೆ ಅದನ್ನು ಶರಣ ಸ್ಥಲದ ಸಾಧಕನಾಗುವುದಿಲ್ಲ. ಹೀಗಾಗಿ ತನ್ನ ಹೀತವೇ ಪರರ ಹಿತವನ್ನಾಗಿಸಿಕೊಂಡು ಸಾಗಬೇಕಾಗಿದೆ. ಅದಕ್ಕೆ ಅಲ್ಲಮರು,

"ಅಂಗ ಲಿಂಗದಲ್ಲಿ ತರಹರವಾಗಿ
ಮನ, ಜ್ಞಾನದಲ್ಲಿ ತರಹರವಾಗಿ
ಭಾವ ನಿರ್ಭಾವನದಲ್ಲಿ ತರಹರವಾಗಿ
ಸಮತ ಶಾಂತಿಯಲ್ಲಿ ತರಹರವಾಗಿ
ಇರಬಲ್ಲಾತನೇ ಅಚ್ಚ ಶರಣ ಗುಹೇಶ್ವರಾ"(ಅವರೇ:೧೬೭)

ಎಂದು ಶರಣನ ಭಾವನೆಯ ಕುರಿತು ತುಂಬ ಚೆನ್ನಾಗಿ ಹೇಳಿದ್ದಾರೆ. ಅಂಗದ ಮೇಲೆ ಲಿಂಗಕಟ್ಟಿಸಿಕೊಂಡ ಶರಣ ಅಂಗವೆಲ್ಲಾ ಲಿಂಗವೇ, ಆತನ ಮನವೆಲ್ಲ ಅವಿರಳ ಜ್ಞಾನವೇ, ಲಿಂಗಭರಿತ ಶರಣನ ಅಪೂರ್ವಕಾಂತಿ ಒಳಗೆ-ಹೊರಗೆ ಎತ್ತನೋಡಿದತ್ತ ಮಿಂಚುತ್ತದೆ. ಭಾವವು ಅಡಗಿ ಹೋಗಿ ನಿರ್ಭಾವವಾಗಿ ಸಮತೆಯಲ್ಲಿ ಕೂಡಿ, ಶಾಂತಿಯಲ್ಲಿ ತೆಲುತ್ತದೆ. ಹೀಗೆ ಅತ್ಯಂತ ಅನುಭವದಲ್ಲಿ ಮೈಮರೆಯುತ್ತಾನೆ. ಅಲ್ಲಿಂದ ಸಮಾಜದ ಮಗುವಾಗಿ ಬೆಳೆದು ಅನುಭವದ ಬೆಳಕು ಸುತ್ತಲ್ಲಿನ ಸಮಾಜದ ಮೇಲೆ ಬೀರುವ ಪ್ರಯಾಸ ಮಾಡುತ್ತಾನೆ. ಶರಣನು ನಡೆದುದೆಲ್ಲ ಪೂಜೆ, ನುಡಿದುದೆಲ್ಲ ಮಂತ್ರ, ಮಾಡುವುದೆಲ್ಲ ಕಾಯಕವೇ ಕೈಲಾಸವಾಗಿ ಕಂಡುಕೊಳ್ಳುತ್ತಾನೆ. ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯನಾಗಿ ನಿಂತು ದುಡಿಯುತ್ತಾನೆ. ತನ್ನ ದುಡಿಮೆ ತನ್ನದಷ್ಟು ಹಿತಕರವಲ್ಲದೇ ಪರರ ಹಿತಕ್ಕೆಂದು ಭಾವನೆ ತಾಳುತ್ತಾನೆ. ಸಮಾಜದಿಂದ ಮೇಲು ಕೀಳೆಂಬುದನ್ನು ತಳ್ಳಿಹಾಕಲು ಯಾವಾಗಲು ಶ್ರಮಿಸುತ್ತಾನೆ. ವಿಧಿ ನಿಷೇಧಗಳಿಗೆ ಅತೀತವಾಗಿ ಆನಂದಮಯನಾದ ಶರಣ ವಿಶ್ವಮಾನವನ ಮಟ್ಟದಲ್ಲಿ ನಿಂತು ಜಗತ್ತನ್ನು ಕಾಣುತ್ತಾನೆ. ಕಾಯಗುಣ, ಪ್ರಾಣಗುಣ, ಭಾವಗುಣಗಳನ್ನು ಪಡೆದುಕೊಂಡು ಐಕ್ಯಸ್ಥಿತಿಯನ್ನು ಕಾಣುತ್ತಾನೆಂದು ಪ್ರಭುದೇವರು ಹೇಳುತ್ತಾರೆ. ಅಂದರೆ ತನು, ಮನ, ಪ್ರಾಣ, ಭಾವನಾಗಳ ನಿವೃತ್ತಿಯಾದಂತೆಲ್ಲಾ ಗುರು, ಲಿಂಗ, ಜಂಗಮಗಳು ಒಂದಾಗಿ ತನ್ನಲ್ಲಿ ಐಕ್ಯವಾಗುತ್ತವೆ. ಮುಂದಿನ ಹಂತವೇ ಐಕ್ಯಸ್ಥಲವಾಗುತ್ತದೆ.

### ೨.೬. ಐಕ್ಯಸ್ಥಲ :

"ಕ್ಷೀರದೊಳಗಣ ಘೃತದಂತೆ,
ತಿಲದೊಳಗಣ ತೈಲದಂತೆ
ಪುಷ್ಪದೊಳಗಣ ಪರಿಮಳದಂತೆ,
ಉಪ್ಪು ಉದಕವ ಕೂಡಿದಂತೆ
ಮನಲಿಂಗದಲ್ಲಿ ಲೀಯವಾಗಿರುದೀಗ
ಐಕ್ಯಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮದೇವ"

(ಶಾಸ್ತ್ರಿ ತೋಟಪ್ಪ ಕೈಪಿಡಿ:೧೬೨)

ಲಿಂಗದಲ್ಲಿಯೋ ಮನಬೆರೆತು ಹೋಗುವುದೂ, ಸರ್ವ ಜಗತ್ತನ್ನು ಲಿಂಗಮಯವಾಗಿ ನೋಡುವುದು, ಸದಾ ಲಿಂಗವನ್ನೇ ಧ್ಯಾನಿಸುತ್ತಿರುವುದು ಯಾವುದೇ ಕಾರ್ಯ ಮಾಡುವಾಗ ಲಿಂಗಪೂಜೆಯ ಸೇವೆ ಎಂಬ ಭಾವನೆವುಳ್ಳವನಾಗಿರುವುದು ಯಾವರೀತಿಯಾಗಿ ಪುಷ್ಪದೊಳಗೆ ಪರಿಮಳ ವಾಸನೆಯು ಸೇರಿ ಕೊಂಡಿತೆ, ಹಾಲಿನೊಳಗೆ ತುಪ್ಪ ಅಡಕವಾಗಿರುವಂತೆ, ಎಳ್ಳಿನೊಳಗೆ ಎಣ್ಣೆ ಮುಚ್ಚಿಕೊಂಡಂತೆ ಜಗತ್ತೆಂಬ ಲಿಂಗದಲ್ಲಿ ಮನಸ್ಸು ತಲ್ಲೀನವಾಗಿಸಿಕೊಂಡು ನಡೆಯುವನೇ ಐಕ್ಯ ಸ್ಥಲದವರೆಸಿಕೊಳ್ಳತ್ತಾರೆ.

"ತನ್ನ ಬಯಲು ನಿರವಯದೊಳಗಡಗಿತ್ತು
ಮನಬಯಲು ನಿರವಯದೊಳಗಡಗಿತ್ತು
ಭಾವಬಯಲು ನಿರವಯದೊಳಗಡಗಿತ್ತು
ಬಯಲು ಬಯಲು ಚಿರಸಿ ಬಯಲೆ ಆಯಿತ್ತು
ಕೂಡಲ ಸಂಗಮನೆಂಬ
ನುಡಿಯಡಗಿತ್ತು."(ತಿಪ್ಪೇರುದ್ರಸ್ವಾಮಿ:೯೯:೧೭೬).

ಅಂದರೆ ತನು ಮನ ಭಾವಗಳು ಬಯಲಾಗಿ ಬಯಲನ್ನು ಸೇರುತ್ತವೆ ಎಲ್ಲಿ ಕೋನೆಗೆ ಆ ಪರಮಾತ್ಮನ ಅಂದರೆ ಕೂಡಲ ಚನ್ನಸಂಗಯ್ಯಾ ನೆಂಬ ಮಾತಿನಲ್ಲಿ ಲೀನವಾಗುತ್ತವೆ ಎಂದು ಮೇಲಿನ ವಚನ ದಿಂದ ಕಂಡು ಕೊಳ್ಳುತ್ತಾನೆ. ಒಟ್ಟಿನಲ್ಲಿ ದೇವರಲ್ಲಿ ಐಕ್ಯನಾಗುತ್ತಾನೆ. ಅದುವೇ ಐಕ್ಯಸ್ಥಲ.

ಹೀಗೆ ಭಕ್ತ ಸ್ಥಲದಿಂದ ಹಿಡಿದು ಐಕ್ಯ ಸ್ಥಲದವರೆಗೂ ಹಂತ ಹಂತವಾಗಿ ಮೇಲೇರುವ ಸಾಧಕನ ಸಾಧನೆಯ ಪ್ರಮುಖ ಅಂಶಗಳನ್ನು ಗಮನಿಸಿದ್ದೇವೆ. ಇವುಗಳಲ್ಲಿರುವ ಉಪವಿಭಾಗಗಳನ್ನು ವಿವರವಾಗಿ ಇವುಗಳ ಪರಸ್ಪರ ವ್ಯತ್ಯಾಸ ನೋಡಿ ಸಾಧಕನ ಮನೋವಿಕಾಸದ ಕಡೆ ಕರೆದುಕೊಂಡು ಹೋಗಲಾಗಿದೆ.

## ೩. ಅಷ್ಟಾವರಣಗಳು

ವೀರಶೈವರಿಗೆ ಅಷ್ಟಾವರಣಗಳು ಅತ್ಯಾವಶ್ಯಕವಾದವುಗಳು ಅವುಗಳು ನಮ್ಮನ್ನು ಉದ್ಧರಿಸಿ ಸನ್ಮಾರ್ಗಕ್ಕೆ ತಂದು ಮೋಕ್ಷಪದವಿಯನ್ನು ಕೊಡತಕ್ಕಂತವೂ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮತ್ತು ಮಂತ್ರಗಳೆಂಬ ಈ ಎಂಟು ಆವರಣಗಳನ್ನು ಆವರಿಸಿ ಕೊಳ್ಳುವುದೇ ವೀರಶೈವರ ಮುಖ್ಯ ಲಕ್ಷಣವಾಗಿದೆ. ಪ್ರತಿಯೊಂದು ಪರಮಾತ್ಮನ ಸಾಕ್ಷಾತ್ಕಾರ ಗಳಾಗಿವೆ. ಜಗತ್ತಿನ ಯಾವುದೇ ಸಿದ್ಧಾಂತವಾಗಲಿ ವೇದಾಂತವಾಗಲಿ, ನಿರ್ಮೋಹ, ನಿರಹಂಕಾರ, ನಿಷ್ಕಾಮಕರ್ಮ, ಇವುಗಳನ್ನು ತಳಹದಿಯಾಗಿಟ್ಟು, ಸಾಧನೆಯಲ್ಲಿ ಶ್ರದ್ಧೆ ಧ್ಯಾನದಲ್ಲಿ ಏಕಾಗ್ರತೆ ಉಂಟಾಗಬೇಕೆಂದೂ ಚಿತ್ತ ಶುದ್ಧಿಯ ಮೂಲಕ ಭಕ್ತಿ ಜ್ಞಾನಗಳು ವಿಕಾಸವಾಗಬೇಕೆಂದು ಹೇಳುತ್ತವೆ. ಅವುಗಳೇ ವೀರಶೈವರಲ್ಲಿ ಅಷ್ಟಾವರಣಗಳು ಎಂದು ಕರೆಯುತ್ತಾರೆ ಅಷ್ಟೇ ಅಲ್ಲದೆ ಲೌಕಿಕದ ಉಪಹತಿಯ ಬಾಣದೇಟಿನಿಂದ ಸಾಧಕನನ್ನು ರಕ್ಷಿಸುವ ವಜ್ರಕವಚಗಳು. ಪರಮಾತ್ಮನು ಮನುಷ್ಯ ಪ್ರಾಣಿ ಸುಮ್ಮನೆ ಕಂಡು ಕಂಡು ಮಾತುಗಳನ್ನಾಡಿ ಕೆಡುತ್ತಾನೆಂದು ಹೀಗೆ ಮಾಡಿದ್ದಾರೆ. ಈ ಮನುಷ್ಯ ಪ್ರಾಣಿಗೆ ಅಥವ ಜೀವಾತ್ಮನಿಗೆ ಕಾಯದಲ್ಲಿ ಗುರುವಾಗಿ ಜೀವನದಲ್ಲಿ ಲಿಂಗವಾಗಿ, ಪ್ರಾಣದಲ್ಲಿ ಜಂಗಮವಾಗಿ, ಗುರುರೂಪದಿಂದ ಬೋಧೆಯಂ ಮಾಡಿ, ಲಿಂಗರೂಪದಿಂದ ಪೂಜೆಯನ್ನು ಕೈಗೊಂಡು ಜಂಗಮ ರೂಪದಿಂದ ಪಾದೋದಕ ಪ್ರಸದವ ದಯಪಾಲಿಸಿ ಸಾಧಕನು ಐಕ್ಯಸ್ಥಳದಲ್ಲಿ ಬೇಕು ಬೇಡೆನ್ನುವ ಹಂಗನ್ನು ಅಳಿದು ಕರ್ಪೂರದ ಗಿರಿಯನ್ನು ಉರಿತಾಗಿದ್ದಂತೆ ಬೆಳಗಿ ಹಾಗನ್ನು ಅಳಿದು ಕರ್ಪೂರದ ಗಿರಿಯನ್ನು ಊರಿತಾಗಿದಂತೆ ಬೆಳಗಿ ಬಯಲಾಗುತ್ತಾನೆ. ತನ್ನ ದೇಹದ ಪ್ರಸಾದವೇ ಆತನ ತ್ವಕ್ಕಿನಲ್ಲಿ ಭಸ್ಮ ಸಂಬಂಧವ ದೂಡಿ, ತನ್ನ ನೇತ್ರ ಸ್ವರೂಪವಾದ ರುದ್ರಾಕ್ಷಿಗಳನ್ನು ಆತನ ನೇತ್ರಗಳಲ್ಲಿ ಸಂಬಂಧವ ಮಾಡಿ, ತನ್ನ ನಾಮವೆಂಬ ಪಂಚಾಕ್ಷರಿಯ ಮಂತ್ರವನ್ನು ಆತನ ವಾಕ್ಯದಲ್ಲಿ ಸಂಬಂಧವ ಮಾಡಿ ಆತನಿಗೆ ರಕ್ಷೆಯಾಗಿದ್ದಾನೆ. ಅಷ್ಟಾವರಣವನ್ನು ಶರಣರು ಅಳವಡಿಸಿರುವ ಬಗೆಯನ್ನು ಈ ಮಾತುಗಳಲ್ಲಿ ಕಂಡುಕೊಳ್ಳಬಹುದು. ಈ ಅಷ್ಟಾವರಣಗಳು ಬಾಹ್ಯ ಅಷ್ಟಾವರಣಗಳು, ಅಂತರ ಅಷ್ಟಾವರಣಗಳು ಎಂದು ಹೇಳಿರುವದನ್ನೆ ಶರಣರಲ್ಲಿ ಗಮನಿಸಬಹುದು. 'ಭಕ್ತನ ಮನವೇ ಲಿಂಗ', 'ತನ್ಮನದ ಜ್ಞಾನವೇ ಜಂಗಮ', ಆ ಜ್ಞಾನದ ಪರಿಪೂರ್ಣವೇ ಗುರು, ಸದ್ಭಕ್ತನೇ ಶ್ರೇಷ್ಠ, ಆ ಜ್ಞಾನದ ಸಾರವೇ ಪಾದೋದಕ, ಆ ಜ್ಞಾನದ ಪ್ರಕಾರವೇ ವಿಭೂತಿ, ಆ ಮಾಯಾಕರಣಂಗಳ ಮೇಲೆ ಕರೆದ ಜ್ಞಾನ ಸಾರಾಮೃತ ವೃಷ್ಟಿಯೇ, ರುದ್ರಾಕ್ಷಿ. ಆ ಭಕ್ತನ

ನಾಮವೇ ಮಂತ್ರ, ಇಂತಹ ಭಕ್ತನೇ ಪರಬ್ರಹ್ಮವೆಂದು ಶರಣೆಂದವರೇ ಧನ್ಯರು, ನೋಡಾ ಗುರುವೇ ಇಷ್ಟ, ಲಿಂಗವೇ ಪ್ರಾಣ, ಜಂಗಮವೇ ಭಾವ, ಪ್ರಸಾದವೇ ಚಿತ್ಕಾಯ , ಪಾದೋದಕವೇ ಶರಣ, ವಿಭೂತಿಯೇ ಅಂತರಂಗದ ಚಿತ್ಪ್ರಕಾಶ, ರುದ್ರಾಕ್ಷಿಯೇ ಚುತುರ್ದಶೇಂದ್ರಿಯಂಗಳು, ಮಂತ್ರವೇ ಷಟ್ ಪ್ರಕಾರವಾದ ಮಂತ್ರತತ್ವ ಶರಣಂಗಳು ನೋಡಾ ಎಂಬ ಮಾತು ಅವರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಈಗ ಬಾಹ್ಯ ಅಷ್ಟಾವರಣಗಳನ್ನು ಪ್ರಮುಖವಾಗಿ ವಿವರಿಸಲಾಗಿದೆ.

**೩. ೧. ಗುರು :** "ಗುರು ದೇವೂ ಮಹಾದೇವೂ ಗುರುದೇವೂ ಸದಾಶಿವ ಗುರು ಸಾಕ್ಷಾತ ಪರಬ್ರಹ್ಮ ದಶಮಯ ಶ್ರೀಗುರುವೇಯನಮ" ಎಂಬ ಉಕ್ತಿಯಂತೆ ಯವನೋ ಶಿವನೋ ಅವನೇ ಗುರುವು ಯಾವನು ಗುರುವೋ ಅವನೇ ಶಿವನೆಂದು ತಿಳಿಯಬೇಕು. ಜ್ಞಾನಿಯಾದವನು ಅಥವ ಬುದ್ಧಿಜೀವಿಯಾದವನು ಈ ಗುರು ಶಿಷ್ಯರಿಗೆ ಎಂದೂ ಯಾವ ಕಾಲಕ್ಕೂ ಭೇದವಂ ತಿಳಿಯಕೂಡದು ಆದರಿಂದ ಸರ್ವರೂ ಗುರುವನ್ನು ಶಿವನ್ನಾಗಿ ಪೂಜಿಸುವುದುಂಟು. ಸರ್ವ ಸಿದ್ಧಿ ಕಾರ್ಯಗಳಿಗೆ ಗುರುವೇ ಕಾರಣಿಭೂತನಾಗುವನು. ನಮ್ಮ ಏಳಿಗೆಯ ಪ್ರತಿಯೊಂದು ರಂಗಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ನಮಗೆ ಒತ್ತಿ ಒತ್ತಿ ಹೇಳಿ ಈ ಪ್ರಕಾರ ನಡೆಯಬೇಕೆಂದು ಹೇಳುವವನೇ ಗುರು. ಅದಕ್ಕೆ "ಗುರುಭಕ್ತಿ ವಿಹೀನಸ್ಯ ಶಿವಭಕ್ತಿನೌಜಾಯತೇ ತತಶ್ಶಿವೇ ಯಥಾಭಕ್ತಿ ಸ್ತಥಾ ಭಕ್ತಿರ್ಗುರಾವಪಿ" ಅಂದರೆ ಗುರುಭಕ್ತಿ ಇಲ್ಲದವರಿಗೆ ಶಿವಭಕ್ತಿಯು ಸಿಗುವದಿಲ್ಲ, ಗುರುವೇ ಮೋಕ್ಷದ ದಾರಿಯನ್ನು ತೋರಿಸಿ ಭಗವಂತನ ಹತ್ತಿರಕ್ಕೆ ಕಳುಹಿಸುವದರಿಂದ ಗುರುವಿನಲ್ಲಿ ಭಕ್ತಿಯನ್ನಿಡಬೇಕು. ಇದು ನಿಜ ಹೇಳಬೇಕಾದರೆ ಗುರು ಇರಲ್ಲಾರದೇ ಗುರಿ ಸಾಧಿಸಲ್ಲಿಕ್ಕೆ ಸಾಧ್ಯವಿಲ್ಲ. ಎನ್ನುವದಾದರೆ ಗುರುವಿನಲ್ಲಿ ಭಕ್ತಿ ಅವಶ್ಯಕ ಎಂಬುದು ಸತ್ಯ ಎಂದರ್ಥ.ಇದರಿಂದ ವೀರಶೈವಧರ್ಮದಲ್ಲಿ ಗುರುವಿಗೆ ಅತಿ ಮಹತ್ವ ಸ್ಥಾನ ಲಂಭಿಸಿದೆ ಅದಕ್ಕೆ ಶರಣರು ಹೇಳುತ್ತಾರೆ. ಎಲ್ಲಾ ಅಧ್ಯಾತ್ಮಿಕ ಸಾಧನೆಗೂ ಆತನೇ ಮಡಕೆಯ ಮಾಡುವವರೆ ಮಣ್ಣೆ ಮೊದಲು, ತೊಡಿಗೆಯ ಮಾಡುವರೆ ಹೊನ್ನೆ ಮೊದಲು ಶಿವಪಥವನರಿಪೊಡೆ ಗುರುಪಥವೆ ಮೊದಲು ಎಂದು ಬಸವಣ್ಣನವರು ಗುರುವಿನ ಮಹತ್ವ ತಿಳಿಸುತ್ತಾರೆ. ಒಟ್ಟಿನಲ್ಲಿ ಗುರುಗಳು ಲಿಂಗದೀಕ್ಷೆಯನ್ನಿತ್ತು ಸಾಧನೆಯಲ್ಲಿ ತೊಡಗಿಸುವರು ಗುರು.ಗುರುವಿಲ್ಲದೆ ಲಿಂಗವಿಲ್ಲ ಅದಕ್ಕೆ

'ಗುರುವಿಡಿದು ಕುರುಹ ಕಾಣಬೇಕು
ಗುರುವಿಡಿದು ಅರುಹ ಕಾಣಬೇಕು

ಗುರುವಿಡಿದು ಆಚಾರವ ಕಾಣಬೇಕು.'

'ಗುರುಕರುಣೆಯೇ ಸದಾಚಾರ

ಗುರುಕರುನೆಯೇ ಶಿವಾಚಾರ'

ಮುಂದೆ ಗುರು ಹಿಂದೆ ಲಿಂಗ ಅಂಗದಲ್ಲಿ ಆಚಾರವನ್ನು ತೋರುವವನು ಗುರು, ಆಚಾರವೇ ಲಿಂಗವೆಂದರುಹುವವನು ಗುರು. ಪ್ರಾಣದಲ್ಲಿ ಆ ಅರಿವನ್ನು ನೆಲೆಗೋಲಿಸುವನು ಗುರು, ಮಾಂಸ ಪಿಂಡವನ್ನು ಗುರು ಮಂತ್ರ ಪಿಂಡವನ್ನಾಗಿಸುತ್ತಾನೆ. ದೀಕ್ಷೆಯಿಂದ ಹೀಗೆ ಮೇಲಿನ ವಾಕ್ಯಗಳು ಗಮನಿಸಿದರೆ ಪ್ರತಿಯೊಂದು ಗುರು ಕರುಣೆಯಿಂದಲೇ ಸಾಧ್ಯ ಎನ್ನುವದು ಅರಿಯಬೇಕಾಗಿದೆ. ದೀಕ್ಷೆಯನ್ನು ಕೊಟ್ಟು ಜ್ಞಾನೋಪದೇಶ ಮಾಡುವವನೇ ಗುರು ಈ ಗುರುಗಳು ಮಠವನ್ನು ಕಟ್ಟಿಕೊಂಡು ತಮ್ಮ ವಿಚಾರಗಳನ್ನೂ ಪ್ರಚಾರ ಪಡಿಸುವದಕ್ಕಾಗಿ ಶಿಷ್ಯರನ್ನು ಇಟ್ಟುಕೊಂಡಿರುತ್ತಾರೆ. ಹೊಸ ಹೊಸ ಮಠಗಳಿಗೆ ತಮ್ಮ ಶಿಷ್ಯರನ್ನು ನೇಮಕಮಾಡಿರುತ್ತಾರೆ. ಭಕ್ತರು ನೀಡಿದ ಕಾಣಿಕೆಗಳಿಂದಲೂ ದತ್ತಿಗಳಿಂದಲೂ ಮಠಗಳು ತಮ್ಮ ಪಾರುಪತ್ಯವನ್ನು ನಡೆಸಿಕೊಂಡು ಬರುತ್ತಾರೆ.

ಹುಟ್ಟುವಾಗ ಭವಿಯಾಗಿರುವ ಮಗುವನ್ನು ಲಿಂಗಧಾರಣದಿಂದ ಭಕ್ತನನ್ನಾಗಿ ಮಾಡುವದು. ಶಿಷ್ಯನು ತಪ್ಪುದಾರಿಗೆ ಬೀಳದಂತೆ ಎಚ್ಚರಿಸಿ ಶಿಕ್ಷಿಸಿ ಕಾಪಾಡಬೇಕಾಗುತ್ತದೆ. ಈ ಎಲ್ಲಾ ಕಾರ್ಯಗಳು ಒಬ್ಬನೇ ಗುರುವಿನಿಂದ ನಡೆಯುತ್ತವೆ. ಆದರೆ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ಮೂರಾಗಿ ವಿಂಗಡಿಸಬಹುದು. ಇವರುಗಳು ಸಾಕ್ಷಾತ ಪರಮಾತ್ಮನೆಂದು ನಂಬತಕ್ಕದ್ದು. ಏಕೆಂದರೆ ಗುರುವಿನ ರೂಪದಲ್ಲಿ ಬಂದು ಭಕ್ತರನ್ನು ರಕ್ಷಿಸುವದು ಎಂಬ ನಂಬಿಕೆ ಗುರುಗಳು ಶಾಸ್ತ್ರಗಳನ್ನು ಷಟ್ಥಲ ಬ್ರಹ್ಮಗಳಾಗಿ ಇರಬೇಕು ಇಲ್ಲವಾದಲ್ಲಿ ಬಳ್ಳಿ ಕುರುಡರು ಕೂಡು ಹಳ್ಳವನ್ನು ಬಿದ್ದಂತೆ ಒಳ್ಳೆಯಗುರುವಿನುಪದೇಶವಿಲ್ಲದಿರೆ ಎಲ್ಲಿಹದು ಮುಕ್ತಿ ಸರ್ವಜ್ಞ ಎಂದು ಸರ್ವಜ್ಞೋಕ್ತಿಯಂತೆ ಕಷ್ಟ ಪಡಬೇಕಾಗುತ್ತದೆ. ಇದರಿಂದ ಕಂಡಕಂಡವರನ್ನೆಲ್ಲ ಗುರುಗಳೆಂದು ತಿಳಿದು ಮನಸೋಲು ವುದಕ್ಕಾಗುವುದಿಲ್ಲ ಇದು ಶುದ್ಧ ತಪ್ಪಾಗುತ್ತದೆ. ಒಟ್ಟಿನಲ್ಲಿ ಯೋಗ್ಯ ಗುರುಪದೇಶ , ಪೂಜೆ ದರ್ಶನ, ಸೇವೆಯಿಂದ ಮಾಯ ಪ್ರವಚನದಲ್ಲಿ ಕಪ್ಪಿಗಳಿಂದ ತಪ್ಪಿಸಿಕೊಂಡು ಸುರಕ್ಷಿತವಾಗಿ ಜೀವಿಸಬಹುದಾಗಿದೆ ಗುರು ಹಿತದಿಂದ. ಎಲ್ಲಾ ಫಲಕಾರಿಯಾಗಲತೆದೆಂದು ಜಾನಪದರು ಗುರುವಿನ ನಾಮಸ್ಮರಣೆ ಕುರಿತು ಕೆಳಗಿನಂತೆ ನೋಡಬಹುದು.

ಗುರು ಪಾದ ಪೂಜೆ ಮಾಡೋ

ನಿರತಾಗಿ ನಮಿಸಿ ನೀ ನೋಡೋ

ಗುರು ಪಾದ ಪೂಜೆ ಮಾಡೋ
ಯರ್ಥದಿಂದಲೂ ಜರಿಯಲೂ ಬೇಡ
ಪರತತ್ವದಲ್ಲಿ ಅಡಿಗೂಡೋ
ಗುರು ಪಾದ ಪೂಜೆ ಮಾಡೋ ೧
ಎಂಭತ್ತು ನಾಲ್ಕು ಲಕ್ಷ
ಜೀವರಾಶಿಗಳಿಗೆ ಯಮ ಶಿಕ್ಷಾ
ಎಂಭತ್ತು ನಾಲ್ಕು ಲಕ್ಷ
ಜೀವರಾಶಿಗಳಿಗೆ ಯಮ ಶಿಕ್ಷಾ
ಗುರು ಪಾದ ಪೂಜೆ ಮಾಡೋ ೨
ಜಲ್ಲಿ ಮಾಡಿಕೊಳ್ಳೋ ಗುರು ದೀಕ್ಷಾ
ಮೊದಲಾಗುವುದು ಮಹಾ ಮೋಕ್ಷಾ
ಗುರು ಪಾದ ಪೂಜೆ ಮಾಡೋ ೩
ಧರಿಯೋಳು ಯಮಡಿಗಿ ಗ್ರಾಮ
ಎಡಬಿಡದೇ ಮಾಡೋ ಶಿವ ಸಂಗ
ಕರುಣ್ಣಿಟ್ಟು ಕಾಯೋ ಪ್ರಭುಲಿಂಗ
ಗುರುಪಾದ ಪೂಜೆ ಮಾಡೋ ೪

**ಹಾಡಿದವರು :** ಶ್ರೀಮತಿಲಕ್ಷ್ಮಿ ಸಂಗೋಳಗಿ

**೩.೨. ಲಿಂಗ :** “ಶಿವಪೂಜೆ ಮಾಡಿದಡೆ, ಶಿವನಕೊಂಡಾಡಿದಡೆ, ಶಿವನೊಳು ನೆನಹ ನಿಲಿಸಿದಡೆ ಶಿವಲೋಕವವಗೆ ಕಾಣಯ್ಯ ಸರ್ವಜ್ಞ” ಸರ್ವಜ್ಞ ಕವಿ ಹೇಳಿರುವಂತೆ ನಮಗೆ ಶಿವಲೋಕವು ಸಿಗಬೇಕಾದರೆ, ಶಿವಪೂಜೆ, ಶಿವಭಜನೆ, ಶಿವಭಕ್ತಿ, ಮೊದಲಾದ ಸಧ್ಭಾವಾಚರಣೆಯಲ್ಲಿರ ಬೇಕಾಗುತ್ತದೆ. ಅದಕ್ಕಾಗಿ ಗುರುಕೊಟ್ಟ ಇಷ್ಟಲಿಂಗವನ್ನು ಸದಾ ದೇಹದಲ್ಲಿ ಭಕ್ತಿಯಿಂದ ಧರಿಸಿಕೊಂಡಿರಬೇಕು. ಒಂದು ನಿಮಿಷವು ಬಿಟ್ಟಿರಬಾರದು ಲೋಕಗಳಿಗೆಲ್ಲ ಒಡೆಯಾದ ಪರಶಿವನೇ ಲಿಂಗಮೂರ್ತಿ ಎಂದು ಅರಿಯಬೇಕು. ಏಕೆಂದರೆ ವೀರಶೈವ ಧರ್ಮದ ತಾತ್ವಿಕ ವಿವೇಚನೆ, ಆಚರಣೆಯ ದಾರಿ, ಸಾಮಾಜಿಕ ಪ್ರತಿಯೊಂದು ನೈತಿಕ ನಿಯಮ ನಿಷ್ಠೆಗಳಿಲ್ಲಕ್ಕೆ ಲಿಂಗವೇ ಕೇಂದ್ರ, ಶಕ್ತಿಯಾಗಿದೆ. ಇವರ ಸುತ್ತಮುತ್ತಾ ಉಳಿದೆಲ್ಲ ವಿಚಾರಗಳು ಬೆಳೆದವು. ಅಂತೆಯೇ ಸಮಾಜದಲ್ಲಿ ತತ್ವದರ್ಶನದಲ್ಲಿ ಉನ್ನತವಾದ ನಿಲುವನ್ನು ನೋಡಲಿಕ್ಕೆ ಕಾರಣಯಿತು. ಅಷ್ಟೇ ಅಲ್ಲ ಸಾಮಾಜಿಕ ವ್ಯವಸ್ಥೆಯಲ್ಲಿನ ವಿಷಮತೆಯನ್ನು ತಳ್ಳಿಹಾಕಿ

ಸರ್ವಸಮಾನತೆಯನ್ನು ತರಲಿಕ್ಕೆ ಸಾಧನವಾಯಿತು. ಅದಕ್ಕೆ ಬಸವಣ್ಣನವರು ಲೋಕೋದ್ಧಾರಕ್ಕೆ ಲಿಂಗ ಬಳಸಿಕೊಂಡಂತೆ ತೋರುತ್ತದೆ.

ಆದರೆ ಲಿಂಗದ ಕಲ್ಪನೆ ಪ್ರಾಚೀನ ವೇದಪೂರ್ವ ಯುಗದ ಸಿಂಧುಸಂಸ್ಕೃತಿಯಲ್ಲಿಯೋ ಕಾಣಿಸಿಕೊಳ್ಳುತ್ತದೆ. ಲಿಂಗಕ್ಕೆ ವಿದ್ವಾಂಸರು ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದುಂಟು. ಇದು ಸ್ತ್ರೀ ಪುರುಷ ಚಿಹ್ನೆಗಳ ಮಿಲನ ರೂಪವನ್ನು ಕಾಣಲು ಕೆಲವರು ಪ್ರಯತ್ನಿಸಿದ್ದಾರೆ. ಕೆಲವರು ಪುರುಷ ಜನನೇಂದ್ರಿಯದ ಪ್ರತಿರೂಪವೆಂದು, ಬೌದ್ಧಸ್ತೂಪಗಳೇ ಶಿವಲಿಂಗಗಳಾದುವೆಂದು ಹೀಗೆ ಅನೇಕ ಮತಗಳುಂಟು ಇರಲಿ, ಇದು ಇಡೀ ಬ್ರಹ್ಮಾಂಡದ ಸಮಷ್ಟಿ ಸ್ವರೂಪವನ್ನೇ ಲಿಂಗರೂಪದಲ್ಲಿ ಕಾಣಲು ಕೆಲವರು ಪ್ರಯತ್ನಿಸುತ್ತಿದ್ದಾರೆ. ಇದು ಸ್ಥಾವರ ಲಿಂಗಗಳಂತೆಯೇ ದೇಹದ ಮೇಲೆ ಲಿಂಗವನ್ನು ಧರಿಸುವ ಪರಂಪರೆಯಾ ಬಹು ಪ್ರಾಚೀನವಾದದ್ದು ಮುಂದೆ ಅಂಗದ ಮೇಲೆ ಇಟ್ಟು ಪೂಜಿಸುವ ಸ್ಥಿತಿಗೆ ಬಂದಿತು. ಮುಂದೆ ಇಷ್ಟಲಿಂಗದ ಕಲ್ಪನೆಗೆ ದಾರಿ ದೀಪವಾಗಿಬೇಕು. ಲಿಂಗವೆಂದರೆ ಪರಮಾತ್ಮನ ಸಚ್ಚಿದಾನಂದ ಸ್ವರೂಪ.

> "ಶಿವೋಸ್ತಿ ಸಚ್ಚಿದಾನಂದ: ಪರಿಪೂರ್ಣೋ ನಿರಂಜನೆ :
> ಆಕಾರಣಮಕಾರ್ಯಂತ ಮನೋವಾಚಾಗೋಚರಂ
> ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರ ಮನಾದಿವತ್,
> ಯಥಾದಿವ್ಯೆಶ್ವರಂ ತೇಜಸ್ತಲಿಂಗಂ ಪಂಚಸಂಜ್ಞಿತಂ ||"

(ಎಂ. ಆರ್.ಶ್ರೀನಿವಾಸಮೂರ್ತಿ:೧೯೯೦:೧೨೫)

ಇಲ್ಲಿ ಶಿಲಾದಿಗಳಲ್ಲಿ ಮಾಡಿದುದು ಲಿಂಗವಲ್ಲ ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗ ಎಂದು ಮೂರು ಭೇದಗಳು ಗುರು ಇವುಗಳಿಗೆ ಕಾರಣಿಭೂತ ಸದಾ ಇಷ್ಟಲಿಂಗವನ್ನು ದೇಹದ ಮೇಲೆ ಧರಿಸಿಕೊಂಡು ಪೂಜಾ ಕಾಲದಲ್ಲಿ ಎಡಗೈಯಲ್ಲಿಟ್ಟು ಪೂಜೆ ಮಾಡಬೇಕು. ಇಷ್ಟಲಿಂಗದ ಮೂಲಕ ಪ್ರಾಣಲಿಂಗ ಭಾವಲಿಂಗಗಳ ಜ್ಞಾನವನ್ನುಂಟು ಮಾಡಿಕೊಳ್ಳಬೇಕಾಗಿದೆ. ಆದರೆ ಕೆಲವರು ಇಂತಹ ಲಿಂಗವನ್ನು ಬಿಟ್ಟು ಅನ್ಯದೇವರುಗಳಿಗೆ ಕೈಮುಗಿದು ಸಮಯ ಹಾಳುಮಾಡಿ ಕೊಳ್ಳುತ್ತಾರೆ. ಅಂತಹವರಿಗೆ ಗುರುಗಳು ಇಷ್ಟ ಪಡುವದಿಲ್ಲ ಅದು ಅಂಗದ ಮೇಲಣ ಲಿಂಗವ ಹಿಂಗಿ ಅನ್ಯದೈವಕ್ಕೆರಗುವ ಭಂಗಿತರ ಮುಖವ ನೋಡಲಾಗದು ಎನ್ನುತ್ತಾರೆ ಶರಣರು. ಅಷ್ಟೇ ಯಾಕೆ? ಒಂದು ಹೆಂಗಸಿದೆ ಗಂಡಸಿದ್ದು ಆಕೆಯು ಇನ್ನೊಬ್ಬ ಪರಪುರುಷನ ಸಂಗಡ ವ್ಯಾಭಿಚಾರ ನಿರತಳಾದರೆ ಆ ಗಂಡನಿಗೆ ಹೇಗೆ ಅಪಮಾನವಾಗುವದೊ ಅದೇ ರೀತಿಯಿಂದ

ಎದೆಯ ಮೇಲಿಂದ ಇಷ್ಟಲಿಂಗಗಕ್ಕೆ ಮಹಾಪಮಾನವಾಗುತ್ತದೆನ್ನುತ್ತಾರೆ. ಮತ್ತೆ ಕೆಲವರು ಲಿಂಗವನ್ನು ಕಟ್ಟಿ ಕೊಂಡುರು ಸರಿಯಾಗಿ ವೃತ್ತಿಸುವದಿಲ್ಲ ಇಂತಹವರಿಗೆ ಸದ್ಗತಿ ಸಿಗುವದಿಲ್ಲ. ಒಟ್ಟಿನಲ್ಲಿ ಲಿಂಗ ಪೂಜೆ ಎಂಬುದು ಮನಸ್ಸನ್ನು ಸ್ಥಿರಗೊಳಿಸುವುದಕ್ಕೇ ಕೇಂದ್ರೀಕರಿಸುವುದಕ್ಕೆ ಸಹಾಯಕಾರಿಯಾಗಿ ಮಾನವನ ಆರೋಗ್ಯಕ್ಕೆ ಮತ್ತು ಬೆಳವಣಿಗೆಗೆ ಆವಶ್ಯಕತೆಯಾಗಿದೆನ್ನ ಬಹುದು. ಸಮಾಜದ ಜನತೆ ಜಂಗಮರು ಲಿಂಗದೀಕ್ಷೆ ನೀಡಿ ಶುಚ್ಚಿತನಾಗಿಸುತ್ತಾರೆ.

**೩.೩. ಜಂಗಮು** : ಜಂಗಮವೆಂದರೆ ಜಗತ್ತಿನ ಜಂಜಾಟವನ್ನು ಬಿಟ್ಟಂಥವರು ಜಂಗಮರು. ಈ ಜಂಗಮ ಕಲ್ಪನೆ ವೀರಶೈವರಲ್ಲಿ ತುಂಬ ವಿಶಿಷ್ಟವಾದದ್ದು ಗುರುವಿಗಿಂತ ಮುಂದಿನ ಹಂತದಲ್ಲಿ ಕಂಗೋಳಿಸಿವನೇ ಜಂಗಮ. ಜ್ಞಾನಮೂರ್ತಿ, ಅನುಭವ ಜ್ಞಾನವನ್ನು ಪಡೆದವನು. ಬ್ರಹ್ಮಾಸಾಕ್ಷಾತ್ಕರವನ್ನು ಪಡೆದವನ್ನಾಗಿರುತ್ತಾನೆ. ಭಕ್ತನ ಏಳಿಗೆಗಾಗಿ ಜಂಗಮು ಮಠಮನೆಯನ್ನು ಕಟ್ಟಿಕೊಂಡು ಇರುವದಿಲ್ಲ. ಗುರು ಮಾತ್ರ ಒಂದೇ ಸ್ಥಳದಲ್ಲಿ ಇರಬಹುದು ಆದರೆ ಜಂಗಮ ಇದಕ್ಕಿಂತಲು ಮೀರಿ ಅನಂತನಾದವನು. ಅದಕ್ಕೆ ಬಸವಣ್ಣನವರು ಜಂಗಮ ವಿಶೇಷತೆಯನ್ನು ತಮ್ಮ ವಚನಗಳಲ್ಲಿ ಹೋಗಳಿರುವದನ್ನು ನೋಡಿದರೆ ಜಂಗಮನ ಮಹತ್ವ ತಾನೇ ತಾನಾಗಿ ಮನದಟ್ಟಗುತ್ತದೆ.

"ಸ್ಥಾವರ ಭಕ್ತಂಗೆ ಸೀಮೆಯಲ್ಲದೆ ಘನಲಿಂಗ ಜಂಗಮಕ್ಕ ಸೀಮೆ ಎಲ್ಲಿಯದು?
ಅಂಬುಧಿಗೆ ಸೀಮೆಯಲ್ಲದೆ ಹರಿವ ನದಿಗೆ ಸೀಮೆ ಎಲ್ಲಿಯದು ?
ಭಕ್ತರಿಗೆ ಸೀಮೆಯಲ್ಲದೆ ಜಂಗಮಕ್ಕೆ ಸೀಮೆಯುಂಟೇ ಕೂಡಲ ಸಂಗಮದೇವ"

ಎಂದು ಹೆಳುವಲ್ಲಿ ಜಂಗಮ ಅನಿಕೇತನನಾಗಿ ಜಗದ್ಭರಿತನಾಗಿ ಸಂಚರಿಸುವನು ಅವನು ನಿಂದಿಸಿದಲ್ಲಿ ಕುಂದುವನಲ್ಲ, ವಂದಿಸಿದಲ್ಲಿ ಆನಂದ ಮಯನಲ್ಲ, ಬಂದುಪಚಾರದಲ್ಲಿ ಸಂದುಗೊಳ್ಳವನಲ್ಲ, ಬಂದಲ್ಲಿ ನೀಡದಿರೆ ಕ್ರೋಧನಲ್ಲ, ದೇಹ ಪ್ರಾಣ ಮತ್ತು ಮನಸ್ಸಿನ ಧರ್ಮಗಳನ್ನು ಮೀರಿದವನು ಎಲ್ಲಿಯೇ ನಿಲ್ಲದೆ ಸದಾಭಕ್ತರ ಉದ್ಧಾರಕ್ಕಾಗಿ ಸಂಚರಿಸುತ್ತಾ ನಡೆಯುವನು. ಆದಕ್ಕೆ ಸ್ಥಿರ ಜಂಗಮ ಎಂದು ಕರೆಯುತ್ತಾರೆ. ಶರಣರಲ್ಲಿ ಜಂಗಮಕ್ಕೆ ವಿರಾರೂಪದ ವೈಭವವನ್ನು ಚಿತ್ರಿಸಿದ್ದಾರೆ. ಲಿಂಗ ಮತ್ತು ಜಂಗಮ ಸದಾ ಅವಿನಾಭಾವ ಸಂಬಂಧ ಹೊಂದಿದವುಗಳು ಅದಕ್ಕೆ ಆಚಾರವೇ ಲಿಂಗ ಆ ಆಚಾರದ ಅರಿವೇ ಜಂಗಮ, ಅರಿವೇ ಲಿಂಗ, ಚೈತನ್ಯವೆ ಜಂಗಮ ತನುವಿನ ಪ್ರಾಣ ಲಿಂಗವಾದರೆ, ಮನದ ಪ್ರಾಣ ಜಂಗಮನೆಂದು ಶರಣರು ವಿವರಿಸಿದ್ದಾರೆ. ಕೆಲವು ಜಂಗಮನನ್ನು ನಿಂದಿಸುತ್ತಾರೆ ಅವರಿಗೆ ಬಸವಣ್ಣನವರು "ಜಂಗಮನಿಂದೆಯ ಮಾಡಿ ಲಿಂಗವ ಪೂಜಿಸುವ ಭಕ್ತನ ಅಂಗವಣಿಯಂತೋ ಸಿವ ಶಿವ ಎನ್ನುತ್ತಾರೆ". ಒಟ್ಟಿನಲ್ಲಿ ಜಂಗಮ ಸಾಮೂಜವನ್ನು ಸಾಮಾಜದ ವ್ಯವಸ್ಥೆಯನ್ನು

ಕಾಪಾಡಿಕೊಂಡು ಭಕ್ತಗಣಗಳನ್ನು ರಕ್ಷಿಸುತ್ತಾ ಸಂಚರಿಸುತ್ತಾನೆ. ಅದಕ್ಕೆ ಇಂತಹ ಗುರುವಿಗೆ ಭಕ್ತಿಯಿಂದ ಕಾಣಿದರೆ ಗಂಗಾ ಸ್ನಾನದ ಫಲಕ್ಕಿಂತಲೂ ಅಧಿಕವಾದ ಪುಣ್ಯವುಲಭಿಸುತದಂತೆ. ಒಟ್ಟಿನಲ್ಲಿ ಭಕ್ತನಿಗೆ ಜಂಗಮರ ಆಶ್ರಯ ಮತ್ತು ಸಹಾಯಗಳು ತುಂಬ ಅವಶ್ಯಕ. ಬ್ರಹ್ಮಜ್ಞಾನಿಗಳು, ಪರಮ ವೈರಾಗ್ಯಶಾಲಿಗಳು ಎಂಬುದಕ್ಕೆ ಪ್ರತ್ಯಕ್ಷ ಆದರ್ಶಗಳಾಗಿ ಸಾಧಕನಿಗೆ ನಂಬಿಕೆಯೂ ಶ್ರದ್ಧೆಯೂ ಉಂಟಾಗಿ ಅವರಲ್ಲಿ ಭಕ್ತಿಯಿಟ್ಟು ನಡೆದರೆ ಭಕ್ತನನ್ನು ಭವಸಾಗರದಿಂದ ದಾಟಿಸುವ ಗಮ್ಯಕ್ಕೆನಕ್ಕೆ ಕೊಂಡೊಯ್ಯುವ ಮಹತ್ಮನೇ ಜಂಗಮ. ಇಂತಹ ಜಂಗಮರು ಗುರುಸ್ಥಿಲದ ಮಠದ ಜಂಗಮರು ಮತ್ತು ವರಕ್ತ ಪೀಠದ ಜಂಗಮರ ಸೇವೆ ಅಪಾರ ಎಂದು ಇಲ್ಲಿ ನೆನೆಯತಕ್ಕದು.

**೩.೪. ಪಾದೋದಕ :** ಗುರುಲಿಂಗ ಜಂಗಮುಗಳ ಪಾದ ತೀರ್ಥವೇ ಪಾದೋದಕವೆನಿಸುವುದು ಈ ತ್ರಿವಿದ ದಾಸೋಹದಿಂದ ಲಭ್ಯವಾಗುವದೇ ಪಾದೋದಕ

"ಪರಮಾನಂದ ಏವ್ವೇಕ್ತ : ಪಾದಶಬ್ದೇನ ನಿರ್ಮಲ : ।
ಜ್ಞಾನಂ ಚೋದಕ ಶಬ್ದೇನ ಪಾದೋದಕಮಿತಿ ಸ್ಮೃತಂ ॥
ಅಥವ ಪಾದಶಬ್ದೇನ ಗುರುದೇವ ನಿಗದ್ಯತೇ ।
ಶಿಷ್ಯಶ್ಚೋದಕ ಶಬ್ದೇನ ತಯೋರೈಕ್ಯಂತು ದೀಕ್ಷಯಾ ॥"

(ಸಿದ್ಧಾಂತ ಶಿಖಾಮಣಿ:೧೯:೨-೮)

ಹೀಗೆ ಪಾದೋದದ ಕುರಿತು ವಿಶಿಷ್ಟವಾದ ಅರ್ಥವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲಾಗಿದೆ. ಮೇಲಿನ ಪದ್ಯದಿಂದ ಎರಡು ರೀತಿಯೊಳಗೆ ಅರ್ಥೈಯಿಸಬಹುದು 'ಪಾದ' ಎಂಬ ಶಬ್ದಕ್ಕೆ ಪರಮಾನಂದ, 'ಉದಕ' ಎಂಬ ಶಬ್ದಕ್ಕೆ ಜ್ಞಾನ, ಎಂಬೆರಡರ ಸಂಬಂಧವೆ ಪಾದೋದಕ. ಅಲ್ಲದೆ ಪಾದ ಗುರುವನ್ನು ಉದಕ ಶಿಷ್ಯನನ್ನು ಕೂಡ ನಿರ್ಧರಿಸುತ್ತದೆ. ದೀಕ್ಷಾ ವಿಶೇಷದಿಂದ ಸಂಭವಿಸು ಇವರಿಬ್ಬರ ಐಕ್ಯವೇ ಪಾದೋದಕದಲ್ಲಿ ಮತ್ತೆ ಮೂರು ಬಗೆಗಳಾಗಿ ಮಾಡತಕ್ಕದು ಒಂದು ದೀಕ್ಷಾ, ಶಿಕ್ಷಾ ಜ್ಞಾನ ಪಾದೋದಕವೆಂದು, ಗುರು ಶಿಷ್ಯರ ಆನಂದದ ಐಕ್ಯವೇ ದೀಕ್ಷಾ ಪಾದೋದಕ, ಗುರುಶಿಷ್ಯರ ಸ್ವರೂಪೈಕ್ಯ ಜ್ಞಾನಪಾದೋದಕ ಎಂದು ಆರಿಯಬಹುದು. ಈ ಪಾದೋದಕವನ್ನು ತನ್ನಿಷ್ಟ ಲಿಂಗಕ್ಕೆ ಹರುಷದಿಂ ಮಜ್ಜನವಂ ಗೈದು ನಂತರ ತಾನು ಸೇವಿಸುವವನೇ ಭಕ್ತ. ಭಕ್ತಿಯಿಂದ ಪಾದೋದಕವನ್ನು ಸೇವಿಸದರೆ ಆತನ ಅಕಾಲ ಮೃತ್ಯುವನ್ನು ಹೊಡೆದೋಡಿಸುವುದು, ಅನೇಕ ವಿವಿಧ ಕಾಟಚಾರಗಳನ್ನು ದೂರಮಾಡುವದು, ಸರ್ವ ಪಾಪಕರ್ಮಗಳನ್ನು ಕಿತ್ತುಹಾಕುವದು ಅಲ್ಲದೆ ಪಾದೋದಕಕ್ಕೆ ಕನಿಷ್ಟ ತಿಳಿದವರೂ ನರಕಕ್ಕೆ ಹೋಗುವರು ಎಂದು ಭಾವಿಸುವಿದುಂಟು. ಒಟ್ಟನಲ್ಲಿ ಪಾಪ

ಪರಿಹಾರವಾಗುವ ಕಾರಣದಿಂದ ಮನಸ್ಸಿನಲ್ಲಿನ ಹೆದರಿಕೆ ಹೋಗಿ ಶಾಂತಿ ಉಂಟಾಗಿ ಶುದ್ಧ ಕಾರ್ಯಕ್ಕೆ ಅನುಮಾಡಿಕೊಡುತ್ತದೆ. ಅಲ್ಲದೆ ಪಾದೋದಕದಲ್ಲಿ 'ಇಮಂ ಮೇ ಗಂಗೇ ತ ಯಮುನೇಚ' ಅಂದರೆ ಸಕಲ ತೀರ್ಥಗಳು ಈ ಪಾದೋದಕದಲ್ಲಿ ಕಾಣಬಹುದೆಂದು ನಂಬುತ್ತಾರೆ. ತಾನು ಬಳಸುವ ಉದಕ (ನೀರು) ಪುಣ್ಯೋದಕವೆಂಬ ಭಾವನೆಯೂ ಇರುವುದರಿಂದ ಅವನ ಮನಸ್ಸುನಿಂದ ದೇಹಶುದ್ಧಿ ಮನಶುದ್ಧಿಗಳುಯಾಗುತ್ತದೆ.

**೩.೫. ಪ್ರಸಾದ** : ಗುರು ಲಿಂಗ ಜಂಗಮರಿಗೆ ಸಮರ್ಪಿಸಿ ಉಳಿದದ್ದನ್ನು ಸೇವಿಸುವುದೇ ಪ್ರಸಾದವೆನಿಸು ತ್ತದೆ. ಶಿವರೂಪಿಗಳಾದ ಗುರು ಲಿಂಗ ಜಂಗಮುಗಳಿಗೆ ಅರ್ಪಿಸಿದ ಪ್ರಿತಿಯೊಂದು ವಸ್ತುವು ಶಿವಪ್ರಸಾದವಾಗುತ್ತದೆ. ಲಿಂಗನಿಷ್ಠನ್ನಾದ ಆ ಸಾಧಕ ಶಿವನಿಗೆ ಅರ್ಪಿಸಿ ಅನ್ನವನ್ನೇ ಯಾವಾಗಲು ಸೇವಿಸುವ ಬರುವುದರಿಂದ ಮನಸ್ಸು ನಿರ್ಮಲವಾಗುವುದು. ಮನೋ ನೈರ್ಮಲ್ಯವಾದವನೇ ಪ್ರಸಾದಿಯೆನಿಸುವನು.

"ಕಾಯ ಗುರು ಪ್ರಾಣ ಲಿಂಗ ಜ್ಞಾನ ಜಂಗಮ
ಕಾಯದಲ್ಲಿ ಶುದ್ಧ ಪ್ರಸಾದ, ಪ್ರಾಣದಲ್ಲಿ ಸಿದ್ಧ ಪ್ರಸಾದ
ಜ್ಞಾನದಲ್ಲಿ ಪ್ರಸಿದ್ಧ ಪ್ರಸಾದ ಇಂತೀ ತ್ರಿವಿಧಿ
ಪ್ರಸಾದ ನಿರ್ಣಯ ಕೂಡಲ ಚನ್ನಸಂಗಾನಿಮ್ಮ ಶರಣಂಗೆ"

ಎಂದು ಶರಣರು ಪ್ರಸಾದ ಕೂರಿತು ತುಂಬ ಮನದಟ್ಟಾಗುವಂತೆ ಹೇಳಿದ್ದಾರೆ. ಪ್ರಸಾದದಿಂದ ಚಿತ್ತ ಶುದ್ಧಿಯನ್ನುಂಟು ಮಾಡುತ್ತದೆ. ಮನಸ್ಸಿಗೆ ಶಾಂತಿ ದೂರಕಿಸಿಕೊಡುತ್ತದೆ. ಅದಕ್ಕಾಗಿ ಭಕ್ತನು ಆಹಾರವನ್ನು ಪ್ರಸಾದವನ್ನಾಗಿ ಮಾಡಿಕೊಂಡು ಭೋಜಿಸಬೇಕಾಗಿದುವುದು ಆತನ ಕರ್ತವ್ಯ. ಅಷ್ಟೆ ಅಲ್ಲದೆ ಊಟ ಮಿತಾಹಾರಿಯಾಗಿರಬೇಕು ಇಲ್ಲವಾದರೆ ಚೆತ್ತೈಕಾಗ್ರತೆ ದೂರೆಯುವದಿಲ್ಲ. ಧ್ಯಾನ ಸುಲಭದಲ್ಲಿ ಯಾಗುವದಿಲ್ಲ. ಒಟ್ಟಿನಲ್ಲಿ ಪ್ರಸಾದವು ಸಮಸ್ತ ವಿದ್ಯಾಜ್ಞಾನಾದಿಗಳನ್ನು ಸಿದ್ಧಿ ಮಾಡತಕ್ಕದ್ದಾಗಿಯೋ, ಅಜ್ಞಾನವನ್ನೆ ದೂರಮಾಡಿ ಸುಜ್ಞಾನವೃದ್ಧಿಗೊಳಿಸತಕ್ಕದ್ದೂ ಶಾಶ್ವತ ಸೌಖ್ಯ ವನ್ನು ಕೊಡುವದಾಗಿದೆ. ಇದರಲ್ಲಿ ಎರಡು ಪ್ರಕಾರ ಸಿದ್ಧಾಂತ ಶಿಖಾಮಣಿಯಲ್ಲಿ ಭೇದ ಮಾಡಿರುವುದು ನೋಡುತ್ತೆವೆ. ಒಂದು ಮನಸ್ಸಿನ ನೈರ್ಮಲ್ಯ ಎನ್ನೊಂದು ಶಿವನಿಗೆ ಅರ್ಪಿಸಿದ ಪದಾರ್ಥ. ಮೊದಲನೆಯದು ಆಂತರಿಕ ಎರಡನೆಯ ಬಹಿರಂಗದ ಆಚರಣೆಯಿಂದ ಅಂತದಂಗದ ಕಡೆ ತಿರುಗಿಸುವ ದೃಷ್ಟಿ ಕಂಡುಬರುತ್ತದೆ. ಒಟ್ಟಿನಲ್ಲಿ ಶಿವ ಪ್ರಸಾದವನ್ನು ಅತ್ತಿತ್ತ ಸೂಸದಂತೆ ಭಕ್ತಿಯಿಂದ ಸೇವಿಸಿ ಮುಕ್ತಿಯನ್ನು ಹೋಮದಬೇಕಾಗಿದೆ ಎಂದು ತಿಳಿಸುತ್ತದೆ.

**೩.೬. ವಿಭೂತಿ :** ಪರಮೇಶ್ವರನು ಧರಿಸಿದ ವಿಭೂತಿಯಾಗಿದರಿಂದ ಆತನ ಸಂಬಂಧದಿಂದ ಅದು ಪರಮಪಾವನವಾಗಿಸುತ್ತದೆ. ಅಲ್ಲದೆ ಕಾಮನನ್ನು ದಹಿಸಿ ಆ ಭಸ್ಮ ಲೇಪನವನ್ನು ಶಿವನೋ ಮಾಡಿಕೊಂಡನು. ಹೀಗಾಗಿ ವಿಭೂತಿ ಧಾರಣವು ಅರಿಷಡ್ವರ್ಗವನ್ನು ದಹಿಸುವದುದಕ್ಕೆ ಸಂಕೇತ ಎನ್ನುತ್ತಾರೆ. ವಿಭೂತಿ ಶಿವ ದಿವ್ಯ ತೇಜಸ್ಸು ಎನ್ನುತ್ತಾರೆ. ಭಕ್ತಿವೆಂಬ ಹೆಸರಿನಿಂದಲೂ ಕರೆಯುವದುಂಟು. ಏಕೆಂದರೆ ಇವನ ಸ್ವರೂಪವೇ ಪ್ರಕಾಶಗೋಳಿಸುವುದರಿಂದ ಅದಕ್ಕೆ ಭಸಿತವೆಂಬ ಹೆಸರು ಬಂದಿದೆ ಎಂದು (ಶಿವಾಭಿಧಅನಂ ಯತ್ರ್ತೋಕ್ತಂ ಭಾಸನಾದ್ಬಸಿತಂ ತಥಾ ೭೧) ಸಿದ್ಧಂತ ಶಿಖಾಮಣಿ ವಿವರಿಸಿದೆ. ಅಲ್ಲದೆ ವಿಭೂತಿಯನ್ನು ಐದು ಪ್ರಕಾರವಾಗಿ ಕರೆದಿದೆ.

"ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನ : ।
ಏತಾನಿ ಪಂಚ ನಾಮಾನಿ ಹೇತುಭಿ ಪಂಚಭಿರ್ಭೃಶಂ "

(ಶಿ.ಭೂಸನೂರಮಠ:೧೯೨:೯೨)

ವಿಭೂತಿಯನು ವಿಭೂತಿ, ಭಸಿತ, ಭಸ್ಮ, ಕ್ಷಾರ ಮತ್ತು ರಕ್ಷಾ ಎಂದು ಐದು ಪ್ರಕಾರ ಕರೆದಿದ್ದಾರೆ. ಅಷ್ಟೈಶ್ವರ್ಯಗಳಿಗೆ ಕಾರಣಿಭೂತವಾದದು ವಿಭೂತಿ, ಶಿವತತ್ತವನ್ನು ಪ್ರಕಾಶಗೋಲಿಸು ದರಿಂದ ಭಸಿತವೆಂದು, ಪಾಪ ಕರ್ಮದಿಗಳನ್ನು ನಾಶಪಡಿಸುವದರಿಂದ 'ಭಸ್ಮ'ವೆಂದು, ಅಡ್ಡಿ ಆಂತಕ ವಿಪತ್ತುಗಳನ್ನು ಕ್ಷಯಗೊಳಿಸುವುದರಿಂದ 'ಕ್ಷಾರ'ವೆಂದೂ, ಭೂತ ಪಿಶಾಚಾದಿ ಕಾಟಗಳಿಂದ ಕಾಪಾಡಿ ರಕ್ಷಿಸುವುದರಿಂದ 'ರಕ್ಷೆ'ಯೆಂದು ಹೀಗೆ ಕರೆಯಲಾಗಿದೆ. ಇಂತಹ ವ್ಯಾಪಕ ಶಕ್ತಿ ವಿಭೂತಿಗಿದೆ ಎಂದು ಸಿದ್ಧಾಂತ ಶಿಖಾಮಣಿ ಹೇಳುತ್ತದೆ. ಇದನ್ನು ಇನ್ನು ಮುಂದೆ ಹೋದರೆ ಈ ವಿಭೂತಿ ಹೀಗೆ ತಯಾರಾದುದ ಕುರಿತು ಹೇಳಲಾಗಿದೆ. ನಂದೆ ಎಂಬ 'ಗೋರೋಚನ' ಬಣ್ಣದ ಆಕಳ ಸಗಣೆಯ ಬೂದಿಯಿಂದ ತಯಾರಾದದ್ದು ವಿಭೂತಿ ಎನ್ನಿಸಿಕೊಳ್ಳುವುದು 'ಭದ್ರೆ' ಎಂಬ ಕಪ್ಪು ಬಣ್ಣದ ಆಕಳ ಸಗಣೆಯ ಬೂದಿಯಿಂದ ತಯಾರಾದದ್ದು ಭಸಿತವೆಂದು, 'ಸುರಭಿ' ಎಂಬ ಬಿಳಿ ಬಣ್ಣದ ಆಕಳ ಸಂಗಣಿಯಿಂದ ತಯಾರಾದದು ಭಸ್ಮ ವೆಂದು, 'ಸುಶೀಲೆ' ಎಂಬ ಕಪ್ಪು, ಕೆಂಪು ಬಣ್ಣದ ಕೂಡಿದ ಆಕಳ ಸಗಣೆಯಿಂದ ತಯಾರಿಸಿದು ಕ್ಷಾರವೆನಿಸುವುದು 'ಸುಮನೆ' ಎಂಬ ಕೆಂದಾಕಳದ ಸಗಣೆಯಿಂದ ರಚಿಸಿದು ರಕ್ಷೆ ಎನಿಸಿಕೊಳ್ಳುವುದು(ಶಿ.ಸ.ಭ.ಮಹೇಶ್ವರ ಕೈಪಿಡಿ:೧೩೬)ಹೀಗೆ ವಿಭೂತಿಯ ತಯಾರಿಕೆಯ ಕುರಿತು ವಿವರಿಸಿದು ಗಮನ ಸೆಳೆಯುತ್ತದೆ.

ಈ ವಿಧಾನವನ್ನೆ ಶರಣರು ತಮ್ಮ ವಚನಗಳಲ್ಲಿ ಅಭಿಪ್ರಾಯ ಪಟ್ಟಿರುವುದು ಕಾಣಿಸುತ್ತವೆ. "ಪಂಚ ಬ್ರಹ್ಮದಿಂದುಯವಾದ ನಂದೆ, ಭದ್ರೆ, ಶುರಭಿ, ಸುಶೀಲ ಸುಮನೆ ಎಂಬ ಪಂಚಗೋವಿನಿಂದಾದ ವಿಭೂತಿ, ಭಸಿತ, ಭಸ್ಮ ಕ್ಷಾರೆ, ರಕ್ಷೆ - ಎಂಬ ಪಂಚ ನಾಮವಾಯಿತು ಆದೆಂತೆಂದೂಡೆ ಶಿವಜ್ಞಾನ ಸುಖದ ಮಹದೈಶ್ವಯರ ಸ್ವರೂಪಿನಿ ವಿಭೂತಿಯಾಯಿತ್ತು, ಸಕಲಕಾಂಕ್ಷೆಗಳ ಬಯಕೆಯಂ ಸುಟ್ಟ ನಿ:ನಾಮರುಪಿನಿಂ ಭಸಿತವಾಯಿತು, ಪೂರ್ವ ಕರ್ಮರೂಪಿನಂ ಭಸ್ಮವಾಯಿತು. ಮಲಮಾಯೆಯ ಕಳಿವುದರಿಂದ ಕ್ಷಾರೆಯಾಗಿತ್ತು. ಭೂತ ಪ್ರೇತ ಪಿಶಾಚ ರಾಕ್ಷಸಂಗಳ ಹೊದ್ದಲೀಯ ದಿಪ್ಪುದರಿಂದ ರಕ್ಷೆಯಾಯಿತ್ತು, ಇಂತಪ್ಪ ವಿಭೂತಿಯ ಮಹಾತ್ಮೆಯನದು ನೀನೊಲಿದ ವಿಭೂತಿಯ ನಾನು ಧರಸಿ ಬದುಕಿದೆನು ಕಾಣಾ ಸೌರಾಷ್ಟ್ರ ಸೋಮೇಶ್ವರಾ"(ಶಿ.ಸ.ಭ.ಮಹೇಶ್ವರ ಕೈಪಿಡಿ:೧೩೬) ಎಂದು ಆದಯ್ಯಾ ವಿಭೂತಿಯ ಮಹಾತ್ಮೆಯನ್ನು ವಿವರಿಸಿದ್ದಾರೆ. ತತ್ತ್ವಶಾಸ್ತ್ರದಲ್ಲಿ ವಿಭೂತಿಯನ್ನು ಕಲ್ಪ, ಅನುಕಲ್ಪ, ಉಪಕಲ್ಪ ಆಕಲ್ಪ ಎಂದುನಾಲ್ಕು ಪ್ರಕಾರವಾಗಿ ವಿಭಾಗಿಸಿದ್ದಾರೆ ಮತ್ತು ಶರಣರು ಇನ್ನೊಂದು ಬಗೆಯಾಗಿ ವಿಭಾಗಿಸಿದ್ದಾರೆ. ದೀಕ್ಷಾಭಸಿತ, ಶಿಕ್ಷಭಸಿದ, ಕ್ರಿಯಾಭಸಿತ ಎಂದು. ದೀಕ್ಷಾಭಸಿತವೆಂದರೆ ಕ್ರಿಯಾಗ್ನಿಯಿಂದ ದಹಿಸಿದ ಬೂದಿಯನ್ನೆ ಧೂಳಪಾದೋದಕ ಅಥವಾ ಗುರು ಜಂಗಮರ ಪಾದೋದಕದಲ್ಲಿ ಶೋಧಿಸಿ ಭಟ್ಟಿ ಮಾಡಿದು, ಗುರು ಪಾದೋದಕ ಲಿಂಗ ಪಾದೋದಕಗಳೆರಡನ್ನು ಸೇರಿಸಿದುದು, ಮತ್ತು ಕ್ಷಡಕ್ಷರ ಮಂತ್ರದಿಂದ ಸಂಸ್ಕಾರಗೊಳಿಸಿದು ಶಿಕ್ಷಭಸಿತ. ಅಲ್ಲದೆ ಇದರ ಜೊತೆಗೆ ೨೧ ಪ್ರಾಣವಗಳನ್ನೆ ಸ್ಥಾಪಿಸಿ ಸಿದ್ಧಗೋಳಿಸಿದುದು ಶಿಕ್ಷಾಭಸಿತ ಅಥವಾ ಜ್ಞಾನ ಭಸಿತವೆಂದು ಕರೆಯಲಾಗಿದೆ. ಇನ್ನೂ ಧರಿಸುವುದು ವಿಶೇಷವಾಗಿದೆ. ಲಿಂಗಾಧಾರಕ ಭಕ್ತರು, ೮ ಕಡೆ, ಉಪಾಧಿಭಕ್ತರು. ಹದಿನಾರು ಕಡೆ, ನಿರುಪಾದಿ ಭಕ್ತರು ಮೂವತ್ತೆರಡು ಕಡೆ ಧರಿಸಬೇಕೆಂದು ಹೇಳಿದುಂಟು.

ಒಟ್ಟಿನಲಿ ವಿಭೂತಿ ಎಂಬುದು ಐಶ್ವರ್ಯ, ತ್ಯಾಗ, ಪರಮಾರ್ಥದ ಐಶ್ವರ್ಯವನ್ನು ದೊರಕಿಸಿ, ಐಯಿಕದ ತ್ಯಾಗವನ್ನು ಮಾಡಿಸುವದರಿಂದ ಸಾಧಕನಿಗೆ ಇದು ಅತ್ಯಾವಶ್ಯಕವಾಗಿದೆ. ಮೂರು ಬೆರಳುಗಳಿಂದ ಮೂರು ರೇಖೆಗಳು ಮೂಡುವಂತೆ ಧರಿಸುವ ತ್ರಿಪುಂಡ ಧಾರಣ ಕ್ರಮವೇ ಶ್ರೇಷ್ಠವಾದುದಾಗಿದೆ. ವಿಭೂತಿ ಸ್ನಾನ, ಮಾಡಿ ವಿಭೂತಿಯನ್ನು ಆಪಾದ ಮಸ್ತಕಕ್ಕೆ ಲೇಪಿಸಿಕೊಳ್ಳು ವುದರಿಂದ ಮಹತ್ಫಲಗಳು ದೊರೆಯುತ್ತವೆ. ಮಲತ್ರಯ ಗುಣತ್ರಯಾದಿಗಳನ್ನು ಸುಟ್ಟ ಬಿಡುತ್ತದೆ. ಬಿಳಿ ಶಾಂತಿ ಸಂಕೇತವೆಂದು ಹೇಳುವದಾದರಿಂದ ಮನಸ್ಸು. ಶಾಂತಿಯುತವಾಗಿ ಕಾಮನೆಗಳನ್ನು ಗೆದ್ದು ಪರಿಶುದ್ಧವಾದುದನ್ನು ಪ್ರತಿಬಿಂಬಿಸುತ್ತದೆ. ಅದಕ್ಕೆ

ಶಿವಪೂಜಾ ತತ್ವರನಾದವನು ಯಾವಾಗಲೂ ರುದ್ರಾಕ್ಷಿಗಳನ್ನು ಧರಿಸಿಕೊಳ್ಳಬೇಕು ಹೀಗೆ ಯಾರು ರುದ್ರಾಕ್ಷಿಗಳನ್ನು ಸದಾ ಭಕ್ತಿ ಭಾವದಿಂದ ಧರಿಸಿಕೊಂಡಿದರೆ ಪಾಪವೆಲ್ಲವು ನಾಶವಾಗಿ ಅಥವಾ ಮೂಢನಾಗಿದ್ದರೂ ಪಾಪವು ಅವನಿಗೆ ಎಂದೆಂದೂ ಸಂಘಟಿಸುವದಿಲ್ಲ. ಅಲ್ಲದೆ ಮಾತೃಹಕ್ಯ, ಪಿತೃ ಹತ್ಯೆ, ಭ್ರೂಣಹತ್ಯೆ, ಕೃತಘ್ನತೆ ಸಕಲ ಪಾಪ ಮಾಡಿದವರಾಗಿದ್ದರೂ ರುದ್ರಾಕ್ಷಧಾರಣವನ್ನು ಮಾಡಿಕೊಂಡ ಮಾತ್ರದಿಂದಲೇ ಎಲ್ಲವು ನಾಶಹೊಂದಿ ಸಕಲ ಪಾಪವಿನಿರ್ಮುಕ್ತನಾಗುತ್ತಾನೆ ಎನ್ನಲಾಗಿದೆ. ಅಂದರೆ ರುದ್ರಾಕ್ಷಿ ಧಾರಣೆಯಿಂದ ಅವನ ಮನಸ್ಸು ವಿಶಾಲವಾಗಿ ಶಿವತತ್ವಗಳಿಗೆ ಮಾರು ಹೋಗಿ ಮಂತ್ರ ಪಟಿಸುವದರಿಂದ ಹಿಂದೆ ಮಾಡಿದ ತಪ್ಪುಗಳನ್ನು ಮುಂದೆ ಮಾಡದೆ ತಿದ್ದುಕೊಂಡು ಹೋಗುವ ಗುಣ ಅರಿಸಿಕೊಳ್ಳುತ್ತದೆ ಎನ್ನಬಹುದು.

**೮. ಮಂತ್ರ** : ಮಂತ್ರವು ಸರ್ವ ಹಂತದಲ್ಲಿ ವ್ಯಾಪಕವಾದ ಶಕ್ತಿ ಹೊಂದಿದೆ, ಈ ಮಂತ್ರದ ಮಹತ್ವವನ್ನು ಎಲ್ಲಾ ಧರ್ಮಗಳಲ್ಲೂ ಒಂದಲ್ಲ ಒಂದು ರೂಪದಲ್ಲಿ ಕಾಣಿಸುತ್ತದೆ. ಮಂತ್ರ ಶಕ್ತಿ ಊರ್ಧ್ವಮುಖವಾಗಿ ಸಾಧಕನ ಅಂತರಂಗದಲ್ಲಿರುವ ದೈವತ್ವ ವನ್ನು ಅನಾವರಣಮಾಡಿ ಸ್ವಸ್ವರೂಪದ ಅರಿವನ್ನು ತಂದು ಕೊಡುವುದರಲ್ಲಿ ಸಹಾಯಕಾರಿಯಾಗಿ ನಿಲ್ಲುತ್ತದೆ. ಅದಕ್ಕೆ ಶರಣರು ಹಲವಾರು ಮಂತ್ರಗಳಿಗೆ ಬೆಲೆ ಕೊಟ್ಟಿರಲಿಲ್ಲ. ಅದಕ್ಕೆ

"ಏಳುಕೋಟಿ ಮಹಾಮಂತ್ರಂಗಳ, ಉಪಮಂತ್ರ ಕೋಟ್ಯನುಕೋಟಿಗಳ
ಕಲಿತು ತೊಳಲಿ ಬಳಲುವುದೇಕೋ ? ಭಾಳಾಕ್ಷನ ಮೂಲ ಮಂತ್ರ
ಒಂದೇ ಸಾಲದೆ ? ಎನ್ನುತ್ತಾರೆ. ಏಳುಕೋಟಿಮಾಹಾ ಮಂತ್ರಗಳಿಗೆ"

( ಎಚ್.ತಿಪ್ಪೇರುದ್ರಸ್ವಾಮಿ:೯೮:೨೪೭)

ಉಪಮಂತ್ರಗಳಿಗೆ ಲೆಕ್ಕವಿಲ್ಲ. ಚಿತ್ತವ್ಯಾಕುಲವಾಗಿ ಭ್ರಮಿಸದಿರಾ ಎನ್ನುತ್ತಾರೆ. 'ಅಕಟಕಟಾ ಬೆಡಗು ಭಿನ್ನಾಣವೆಂದೇನೋ? ಓಂ ನಮಃ ಶಿವಾಯ ಎಂಬುದೇ ಮಂತ್ರ : ಓಂ ನಮ ಶಿವಾಯ ಎಂಬುದೇ ತಂತ್ರ ನಮ್ಮ ಕೂಡಲ ಸಂಗಮ ದೇವರ ನೆನೆಯುವುದೇ ಮಂತ್ರ' ಎಂದು ಬಸವಣ್ಣನವರು ಹೇಳುತ್ತಾರೆ. ಅಷ್ಟೆ ಅಲ್ಲ ಈ ಮಹಾ ಪಂಚಾಕ್ಷರಿಯೇ ಸರ್ವಮಂತ್ರವೆಲ್ಲಕ್ಕೂ, ಉತ್ಪತ್ತಿ ಸ್ಥಿತಿ ಲಯಸ್ಥಾನ ಸರ್ವಕಾರಣವೆಲ್ಲಕ್ಕೆ ಮೂಲವು ಎನ್ನುತ್ತಾರೆ ಶರಣರರು ಇದನ್ನು ಗುರು ರಹಸ್ಯದಲ್ಲಿ ಶಿಷ್ಯನಿಗೆ ಬೋದಿಸಬೇಕೆಂದು ಶಾಸ್ತ್ರ ಹೇಳುತ್ತದೆ. ಅಂತೆಯೇ ಶಿಷ್ಯನಿಗೆ ಗುರು ಉಪದೇಶಿಸುತ್ತಾರೆ. ಈ ಓಂ ನಮ ಶಿವಾಯ ಮಂತ್ರ ಜಪದಿಂದ ಸಕಲವು ಲಭಿಸಿ ಮುಕ್ತಿ ಹೊಂದುತ್ತಾನೆ ಮಂತ್ರವು ಗುರುವಿನಿಂದ ಪಡೆಯಬೇಕಾಗ್ತುದೆ. ಆಗ ಭಕ್ತನನ್ನು ಮಂತ್ರ ಶರೀರಯನ್ನಾಗಿ ಮಾಡಬಲ್ಲದು ಈ ಮಂತ್ರ ದೇಹದ ತುಂಬ ಮಂತ್ರಾಕ್ಷರಗಳು ತುಂಬಿಕೊಂಡಿವೆ

ಎಂದು ಭಕ್ತನು ಅರಿವು ಮಾಡಿಕೊಳ್ಳಬೇಕು. ದೇಹ ಮಲಿನವಾದುದಲ್ಲ, ಹೊಲಸಲ್ಲ ನರಜನ್ಮವೆಂದು ತಿಳಿಯದೇ ಹರಜನ್ಮವೆಂದೇ ತಿಳಿದು ಬಾಳಬೇಕೆಂದು ಹೇಳುತ್ತದೆ.

ಶರಣರು ಈ ಮಂತ್ರದ ಈ ಮಹತ್ವವನ್ನು ಬಹು ಮಾರ್ಮಿಕವಾಗಿ ಚಿಂತಿಸಿದ್ದಾರೆ ಹೀಗಾಗಿ ಷಟಸ್ಥಲದ ಆಚರಣೆಯಲ್ಲಿ ಮಹತ್ವ ನೀಡಿದು ಕಾಣುತ್ತೇವೆ. ಇದು ಶಿವಯೋಗದ ಮೊದಲನೆ ಹಂತದಿಂದ ಕೊನೆಯ ಹಂತದವರೆಗೂ ಇದರ ವ್ಯಾಪಕವಾದ ಶಕ್ತಿ ಹರಡಿದೆ ಶಿವನ ನೆನಹಿನ ನಾದರೂಪಿಯಾದ ಈ ಮಂತ್ರದಿಂದ ಬಾಳಿ ಬೆಳಗಲು ಮಂತ್ರದಿಂದ ಸಾಧ್ಯವಾಗುತ್ತದೆ.

ಅಷ್ಟವರ್ಣಗಳು ಪಂಚಾಚಾರಗಳು ಮತ್ತು ಷಟಸ್ಥಲಗಳು ಇವುಗಳು ವೀರಶೈವ ಧರ್ಮದ ಪ್ರಮುಖ ತತ್ವಗಳಾಗಿವೆ. ಇವು ಜಂಗಮಗುರುಗಳು ತಮ್ಮ ಭಕ್ತರಿಗೆ ಉಪದೇಶಿಸಿ ಅವರ ಸಾಮಾಜಿಕ ಜೀವನದಲ್ಲಿ ಸುಗಮ ತರುವಲ್ಲಿ ಪ್ರಯತ್ನಿಸುತ್ತಾರೆ. ಇವುಗಳು ಮನುಷ್ಯನ ಪ್ರತಿಯೊಂದು ರಂಗಗಳಲ್ಲಿ ರಕ್ಷಿಸಿ ಕಾಪಾಡುತ್ತೆವೆ. ಇಷ್ಟೆ ವ್ಯತ್ಯಾಸವೆಂದರೆ ? ಈ ಎಲ್ಲಾ ತತ್ವಗಳು ನೇರವಾಗಿ ಹೇಳದೆ ನೇಮಬದ್ಧವಾಗಿ ಹೇಳಿರುವುದು ಗಮನಿಸಬೇಕಾದದ್ದು ನೇರವಾಗಿ ಹೇಳಿದರೆ ಯಾವ ವ್ಯಕ್ತಿಯು ಕೇಳುವದಿಲ್ಲ ಅಷ್ಟೆ ಏಕೆ ? ಬೆಲೆನೊ ಇರುವದಿಲ್ಲ ಎನ್ನಿಸುತ್ತದೆ. ಹೀಗಾಗಿ ತಮ್ಮ ಪುರಾತನರು ಅವುಗಳಿಗೆ ಒಂದೊಂದು ರೀತಿಯಲ್ಲಿ ಬಳಸುವ ಕ್ರಮವನ್ನು ಮಾಡಿಕೊಟ್ಟರು. ಇವುಗಳು ಮನುಷ್ಯನಿಗೆ ದೇಹಕ್ಕೆ ಆಯೋಗ್ಯಕರವಾದವುಗಳು ಮತ್ತು ಮನಸ್ಸನು ವಿಶಾಲಗೊಳ್ಳಿಸುವವುಗಳಾಗಿವೆ. ಅಂತೆಯೇ ಇದನ್ನು ಹೇಗೆ ಬಳಸಬೇಕು, ಹೇಗೆ ಧರಿಸಬೇಕು ಎಂದು ವ್ಯವಸ್ಥಿತವಾಗಿ ಹೇಳಿಕೊಟ್ಟರು ಮುಂದೆ ಆದುವೇ ನೇಮದಂತೆ ಪಾಲಿಸಿಕೊಂಡು ಸಾಗುತ್ತಾ ಬಂದಿರುವದು ಅರಿಯಬೇಕಾದುದ್ದು ಅದಕ್ಕಾಗಿ ದೊಡ್ಡ ದೊಡ್ಡ ಮಠದ ಜಂಗಮರು ಭಕ್ತಾದಿಗಳಿಗೆ ಮಠಗಳಲ್ಲಿ ಉಪದೇಶಿಸುತ್ತಾ ನಡೆದರು ಉಳ್ಳಿದ ಮರಿಜಂಗಮರು ಊರು ಊರುರಿಗೆ ಸಾಗುತ್ತಾ ಭಕ್ತರಿಗೆ ತತ್ವಗಳನ್ನು ಪ್ರಸಾರ ಮಾಡುತ್ತಾ ಅವರ ಮನಸ್ಸು ಶುಚ್ಚಿ ಗೋಳಿಸುತ್ತ ನಡೆದರು. ವೀರಶೈವು ಪ್ರತಿಯೋಬ್ಬರು ತಪ್ಪದೇ ತತ್ವಕ್ಕೆ ಅಂಟಿಕೊಂಡು ತಮ್ಮ ಜೀವನವನ್ನು ಸಾಗಿಸಬೇಕು ಮಾನವನಾದ ಮೇಲೆ ಮಾನವನಂತೆ ವೃತ್ತಿಸಿ ದಾನವ ಗುಣಗಳು ಬಿಟ್ಟು ಪರಮಾತ್ಮನ ಸಮೀಪ ಸಾಗುವದು ಮನವ ಧರ್ಮ ಎಂದು ಸಾರುತ್ತಾ ದೇಶ ಸಂಚಾರ ಮಾಡುತ್ತಾ ನಡೆದರು. ಮುಂದೆ ಜಂಗಮರು ದೇಶ ಸುತ್ತುತ್ತಾ ಬಂದಂತೆ ಒಂದೊಂದು ಊರಿನಲ್ಲಿ ಹಾಗೇಯೇ ನೆಲೆಸಿ ಮಠ ಕಟ್ಟಿಕೊಂಡು ನೆಲೆಸುತ್ತಿದ್ದರು. ಭಕ್ತರ ಭಕ್ತಿಯಿಂದ ನೀಡಿದ ಪ್ರತಿಯೊಂದು ಸ್ವೀಕರಿಸಿ ಸಮಾಜವನ್ನು ನಡೆಸುವ ಚಾಲಕನಾಗಿ

ಬೆಳಕಾಗಿ ಕಂಡುಕೊಂಡು ಇವುಗಳಲ್ಲದೇ ಇನ್ನು ಅನೇಕ ಧಾರ್ಮಿಕ ಕ್ರಿಯಾ ಕ್ರಮಗಳನ್ನು ನೇರವೇರಿಸಿ ಭಕ್ತಭಯ ಭಿತ್ತಿಯನ್ನು ದೂರ ಮಾಡಿದ ಅನೇಕ ಧಾರ್ಮಿಕ ಕಾಯಕಗಳು ಕೆಳಗಿನಂತೆ ಗಮನಿಸಬೇಕು.

## ೪. ಧಾರ್ಮಿಕ ಕಾಯಕದ ಜಂಗಮರು

**೪.೧. ಕಾಲಜ್ಞಾನದ ಜಂಗಮ :** "ಯಾವುದಾದರೂ ಕಾರ್ಯವನ್ನು ಮಾಡಲು ತಕ್ಕ ಸಮಯ, ಕಾಲ, ಋತುಮಾನಗಳನ್ನು ತಿಳಿದವನೇ ಕಾಲಜ್ಞ"(ಹೆಬ್ಬಾಳ ಜಗನ್ನಾಥ:೧೯೯೯ :೧೬೬). ಇದರ ಬಗ್ಗೆ ಆಳವಾದ ಅಧ್ಯಯನ ಮಾಡಿದವನೆ, ತಿಳಿದುಕೊಂಡವನೆ ಜಂಗಮ. ಈ ಜಂಗಮ ಭವಿಷ್ಯವನ್ನು ಹೇಳುವುದರಲ್ಲಿ ಚುರುಕಾಗಿರುತ್ತಾರೆ. ಇದು ಅವರ ಕಲೆಯಾಗಿದೆ. ರಾತ್ರಿಯ ಮೂರು ಗಂಟೆಯ ಸುಮಾರಿಗೆ ಕೈಯಲ್ಲಿ ಕಂದೀಲು, ಹಿಡಿದುಕೊಂಡ ಕಾವಿ ಬಟ್ಟೆ ಹಾಕಿಕೊಂಡು ವಿಭೂತಿಯನ್ನು ಹಚ್ಚಿಕೊಂಡು ಕೊರಳಲ್ಲಿ ರುದ್ರಾಕ್ಷಿಯನ್ನು ಹಿಡಿದುಕೊಂಡು ಹಾಡಿನ ಮುಖಾಂತರ ಕಾಲಜ್ಞಾ ವಚನಗಳನ್ನು ಹೇಳುವರು. ಭಕ್ತರ ಮನೆಕಾಯುವುದು ಭವಿಷ್ಯತ್ತಿನ ಬಗ್ಗೆ ತಿಳಿಸುವುದು ಇವರ ಅಂತರಜ್ಞಾನದ ಸಂಕೇತವಾಗಿದೆ. ಈ ವಿದ್ಯಾ ಅವರು ಗುರುಕುಲಗಳಲ್ಲಿ ಕಲಿಯುತ್ತಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಇಬ್ಬರೂ, ಮೂವರು ಸ್ವಾಮಿಗಳು ಕೂಡಿಕೊಂಡು ಕಾಲಜ್ಞಾನವನ್ನು ಹೇಳುತ್ತಾ ಬರುವುದು ಜಿಲ್ಲೆಯಲ್ಲಿ ಕಂಡುಬರುವುದು. ಒಂದು ಎತ್ತು ( ಇದಕ್ಕೆ ಕಂಟಲ್ಯಾ ಎಂದು ಕರೆಯುತ್ತಾರೆ) ಹೊಡೆದುಕೊಂಡು ಅದಕ್ಕೆ ಮೈ ತೊಳೆದು ವಿಭೂತಿಯಿಂದ ಮೈಯಲ್ಲಾ ಪೂಜಿಸಿ ಹಣೆಯ ಮೇಲೆ ಬಿಲ್ವ ಪತ್ರಿಯನ್ನು ಇಟ್ಟು, ಬೆನ್ನಿನ ಮೇಲೆ ಶಾಲು ಹಾಕಿ ಹೊರಡುತ್ತಾರೆ. ಮುಂದೆ ಹಾಡಿನ ರೂಪದಲ್ಲಿ ಕಾಲಾಜ್ಞಾನವನ್ನು ಹಾಡುತ್ತಾ ದಾನವನ್ನು ಪಡೆದುಕೊಳ್ಳುವುದು ಜಂಗಮರ ಕಾಯಕದಲ್ಲಿ ಒಂದು. ಇದು ಕಲೆಯು ಹೌದು, ಕಾಯಕವು ಹೌದು, ಭವಿಷಯ್ಯತ್ತಿನ ಬಗ್ಗೆ ಅದು ಜಂಗಮ ಪಡೆದುಕೊಂಡು ಸಮಾಜಕ್ಕೆ ತಿಳಿಸುವುದು ಒಂದು ಕಲೆ ಎಂದೇ ಇಲ್ಲ ಹೇಳಬಹುದು. ಅವರು ತಿಳಿಸುವ ಕೆಲವು ಕಾಲಜ್ಞಾನದ ವಚನಗಳು ಇಂತಿವೆ.

"ಕ್ವಾಟಿ ಪಾಯ ಹಾಕ ಮುಂದ
ದಾರಿ ತಿಳಿದಾತಣ್ಣ
ಕರಿ ಮಸೀದಿ ಮುಂದ
ಏಳು ಖಂಡುಗ ಬಳಿ ಒಡೆವರು

ನೋಡಿರಣ್ಣ
ಭಾಲ್ಕಿ ಸಿದ್ದೇಶ್ವರನ ಸವಾರಿ
ಕ್ವಾಟಿಗಿ ಬಂದಾತಣ್ಣ
ಅತ್ತಿಗೆ ಸೊಸಿ ಬಂದು
ಕಾಲಲ್ಲಿ ಒದ್ದಲೋ ನೋಡಿರಣ್ಣ'
'ಬೊಮ್ಮಗೊಂಡನ ಕೆರಿ ಮ್ಯಾಲ
ಹುರದುಳ್ಳ ಆದಾತಣ್ಣ
ಲೆಕ್ಕಿಲ್ಲದ ಕರಿ ಕಾಗಿ ಬಂದು
ಕೀಲಾದ (ಕೋಟೆ) ಮ್ಯಾಲ ನೀರ ಕೂಡಿತಾದಣ್ಣ"(ಅವರೇ:೧೬೬)

"ಮಹಾತ್ಮರು ಹೇಳಿದ್ದು ಕೇಳಿರಣ್ಣಾ
ಒಂದು ಒಂದು ಉಳ್ಳಾಗಡ್ಡಿಗೆ
ಹೆಣ್ಣಾಗುವುದೋ
ಹೆಣ್ಣಿನ ಮುಂದೆ ಮಣ್ಣಾಗುವುದೋ"
ಮುಂದಿನ ದಿನಮಾನಗಳು ತುಂಬ ತುಟ್ಟಿ ಕಾಣಿರಣ್ಣಾ
ಕಲ್ಲಿನ ಕೋಳಿ ಕೂಗುತಾವಣ್ಣಾ
ಮನುಷ್ಯ ಮನುಷ್ಯನ ಕೈಯಲ್ಲಿ ಜೋಳಗಿ ಬರುತಾವಣ್ಣಾ
.........................................................
ಈ ಮಾತು ಸತ್ಯ ತಿಳಿಯೋಣ್ಣಾ

ಹೀಗೆ ಹಲವಾರು ತತ್ವ ಪದಗಳಂಥ ಮುಂದಿನ ದಿನಮಾನಗಳ ಭವಿಷ್ಯವನ್ನು ನುಡಿಯುತ್ತಾ ಸಾಗುತ್ತಾರೆ. ಇಂತಹ ಕಾಯಕಮಾಡುವನಿಗೆ ಕಾಲಜ್ಞಾನ ಹೇಳುವ ಜಂಗಮನೆಂದು ಕರೆಯುತ್ತಿದ್ದರು. ಇದು ರಾತ್ರಿಯ ವೇಳೆಯಲ್ಲಿಯೇ ಈ ಕಾಯಕ ನಡೆಯುತ್ತದೆ ಎಂದರೆ ಇದು ತುಂಬ ಗಂಭೀರವಾದದ್ದು ಅಷ್ಟೇ ತರ್ಕವಾದದ್ದುಯಾಗಿದೆ. ಇದು ಬಹುಷ್ಯ ಬಸವಾದಿ ಶರಣರು ರಾತ್ರಿ ಮೂರರ ವೇಳೆಗೆ ಸರ್ವರು ನಿದ್ರೆಯಲ್ಲಿ ಇರುತ್ತಾರೆ ಇಂತಹ ಸಮಯದಲ್ಲಿ ಕಳ್ಳರಕಾಟ ಹೆಚ್ಚಾಗಿರುತ್ತೆಂದು ತಿಳಿದು ಇಂದಿನ ಪೋಲೀಸರಂತೆ ಜನರ ಆಸ್ತಿ ಪಾಸ್ತಿಯನ್ನು ಕಾಯುವದು ಈ ಜಂಗಮನ ಕರ್ತವ್ಯವಾಗಿದೆ ಎನ್ನುವುದು ಗಮನಿಸಬೇಕು. ಹೀಗಾಗಿಯೇ ಶರಣರು ಈ ಕಾಯಕವನ್ನೆ ಹುಟ್ಟುಹಾಕಿ ಜಂಗಮನ ಪಾಲಿಗೆ ಇಟ್ಟಿದ್ದರು ಎಂಬುದು ಸೂಕ್ತವಾಗಿದೆ.

**೪.೨. ಗಂಟೆ ಕಾಯಕದ ಜಂಗಮ :** ಇದು ಕಾಲಜ್ಞಾನದ ಅಯ್ಯನವರು ಬಂದು ಹೋದ ನಂತರ ಗಂಟೆಕಾಯಕದ ಜಂಗಮ ಬರುತ್ತಾರೆ. ಇವರು ನಸುಕಿನ ಐದು ಗಂಟೆಯ ಕಾಯಕದ ಜಂಗಮ ಬರುತ್ತಾರೆ. ಇವರು ನಸುಕಿನ ಐದು ಗಂಟೆಯ ಹೊತ್ತಿಗೆ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಅಥವಾ ಕೈಯಲ್ಲಿ ಗಂಟೆ ಹಿಡಿದು ಎಡಗೈಯಲ್ಲಿ ಜೋಳಿಗೆಯನ್ನು ಹಿಡಿದು ಗಂಟೆ ಬಾರಿಸುತ್ತಾ ಭಕ್ತರ ಮನೆ ಮನೆ ಬಾಗಿಲಿಗೆ ಹೋಗುತ್ತಾರೆ. ಜನರು ಗಂಟೆ ಜಂಗಮ ಬರುತ್ತಿದ್ದಾರೆ ಎಂದು ತಿಳಿದು ಬೇಗನೆ ಎದ್ದು ಎತ್ತುಗಳು ಹೋಡೆದುಕೊಂಡು ಹೊಲಕ್ಕೆ ಸಾಗುವದು, ಹೆಣ್ಣು ಮಕ್ಕಳು ಎದ್ದು ಜೋಳ ಬಿಸುವುದು ಕುಟ್ಟುವದು ಆರಂಭ ಸುರುವಾಗುತ್ತದೆ. ಅಂದರೆ ಭಕ್ತರಿಗೆ ನಸುಕಿನಲ್ಲಿ ಎಬ್ಬಿಸಿ ಅವರವರ ಕಾಯಕಗಳಲ್ಲಿ ತೋಡಗಿಸುವ ಈ ಕಾಯಕ ಆರಂಭವಾಯಿತು. ಆಗ ಜಂಗಮ ಪ್ರತಿಯೊಬ್ಬರ ಮನೆಗೆ ಹೋಗುತ್ತಾನೆ. ಏಕೆಂದರೆ ಭಕ್ತರು ಎದ್ದು ದಿನನಿತ್ಯದ ಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದಾರೋ ಇಲ್ಲಾ ಎಂಬುದು ಗಮನಿಸುತ್ತಾರೆ. ಎದ್ದರೆ ಒಂದು ಹಿಡಿ ಹಿಟ್ಟು ಜೋಳಿಗೆಯಲ್ಲಿ ಹಾಕಿ ಪಾದಕ್ಕೆ ನಮಸ್ಕರಿಸುತ್ತಾರೆ. ಹೀಗೆ ಹಿಟ್ಟಿನ ಭಿಕ್ಷೆ ತೆಗೆದುಕೊಳ್ಳುತ್ತಾ ಸಾಗುತ್ತಾರೆ. ಹೀಗೆ ಮಾಡುವುದರಿಂದ ಪ್ರತಿಯೊಬ್ಬ ಭಕ್ತನ ಮನೆಯ ಸಮಚಾರ ಗೊತ್ತುಪಡಿಸಿಕೊಂಡು ಮಠಾಧೀಶರಿಗೆ ತಿಳಿಸುತ್ತಿದ್ದರು. ಈ ಕಾಯಕಕ್ಕೆ ಜಂಗಮನಿಗೆ ಹಿಟ್ಟು ದೊರೆಯುತ್ತಿತ್ತು. 'ಗುರು ಧರ್ಮ ಸಯಂಪಾಕ ಭಿಕ್ಷೆ' ಎಂದು ಕೂಗಿ ಪಡೆಯುತ್ತಾರೆ. ಇಂದಿಗೂ ಜಿಲ್ಲೆಯಾದಂತೆ ಈ ಕಾಯಕದವರು ಸಿಗುತ್ತಾರೆ. ಎಷ್ಟೋ ಜಂಗಮರು ಈ ಕಾಯಕದ ಮೇಲೆನೇ ಅವಲಂಬಿತರಾಗಿದ್ದಾರೆ ಎಂಬುದು ಕಾಣುತ್ತೇವೆ.

**೪.೩. ಕಂತೇ ಭೀಷದ ಜಂಗಮ (Ready Made Food):** ಕಾಂತೆ ಭಿಕ್ಷೆಯನ್ನು ಬೇಡುವ ಜಂಗಮರು ಬೆಳಿಗ್ಗೆ ಸುಮಾರು ಹತ್ತು - ಹನ್ನೆರಡು ಗಂಟೆಗೆ ಬರುತ್ತಾರೆ. ಅಂದರೆ ಇಲ್ಲಿ ಎಲ್ಲಾ ಭಕ್ತರು ಬೆಳಗಿನಿಂದ ಎದ್ದು ದಿನದ ಕಾರ್ಯಕ್ರಮಗಳು ಮಾಡಿಕೊಂಡರೂ ಇಲ್ಲವೋ ಎಂಬುದು ಈ ಭಿಕ್ಷೆಯಿಂದ ತಿಳಿದಿಕೊಳ್ಳುತ್ತಿದ್ದರು. ಹೀಗೆ ಎಂದರೆ ಈ ಜಂಗಮ ಪ್ರತಿಯೊಬ್ಬರ ಭಕ್ತರ ಮನೆಗೆ ಹೋಗಿ (ಭಿಕ್ಷೆ) 'ಶ್ರೀ ಗುರು ಕಾಂತೆ ಭಿಕ್ಷೆದೇಹೇ' ಎನ್ನುತ್ತಾರೆ. ಎಲ್ಲರೂ ಇದ್ದ ಪ್ರಸಾದ (ಅಡಿಗೆ)ತಂದು ನೀಡುತ್ತಾರೆ. ಇದು ಜಂಗಮ ಮಠಕ್ಕೆ ತೆಗೆದುಕೊಂಡು ಹೋಗುತ್ತಾರೆ. ಮಠಕ್ಕೆ ಬಂದ ಭಕ್ತರಿಗೆ ಕಂತೇ ಭಿಕ್ಷೆಯ ರೊಟಿ, ಹಿಟ್ಟಿನ ಸಾಂಬರ ನೀಡಿ ಸಂತೃಪ್ತಪಡಿಸುತ್ತಾರೆ. ಒಂದು ಕಡೆಯಿಂದ ತಂದು ಇಂದು ಕಡೆ ಕೊಡುವುದು ಅಂದರೆ ಕೆರೆಯ ನೀರು ಕೆರೆ ಚಲ್ಲಿ ಎನ್ನುವಂತೆ ಜಂಗಮ ಕಾಯಕವಾಗಿದೆ. ಕೆಲವರು ಕಾಂತೀ ಭಿಕ್ಷೆ ನೀಡದಿದ್ದಲ್ಲಿ ಅದನ್ನು ತಿಳಿದು ಇಂತಹ ಮನೆಯವರು ಕಾಂತೇಭಿಕ್ಷೆ ನೀಡಿಲ್ಲವೆಂದು ಮಠದ ಜಂಗಮನಿಗೆ ಕಾಂತೆ ಭಿಕ್ಷೆ

ಜಂಗಮ ಹೇಳುತ್ತಾರೆ. ಆಗ ಮುಂದಿನ ಕ್ರಿಯೆ ಮತ್ತೊಬ್ಬ ಜಂಗಮ ಕೈಗೊಂಡಿರುತ್ತಾರೆ. ಈ ಕಾಯದಿಂದ ಭಕ್ತರ ಯೋಗ ಕ್ಷೇಮವನ್ನು ವಿಚಾರಿಸುವದಕ್ಕೆ ಒತ್ತು ಕೊಟ್ಟಂತೆ ತೋರುತ್ತದೆ.

**೪.೪. ಸುವ್ವಿ ಬಾ ಸಂಗಯ್ಯ ಕಾಯಕ :** ಈ ಜಂಗಮನಿಗೆ ಸಮಾಜದ ಗುಪ್ತಚರದವನೆಂದು ಕರೆಯುತ್ತಾರೆ. ಮುಸ್ಲಿಂರ ಆಳ್ವಿಕೆ ಪೂರ್ವದಲ್ಲಿ ಅಥವಾ ಬಸವಣ್ಣನವರ ಕಾಲದಲ್ಲಿ ಕೆಲವೊಂದು ಸಾಂಕೇತಿಕ ಮೂಲಕಗಳಿಂದ ಅನೇಕ ವಿಷಯಗಳನ್ನು ಪ್ರಸಾರಮಾಡುತ್ತಿದ್ದರು. ಏಕೆಂದರೆ ಅಂದಿನ ಸಂದರ್ಭಗಳಲ್ಲಿ ಧರ್ಮ ಪ್ರಸಾರಮಾಡುವುದು ತುಂಬ ಕಷ್ಟಕರವಾಗಿತ್ತು. ಅಂತೆಯೇ ಲಿಂಗವನ್ನು ಇಟ್ಟುಕೊಳ್ಳುವ ಲಿಂಗದಕಾಯಿ ಮುಸ್ಲಿಂರ ಚಾರಮೀನರಿನ ರೀತಿಯೊಳಗೆ ಮಾಡಿಸಿಕೊಂಡು ಲಿಂಗ ಪೂಜೆ ಮಾಡುತ್ತಿದ್ದರು ಎನ್ನುವುದಕ್ಕೆ ಸಾಕ್ಷಿ. ಇದೇನು ಎಂದರೆ ಅಲ್ಲನನ್ನು ಪೂಜಿಸುವ ಕಾಯಿ ಎಂದು ಹೇಳುತ್ತಿದ್ದರು. ಅಲ್ಲದೆ ಸಮಾಜದಲ್ಲಿ ನಡೆಯುವ ಘಟನಾವಳಿಗಳನ್ನು ತಿಳಿದುಕೊಂಡು ಬಂದು ಮಹಾಮಂತ್ರಿ ಬಸವಣ್ಣನವರಿಗೆ ತಿಳಿಸಿ ಸಮಸ್ಯೆಯನ್ನು ಪರಿಹರಿಸುವಲ್ಲಿ ಸಹಕರಿಸುತ್ತಿದ್ದರು. ಇದಕ್ಕೆ ಪ್ರತಿಫಲವಾಗಿ ಭಿಕ್ಷೆ ತೆಗೆದು ಕೊಳ್ಳುತ್ತಿದ್ದರು. ಇಂತಹ ಕಾಯಕ ಇಂದು ಕಣ್ಮರೆಯಾಗಿರುವುದು ತುಂಬ ಸೂಚನೀಯ. ಇವರ ಆಧಾರಗಳ ಮೇಲೆ ಗುಪ್ತಚಾರದ ಅಧಿಕಾರಿಗಳನ್ನು ನೇಮಿಸಿ ಇಂದಿನ ದೇಶದಲ್ಲಿ ನಡೆಯುವ ಅಹಿತಕರ ಘಟನೆಗಳನ್ನು ಪತ್ತೆ ಹಚ್ಚಿ ಶಿಕ್ಷಿಸುವುದು ಕಾಣುತ್ತೇವೆ. ಈ ಕೆಲಸ ಅಂದೇ ಜಂಗಮರು ನೇರವೇರಿಸಿಕೊಂಡು ಸಮಾಜದ ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬರುತ್ತಿದ್ದರು ಎನ್ನುವುದಕ್ಕೆ ಈ ಕಾಯಕವೆ ಸಾಕ್ಷಿ.

**೪.೫. ತೆಕ್ಕೆ ಕಾಯಕ ಜಂಗಮು :** ಈ ಮೇಲಿನ ಜಂಗಮರ ಕಾಯಕಗಳಾದ ನಂತರ ತೆಕ್ಕೆ ಕಾಯಕದ ಜಂಗಮರು ಬರುತ್ತಾರೆ. ಕಾಲಜ್ಞಾನದ ಜಂಗಮ, ಗಂಟೆ ಕಾಯಕದ ಜಂಗಮ, ಕಾಂತೀ ಭೀಕ್ಷೆ ಕಾಯಕದ ಜಂಗಮ ಮತ್ತು ಸ್ವುವಿಬಾ ಸಂಗಯ ಕಾಯಕದ ಜಂಗಮರು ಭಿಕ್ಷೆ ಬೇಡುವ ಸಂದರ್ಭದಲ್ಲಿ ಪ್ರತಿಯೊಂದು ಮನೆಗೆ ಹೋಗಿ ಭಿಕ್ಷೆ ತೆಗೆದುಕೊಳ್ಳುತ್ತಿದ್ದರು. ಒಂದು ವೇಳೆ ಯಾವನೊಬ್ಬ ಭಕ್ತನು ಆ ದಿನ ಭಿಕ್ಷೆ ನೀಡದೆ ಇದ್ದಾಗ ಅವನ ಮನೆಯಲ್ಲಿ ಏನೋ ? ಒಳಕಲಹಗಳು ನಡೆದಿರಬೇಕು ಅಥವ ಭಕ್ತನು ಅಡ್ಡದಾರಿ ಹಿಡಿದು ತನ್ನ ಸಂಸಾರವನ್ನು ದುಃಖದಲ್ಲಿ ಮುಳುಗಿಸಿರಬಹುದೆಂದು ತಿಳಿದು ಆ ಮನೆಯ ಸುದ್ದಿ ಮಠದಯ್ಯಾನಿಗೆ ತಿಳಿಸುತ್ತಾರೆ. ಆಗ ಮಠದಯ್ಯಾನ ತಕ್ಕೆ ಕಾಯಕದ ಜಂಗಮರಿಗೆ ಆ ಮನೆಗೆ ಕಳುಹಿಸಿ ತೆಕ್ಕೆ ಕಾಯಕ ಮುಂದುವರೆಸೆಂದು ಆದೇಶಿಸುತ್ತಾರೆ. ಅದರಂತೆ ಆ ಜಂಗಮ ಬಂದು ಯಾವ ಭಕ್ತನು ಭಿಕ್ಷೆಯನ್ನು ನೀಡಲಿಲ್ಲ ಅವನಮನೆಗೆ ಹೋಗಿ ಮನೆಯಲ್ಲಿನ ಒಂದು ಕಂಬಕ್ಕೆ

ತೆಕ್ಕೆ ಹಿಡಿದು ನಿಲ್ಲುತ್ತಾನೆ. ಆಗ ಶಿವನನು, ಶಿವಶರಣರನ್ನು ಪುರಾವಜರನ್ನೆ, ಹಿರಿಯ ಮಹತ್ಮರನ್ನು ಅರವತ್ತು ಮೂರು ಮಂದಿ ಪುರಾತನರನ್ನು ಪ್ರಾರ್ಥಿಸಿದ, ಮನೆಯ ಯಜಮಾನನ ಹೆಸರಿನಿಂದ (ಬಸಪ್ಪ) ಇವರಿಗೆ ಸದ್ಬುದ್ಧಿ, ಕಲ್ಯಾಣಗುಣ ಪ್ರಾಪ್ತವಾಗಲಿ, ಕುಟುಂಬಕ್ಕೆ ನೆಮ್ಮದಿ ನೆಲಸಲಿ ಎಂದು ಓಂ ನಮ ಶಿವಾಯ ಎಂದು ಮಂತ್ರ ಪಟಿಸುತ ಊಟ, ನೀರು ಇರಲಾರದೇ ಮನೆಯಲ್ಲಿ ನಿಂತು ಬಿಡುತ್ತಾನೆ. ಆ ಮನೆಯ ಭಕ್ತ ತಪ್ಪನು ಒಪ್ಪಿಕೊಂಡು ಜಂಗಮನ ಪಾದಕ್ಕೆ ನಮಸ್ಕರಿಸಿದ ನಂತರವೇ ಜಂಗಮ ತೆಕ್ಕೆ ಬಿಟ್ಟು ಸರಿದು ಅವರ ಮನೆಯಲ್ಲಿಯೇ ಸ್ನಾನ ಪೂಜಾದಿನಗಳನ್ನು ಮುಗಿಸಿ ಪ್ರಸಾದ ತೆಗೆದುಕೊಂಡು ಬರುತ್ತಾರೆ. ಆ ತಪ್ಪಿಗೆ ಮನೆಯ ಭಕ್ತ ಇಷ್ಟು ದಂಡ ಕೊಡಬೇಕೆಂದು ಹೇಳುತ್ತಾನೆ(ದಂಡ ಜೋಳ, ಗೋದಿ, ಇತ್ಯಾದಿ ಮಠಕ್ಕೆ ಕೊಡಲಾಗುತ್ತದೆ). ನಂತರ ಜಂಗಮನಿಗೆ ಹಣ ಅಥವಾ ಜೋಳ ನೀಡಿ ಗೌರವಿಸುತ್ತಾರೆ. ಈ ಕಾಯಕ ತುಂಬ ಮಹತ್ವದಾದದ್ದು ಕೆಟ್ಟು ಹೋಗುವ ಮನಸ್ಸುಗಳನ್ನು ಹಿಡಿತದಲ್ಲಿಟ್ಟು ಜೀವಿಸುವುದನ್ನು ಕಲಿಸಿಕೊಡುತ್ತಾರೆ. ಉದಾಹರಣೆಗಾಗಿ ಹೇಳುವುದಾದರೆ. ವ್ಯಕ್ತಿ ಇತರ ಹೆಣ್ಣಿನ ಹಿಂದೆ ಹೋಗುವು ದಾಗಲಿ, ಸೆರೆ ಸಿಂಧಿ ಸೆವಿಸುವುದಾಗಲಿ, ಪೂಜಾದಿಗಳನ್ನು ನಿರಕರಿಸಿದಾಗಲಿ ಇತರ ಕೆಟ್ಟ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದಾಗಲಿ ಈ ಕಾಯಕದ ಮೂಲಕ ಜಂಗಮರು ಆತನನ್ನು ಸನ್ಮಾರ್ಗದಡೆಗೆ ತರುವುದರಲ್ಲಿ ಈ ಕಾಯಕ ತುಂಬ ಸಹಕಾರಿಯಾಗುತ್ತಿತ್ತು.

**೪.೬. ಮುಳ್ಳಹಾವಿಗೆ ಕಾಯಕದ ಜಂಗಮ :** ಇದರ ಉದ್ದೇಶ ಮನೆಯ ಜಗಳಗಳನ್ನು ಪರಿಹರಿಸಲು ಹಾಕಿಕೋಳ್ಳುತ್ತಿದ ಕಾಯಕ ತೆಕ್ಕೆ ಕಾಯಕದ ಜಂಗಮರು ತಪ್ಪು ಮಾಡಬಾರದೆಂದು ಹೇಳಿದರು ಕೇಳದ ಪಕ್ಷದಲ್ಲಿ ಮುಳ್ಳಾಹಾವಿಗೆ ಕಾಯಕದ ಜಂಗಮ ಬರುತ್ತಾರೆ ಮೈಯಿಗೆ ಕಾವಿ ಬಟ್ಟೆ ಹಾಕಿಕೊಂಡು, ಕಾವಿ ರುಮಾಲು ಧರಿಸಿ ದೊಡ್ಡ ವಿಭೂತಿ ಹಣೆಯ ಮೇಲೆ ಹಚ್ಚಿಕೊಂಡು ಕೈಯಲ್ಲಿ ತ್ರಿಶೂಲ, ಭಯಂಕರ ಮೂರ್ತಿಹಾಗಿ ಆ ಭಕ್ತನ ಹೊಸ್ತಿಲ ಬಳಿ ನಿಂತು ಜಾಗಟೆ ಬಾರಿಸಿಸುತ್ತಾ ನಿಲ್ಲುತ್ತಾನೆ. ಶಿವನನ್ನು ಶಿವಶರಣರನ್ನು ಪುರಾತನರನ್ನು ಆರವತ್ತು ಮೂರು ಮಂದಿ ಪುರಾತನರನ್ನು ನೆನೆದು ಈ ಭಕ್ತನಿಗೆ ದುರ್ಗುಣ ಅಳಿಯಲಿ, ಅನಾಚಾರದಿಂದ ಸನ್ನಡತೆಗೆ ಬಂದು ಸದಾಚಾರಿಯಾಗಿ ಬಾಳುವ ಕಲ್ಯಾಣ ಗುಣಗಳೂ ಪ್ರಾಪ್ತವಾಗಲಿ ಎಂದು ಪ್ರಾರ್ಥಿಸಿ ಹೆಗಲ ಮೇಲಿದ್ದ ಮುಳ್ಳಾವಿಗೆ ತೆಗೆದು ಹೊಸ್ತಿಲ ಮುಂದಿಟ್ಟು ನಿಂತುಬಿಡುತ್ತಾನೆ. ಇದು ಜಾಗಟೆ ಬಾರಿಸಿದ ನಾದಿಗೆ ಊರಿನವರು ಇಂತಹವರ ಮನೆಯಲ್ಲಿ ಜಗಳ ನಡೆದಿದೆ ಎಂದು ತಿಳಿದು ಕೊಳ್ಳುತ್ತಾರೆ ಊರಿನ ಹಿರಿಯರು ಜಂಗಮ ಮುಳ್ಳಾವಿಗೆಯ ಮೇಲೆ ನಿಂತಿದರೆ ನಮ್ಮ ಊರಿಗೆ ಸರಿಯಾಗುವುದಿಲ್ಲ ಎಂದು ತಿಳಿದು ಬೇಗನೆ ಮನೆಯಲ್ಲಿ

ತಪ್ಪು ಮಾಡಿದವನನ್ನು ಕರೆಯಿಸಿ ಎಂದು ಹೇಳಿ ಆವನ ತಪ್ಪುಗಳನ್ನು ಮತ್ತೆ ಒಪ್ಪಿಕೊಂಡು ನಂತರವೇ ಜಂಗಮ ಮುಳ್ಳಾವಿಗೆಯಿಂದ ಇಳಿದು ಭಕ್ತರಿಗೆ ಆರ್ಶೀವದಿಸುತ್ತಾರೆ. ಇಲ್ಲವಾದರೆ ಅದೇ ಮುಳ್ಳಾವಿಗೆಯ ಮೇಲೆ ನಿಂತು ತನ್ನ ಪ್ರಾಣವನ್ನು ನೀಡುತ್ತಾರೆ. ಇಂತ ಕಾಯಕದ ಕುರಿತು ಅರಿಯಬೇಕಾದರೆ ತುಂಬ ಆಳವಾದ ಅಧ್ಯಯನಕ್ಕೆ ತೊಡಬೇಕಾಗುತ್ತದೆ. ತನ್ನ ತನ್ನನ್ನು ಬಿಟ್ಟು ಇತರರ ಏಳಿಗೆಗಾಗಿ ಎನೆಲ್ಲಾ ಕಷ್ಟ ಪಟ್ಟು ಮಾಡುವ ಈ ಕಾಯಕ ಜಂಗಮರಿಗೆ ನೆನೆಸಿಕೊಂಡರೆ ಹೃದಯ ಚರ್ ಎನ್ನುತ್ತದೆ. ನಂತರ ಈ ಕಾಯಕ ಹಂತ ಹಂತವಾಗಿ ಜೀವಿಸುವ ವೃತ್ತಿಯಾಗಿ ಮಾರ್ಪಟಾಗಿದೆ. ಸದ್ಯೆ ಜಿಲ್ಲೆಯಾದ್ಯಂತ ಮುಳ್ಳಾವಿಕಾಯಕದ ಜಂಗಮರು ನೋಡಬಹುದು ಈಗ ಇವರು ತಮ್ಮ ಉಪಜೀವನಕ್ಕೆ ಕಾಯಕ ಹಾಕುತ್ತಿದ್ದುದ್ದು ಗಮನಿಸಬೇಕು. ಬೀದರ ಜಿಲ್ಲೆಯಲ್ಲಿ ಹೆಚ್ಚಾಗಿ ಹುಮನಾಬಾದ ವೀರಭದ್ರೇಶ್ವರ ಜಾತ್ರೆಯಲ್ಲಿ ಅಪ್ಪೂರ, ಚಿಮಕೋಡ, ಪಾಪನಾಶ ಜಾತ್ರೆಗಳಲ್ಲಿ, ಹಬ್ಬ ಹರಿದಿಗಳಲ್ಲಿ ಕಂಡುಬರುತ್ತಾರೆ.

**೪.೭. ಅಸ್ತ್ರ ಕಾಯಕದ ಜಂಗಮ** : ಮೇಲಿನ ಯಾವದೇ ಕಾಯಕಕ್ಕೆ ಭಕ್ತನ ಮಣೆಯಲಿಲ್ಲ ಎಂದಾಗ ಈ ಅಸ್ತ್ರಕಾಯಕದ ಜಂಗಮ ಬರುತ್ತಾರೆ. ಇದು ಭಕ್ತನ ಸಲುವಾಗಿ ಕೊನೆಯ ಕಾಯಕವಾಗಿರುತ್ತದೆ. ಕಾವಿ ಬಟ್ಟೆಗಳು ಧರಿಸಿಕೊಂಡು ಕೈಯಲ್ಲಿ ತ್ರಿಶೂಲ, ಇನ್ನೊಂದು ಕೈಯಲ್ಲಿ ಜಾಗಟೆ, ಕಾವಿ ಬಟ್ಟೆ ಮೈಯಿಗೆ ಬಿಗಿಯಾಗಿ ಕಟ್ಟಿಕೊಂಡಿದ್ದ ಹಣೆಯ ಮಿಲೆ ವಿಭೂತಿ, ಕೊರಳಲ್ಲಿ ಲಿಂಗ, ರುದ್ರಾಕ್ಷಿ ಸರಗಳು ಅರ್ಧಚಂದ್ರಾಕಾರದ ಹೊಳೆಯುವ ಅಸ್ತ್ರ ಕೊರಳಲ್ಲಿ, ಹಾಕಿಕೊಂಡು ಸೆಟೆದುನಿಂತು ಬಿಡುತ್ತಾರೆ ಜಾಗಟೆ ಮುಂಗೈಯಲ್ಲಿ ಜೋತು ಹಾಕಿಕೊಂಡು ಬೆರಳಲ್ಲಿಡಿದಿದ್ದ ಸಣ್ಣ ಕೋಲಿನಿಂದ ನಿರಂತವಾಗಿ ಬಡಿಯುತ್ತಾರೆ. ತಾಸಿಗೊಮ್ಮೆ ಗಟ್ಟಿಯಾಗಿ ಶಿವಶರಣರನ್ನು ಪುರಾತನರನ್ನು ಸ್ಮರಿಸಿ ಅನಾಚರಿ, ಅಧರ್ಮ , ಭವಿಯಾದ ಭಕ್ತನಾದ (ಬಸಪ್ಪ) ಸದ್ಬುದ್ಧಿ, ಸನ್ನಡತೆ ದಯಪಾಲಿಸು, ಭಕ್ತನಾಗುವ ದಾರಿ ದೊರೆಯಲೆಂದು ದೇವರನ್ನು ಪ್ರಾರ್ಥಿಸುತ್ತಾರೆ.

ಊರಿನವರು ಹೀಗೆ ನಿಂತ ಜಂಗಮನನ್ನು ಕಂಡು ತುಂಬ ಪೇಚಾಡುತ್ತಾರೆ ಏಕೆಂದರೆ ಹೀಗೆ ನಿಲ್ಲಿಸಿದರೆ ಊರು ನಾಶವಾಗಿ ಹೋಗುತ್ತದೆಂದು ಭಯಗೊಳುತ್ತಾರೆ ಬರಗಾಲು ಊರಿನ ಜನಕ್ಕೆ ರೋಗಗಳು ತಗುಲುವುವಗಳೆಂದು ನಂಬುತ್ತಾರೆ ಊರಿನ ಹಿರಿಯರು ಗಾಬರಿಗೊಂಡು ಆ ಮನೆಯವನ್ನು ಎಲ್ಲಿ ಇದ್ದರೂ ಅಲ್ಲಿಗೆ ಹೋಗಿ ಕರೆದುಕೊಂಡು ಬಂದು ಅಸ್ತ್ರ ಕಾಯಕದ ಜಂಗಮನ ಪಾದಕ್ಕೆ ತಂದು ತಳುತ್ತಾರೆ. ಒಂದು ವೇಳೆ ತಡವಾಗುತ್ತಾ ನಡೆದರೆ ಅಸ್ತ್ರ ತೆಗೆದು ಆ ಅಸ್ತ್ರದ ಎರಡು ಕೊನೆಗೆ ಕಟ್ಟಿದ್ದ ದಾರಿ ಬಿಚ್ಚಿ ಅದರ ತುದಿಯನ್ನು ತಲೆಯ ಮೇಲಿದ್ದ

ಕೊಂಡಿಗೆ ಸಿಗಿಸುತ್ತಾರೆ.ಹರಿತವಾದ ಥಳಥಳ ಹೊಳೆಯುವ ಅರ್ಧಚಂದ್ರಾಕಾರದ ಅಸ್ತ್ರವನ್ನು ಕುತ್ತಿಗೆಗೆ ಹಾಕಿಕೊಂಡು ಸೆಟೆದು ನಿಲ್ಲುತ್ತಾರೆ. ಜಾಸ್ತಿ ಸೆಟೆದರೆ ಕೊರಳು ಕೊರೆಯುತ್ತ ರಕ್ತ ಹರಿಯುತ್ತ ಹೋಗುತ್ತದೆ. ಒಂದು ವೇಳೆ ಬರದೆ ಇದ್ದಲ್ಲಿ ಜಂಗಮ ಆ ಚಂದ್ರಾಕಾರದ ಅಸ್ತ್ರಕ್ಕೆ ಬಲಿಯಾಗುತ್ತಾರೆ. ಹೀಗೆ ಜಂಗಮ ಗುರುಗಳು ತಮ್ಮ ಪುರಾತನರು ಅಥವಾ ಶರಣರು ಹಾಕಿಕೊಟ್ಟ ಸಕಲ ದೈವಸ್ಥರ ಕಲ್ಯಾಣಕ್ಕಾಗಿ ಶರಣರು ಮಾಡಿದ ವ್ಯವಸ್ಥೆಯನ್ನು ಇನ್ನೊಬ್ಬರ ಬದುಕಿಗೆ ನೆಮ್ಮದಿಗಾಗಿ ತನ್ನ ತಾನೇ ಬಲಿಕೊಟ್ಟುಕೊಳ್ಳುವ ಜಂಗಮರ ಕಾಯಕಗಳು ದಿಗ್ಭ್ರಮೆಗೊಳಿಸುತ್ತವೆ. ಇದಕ್ಕೆ ಸುರೆಗೆ ಕಾಯಕ ಎಂದುಕೂಡ ಕರೆಯುತ್ತಾರೆ. ಇದರಲ್ಲಿ ಎರಡು ಹರಿತವಾದ ತಲವಾರಗಳು ಆಕಾರದಲ್ಲಿ ಇಡುತ್ತಾರೆ. ಈ ಕಾಯಕದಿಂದ ಅನೇಕ ಕುಟುಂಬಗಳು ಸುಧಾರಿಸಿ, ಅವರಲ್ಲಿನ ಕೊಳಕು ಬುದ್ಧಿಯನ್ನು ಹೋಗಲಾಡಿಸಿ ಕಾಪಾಡಿದು ಇಂದಿಗೂ ಜಾನಪದ ಹಾಡುಗಳಲ್ಲಿ ಕಾಣಬಹುದು. ಭಕ್ತ ಕಳದೆ ಇದ್ದಾಗ ಅದರಲ್ಲಿ ಮೇಲೆ ತಮ್ಮ ಕತ್ತನ್ನು ಇಟ್ಟು ಕತ್ತರಿಸಿಕೊಳ್ಳುತ್ತಾರೆ. ಇದು ಮೇಲಿನ ಮಾದರಿಯದು ಎನ್ನಬಹುದು.

**೪.೮. ಶಾಸ್ತ್ರ ಧಾರಿ ಕಾಯಕದ ಜಂಗಮ :** ಜಂಗಮರು ಈ ಕಲೆಯನ್ನು ಮದುವೆ ಸಮಾರಂಭಗಳಲ್ಲಿ ಪ್ರದರ್ಶಿಸುತ್ತಾರೆ. ಮದುಮಗಳು ಮತ್ತು ಮದುಮಗನನ್ನು ದೇವರ ಗುಡಿಗೆ ನಮಸ್ಕರಿಸಲು ಹೋಗುವಾಗ ಜಂಗಮರು ಈ ಕಲೆಯಲ್ಲಿ ತಲ್ಲೀನರಾಗಿರುತ್ತಾರೆ. ಇದಕ್ಕೆ 'ದೇವರ ಕರೆ' ಎಂದು ಕರೆಯುತ್ತಾರೆ. ಹೋಗುವ ಸಂದರ್ಭದಲ್ಲಿ ವಡಬುಗಳನ್ನು ಹೇಳುತ್ತಾ ಆಹಾಹಾ ವೀರಾ ಆಹಾಹಾ ರುದ್ರ ಆಹಾಹಾ ಸರ್ಪ ಎನ್ನುವ ಆಕ್ರೋಶವಾಗಿ ಹೇಳಿ ವಡಬು ಮುಗಿಸುವುದರಲ್ಲಿ ಹಲಿಗೆ(ಬಾಜಾ) ಜೋರಾಗಿ ಬಾರಿಸುತ್ತಾರೆ. ಆವಾಗ ಇವರು ಚೂಪಾದ ಡಬ್ಬಣ, ಮಳೆಯಿಂದ ತೊಟ್ಟಿಗೆ ಅಥವಾ ಗಲಕ್ಕೆ ತಿವಿದುಕೊಂಡು ಕುಣಿಯುತ್ತಾರೆ. ಹೀಗೆ ಮಾಡುವುದು ವೀರಭದ್ರನ ಅವತಾರವೆಂದು ಕರೆಯುವುದುಂಟು. ಇವರ ಸುತ್ತಲು ನಾಲ್ಕೆಂದು ಜನರು ಹಿಡಿದು ಮುಖಕ್ಕೆ ನೀರು ಬಡಿದು ನಿಧಾನವಾಗಿ ಅಸ್ತ್ರ ತೆಗೆಯುತ್ತಾರೆ. ಆ ಸಂದರ್ಭದಲ್ಲಿ ರಕ್ತವು ಬರದೇ ಇರುವುದು ಕಾಣಬರುತ್ತದೆ.

**೪.೯. ರಂಬೆ ಕೊಂಬೆ ಕಾಯಕದ ಜಂಗಮ :** ಇದು ಅತ್ತಿ ಪ್ರಾಮುಖವಾದ ಕಾಯಕ ವಾಗಿದೆ ಇಲ್ಲಿ ಪ್ರತಿಯೊಬ್ಬರೂ ಸರಿಸಮಾನರು ಎಂದು ತಿಳಿಹೇಳುತ್ತದೆ. ಜಗತ್ತನು ಒಂದು ಗೂಡಿಸುವ ಶಕ್ತಿಯಿದಕಿದೆ. ಸಮಾಜದ ಎಲ್ಲಾ ಕ್ಷೇತ್ರದಲ್ಲಿ ಕಾರ್ಯ ನಡೆಯುತ್ತದೆ. ಊರುಗಳಲ್ಲಿ ಅಥವಾ ಹಳ್ಳಿಗಳಲ್ಲಿ ವೈಷಮ್ಯ ಮೈದಾಳಿದಾಗ, ಒಳಜಗಳಗಳು ಹರಡಿದಾಗ, ಒಂದು ಜಾತಿ ಇನ್ನೊಂದು ಪಂಗಡಗಳ ಮಧ್ಯ ಕಲಹಗಳು ಹುಟ್ಟಿಕೊಂಡು ಊರಿಯುತ್ತಿರುವಾಗ

ಅವುಗಳನ್ನು ಹತ್ತಿಕ್ಕಲು ಅಥವಾ ಹೋಗಲಾಡಿಸಲು ಜಂಗಮ ಮೂರ್ತಿ ಊರಿನ ಮಧ್ಯ ಇರುವ ಮಠದ ಕೊಂಬೆ ಹತ್ತಿ ಕೂಗಿ ಹೇಳುತ್ತಿದ್ದ ನೀವೆಲ್ಲರೂ ಒಂದಾಗಬೇಕು ಒಂದಾಗದಿದ್ದರೆ ಕೊಂಬೆಯಿಂದ ಹಾರಿ ಪ್ರಾಣಬಿಡುತ್ತೇನೆಂದು ಕೂಗಿ ಹೇಳುತ್ತಿದ್ದರು. ಅವರುಗಳು ತಪ್ಪು ಒಪ್ಪಿಕೊಂಡು ತಪ್ಪಿನ ದಂಡ ಒಂದೊಂದಾಗಿ ಕಟ್ಟಿದೊಡನೆ ಕೆಳಗೆ ಇಳಿದು ಬರುತ್ತಿದ್ದರು. ಹೀಗೆ ಎಲ್ಲರಿಗೂ ಒಂದು ಗೂಡಿಸಿದ ಭಾವ್ಯಕ್ಯತೆಯನ್ನು ಮೂಡಿಸಿ ಮನಸ್ಸು ವಿಶಾಲಗೋಳಿಸಿ ಅವರುಗಳಲ್ಲಿದ ತಪ್ಪು ಭಾವನೆಗಳು ಕಿತ್ತುಹಾಕಿ ಸರ್ವ ಕಾಲಕ್ಕೆ ಸರ್ವರಿಗೂ ಹಿತವನುಂಟು ಮಾಡುವದು ಮಾನವನ ಧರ್ಮ ಎಂದು ಸಾರಿ ಹೋಗುತ್ತಿದ್ದ. ಅದಕ್ಕೆ ಭಕ್ತರು ನೀಡಿದ ಭಿಕ್ಷೆಯನ್ನು ತೆಗೆದುಕೊಂಡು ಮಠಕ್ಕೆ ತೆರಳುತ್ತಿದ್ದರು. ಈ ಕಾರ್ಯವನ್ನು ವಿಚಾರಿಸಿದರೆ ಅಂದಿನ ಕಾಲಕ್ಕೆ ಜಂಗಮ ಮೂರ್ತಿ ಎಂತಹ ಕಾರ್ಯಗಳಲ್ಲಿ (ಸಮಾಜದ ಉದ್ಧಾರಕ್ಕಾಗಿ ತೋಡಗಿಸಿಕೊಂಡು ಹೋಗಿ ಸರ್ವರ ಬಾಳಿಗೆ ಉದ್ಧಾರಕ್ಕಾಗಿ) ತೊಡಗಿಸಿಕೊಂಡು ಹೋಗಿ ಸರ್ವರ ಬಾಳಿಗೆ ಬೆಳಕನ್ನು ಬಿಂಬಿಸುವದರ ಜೊತೆಗೆ ಸನ್ಮಾರಗದಡೆಗೆ ಕರೆದುಕೊಂಡು ಭವಿಯಾಗಿರುವವರನ್ನು ದೇವಸ್ವರೂಪದದ ಭಕ್ತನಾಗಿ ಬದಲಾಯಿ ಮನವನಾಗಿ ಮಾಡುತ್ತಿದ್ದರು. ಇದು ಸಾಮಾನ್ಯವಾದ ಕಾಯಕವಲ್ಲ. ಒಂದು ನಿಮಿಷ ತಮ್ಮ ತಮ್ಮಲ್ಲಿ ವಿಚಾರಿಸಿದರೆ ಈ ಕಾಯಕದ ಕಲ್ಪನೆ ಮೂಡುತ್ತದೆ.

ಕಣಗಳಲ್ಲಿ ಭಿಕ್ಷೆ ಬೇಡುವ ಕಾಯಕ, ಭಕ್ತರ ಮನೆಗಳಿಗೆ ಪತ್ರಿ, ಧೂಪ, ವಿಭೂತಿ, ರುದ್ರಾಕ್ಷಿ, ಅಂಗವಸ್ತ್ರ, ವಾವಡ ಹೀಗೆ ಪೂಜೋಪಯೋಗ ವಸ್ತುಗಳನ್ನು ಮನೆ ಮನೆಗೆ ಕೊಡುವ ಕಾಯಕದ ಜಂಗಮರೂ ಇದ್ದು ಮತ್ತು ಲಿಂಗಕ್ಕೆ ಕಾಂತೆಯನ್ನು ಕೂಡಿಸುವ ಕಾಯಕ ಹೀಗೆ ಅನೇಕ ಕಾಯಕಗಳು ಮಾಡಿದ ಪ್ರತಿಫಲವಾಗಿ ಭಿಕ್ಷೆ ತೆಗೆದುಕೊಂಡು ಹೋಗುತ್ತಿದ್ದರು. ಅಂತೆಯೇ ಜಿಲ್ಲೆಯ ತುಂಬ ಝುಂಗಿನ ಮಠದವರು, ಗಂಟೆ ಮಠದವರು, ಕೋರನ್ನದವರ ಮಠ, ಸಾಲಿಮಠ, ರುದ್ರಾಕ್ಷಿ ಮಠ, ವಸ್ತ್ರದವರ ಮಠ ಹೀಗೆ ಜಂಗಮ ಮಠಗಳಿಗೆ ಇನ್ನೊ ಪ್ರಸ್ತುತದಲ್ಲಿ ಕರೆಯುತ್ತಾರೆ. ಈ ಮೇಲಿನ ಕಾಯಕಗಳು ಕೆಲವೊಂದು ಮಾತ್ರ ಪ್ರಸ್ತುತದಲ್ಲಿ ಜಂಗಮರು ಮಾಡಿಕೊಂಡು ಬರುತ್ತಿದ್ದಾರೆ. ಇವುಗಳು ಮಾಡಿದರೂ ನೂರಕ್ಕೆ ಎಂಬತರಷ್ಟು ಉಪಜೀವನಕ್ಕಾಗಿ ಮಾಡುತ್ತಿದ್ದಾರೆ. ಆದರೆ ಇವುಗಳಲ್ಲದೆ ಹುಟ್ಟಿನಿಂದ ಸಾಯುವತನಕ ವೀರಶೈವರಲ್ಲಿ ನೆಡೆಯುವ ಪ್ರತಿಯೊಂದು ಸಂಸ್ಕಾರಗಳು ಇವರಿಲ್ಲದೇ ನಡೆಯುವದೆಯಿಲ್ಲ ಸಾಕ್ಷತ ಪರಮಾತ್ಮನು ಎಲ್ಲಿ ಇರುತ್ತಾನೋ ಗೊತಿಲ್ಲ ಆದರೆ ದೇವರಿಗಿಂತಲು ಹೆಚ್ಚಾಗಿ ಜಂಗಮರಿಗೆ ನೋಡುತ್ತಾರೆ. ಗರ್ಭಾವತಿ ಯಾದ ಹೆಂಗಸಿಗೆ ಗರ್ಭಕ್ಕೆ ಲಿಂಗಕಟ್ಟುವುದು,

ಹುಟ್ಟಿದ ಮಗುವಿಗೆ ಲಿಂಗಕಟ್ಟಿ, ಐದುದಿನದ ಐದೇಶಿಮಾಡುವದು, ತೋಟಿಲಲ್ಲಿ ಹಾಕುವುದು, ಜಾವಳ ಕಾರ್ಯ ಮಾಡುವದು, ಆಯ್ಯಾಚಾರ, ಮದುವೆ, ಮರಣ ಈ ಎಲ್ಲಾ ಕ್ರಿಯಾಕ್ರಮದಲ್ಲಿ ಜಂಗಮನಿರಲಿಲ್ಲದೇ ಮೇಲಿನ ಯಾವದೇ ಕಾರ್ಯಗಳು ನಡೆಯುವದಿಲ್ಲ. ಒಂದು ವೇಳೆ ಮಾಡಿದರೆ ಮುಂದೆ ಯಾವದಾದರೂ ಅನಾಹುತವಾಗಿದಲ್ಲಿ ಜಂಗಮರು ಬಂದು ಕ್ರಿಯಾ ಕ್ರಮ ಮಾಡದ ಕಾರಣಕ್ಕಾಗೆ ಹೀಗಾಯಿತು ಎಂದು ನಂಬುತ್ತಾರೆ. ಮಾಡಿದ ಸಂಸ್ಕಾರಕ್ಕೆ ಪ್ರತಿಫಲವಾಗಿ ದವಸ ಧಾನ್ಯ, ದಕ್ಷಿಣೆ, ಬಟ್ಟೆಗಳು ನೀಡಿ ಗೌರವಿಸುತ್ತಾರೆ. ಅದರ ಮೇಲೆಯೋ ಜಂಗಮನ ಕುಟುಂಬ ನಡೆಯುತ್ತಿತು. ಮುಂದೆ ಹಳ್ಳಿಗಳಲ್ಲಿ ಜಂಗಮ ಕುಟುಂಬಗಳು ಹೆಚ್ಚಾದಂತೆಲ್ಲಾ ಭಕ್ತರು ಯಾರನ್ನು ಕರೆಯಬೇಕು ಯಾರನ್ನು ಬಿಡಬೇಕು ಎನ್ನುವ ಸಮಸ್ಯೆ ಒಂದುಕಡೆಯಾದರೆ ಇನ್ನೊಂದು ಕಡೆ ಭಕ್ತರಲ್ಲಿಯೇ ಕುಟುಂಬ ಜಾಸ್ತಿಯಾದಂತೆ ಭಕ್ತಿಯಿಂದ ದಾನ ಮಾಡುವದು ಸ್ವಲ್ಪ ಸ್ವಲ್ಪ ಕೆಡಿಮೆಯಾಗುತ್ತಾ ನಡೆಯಿತು. ಸದ್ಯಾ ಬಹುತೇಕ ಜಂಗಮರು ಜಂಗಮ ಕಾಯದ ಮೇಲೆ ಅವಲಂಬಿತರಾಗಿದ್ದಾರೆ. ಇನ್ನು ಕೆಲವರು ಇನ್ನಿತರ ವೃತ್ತಿಗಳಲ್ಲಿ ಸೇರಿಸಿಕೊಂಡಿದ್ದಾರೆ. ಈ ಧಾರ್ಮಿಕ ಕಾಯಕಗಳು ಅಂದು ಸಮಾಜದಲ್ಲಿ ತುಂಬ ಮಹತ್ವ ಪಡೆದುಕೊಂಡಿದವು. ತನ್ನತನ್ನವನ್ನು ಬಿಟ್ಟು ಸಮಾಜ ಸೇವೆಯನ್ನು ಮುಖ್ಯವೆಂದು ಹಗಲು ರಾತ್ರಿಗಳೆನ್ನದೇ ಎಂತಹ ಕೆಲಸಕ್ಕೊ ಅಂಜದ ಬೇರೆಯವರಗೊಸ್ಕರ ಜೀವ ಕೊಡಲು ಸಿದ್ಧರಾಗಿರುವರು. ಇಂತಹ ಕಾಯಕಗಳು ಹಿಂದು ಕಣ್ಮರೆಯಾಗಿ ಕೇವಲ ತಮ್ಮ ಹೊಟ್ಟೆ ಪಾಡಿಗೊಸ್ಕರ ಇಂದು ಕಾಯಕ ಮಾಡುತ್ತಿರುವುದು ಕಾಣುತ್ತೇವೆ. ಈ ಜಂಗಮರ ಕಾಯಕಗಳು ಜಂಗಮರು ಸಮಾಜವನ್ನು ನಿಯಂತ್ರಿಸಲು ತಮ್ಮ ಪ್ರತಿಭೆಯ ಮೂಲಕ ಇಂತಹ ಕಾಯಕಗಳು ಹುಟ್ಟು ಹಾಕಿದೆ ತೋರುತ್ತವೆ. ಆದ್ದರಿಂದ ಈ ಕಾಯಕಗಳು ಕಲೆಯ ರೂಪದೊಳಗೆ ಇರುವುದರಿಂದ ಇವುಗಳ ಜಂಗಮರ ಕಾಯಕವು ಹೌದು, ಕಲೆಯು ಹೌದು ಎಂದು ಇಲ್ಲಿ ಕರೆಯಬಹುದಾಗಿದೆ.

ಈ ಜಂಗಮರ ಕಾಯಕಗಳು ಹೇಗೆ ಎಂದರೆ ನಿಮ್ಮ ವೃತ್ತಿಗಳನ್ನು ಪ್ರೀತಿಸಿರಿ ಎಂಬರ್ಥದಲ್ಲಿ ಸಮಾಜ ಸುಧಾರಣೆಗೆ ತೊಡಗಿದೆ. ಯಾರು ತಪ್ಪು ಮಾಡುವರು ಶಿಕ್ಷೆಗೆ ಹೆದರಿ ಕೆಟ್ಟ ಕೆಲಸ ಮಾಡುವುದು ನಿಲ್ಲಿಸಬಹುದು. ಆದರೆ ಇವರ ಕಾಯಕದಿಂದ ಮಾನಸಾಂತರ ಹೊಂದಿ ಹೃದಯ ಪರಿವರ್ತನೆಗೊಂಡು ಸತ್ಕಾರ್ಯಗಳಲ್ಲಿ ಭಾಗಿಯಾಗುವನು. ಇಂತಹ ಕಾಯಕದ ಪದ್ಧತಿ ಕ್ರೈಸ್ತಧರ್ಮದಲ್ಲಿಯೂ ಪಾಪಿಗಳ ಉದ್ಧಾರಕ್ಕೂ ಪ್ರಾಣತೆತ್ತ ಉದಾಹರಣೆಗಳು ಕ್ರೈಸ್ತಧರ್ಮದ ಇತಿಹಾಸದಿಂದ ಅರಿಯಬಹುದು. ಆದರೆ ಇಂದು ದುಃಖದ ಸಂಗತಿ ಎಂದರೆ ಕಾಯಕದ

ನಿಜವಾದ ಅರ್ಥವ ಈಗ ಮರೆಮಾಚಿಹೋಗಿದೆ. ಇಂದಿಗೂ ನಮ್ಮ ನಾಡಿನ ಪೀಠಗಳು ಮಠಾಧೀಶ್ವರರು ಈ ಕಾಯಕಗಳು ಮೊದಲಿನ ರೂಪದೊಳಗೆ ಸಮಾಜದಲ್ಲಿ ತಂದರೆ ಜಿಲ್ಲೆಗೆ, ನಾಡಿಗೆ, ದೇಶಕ್ಕೆ ತುಂಬ ಉಪಯುಕ್ತವಾಗುತ್ತದೆ.

## ೫. ಶೈಕ್ಷಣಿಕತೆ

**೫.೧. ಜಂಗಮ ಮಠಗಳಲ್ಲಿ ಶಿಕ್ಷಣ ಪದ್ಧತಿ ನಡೆದುಬಂದ ಸ್ಥಿತಿ :** ಶಿಕ್ಷಣಾಕ್ಷೇತ್ರದಲ್ಲಿ ಜಂಗಮ ಗುರುಗಳ ಮತ್ತು ಅವರ ಮಠಗಳು ದೇಶಕ್ಕೆ ನೀಡಿದ ಕೊಡುಗೆ ಅಪಾರ. ಜಂಗಮರೆ ಶಿಕ್ಷಕರಾಗಿ ಮಠಗಳೇ ಶಾಲೆಗಳಾಗಿ ಶಿಕ್ಷಣವನ್ನೆ ನೀಡಿದ ಕ್ರಮವು ಯಾರಿಂದಲೋ ಮರೆಯಲಿಕ್ಕೆ ಸಾಧ್ಯವೇಯಿಲ್ಲ. ಧಾರ್ಮಿಕ ಶಿಕ್ಷಣದ ಜೊತೆಗೆ ಲೌಕಿಕ ಶಿಕ್ಷಣವನ್ನು ಕೊಟ್ಟು ಶಿಕ್ಷಣದ ಹಸಿವನ್ನು ಹೋಗಲಾಡಿಸಿದ ಮಹತ್ಮರು ಜಂಗಮರು. ಇಂತಹ ಜಂಗಮರ ಮಠಗಳ ಬಗ್ಗೆ ಎರಡು ಮಾತುಗಳು ಹೇಳಬೇಕು.

ವೇದ ಪೂರ್ವಕಾಲೀನ ಸಂಸ್ಕೃತಿಯಲ್ಲಿ ಮಠಗಳ ಪರಿಕಲ್ಪನೆ ಅಸ್ಪಷ್ಟವಾಗಿದೆ ಎನ್ನುವದು ಸರ್ವರ ಮತ. ಆದರೆ ಋಷ್ಯಾಶ್ರಮ ಗುರುಕಲು ಕಾಣಿಸಿಕೊಂಡಿದವು ಎನ್ನುವದಲ್ಲಿ ಎರಡು ಮಾತ್ತಿಲ್ಲ. ಈ ವೇದೋತ್ತರ ಕಾಲದಲ್ಲಿ ಆಶ್ರಮಗಳು ಛತ್ರಗಳಾಗಿದವು. ಮುಂದೆ ಈ ಛತ್ರಗಳೇ ಧಾರ್ಮಿಕ ಕಾರ್ಯಗಳಿಗೂ ಮತ್ತು ಚಟುವಟಿಕೆಗಳಿಗೂ ಮಠಗಳಾಗಿ ಬೆಳೆದಿರಬೇಕು ಎನ್ನಿಸುತ್ತದೆ. ಕ್ರಿ. ಶ. ೬-೭ನೇ ಶತಮಾನದಿಂದ ಮಠಗಳ ಕಲ್ಪನೆ ಬಂದದ್ದು ಅಂದರೆ ಸ್ಪಷ್ಟಕಲ್ಪನೆ ಕಾರ್ಯರೂಪಕ್ಕೆ ಬಂದದ್ದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಭೌದ್ಧ ವಿಹಾರಗಳು ತುಂಬ ಜನ ಪ್ರಿಯಗೊಂಡಿರು ವುದು ಆದಿ ಶಂಕರಾರ್ಯರು ಗಮನಿಸಿರಬೇಕು. ಆಗ ಹಿಂದು ಧರ್ಮಕ್ಕೆ ಇಂತಹ ಮಠಗಳು ಅನಿವಾರ್ಯ ಎಂಬುದು ಅರಿತು ಅಲ್ಲಲ್ಲಿ ಮಠಗಳು ಭಾರತದ್ಯಾಂತ ಸ್ಥಾಪಿಸಿರಬೇಕು. ಏಕೆಂದರೆ ಬೌದ್ಧ ಧರ್ಮ ಕ್ಷೀಣಿಸುತ್ತಿರುವಾಗ ಮಠಗಳು ಕಾರ್ಯರೂಪಕ್ಕೆ ಇಳಿದಿರಬೇಕು. ಮಠಗಳ ಸಾಕಾರಗೊಳಿಸು ವಲ್ಲಿ ಪ್ರಥಮರು ಆಧಾರವಿಲ್ಲವಾದರೂ ಇವರ ಪೂರ್ವದಲ್ಲಿ ಶಿವಮಠ ಪರಂಪರೆ ಕಂಡುಬರುತ್ತವೆ. ಲಕುಳೇಶ, ಪಾಶುಪತ, ಕಾಳಮುಖ, ಶೈವ ಮಠಗಳು ಮಠಗಳ ಪೂರ್ವದಲ್ಲಿ ಅಥವ ಆದಿಶಂಕರಚಾರ್ಯರರ ಪೂರ್ವಕ್ಕೆ ಇದ್ದಿದವು ಎನ್ನುವದಕ್ಕೆ ಶಾಸನಗಳಲ್ಲಿ ಆಧಾರಗಳು ಸಿಗುತ್ತವೆ. ಆದರೆ ಅವುಗಳಲ್ಲಿ ರಾಜ ಮಹಾರಾಜರು ಮಠಗಳ ಬೆಳವಣಿಗೆಗಾಗಿ ಮತ್ತು ದತ್ತ, ದಾನಗಳು ನೀಡಿರುವ ವಿಚಾರಗಳೇ ಪ್ರಸ್ತುತ ಪಡಿಸುತ್ತವೇ ಹೊರೆತು ಇಂತಹ ಕಾಲದಲ್ಲಿ ಸ್ಥಾಪಿತವಾಗಿದವು

ಎಂದು ಮಠದ ಪೂರ್ವಜರ ಕೂರಿತು ಹೇಳಿದ್ದು ಕಡೆವೆ. ಆದರೆ ಮಠಗಳು ಇಂತಹ ಕಾರ್ಯಗಳಲ್ಲಿ ತಲ್ಲಿನವಾಗಿದವು. ಸಮಾಜಕ್ಕೆ ಮಾದರಿಗಳಾಗಿದವು ಎಂಬುದನ್ನು ಮತ್ತು ಸಾಧನೆಯನ್ನು ಕುರಿತು ಹೇಳುತ್ತಿದ್ದವು ಎನ್ನುವದನ್ನು ಗಮನಿಸಬೇಕು. ನಂತರ ಆಗಮಗಳ ಕಾಲಕ್ಕೆ ಬಂದರೆ ವೀರಶೈವ ಮಠಗಳ ಪರಿಕಲ್ಪನೆ ವೀರಾಗಮದಲ್ಲಿ ಹೆಚ್ಚು ವಿಸ್ತಾರವಗಿ ನೂರಾರು ಶ್ಲೋಕಗಳಲ್ಲಿ ವರ್ಣಿತವಾಗಿದೆ. ಅಂದು ಮಠವೆಂದರೆ ಭಕ್ತಿ, ದಾಸೋಹ, ಮತ್ತು ಕಾಯಕಗಳ ತ್ರಿವೇಣಿ ಸಂಗಮ ವಾಗಿತ್ತು. ಶಿಂಶುಮಾರ, ಡಿಂಡಿಮಾರ, ಮುಂತಾದವರು ಶಿವಭಕ್ತರು ಮಠಗಳನ್ನು ಕಟ್ಟಿಸಿ ಅವುಗಳ ಕಾರ್ಯಭಾರವನ್ನು ನೋಡಿಕೊಳ್ಳುತ್ತಿದ್ದರು. ಏಕೆಂದರೆ ಮಠಗಲ್ಲಿ ವೀರಶೈವ ಆಚಾರ್ಯರು ನೆಲೆಸುತ್ತಿದ್ದರು. ಜೊತೆಗೆ ತ್ರಿವಿಧ ದಾಸೋಹ ಈ ಮಠಗಳಲ್ಲಿ ಮಾಡಿಕೊಂಡು ಸಾಗುತ್ತಿದ್ದರು.

> "ಮಠಮಧ್ಯೇ ಮಹಾಶ್ರೇಷ್ಠಾನ್ ವೀರಮಹೇಶ್ವರಾನ್ ಪ್ರಿಯೇ
> ಪೂಜ್ಯಾನ್ ಪುರಾತನಾನ್ ಪೂರ್ವಾನ್ ಪುರುಷಾರ್ತ ಪ್ರದಾಯಕಾನ್
> ಯೇ ಪುಜಯಂತಿ ಸತತಂ ತ ಏತೇ ಮಮ ಬಾಂಧವಾ :"

(ಡಾ.ಸಂಗಮೇಶ ಸವದತ್ತಿಮಠ ೨೦೦೦:೨)

ಹೀಗೆ ಆಗಮದಲ್ಲಿ ಮಠಗಳ ಉಕ್ತಿ ಕಂಡುಬರುತ್ತದೆ. ಈ ಮೂರು ಕಾರ್ಯಗಳಿಂದ ಮಠಗಳ ಮಹತ್ವ ಹೆಚ್ಚಾಗುತ್ತಾ ನಡೆದಿತ್ತು. ಡಿಂಡಿಮಾರನು ಕೂಡಾ ಹೆಚ್ಚು ಜನರು ಸಾಗುವ ದಾರಿಯಲ್ಲಿ ಮಠವನ್ನೆ ಕಟ್ಟಿಸಿ. ಧರ್ಮಾರ್ಥಕಾಮಮೋಕ್ಷ ಪ್ರದವಾದ ಕ್ರಿಯೇಯಲ್ಲಿ ತೊಡಗಿಸುವ ಕ್ರಮವಾಗಿ ಮಠ ಸ್ಥಾಪಿಸಿ ಶಾಂತಿಯೋಶ್ವರರನೆಂಬ ಗುರುಗಳನ್ನು ನೇಮಿಸಿ ತ್ರಿವಿಧ ದಾಸೋಹ ಕಾರ್ಯಗಳು ನಡೆಸಿಕೊಂಡು ಹೋಗಿ ಎಂದು ಮಠವನ್ನು ನೀಡಿ ಗೌರವಿಸುತ್ತಿದ್ದನು. ಸಂಜೆಯ ಸಮಯದ ಪೂಜೆಯನ್ನು ವೀರಶೈವರಿಗೆ ಮಾತ್ರ ಮೀಸಲಾಗಿರಿಸುವ ಅಪ್ಪಣೆಯನ್ನು ಶಾಂತಯೋಗಿಗಳು ಡಿಂಡಿಮಾರನಿಗೆ ನೀಡಿದ್ದರು (ಅವರೇ:೨೦೦೦:೩). ಅದಕ್ಕೆ ವೀರಾಗಮದಲ್ಲಿ ಮಠಶೈವ, ಮಠಸ್ಥಲ ಎರಡು ಪದಗಳು ಮಠದ ಪರಿಕಲ್ಪನೆಗೆ ಸೃಷ್ಟಿ ನಿದರ್ಶನವಾಗಿರಬೇಕೆಂದು ತೋರುತ್ತವೆ. ಮುಂದೆ ಮಠಘಳು ವೀರಶೈವ ತತ್ವಚರಣೆಗೆ ಮೂಲ ನೆಲೆಗಳಾಗಿ ಪರಿವರ್ತನೆಗೊಂಡವು. ಉದಾಹರಣೆಗೆ ಹೇಳುವುದಾದರೆ

> "ಷಟ್‌ಸ್ಥಲ ಬ್ರಹ್ಮ ಸಂಸ್ಕಾರ ಪ್ರಾಣಲಿಂಗಾಂಗಯೋಗಿನಾ
> ಏಕೋತ್ತ್ರರ ಶತಸ್ಥಾಲ ದೀಕ್ಷಾ ದೇಹ ಸ್ವರೂಪಿಣಾಂ
> ಭೂಕುದ್ರಾಣಾಂ ಪವಿತ್ರಾಣಿ ಮಠಶೈವಾನ್ವಿವತಾನ್ಯಪಿ.........."(ಅವರೇ: ೩)

ಅಂದರೆ ಅರ್ಚನಾ, ಅರ್ಪಣ, ಅನುಭವ, ಅತಿಥ್ಯ, ಅನ್ನದಾಸೋಹ, ಜ್ಞಾನದಾಸೋಹ ಮುಂತಾದವುಗಳಿಗೆ ಮಠಗಳು ಮನೆಗಳಾದವು ಜೊತೆಗೆ ತತ್ವಕರ್ಮ, ಸತ್ಯಶುದ್ಧ ಕಾಯಕವನ್ನೂ ಈ ಮಠಗಳು ಎತ್ತಿಹಿಡಿದು ಪ್ರಚಾರ ಪಡೆಸುತ್ತಾ ಸಾಗುತ್ತಿದ್ದವು. ಅಂತೆಯೇ ಮಠಗಳ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಗಮನಿಸಿದರೆ ಮಠಗಳೇ ಮೋದಲು ಎಲ್ಲಕ್ಕೆ ಕಾರಣಿಭೂತ ವಾಗಿತು ಎನ್ನುವ ಅರಿವುಮೂಡುತ್ತದೆ. ಧಾರ್ಮಿಕ, ಶೈಕ್ಷಣಿಕ, ಕಾಯಕಗಳ, ಸಂಸ್ಕಾರಗಳ, ರಕ್ಷಣೆಗಳ ನ್ಯಾಯಕ್ಕಾಗಿ ಬಾಕಿಯಾಗಿ ಪ್ರತಿಯೊಂದುಕ್ಕೆ ಮೂಲವಾಗಿತ್ತು ಎನ್ನಿಸುತ್ತದೆ. ಮುಂದೆ ೧೦, ೧೩ನೇ ಶತಮಾನಗಳಲ್ಲಿ ಮಠಗಳ ವ್ಯವಸ್ಥೆ ಒಂದು ವ್ಯವಸ್ಥಿತ ಹಂತಕ್ಕೆ ತಲುಪಿತು. ಈ ಸಂದರ್ಭದಲ್ಲೂ ಉತ್ತರ ಕರ್ನಾಟಕದಲ್ಲಿ ಧಾರ್ಮಿಕ ಸಮಾಜಿಕ ಕ್ರಾಂತಿಯ ಕಾಲವಾಗಿ ಪರಿಣಾಮಿಸಿತು. ೧೧ನೇ ಶತಮಾನದಲ್ಲಿ ಬೇಡರ ದಾಸಿಮಯ್ಯ ಕೊಂಡಗುಳಿ ಕೇಶಿರಾಜ ಹಾಗೂ ಅನೇಕ ಹಿರಿಯರು ಸಮಕಾಲಿನರು ನಂತರಬಂದ ಬಸವಾದಿ ಶರಣರು ಮುಂತಾದವರಿಂದ ಮಠಗಳ ಪರಿಕಲ್ಪನೆ ಮತಷ್ಟು ಹೆಚ್ಚಾಯಿತು. ಹಿಂದಿನ ಮಠಗಳು ಹೆಚ್ಚು ಜವಾಬ್ದಾರಿತನದಿಂದ ತಮ್ಮ ಸೇವೆಯನ್ನು ಸಾಗಿಸಿಕೊಂಡು ಬರುತ್ತಿದ್ದವು. ಜೊತೆಗೆ ವೇದ, ಶಿವಾಗಮ, ಉಪನಿಷತ್ ಮುಂತಾದವುಗಳ ಜೊತೆಗೆ ಶರಣರ ವಚನಗಳನ್ನು ಪ್ರಚಾರಪಡಿಸುತ್ತಾ ಪೂರ್ವದ ಮಠಗಳ ಅಪ್ಪಿಕೊಂಡು ನಡೆದವು. ಮುಂದೆ ಶೈವ ಮಠಗಳೆಲ್ಲವು ವೀರಶೈವ ಮಠಗಳಾಗಿ ಬದಲಾಗಿದಂತೆ ತೋರುತ್ತದೆ. ಇಂತಹ ಮಠಗಳಲ್ಲಿ ಮಠಾದಾಧಿಕಾರಿ, ಪಟ್ಟಾಧೀಶ, ಹಿರೇಮಠ, ಮಠಪತಿ, ಗಣಚಾರ, ಗಣಕುಮಾರರಿಗೆ ತಮ್ಮ ಸಹಾಯಕ್ಕಾಗಿ ತೆಗೆದುಕೊಂಡು ಮಠದ ಮೂಲಕ ಸಮಾಜ ಜಾಗ್ರತಿಗೋಲಿಸುತ್ತದ್ದರು. ಜಂಗಮರ ಮಠಗಳು ಚಿಲ್ಲಾಪಿಲ್ಲಿಯಾಗಿ ಹರಿದು ಹೋಗಿ ಆಂಧ್ರ ಮಹಾರಾಷ್ಟ್ರದ ಮೂದಲಾದ ಕಡೆ ನೆಲೆಸಿದವು ಪಂಚಪೀಠಾಧಿಪತಿಗಳು ಧರ್ಮರಕ್ಷಣೆಗಾಗಿ ಪುತ್ರವರ್ಗದ ಮಠಗಳು ಸರ್ವ ಪ್ರಸಾರ ನಡೆಸಿದವು. ನಂತರ ೧೫ ನೇ ಶತಮಾನದಲ್ಲಿ ತೋಂಟದ ಸ್ದಿಲಿಂಗಯ ಗಳ ಆಧಿನದಲ್ಲಿ ಅಥವ ನೇತೃತ್ವದಲ್ಲಿ ನಾಡಿನದ್ಯಾಂತ ಸಂಚರಿಸಿ ನೂರೊಂದು ವಿರಕ್ತರ ಮಠಗಳು ಹುಟ್ಟುಹಾಕಿದ್ದರು. ಮುಂದೆ ವೀರಶೈವ ಧರ್ಮದ ಕೈಂಕರ್ಯ ವಿರಕ್ತಮಠಗಳಲ್ಲೋ ನಡೆಯಿತು. ಹೀಗೆ ಪುತ್ರವರ್ಗದ ಮಠಗಳು, ವಿರಕ್ತಮಠದ ಜಂಮರು ಮಠಗಳ ಕಾರ್ಯನಿರ್ವಹಿಸಿಕೊಂಡು ಸಾಗುತ್ತಿದ್ದರು. ಇಂದಿಗೂ ಸಾಗುತ್ತಿದ್ದಾರೆ. ಅಲ್ಲದೆ ಇಬ್ಬರಲ್ಲಿ ಇಂತಹ ಕಾರ್ಯಗಳು ಇವರು ಇಂತಹ ಕಾರ್ಯಗಳು ಇವರು ಮಾಡಬೇಕೆಂದು ತೋರುತ್ತಿದ್ದಂತೆ ಕಂಡುಬರುತ್ತದೆ. ಪೀಠದಿ ಪರಂಪರೆಗನುಗುಣವಾಗಿ ಊರಿಗೊಂದು ಹಿರೇಮಠಗಳು ಹುಟ್ಟಿಕೊಂಡು ಸಮಾಜದ

ಪ್ರತಿಯೊಂದು ಕ್ರಿಯಾಕ್ರಮದಲ್ಲಿ ಜಂಗಮರು ತೋಡಗಿಸಿಕೊಂಡರು. ಧರ್ಮಜಾಗೃತಿ, ಸಾಮಾಜಿಕ, ಶೈಕ್ಷಣಿಕ ಕಾರ್ಯಗಳಲ್ಲಿ ವಿರಕ್ತ ಮತ್ತು ಪರಂಪರೆ ಮಠಗಳು ಜೊತೆ ಜೊತೆಗೆ ಸೇವೆ ಮಾಡುತ್ತಾ ಬಂದಿದವು ಮುಂದೆ (ಇಂತಹ ಮಠಗಳು) ಮನುಷ್ಯನ ಸರ್ವಾಂಗಿಣಭಿವೃದ್ಧಿ ಗೋಳಿಸುವ ಮಠಗಳಿಗೆ ಯಾರ ದೃಷ್ಟಿ ತಾಗಿತೂ ಎನ್ನೊ? ಇಂತಹ ಪವಿತ್ರ ಸಂಗಮದಲ್ಲಿ ರಾಜಕೀಯ ಪ್ರವೇಶಿಸಿ ಮಠಗಳ ಮಧ್ಯ ಜಗಳ ಪ್ರಾರಂಭವಾಗಿ ಮಠಾಧೀಶರ ಸ್ಥಾನಮಾನಗಳ ತಕಲಾಟದಲ್ಲಿ ಭಕ್ತರನ್ನು ತೋಡಕಿನಲ್ಲಿ ಸಿಲುಕಿಸಿದ್ದು ಇಂದು ಕಾಣುತ್ತೆವೆ. ಆದರೆ ಜಂಗಮರು ಮಠಗಳು ಭಾರತದಾದ್ಯಂತ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಲ್ಲಿ ಕೊಟ್ಟ ಕೊಡುಗೆ ಪ್ರತಿಯೊಬ್ಬ ಭಾರತೀಯ ನಾಗರಿಕನು ನೆನಸದೆ ಇರಲಾರನು ಆಂತೆಯೇ ಇಂದಿಗೂ ಆ ನಿಟ್ಟಿನಲ್ಲಿ ಭಾರತದ ತುಂಬ ಅನೇಕ ಮಠಗಳು ನಡೆದುಕೊಂಡು ಬರುತ್ತಿರುವುದು ಕಾಣುತ್ತೇವೆ.

ಮೊದಮೊದಲು ವೇದ, ಶಿವಾಗಮ, ಉಪನಿಷತ್ತು, ಮೀಮಾಂಸೆ, ದರ್ಶನಗಳು, ಯೋಗ, ಕಾವ್ಯ, ನಾಟಿಕಾ ಮುಂತಾದವುಗಳು ಮಠಗಳಲ್ಲಿ ಗುರುಗಳು ಶಿಷ್ಯರಿಗೆ ಇಟ್ಟುಕೊಂಡು ಕಲಿಸಲಾಗುತ್ತಿತ್ತು. ವಿದ್ಯಾ ಕೇಂದ್ರಗಳ ಅಂದಿನ ಮಠಗಳು ಮತ್ತು ದೇವಸ್ಥಾನಗಳೇ ಯಾಗಿದ್ದವು. ಇಲ್ಲಿ ಕೇವಲ ಉಚ್ಚ ವರ್ಗದವರಿಗೆ ಶಿಕ್ಷಣ ಸಿಗುತ್ತಿತ್ತು ತದನಂತರ ಪ್ರತಿವರ್ಗದವರಿಗೂ ಶಿಕ್ಷಣ ಸಿಗುವಂತೆ ಮಠಗಳು ವ್ಯತ್ಯಾಸಗೊಂಡವು. ಅದಕ್ಕೆ ನಾಡಿನಾದ್ಯಂತ ಶಿಕ್ಷಣದ ಮಠಗಳು ಹೆಸರಿಸಬಹುದು. ಉದಾಹರಣೆಗೆ ಬೆಳೆಗಾವಿ ಜಿಲ್ಲೆಯ ಹೂಲಿಮಠ, ಶಿವಮೊಗ್ಗ ಜಿಲ್ಲೆಯ ಕೊಡಿಮಠ, ವಿಜಾಪೂರ ಜಿಲ್ಲೆಯ ಸಾಲೋಟಿಗಿ ಮಠಗಳು ತುಂಬ ಪ್ರಸಿದ್ಧಿಯನ್ನು ಪಡೆದಿದ್ದವು. ಜಿಲ್ಲೆಯಲ್ಲಿಯೇ ಅನೇಕ ಸಾಲಿಮಠಗಳು ಇಂದಿಗೂ ಜಂಗಮರ ಮನೆಗಳಿಗೆ ಕರೆಯುತ್ತಾರೆ. ಭಾಲ್ಕಿ ಹಿರೇಮಠ, ಹುಲಸೂರ ಹಿರೇಮಠ, ಚಾಂಬಳ, ಕಡಕಂಚಿ, ಹಾರಕೋಡ, ಬೀದರ ಮುಂತಾದ ಕಡೆಗಳಲ್ಲಿ ಹಿಂದಿನ ಮಾದರಿಯಂತೆ ಇಂದಿನ ಮಾದರಿಗೆ ಅಳವಡಿಸಿಕೊಂಡು ಶಿಕ್ಷಣ ಪ್ರಸಾರ ಮಾಡುತ್ತಿವೆ. ಮೊದಲು ವ್ಯಾಕರಣ, ಭಾಷೆಧರ್ಮ, ಕಾವ್ಯ, ನಾಟಕ ಮುಂತಾದ ವಿಷಗಳು ಮಠಗಳಲ್ಲಿ ಹೇಳಿಕೊಡುತ್ತಿದ್ದರು. ದೊಡ್ಡ ದೊಡ್ಡ ಮಠಗಳಲ್ಲದೆ ಇನ್ನು ಅನೇಕ ಹೆಸರಿನ ಮಠಗಳು ಶಿಕ್ಷಣ ನೀಡುತ್ತಿದ್ದವು. ಓದಿಸೋಮಠ. ಟೀಕಿನ ಮಠ, ಟಿಪ್ಪಣಿಮಠ, ಓಲೆಮಠ, ಸಾಲಿಮಠ ಇಂತಹ ಅನೇಕ ಮಠಗಳು ಶಿಕ್ಷಣ ನೀಡುವುದಕ್ಕಾಗಿಯೇ ಹೆಸರುವಾಸಿಗಳಾಗಿರಬೇಕೆಂದು ತೋರುತ್ತವೆ. ಲೋಕಿಕ ಜ್ಞಾನದ ಜೊತೆಗೆ ಧಾರ್ಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಸಮಾಜದ ಆರೋಗ್ಯಕರ ಸರ್ವತೋಮುಖ ಬೆಳವಣಿಗೆಗೆ

ಶಿಕ್ಷಣ ಮತ್ತು ಧರ್ಮ ಇವೆರಡು ತೀರ ಅವಶ್ಯಕತೆ ಎಂದು ಜಂಗಮಮಠಾಧೀಶರು ಅರಿತಿದ್ದರು. ಅಜ್ಞಾನ ಮೂಢ ನಂಬಿಕೆಗಳನ್ನು ಕಳೆದು ಧರ್ಮ ತತ್ವಾಚರಣೆಯ ಮೂಲಕ ಮಾನಸಿಕ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಸರ್ವ ಸಮಾನತೆಯ ಸಹ ಬಾಳ್ವೆ ನಡೆಸಿ ಆತ್ಮೋನ್ನತಿಯನ್ನು ಸಾಧಿಸಲು ವಿದ್ಯೆಯ ಅವಶ್ಯಕತೆ ಎಂಬುದನ್ನು ಮಠಗಳು ತಿಳಿದುಕೊಂಡಿದವು. ಅಂತೆಯೇ ಪ್ರತಿಯೊಂದು ವೀರಶೈವ ಮಠಗಳಲ್ಲಿ ಕೇವಲ ಜ್ಞಾನಾರ್ಜನೆಗೆ ಅಷ್ಟೆ ಅಲ್ಲದೆ ವೈದಿಕಕ್ಕೆ ಸಂಬಂಧಿಸಿದ ಔಷಧಿಗಳ ಕುರಿತು, ಜೀವನೋಪಾಯಕ್ಕೆ ಅನುಕೂಲವಾಗುವ ಹತ್ತು ಹಲವಾರು ಕಸಬುಗಳನ್ನು ಕಲಿಸಲಾಗುತ್ತಿತ್ತು. ಆ ಮೇಲೆ ವಿಜಯನಗರದ ಅರಸರು, ಕೆಳದಿ ಮೈಸೂರು, ಸ್ವಾದಿ ಬೀಳಗಿ ರಾಜ ಮನೆತನಗಳು ಮಠಗಳ ಶಿಕ್ಷಣಕ್ಕೆ ಪ್ರೋತ್ಸಾಹಿಸಿ ವಚನ ಸಾಹಿತ್ಯ ಲಭಿಸಿದಂತೆ ಇನ್ನಷ್ಟು ಸಹಕಾರ ದೊರೆಯುತ್ತಿತ್ತು. ಆದರೆ ಬರಬರುತ್ತಾ ಮರಾಠಿ, ಇಂಗ್ಲಿಶ್ ಮತ್ತು ಉರ್ದುಗಳ ತೀರ ಪ್ರಭಾವಗಳಿಂದ ಕನ್ನಡ ಕಣ್ಮೇರೆಯಾಗುವ ಸ್ಥಿತಿಯಂತಾ ನಡೆದಿತ್ತು. ಇದನ್ನು ತಿಳಿದ ಮಠದ ಜಂಗಮರು ತಮ್ಮ ಮಠಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ತೆರೆಯಲಾರಂಭಿಸುವುದರ ಮೂಲಕ ಕನ್ನಡ ಉಳಿಸಿ ಬೆಳೆಸಲು ಅನುವಾದವು ಬ್ರಿಟಿಷರ ಆಳ್ವಿಕೆಯಲಂತೂ ಶಿಕ್ಷಣದ ಪದ್ಧತಿಯೂ ಬದಲಾಯಿತು. ಮಠದಯ್ಯಾನವರ ಶಾಲೆಯ ಬದಲಿಗೆ ಸರಕಾರಿ ಶಾಲೆಗಳು ಹುಟ್ಟಿಕೊಂಡವು. ಇದರಿಂದಾಗಿ ನೌಕರಿ ಆಕರ್ಷಣೆ ಜನಸಂಖ್ಯೆ ಹೆಚ್ಚಳ ರಾಜಕೀಯ, ಆರ್ಥಿಕ, ಸಾಮಾಜಿಕ ಬದಲಾವಣೆಗಳಿಂದಾಗಿ ಮಠದ ಶಾಲೆಗಳು ತೀರ ಮಹತ್ವವನ್ನು ಕಳೆದುಕೊಂಡವು. ಆದರೂ ಆಧುನಿಕ ರೀತಿಯೊಳಗಡನೆ ಮಠಗಳು ಶಿಕ್ಷಣದ ಕ್ಷೇತ್ರವನ್ನು ಬದಲಾಯಿಸಿಕೊಂಡು ಇಂದಿಗು ಮಠಗಳಲ್ಲಿ ಶಿಕ್ಷಣ ಒದಗಿಸುತ್ತಲ್ಲಿವೆ.

ಮುಂದೆ ಜಂಗಮ ಗುರುಗಳು ಭಕ್ತ ಮತ್ತು ಸರಕಾರದ ನೆರವಿನಿಂದ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳು ತೆರೆದು ಶಿಕ್ಷಣ ಮುಂದುವರೆಸಿದವು. ಅಲ್ಲದೆ ವಸತಿ ಸೌಕರ್ಯಗಳನ್ನು ಒದಗಿಸಿ ಶಿಕ್ಷಣ ಪಡೆಯುವಂತೆ ವ್ಯವಸ್ಥೆ ಮಾಡುತ್ತಿವೆ. ಹೀಗಾಗಿ ಬಡ ವಿದ್ಯಾರ್ಥಿಗಳಿಗೆ ಈ ವೀರಶೈವ ಮಠಗಳ ಮೂಲಕ ಮೇಲಕ್ಕೆ ಬರಲು ಸಾಧ್ಯವಾಯಿತೆನ್ನಬಹುದು. ಅಲ್ಲದೆ ನಾಡಿನಲ್ಲಿ ಶರಣರ ಪ್ರಭಾವದಿಂದ ಪ್ರತಿಯೊಂದು ಜಾತಿಗಳ ಜನಾಂಗದ ಮಕ್ಕಳಿಗು ಶಿಕ್ಷಣ ಒದಗುವ ವ್ಯವಸ್ಥೆ ಮಾಡುವುದರ ಮೂಲಕ ಇಂದಿನ ಸುಭದ್ರ ಶಿಕ್ಷಣ ನೀಡುವಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಇಂತಹ ಮಠಗಳು ಜಿಲ್ಲೆಯ ತುಂಬ ಕಾರ್ಯವನ್ನು ಮಾಡುತ್ತಿರುವುದು ಜಿಲ್ಲೆಗೆ ಕೀರ್ತಿ ತಂದಿವೆ. ಕೆಲವೊಂದು ಕೆಳಗಿನಂತೆ ಉದಾಹರಿಸಲಾಗಿದೆ.

## ೬. ಜಿಲ್ಲೆಯ ಮಠಗಳಲ್ಲಿ ಶಿಕ್ಷಣ

**೬.೧. ಭಾಲ್ಕಿ ಹಿರೇಮಠ** :ಹೈದ್ರಾಬಾದ ಕರ್ನಾಟಕ ನಿಜಾಮರ ಕಾಲದಲ್ಲಿ ಕೇವಲ ಉರ್ದು ಮತ್ತು ಇಂಗ್ಲೀಷ ಭಾಷೆಗಳ ಹೊರತು ಮತ್ತಾವ ಭಾಷೆಯ ಶಿಕ್ಷಣ ಪ್ರಸಾರ ಇದ್ದಿರಲ್ಲಿ ಲ್ಲ ಇನ್ನಾವುದೊ ಇದ್ದರು ಪ್ರಸಾರಕ್ಕೆ ಅವಕಾಶ ಕೂಡ ಇರಲಿಲ್ಲ ಇಂತಹ ಸಮಯದಲ್ಲಿ ಶಿವಯೋಗ ಮಂದಿರದ ಶಿಸುವಾದ ಶತಾಯುಶಿ ಡಾ. ಚನ್ನಬಸವ ಪಟ್ಟದೇವರು ಅನುಗ್ರಹದಿಂದ ಅಥವ ಸಾಹಸದಿಂದ ಕನ್ನಡವನ್ನು ಇಂದು ಬೀದರಿನಲ್ಲೆ ವ್ಯವಸ್ಥಿತವಾಗಿ ಇರುವದನ್ನೆ ಕಾಣಬಹುದು. ಏಕೆಂದರೆ ಅನ್ನದಾಸೋಹದ ಜೊತೆಗೆ ಜ್ಞಾನ ದಾಸೋಹವನ್ನು ನಡೆಸಿ ಶೈಕ್ಷಣಿಕ ಕ್ಷೇತ್ರದ ಹರವನ್ನು ಹೆಚ್ಚಿಸಿ ಸೇವೆಗೈದ ಮಹತ್ಮರು. ಹೀಗಾಗಿ ಕನ್ನಡ ಈ ಭಾಗದಲ್ಲಿ ಬೇಕೆ ಬೇಕು ಕನ್ನಡ ಪ್ರಸಾರ ಮಾಡಬೇಕೆಂದು ಪಣತೊಟ್ಟು ಕೋಣೆಯ ಹೊರಗಡೆ ಉರ್ದು ಬೋರ್ಡು ಹಾಕಿ ಒಳಗಡೆ ಕನ್ನಡ ಕಲಿಸಲು ಮೊಟ್ಟ ಮೊದಲು ಪ್ರಯತ್ನನ ಮಾಡಿದರು ಶ್ರೀಗಳು. ಏಕೆಂದರೆ ಜಗತ್ತಿನ ವಿವಿಧ ಪ್ರಕಾರದ ಸಾಹಿತ್ಯಗಳ ಸಾಲಿನಲ್ಲಿ ೧೨ ನೇ ಶತಮಾನದಲ್ಲಿ ಬೆಳಕಿನಲ್ಲಿ ಮೂಡಿ ಬಂದ ಸಾಹಿತ್ಯ ವಚನ ಸಾಹಿತ್ಯ. ಇದೇ ಮೊದಲ ಅಚ್ಚಗನ್ನಡ ಸಾಹಿತ್ಯ. ಶರಣರ ನಡೆನುಡಿಗಳನ್ನೆ ಎಳ್ಗೆಗಾಗಲಿ ಅಥವ ಬೆಳವಣಿಗೆಗಾಗಿ ದುಡಿಯಬೇಕೆಂದರೆ ಅಂದು ಅವಕಾಶವಿರಲಿಲ್ಲ. ನಿಜಾಮರ ಗುಲಾಮರಿರಿಯಲ್ಲಿ ತಮ್ಮ ಜೀವನದ ಮೌಲ್ಯವನ್ನು ಕಳೆದುಕೊಂಡು ಪರತಂತ್ರಿಯರಾಗಿ ಜೀವನ ನಡೆಸಬೇಕಾಗಿತ್ತು ಇಂತಹ ಸಂದರ್ಭಗಳಲ್ಲಿ ಕನ್ನಡ ಶಿಕ್ಷಣವು ನೆಲಕಚ್ಚಿ ನಾಶವಾಗುವದರಲ್ಲಿ "ಸಿಡಿಲಿನಂತೆ ಉದ್ದು ಬಂದು ಕನ್ನಡದ ಆರತಿಯನ್ನು ಎತ್ತಿ ಹಿಡಿದರು. ಹೀಗಾಗಿ ಇಂತಹ ಅತ್ಯಂತ ನಿಕೃಷ್ಟ ಸ್ಥಿತಿಯಿಂದ ಸಿಡಿದೆದ್ದು ಇಂದು ಬೀದರದಲ್ಲಿ ಕನ್ನಡವು ತಲೆಯೆತ್ತಿ ನಿಲ್ಲುವಂತೆ ಮಾಡಿದ ಪ್ರಾತ: ಸ್ಮರಣೀಯರು ಯಾರಾದರೂ ಇದ್ದರೆ ಅವರೆ ಭಾಲ್ಕಿ ಮಠದ ಪೂಜ್ಯ ಚನ್ನ ಬಸವ ಪಟ್ಟ ದೇವರು"(ಸಿಂಪಿ.ವೀರೆಂದ್ರ : ೧೯೯೧ ;೨೧೨) ಎಂಬ ಮಾತಿಗೆ ಹೆಸರುವಗಿಯಾಗಿದ್ದಾರೆ ಇದನ್ನು ಗಮನಿಸಿದವರಿಗೆ ಪಟ್ಟದೇವರ ಸೇವೆ ಅರಿವಾಗುತ್ತದೆ.

ಮೊಟ್ಟ ಮೊದಲ ಬೀದರ ಜಿಲ್ಲೆಯಲ್ಲಿ ಉದಗೀರದ ಶರಣಪ್ಪ ಅಪ್ಪ ಶರಣಪ್ಪ ಅಪ್ಪ ಮಾಕಾರವರು ಕನ್ನಡ ಶೈಕ್ಷಣಿಕ ಗಿಡವನ್ನು ೧೯೨೦ರಲ್ಲಿ ಹಚ್ಚಿ ಬೆಳೆಸಿದರು. ತದನಂತರ ೧೯೨೮ರಲ್ಲಿ ಬೀದರ ತಾಲೂಕಿನ ರಂಜೇರಿ ಗ್ರಾಮದಲ್ಲಿ ಗುರುಮಟಕಲ್ ಶಾಂತವೀರ ಸ್ವಾಮಿಗಳು ಶಾಲೆಯನ್ನು ತೆಗೆದರು. ಆ ಮೇಲೆ ಭಾಲ್ಕಿ ಶ್ರೀಗಳು ನಾರಾಯಣ ಖೇಡ ತಾಲೂಕಿನ ಮೋರ್ಗಿ ಗ್ರಾಮದಲ್ಲಿ ೧೯೩೧ರಲ್ಲಿ ಕನ್ನಡ ಶಾಲೆಯನ್ನು ಆರಂಭಿಸಿದರು. ಜೊತೆಗೆ

ಜನರ ಮನೆ ಮನೆ ಬಾಗಿಲಿಗೆ ಹೋಗಿ ಮಕ್ಕಳಿಗೆ ಶಾಲೆಗೆ ಕಳುಹಿಸಿರೆಂದು ಬೇಡಿ ಕೊಂಡರಲ್ಲದೇ ವಿದ್ಯಾರ್ಥಿಗಳಿಗೆ ಊಟ ವಸತಿಯ ಸೌಕರ್ಯವನ್ನು ಏರ್ಪಡಿಸಿಕೊಟ್ಟು ಶಿಕ್ಷಣದ ರಥವನ್ನು ಓಡಿಸಿದ್ದರು. ನಂತರ ೧೯೪೦ರಲ್ಲಿ ದೇವಣಿ ಮತ್ತು ಮಾಂಜರಾ ನದಿಗಳ ಸಂಗಮವಾದ ಕೂಡಲ ಸಂಗಮದಲ್ಲಿ ಇನ್ನೊಂದು ಪಾಠಶಾಲೆಯನ್ನು ತೆರೆದರು. ಇದಕ್ಕೆ ಶಾಂತಿವರ್ಧಕ ಶಿಕ್ಷಣ ಸಂಸ್ಥೆ ಎಂದು ಹೆಸರಿಟ್ಟರು. ಇದು ಮುಂದೆ ಶಿಕ್ಷಣದ ಪ್ರತಿಯೊಂದು ಕ್ಷೇತ್ರಗಳಲ್ಲಿ ಶಾಲಾ-ಕಾಲೇಜುಗಳು ಸ್ಥಾಪಿಸಿ ಇಂದು ಉನ್ನತ ಶಿಕ್ಷಣವನ್ನು ನೀಡುತ್ತಿದೆ.

೧. ಅಕ್ಕಮಹಾದೇವಿ ಕನ್ಯಾ ಪ್ರೌಢ ಶಾಲೆ, ಬೀದರ

೨. ಅಕ್ಕಮಹಾದೇವಿ ಮಹಿಳಾ ಪದವಿ ಮಹಾವಿದ್ಯಾಲಯ, ಬೀದರ

೩. ಚನ್ನ ಬಸವೇಶ್ವರ ಕಲಾ ವಾಣಿಜ್ಯ ಮತ್ತು ವಿಜ್ಞಾನ ಪದವಿ ಮಹಾ ವಿದ್ಯಾಲಯ, ಭಾಲ್ಕಿ

೪. ಅಕ್ಕಮಹಾದೇವಿ ಕಿರಿಯ ಮಹಾವಿದ್ಯಾಲಯ, ಭಾಲ್ಕಿ

೫. ಅಕ್ಕಮಹಾದೇವಿ ಕನ್ಯಾ ಪ್ರೌಢ ಶಾಲೆ, ಭಾಲ್ಕಿ

೬. ಹರಳಯ್ಯಾ ಪಾಲಿಟೆಕ್ನಿಕ್ ಕಾಲೇಜ ಭಾಲ್ಕಿ

೭. ಶಾಂತಿವರ್ಧಕ ಐ.ಟಿ.ಐ. ಕಾಲೇಜ ಭಾಲ್ಕಿ

೮. ಗ್ರಾಮೀಣ ಇಂಜಿನೀಯರಿಂಗ ಕಾಲೇಜ ಭಾಲ್ಕಿ

೯. ಬಾಲಕರ ಅನಾಥಾಶ್ರಮ ಭಾಲ್ಕಿ

೧೦. ಸಿದ್ಧರಾಮೇಶ್ವರ ಸಂಯುಕ್ತ ಪದವಿ ಮಹಾವಿದ್ಯಾಲಯ ಕಮಲನಗರ

೧೧. ಶಾಂತಿವರ್ಧಕ ಪ್ರೌಢ ಶಾಲೆ ಕಮಲನಗರ

೧೨. ಶಾಂತಿವರ್ಧಕ ಶಿಕ್ಷಣ ಸಂಸ್ಥೆ ಹಣೆಗಾಂವ ಇವುಗಳಲದೇ ಇಂದಿನ ನೂತನ ಶ್ರೀ ಗಳಾದ ಶ್ರೀ ಮ.ಘ.ಚ.ಬಸವಲಿಂಗಪಟ್ಟದ್ದೇವರು ಹಿರೇಮಠ ಸಂಸ್ಥಾನ ವಿದ್ಯಾಪೀಠ ಭಾಲ್ಕಿ ಎಂಬ ಹೊಸದೊಂದು ಶಿಕ್ಷಣ ಸಂಸ್ಥೆಯುನ್ನು ಹುಟ್ಟುಹಾಕಿ ಕೆಲವು ಶಾಲೆಗಳನ್ನು ಆರಂಭಿಸಿದ್ದಾರೆ.

೧. ಸಂಗಮೇಶ್ವರ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆ,ಭಾಲ್ಕಿ

೨. ಸಂಗಮೇಶ್ವರ ಪ್ರೌಢ ಶಾಲೆ, ಭಾಲ್ಕಿ

೩. ಶ್ರೀಮತಿ ಸಂಗಮ್ಮಾ ಸಂಗ್ರಮಪ್ಪಾ ಬಿರಾದಾರ ಪ್ರೌಢ ಶಾಲೆ ಕಾಸರತುಗಾಂವ

೪. ಶ್ರೀ ಚನ್ನಬಸವೇಶ್ವರ ಗುರುಕುಲ ಭಾಲ್ಕಿ

೫. ಶ್ರೀ ಗುರುಪ್ಪಾ ದೊಣ್ಣೆ ಪ್ರಾಥಮಿಕ ಶಾಲೆ ಕಮಲನಗರ

೪. ನೀಲಾಂಬಿಕ ಸಂಗೀತ ವಿದ್ಯಾಲಯ ಭಾಲ್ಕಿ

ಇವುಗಳು ಹಿರೇಮಠದ ಮೂಲಕ ನಡೆಸುತ್ತಿದ್ದಾರೆ. ಹೀಗೆ ಭಾಲ್ಕಿ ಹಿರೇಮಠದ ಸಂಸ್ಥೆಯು ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಪಾತ್ರವಹಿಸಿದೆ. ಇಲ್ಲಿ ಬೀದರ ಜಿಲ್ಲೆಯ ಕನ್ನಡಿಗರಿಗಲ್ಲದೆ

ನಾಡಿನಾದ್ಯಂತ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಮುನ್ನಡೆದು ಬೀದರ ಜಿಲ್ಲೆಗೆ ಕೀರ್ತಿತಂದಿದೆ. ಅಂತೆಯೇ ಡಾ. ಚನ್ನಬಸವ ಪಟ್ಟದೇವ ಜಂಗಮರು ಮಾಡಿದ ಶಿಕ್ಷಣದ ಸೇವೆಯನ್ನು ಕುರಿತು ಅನೇಕ ಜನರು ಅವರನ್ನು ಹಾಡಿ ಹೊಗಳಿದುದ್ದನ್ನೆ ಗಮನಿಸಿದರೆ ಅವರ ಸೇವೆ ಅರಿವು ಮಾಡಿಕೊಳ್ಳಬೇಕಾಗಿದೆ. ಜಾನಪದರು ತ್ರಿಪದಿಯಲ್ಲಿ ಅವರಗೆ ಗುಣಗಾನ ಮಾಡಿದನ್ನು ಕಂಡುಬರುತ್ತದೆ.

ಬಾಲಕಿ ಶಿವಯೋಗಿ  ಎಲ್ಲೆಲ್ಲಿ ತಿರುಗ್ಯಾರ
ಶಿಕ್ಷಣದ ಅನ್ನ  ಉಣಸ್ಯಾರ! ಗಡಿನಾಡೋಳು
ಕನ್ನಡದ ಬಾವುಟ ಮೆರಸ್ಯಾರ

ಬೀದರ ನಾಡಿನಲ್ಲಿ ಕನ್ನಡ  ಉಳಿಸಿದ ರನ್ನ ಕನ್ನಡಿ ಇವರು
ಸತ್ತವರನ್ನೆಚ್ಚರಿಸಿ  ಉಚಿತಾಹಾರವ ಕೊಟ್ಟು ಹರಿಸಿದವರು

(ಶ್ರೀದೇವಿ ಸೋಲ್ಲಾಪುರ:೯೯೧:೯)

ಹೀಗೆ ಶ್ರೀಗಳು ಕನ್ನಡ  ಉಳಿಸಿ ಬೆಳೆಸಿಕೊಂಡು ಬಂದ ಸಾಕ್ಷಿಗಳಾಗಿ ನಿಂತಿವೆ. ಮಠಗಳಲ್ಲಿ ಶಿಕ್ಷಣವನ್ನು ನೀಡುತ್ತಾ ವೀರಶೈವ ಧರ್ಮ ಪ್ರಚಾರ ಪಡಿಸುತ್ತಾ ಸರ್ವವರು ಸಮಾನರು. ತತ್ವವನ್ನು ಬಿತ್ತುತ್ತಾ ಪ್ರತಿಯೊಂದು ಜಾತಿಗಳಲ್ಲಿ ಲಿಂಗದೀಕ್ಷೆ ಕೊಡುತ್ತಾ ಸರ್ವವರಲ್ಲಿ ಒಂದಾಗಿದ್ದರು ಶ್ರೀಗಳು. ಹೀಗೆ ಜಿಲ್ಲೆಯಲ್ಲಿ ಭಾಲ್ಕಿ ಹಿರೇಮಠವು ಶಿಕ್ಷಣ ಕ್ಷೇತ್ರದಲ್ಲಿ ಮುಂದೆ ಸಾಗುತ್ತಿರುವುದು ಕಾಣುತ್ತೇವೆ.

**೬.೨. ಹಾರಕೂಡ ಹಿರೇಮಠ :** ಹಾರಕೂಡ ಬ್ರಹನ್ಮಠದ ಶ್ರೀಗಳಾದ ಶ್ರೀ ಚನ್ನವೀರ ಶಿವಾಚಾರ್ಯರು ಜಂಗಮರು ಮಠದ ಮೂಲಕ ಧರ್ಮವನ್ನೇ ಎತ್ತಿ ಹಿಡಿದು ಜಿಲ್ಲೆಯಾದ್ಯಂತ ಕೀರ್ತಿಯನ್ನು ಗಳಿಸಿಕೊಂಡಿದ್ದಾರೆ. ಧಾರ್ಮಿಕ ಕ್ಷೇತ್ರಗಳಲ್ಲಿ ಅನೇಕ ಗೋಷ್ಠಿಗಳನ್ನು ನಡೆಸಿ ಹಲವಾರು ಕೃತಿಗಳನ್ನು ಹೊರತಂದಿದ್ದಾರೆ. ಪ್ರತಿವರ್ಷ ಉತ್ಸವದ ಸಂದರ್ಭದಲ್ಲಿ ಪ್ರಮುಖ ವಿದ್ವಾಂಸರಿಂದ ಪಾಂಡಿತ್ಯ ಉಪನ್ಯಾಸವನ್ನು ಪುಸ್ತಕದ ಮೂಲಕ ಹೊರತಂದ ಧಾರ್ಮಿಕ ಕ್ಷೇತ್ರದ ಹರವನ್ನು ಹೆಚ್ಚಿಸಿದ್ದಾರೆ. ಧಾರ್ಮಿಕ ಉತ್ತಮ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬರುವಲ್ಲಿ ಯಶಸ್ವಿಯಾಗಿದ್ದಾರೆ. ಇವರು ಸುಮಾರು ಶಾಲೆಗಳನ್ನು ತೆರೆದು ಶಿಕ್ಷಣ ಪ್ರಸಾರವನ್ನು ಗೈಯುತ್ತಿದ್ದಾರೆ. ಇವರು ಚನ್ನಬಸವೇಶ್ವರ ಶಿಕ್ಷಣ ಸಂಸ್ಥೆಯ ಮೂಲಕ ಅನೇಕ ಸಂಸ್ಥೆಗಳು ತೆರೆದು ಶಿಕ್ಷಣ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ.

೧. ಶ್ರೀ ಜಗಜ್ಯೋತಿ ಬಸವೇಶ್ವರ ಪ್ರಾಥಮೀಕ ಶಾಲೆ, ಭಾಲ್ಕಿ
೨. ಶ್ರೀ ಬಸವೇಶ್ವರ ಪ್ರೌಢ ಶಾಲೆ, ಭಾಲ್ಕಿ
೩. ಶ್ರೀ ಚನ್ನಬಸವೇಶ್ವರ ಶಿಶುವಿಹಾರ ಮತ್ತು ಪ್ರಾಥಮೀಕ ಶಾಲೆ, ಚಿಂಚೋಳಿ
೪. ಶ್ರೀ ಅನುಭವ ಪ್ರಚಾರೋಪನ್ಯಾಸ, ಹಾರಕೂಡ.

ಈ ಸಂಸ್ಥೆಯ ಮೂಲಕ ಹಾರಕೊಡ ಮಠವು ಶಿಕ್ಷಣ ಪ್ರಸಾರಗೈಯುತ್ತಾ ಸರ್ವಜನಾಂಗಗಳ ಮಕ್ಕಳಿಗೆ ಶಿಕ್ಷಣ ಒದಗಿಸುವಲ್ಲಿ ಪ್ರಯತ್ನಿಸುತ್ತಿರುವರು.

**೬.೩. ಹೂಲಸೂರು ವಿರಕ್ತಮಠ :** ಈ ಮಠವು ಬಹಳ ಪ್ರಾಚೀನವಾಗಿದೆಯೆಂಬುದಕ್ಕೆ ಅನೇಕ ಪುರಾವೆಗಳು ಸಿಗುತ್ತವೆ. ಇದಕ್ಕೆ ಮೂಲ ಚೌಕಿಮಠವೆಂದು ಕರೆಯಲಾಗಿತ್ತು. ಆದರೆ ಹನ್ನೆರಡನೆಯ ಶತಮಾನದಲ್ಲಿ ಶ್ರೀ ಗುರು ಬಸವೇಶ್ವರ ಎಂಬುವರು ಇದಕ್ಕೆ ವಿರಕ್ತಮಠವೆಂದು ನಾಮಕರಣ ಮಾಡಿದರು ಎನ್ನಲಾಗಿದೆ. ಇಂದಿನ ನೂತನ ಶ್ರೀಗಳಾದ ಪೂಜ್ಯ ಶ್ರೀ ಶಿವಾನಂದ ಮಹಾಸ್ವಾಮಿಗಳು ಮಠದ ಸರ್ವ ವಿಧದಲ್ಲಿ ಉನ್ನತಪಡಿಸಿದ್ದಾರೆ. ಶೈಕ್ಷಣಿಕ ರಂಗದಲ್ಲಿ ಹುಲುಸೂರ ಮಠವು ತನ್ನದೇಯಾದ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಶಿವಾನಂದ ಮಹಾಸ್ವಾಮಿಗಳು ಶ್ರೀ ಗುರು ಬಸವೇಶ್ವರ ಶಿಕ್ಷಣ ಸಂಸ್ಥೆಯ ಮೂಲಕ ಅನೇಕ ಶಾಲಾ-ಕಾಲೇಜುಗಳನ್ನು ತೆರೆದು ಶಿಕ್ಷಣ ಪ್ರಸಾರದಲ್ಲಿ ಮಠವನ್ನು ಮುಂದವರೆಸುತ್ತಿದ್ದಾರೆ.

೧. ಶ್ರೀ ಗುರು ಬಸವೇಶ್ವರ ಪ್ರೌಢ ಶಾಲೆ, ಹುಲಸೂರ
೨. ಶ್ರೀ ಜ.ಬ.ಕು. ಪ್ರಾಥಮೀಕ ಶಾಲೆ, ಹುಲಸೂರ
೩. ಶ್ರೀ ಶಾಂತಲಿಂಗೇಶ್ವರ ಪ್ರಾಥಮೀಕ ಶಾಲೆ, ಹುಲಕುಂಟಿ
೪. ಶ್ರೀ ಗುರು ಬಸವೇಶ್ವರ ಪ್ರಾಥಮೀಕ ಶಾಲೆ, ಮುಕರಂಬಿ
೫. ಶ್ರೀ ಜಗದ್ಗುರು ಬಸವಕುಮಾರೇಶ್ವರ ಪ್ರೌಢ ಶಾಲೆ, ಬಸವಕಲ್ಯಾಣ
೬. ಶ್ರೀ ಶಿವಾನಂದೇಶ್ವರ ಪ್ರಾಥಮೀಕ ಶಾಲೆ, ಬಸವಕಲ್ಯಾಣ

ಈ ಶಿಕ್ಷಣ ಶಾಲೆಗಳನ್ನು ತೆರೆದು ಶಿಕ್ಷಣವನ್ನು ಪ್ರಸಾರಗೈಯುವಲ್ಲಿ ಮಠ ತಲ್ಲೀನವಾಗಿದೆ.

**೬.೪. ಬೀದರ ಸಿದ್ಧಾರೂಢ ಮಠ :** ಭಕ್ತಿ, ಜ್ಞಾನ, ಧರ್ಮ, ಕೀರ್ತಿ ಜಗತ್ತಿಗೆ ಬಿತ್ತರಿಸಲೆಂದು ಹುಟ್ಟಿಕೊಂಡು, ಬೀದರ ಮಠದ ಅಧಿಪತಿಯಾದ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅನೇಕ ಕಡೆ ಧರ್ಮ ಪ್ರಸಾರದೊಂದಿಗೆ ಶಿಕ್ಷಣದ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದಾರೆ. ವಿದ್ಯೆಗೆ ಅತಿ ಹೆಚ್ಚಿನ ಮಹತ್ವವನ್ನು ನೀಡಿ ಶಿಕ್ಷಣ ಪ್ರಸಾರಕ್ಕಾಗಿ ೧೯೮೧-೮೨ರಲ್ಲಿ ಶ್ರೀ ಚಿದಂಬರ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಇದರ ಒಳಗೆ ಅನೇಕ ಶಾಲಾ-ಕಾಲೇಜುಗಳು ಸ್ಥಾಪಿಸಿದರು.

೧. ಶ್ರೀ ಸಿದ್ಧಾರೂಢ ಪ್ರೌಢ ಶಾಲೆ, ಚಳಕಾಪೂರ

೨. ಶ್ರೀ ಕುಮಾರೇಶ್ವರ ಗುರುಕುಲ, ಬೀದರ

೩. ಶ್ರೀ ಎಸ್. ಹಲವಾಯಿ ಸಂಸ್ಕೃತ ಪಾಠ ಶಾಲೆ, ಬೀದರ

೪. ಶ್ರೀಮತಿ ಇಂದಿರಾಬಾಯಿ ಶೆಟಕಾರ ಪ್ರೌಢ ಶಾಲೆ, ಬೀದರ

೫. ಶ್ರೀಮತಿ ಫಕೀರಮ್ಮಾ ಅನಾಥ ಬಾಲಕರಾಶ್ರಮ, ಬೀದರ

೬. ಶ್ರೀ ನಾಗಣ್ಣಾ ಜಾಬಶೆಟ್ಟಿ ಆಯುರ್ವೇದಿಕ ಮೆಡಿಕಲ್ ಕಾಲೇಜ, ಬೀದರ

೭. ಶ್ರೀ ಸಿದ್ಧಾರೂಢ ಅಂಗ್ರೇಜಿ ಮಾಧ್ಯಮ ಕಾನ್ವೆಂಟ್ ಶಾಲೆ, ಅಂಬರನಾಥ ಮುಂಬಾಯಿ

೮. ಶ್ರೀ ಚಂದ್ರಪ್ಪಾ ಗೌವರಶೆಟ್ಟಿ ಕಲಾ ವಿಜ್ಞಾನ ಕಿರಿಯ ಮಹಾವಿದ್ಯಾಲಯ ಬೀದರ

ಇವುಗಳಲ್ಲದೆ ಸಿಂದಗಿ ತಾಲ್ಲೂಕಿನ ರಾಂಪೂರದಲ್ಲಿ ತಾಂತ್ರಿಕ ಶಿಕ್ಷಣ ಮುಂಬಾಯಿಯ ಅಂಬರನಾಥದಲ್ಲಿ ಶಿಶುವಿಹಾರ ಅಲ್ಲದೆ ಅನೇಕ ಉದ್ಯೋಗಾವಕಾಶಗಳ ಒದಗಿಸುವ ಮಾಹಿತಿ ಕೇಂದ್ರಗಳು ಕೂಡ ಸ್ಥಾಪಿಸಿ, ಒಟ್ಟಿನಲ್ಲಿ ಶಿಕ್ಷಣವನ್ನು ಅಲ್ಪ ಸಮಯದಲ್ಲಿಯೇ ಗಣನೀಯ ಸೇವೆಯನ್ನು ನೀಡಿದ ಶ್ರೇಯಸ್ಸು ಸಿದ್ಧಾರೂಢ ಮಠಕ್ಕೆ ಸಲ್ಲುತ್ತದೆ.

**೬.೫. ನೀಡವಂಚಾ ಮಠ :** ಇದು ಬೀದರ ತಾಲ್ಲೂಕಿನ ಮನ್ನಾಏಖೇಳ್ಳಿಯ ಹತ್ತಿರದ ಒಂದು ಕಿ.ಮೀ.ದೂರದಲ್ಲಿನ ನೀಡವಂಚಾ ಎಂಬ ಸಣ್ಣ ಒಂದು ಊರಿನಲ್ಲಿದೆ. ಇದಕ್ಕೆ ಚೌಕಿ ಮಠವೆಂದು ಕರೆಯುತ್ತಾರೆ. ಇಲ್ಲಿಯವರೆಗೆ ಸುಮಾರು ೧೦ ಮಠಾಧೀಶರು ಆಗಿ ಹೋಗಿದ್ದಾರೆ. ಸದ್ಯ ಶ್ರೀಮತಿ ಮೈತ್ರಾದೇವಿ ಮತ್ತು ಶ್ರೀ ಮಡಿವಾಳೇಶ್ವರ ಈ ಜಂಗಮರು ಮಠಾಧಿಪತಿಯಾಗಿ ಮಠದ ಸೇವೆಯಲ್ಲಿ ತಲ್ಲಿನರಾಗಿದ್ದಾರೆ. ಈ ಮಠದಲ್ಲಿಯೋ ಶ್ರೀ ಭದ್ರೇಶ್ವರು ೧೮೭೨ರಲ್ಲಿ ಪಟ್ಟಾಧೀಶರಾಗಿ ಹೋದವರು ಇವರು ಈ ಮಠವನ್ನು ಎಲ್ಲಾ ರಂಗಗಳಲ್ಲಿ ಉನ್ನತಿ ಮಾಡಿದರು. ಪ್ರಸಿದ್ಧ ತತ್ವಪದಕಾರರಾಗಿ ಮುಂದಿನ ತತ್ವಪಾದಕರರಿಗೆ ಮಾದರಿಯಾದರು. ಇವರು ಹೇಳಿರುವ ಅನೇಕ ತತ್ವಪದಗಳನ್ನು ಗಮಿನಿಸಿದರೆ ಅಹಂಕಾರ, ಗುರು, ಲಿಂಗ, ಜಂಗಮ, ಭಕ್ತಿ, ಹಿನ್ನಲೆಗಳಲ್ಲಿ ಮೂಡಿ ಬಂದಿವೆ.

"ಗುರುಲಿಂಗ ಜಂಗಮ ತ್ರಿವೇಣಿ ಸಂಗಮ
ಮಹಾತೀರ್ಥದ ಮಹಾತ್ಮ ಶಂಕರ ಮಹಾತೀರ್ಥರ
ಆರು ಎನಳ ಮಧ್ಯ ಸ್ವಾಲಿಂಗದ ಮಹಾತ್ಮ ಗುರುತು
ಕೊಂಡಲಿಯ ಆಕೃತಿಯ ಶಂಕರ, ಕೊಡಲಿಯ ಆಕೃತಿ
ಗುರುವಿಗೆ ಗುಣವಿಲ್ಲ ಲಿಂಗಕ್ಕೆ ನೆಲೆಯಿಲ್ಲ
ಜಂಗಮ ಭಕ್ತರಿಗೆ ಜಾತಿ ಜ್ಯೋತಿ ನೀತಿಯಿಲ್ಲ.

ಜಂಗಮ ಜಗ ಕೃತಾ : ಲಿಂಗದಲ್ಲಿ ಭರಿತಾ
ಸ್ವಾಲಿಂಗದ ಗುರುತಾ: ಚಿನ್ಮಯ ಚಿತ್ತದಲ್ಲಿ ಚಿರತಾ
ನಾಯಿ ಅಂದರೆ ನಾಯಿ ಅಲ್ಲಪ್ಪ
ನಾ ಅಂಬೋ ಅಹಂಕಾರ, ನಾಯಪ್ಪ
ಓಂ ಎಂಬೋ ಓಂಕಾರ ಬೀಜಪ್ಪಾ
ಬಿತ್ತಿ ನೋಡು ಚಿತ್ತಿನೊಳಗಪ್ಪಾ"(ಸಬರದ ಬಸವರಾಜ:೨೦೦೦:೯೧,೯೨)

ಹೀಗೆ ಇಂತಹ ಅನೇಕ ತತ್ವಪದಗಳ ಮೂಲಕ ಜನಮನಸ್ಸನ್ನು ಶುದ್ಧಗೊಳಿಸಿ ಸನ್ಮಾರ್ಗದಡೆಗೆ ಕರೆತಂದವರು ಭದ್ರೇಶ್ವರರು. ಇವರ ದಾರಿಯಲ್ಲಿಯೇ ಇಂದಿನ ಶ್ರೀಗಳು ಧಾರ್ಮಿಕದ ಜೊತೆಗೆ ಜ್ಞಾನದ ಪ್ರಸಾರವು ಕೈಗೊಂಡು ಅನೇಕ ಶಾಲೆಗಳು ತೆರೆದಿದ್ದಾರೆ.

೧. ಶ್ರೀ ಗುರು ಭದ್ರೇಶ್ವರ ಪ್ರಾಥಮೀಕ ಶಾಲೆ, ನೀಡವಂಚಾ
೨. ಶ್ರೀ ಗುರು ಭದ್ರೇಶ್ವರ ಪ್ರೌಢ ಶಾಲೆ, ನೀಡವಂಚಾ
೩. ಶ್ರೀ ಗುರು ಭದ್ರೇಶ್ವರ ನವೋದಯ ಕೋಚಿನ ಕ್ಲಾಸ್, ನಿಡವಂಚಾ

ಹೀಗೆ ಶ್ರೀ ಗುರು ಭದ್ರೇಶ್ವರ ಶಿಕ್ಷಣ ಸಂಸ್ಥೆಯ ಮೂಲಕ ಶಾಲೆಗಳನ್ನು ಸ್ಥಾಪಿಸಿಕೊಂಡು ಶಿಕ್ಷಣ ಪ್ರಸಾರ ಮುಂದುವರೆಸುತ್ತಿದ್ದಾರೆ.

**೬.೬. ಚಾಂಬೋಳ ಹಿರೇಮಠ :** ಬೀದರದಿಂದ ಸುಮಾರು ೧೬ ಕಿ.ಮೀಗಳಲ್ಲಿ ಬರುತ್ತದೆ. ಈ ಹಿರೇಮಠವು ತುಂಬ ಪ್ರಾಚೀನವಾಗಿದೆ. ಸದ್ಯ ಮಠದ ಅಧಿಪತಿಗಳಾದ ಶ್ರೀ ರುದ್ರಮುನಿಪಟ್ಟದ್ದೇವರು ಮಠದ ಸರ್ವಕಾರ್ಯಕಲಾಪಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ತನುಮನದಿಂದ ಆಸೆಯನ್ನು ತೊರೆದು ಭಕ್ತರಿಗೆ ಉದ್ದೇಶಿಸಿ ಭಕ್ತರ ಮನೆಯಲ್ಲಿ ಕಾಂತಿಭೀಕ್ಷೆಯನ್ನು ಬೇಡಿ ಪ್ರಸಾದವನ್ನು ಸ್ವೀಕರಿಸಿ ಮಠದಲ್ಲಿ ಭಕ್ತರನ್ನು ಕುರಿತು ಪ್ರವಚನ ಮಾಡುವ ಸರಳ ಜೀವಿಯಾದರೂ ಮುಂದೆ ಸುಮ್ಮನೆ ಕುಳಿತುಕೊಳ್ಳುವ ಬದಲು ಭಕ್ತ ಸಹಕಾರದಿಂದ ರುದ್ರಮುನಿ ಶಿಕ್ಷಣ ಸಂಸ್ಥೆ ತೆರೆದರು. ಇದರ ಕೆಳಗೆ -

೧. ಶ್ರೀಮತಿ ನೀಲಮ್ಮಾ ತಾಯಿ ಪ್ರಾಥಮೀಕ ಶಾಲೆ, ಚಾಂಬೋಳ
೨. ಶ್ರೀ ರುದ್ರಮುನಿ ಪಟ್ಟದ್ದೇವರ ಪ್ರೌಢ ಶಾಲೆ, ಚಾಂಬೋಳ
೩. ಶ್ರೀ ವೀರಭದ್ರೇಶ್ವರ ವಸತಿ ನಿಲಯ, ಚಾಂಬೋಳ

ಇವುಗಳ ಮೂಲಕ ಅನೇಕ ಮಕ್ಕಳಿಗೆ, ಅನಾಥ ಮಕ್ಕಳಿಗೂ ಶಿಕ್ಷಣವನ್ನು ನೀಡುತ್ತಾ, ಪ್ರಸಾರ ಮಾಡುವಲ್ಲಿ ಹೆಸರು ಮಾಡಿದ್ದಾರೆ.

**೬.೭. ಭಾತಂಬ್ರಾ, ವಿರಕ್ತಮಠ :** ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ವಿರಕ್ತಮಠದ ಶಾಖಾ ಮಠವಾದ ಬಸವ ಮುಕ್ತಿ ಮಂದಿರ ಬೀದರ, ಇದು ಕೂಡ ಜಿಲ್ಲೆಯ ಪ್ರಮುಖ ಮಠವಾಗಿದೆ. ನೂತನ ಶ್ರೀಗಳಾದ ಶ್ರೀ ಶಿವಯೋಗೀಶ್ವರ ಸ್ವಾಮಿಗಳು ಕಳೆದ ಇಪ್ಪತ್ತೈದು ವರ್ಷಗಳಿಂದ ಧಾರ್ಮಿಕ ಸೇವೆಯ ಜೊತೆಗೆ ಶಿಕ್ಷಣ ಪ್ರಸಾರದಲ್ಲಿ ತೊಡಗಿಸಿಕೊಂಡು ಅನೇಕ ಶಿಕ್ಷಣ ಸಂಸ್ಥೆಗಳು ತೆರೆದರು.

೧. ಶ್ರೀ ಸಿದ್ಧರಾಮೇಶ್ವರ ಅನಾಥಾಶ್ರಮ, ಬಸವ ಮುಕ್ತಿ ಮಂದೀರ, ಬೀದರ

೨. ಬಸವ ಗುರುಕುಲ ಶಾಲೆ, ಬೀದರ

೩. ಶ್ರೀ ಹಾನಗಲ್ ಕುಮಾರೇಶ್ವರ ಪ್ರಾಥಮೀಕ ಶಾಲೆ, ಭಾತಂಬ್ರಾ

೪. ಶ್ರೀ ಹಾನಗಲ್ ಕುಮಾರೇಶ್ವರ ಪ್ರೌಢ ಶಾಲೆ, ಭಾತಂಬ್ರಾ

೫. ಶ್ರೀ ಶಿವಯೋಗೀಶ್ವರ ಪ್ರಾಥಮೀಕ ಶಾಲೆ, ಭಾಲ್ಕಿ

ಇವುಗಳನ್ನು ಹುಟ್ಟಿಹಾಕಿ ಜಿಲ್ಲೆಯಾದ್ಯಂತ ಶಿಕ್ಷಣವನ್ನು ಪ್ರಚಾರಪಡಿಸುತ್ತಿದ್ದಾರೆ. ಇವುಗಳ ಜೊತೆಗೆ ಅನೇಕ ಧಾರ್ಮಿಕ ಕಾರ್ಯಕ್ರಮಗಳು, ಉಪನ್ಯಾಸಗಳು ಗೋಷ್ಠಿಗಳು ಮಠಗಳಲ್ಲಿ ನಡೆಸುತ್ತಾರೆ. ಒಟ್ಟಿನಲ್ಲಿ ಭಕ್ತಾದಿಗಳಿಗೆ ಜೀವನ ಮಾರ್ಗದಲ್ಲಿ ನೆಮ್ಮದಿಯಿಂದ ಬದುಕಲು ಕಲಿಸುವ ಪ್ರಯತ್ನ ನಡೆದಿದೆ.

ಮಠಗಳಾದ ಶ್ರೀ ಬ.ನಿ.ಪ್ರ. ಗುಹೇಶ್ವರ ಸ್ವಾಮಿಗಳು ಗುಹೇಶ್ವರ ಶಿಕ್ಷಣ ಸಂಸ್ಥೆಯನ್ನು ತೆರೆದು ಪ್ರಾಥಮೀಕ ಹಾಗೂ ಪ್ರೌಢ ಶಾಲೆಗಳನ್ನು ನಡೆಸುತ್ತಿದ್ದಾರೆ. ಅಲ್ಲದೆ ಹಿರೇನಾಗಾಂವದಲ್ಲಿ ಶ್ರಿ ಜಯಶಾಂತಲಿಂಗೇಶ್ವರ ಸ್ವಾಮಿಗಳು, ಶ್ರೀ ಶಾಂತಲಿಂಗೇಶ್ವರ ಶಿಕ್ಷಣ ಸಂಸ್ಥೆಯನ್ನು ನಡೆಸುತ್ತಿದ್ದಾರೆ.

ಈ ಮಠಗಳಲ್ಲದೇ ಜಂಗಮರ ಮನೆ ಮಠಗಳಲ್ಲಿಯೂ ಶಿಕ್ಷಣವನ್ನು ನಡೆಸಿಕೊಂಡು ಬರುತ್ತಿದ್ದರು. ಅಂತೆಯೇ ಬೀದರ ಜಿಲ್ಲೆಯ ತುಂಬ ಇಂದಿಗೂ ಸಾಲಿಮಠಗಳೆಂದು ಕರೆಯುತ್ತಾರೆ. ಜನರ ಮಾತುಗಳಲ್ಲಿ ಇಂದಿಗೂ ಅವುಗಳಿಗೆ ಖಾನಗಿ ಶಾಲೆಗಳೆಂದು ಕರೆಯುತ್ತಾರೆ. ಇಂತಹ ಖಾನಗಿ ಶಾಲೆಗಳು ಜಂಗಮರ ಮಠಗಳಲ್ಲಿ ಇಂದಿಗೂ ಶಿಕ್ಷಣವನ್ನು ಕೊಡುತ್ತಿದ್ದಾರೆ. ಇನ್ನು ಅನೇಕ ಮಠಗಳು ಜನಸೇವೆಗಾಗಿಯೇ ಹುಟ್ಟಿಕೊಂಡು ಬಂದಿದ್ದರಿಂದ ಆ ಮಠಗಳಿಗೆ ಜಿಲ್ಲೆಯಲ್ಲಿ ಜಂಗಮರು ಮಾಡುತ್ತಿರುವ ಕಾಯಕದ (ವೃತ್ತಿಯ) ಮೇಲೆ ಅವರ ಮನೆತನಗಳು ಕರೆಯಿಸಿಕೊಂಡು ಬರುತ್ತಿರುವ ಮಠಗಳು ಮುಂದೆ ಇದೇ ವೃತ್ತಿಯನ್ನು ಮಾಡಿಕೊಂಡು ಬರುತ್ತಿರುವುದು ಕಾಣುತ್ತೇವೆ. ಜಿಲ್ಲೆಯಲ್ಲಿ ಕೆಂಪಯ್ಯಾನ ಮಠ, ಕೆರಿಚೇನಮಠ,

ಕರೆನಮಠ, ಕುಂಬಾರಮಠ, ಕರಿಬಸವೇಶ್ವರ ಮಠ, ಕಾಶೀಮಠ, ಟಂಕಸಾಲಿಮಠ, ಅನ್ನದಾನದ ಮಠ, ಗುಂಡದ ಮಠ, ಫಲಹಾರ ಮಠ, ಹುಡುಗಿ ಹಿರೇಮಠ, ಬೇಮಳಖೇಡ, ಶ್ರೀ ಮಹಾಂತೇಶ್ವರ ಮಠ, ಗವಿಮಠ, ರಾಮಗೀರಮಠ, ಇರಂತಮಠ, ಕಲ್ಯಾಣಮಠ, ಮುಪ್ಪಿನಮಠ, ಇಂತಹ ಅನೇಕ ಮಠಗಳು ಭಕ್ತರ ಸೇವೆಯಲ್ಲಿ ತೊಡಗಿಸಿಕೊಂಡಿವೆ. ಇದು ಭಕ್ತರ ಸಾಮಾಜಿಕ ಸೇವೆಯನ್ನು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿರಬಹುದು. ಆದರೆ ಪ್ರತಿಯೊಂದು ಮಠದ ಜಂಗಮರು ಇಂದಿಗೂ ಸಮಾಜ ಸೇವೆಯಲ್ಲಿ ಭಕ್ತರ ಸಾಮಾಜಿಕ ಸಂಸ್ಕಾರ ಕ್ರಿಯೇಗಳಲ್ಲಿ ಭಾಗವಹಿಸಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುತ್ತಿದ್ದಾರೆ. ಹೀಗೆ ಇಂತಹ ಮಠದ ವಿದ್ಯಾವಂತ ಜಂಗಮ ಗುರುಗಳನ್ನು ಹೆಚ್ಚಿನ ಶಿಕ್ಷಣವನ್ನು ಪಡೆದುಕೊಂಡು ದೊಡ್ಡ ಮಠಗಳನ್ನು ಕಟ್ಟಿಕೊಂಡು ಧರ್ಮದ ಜೊತೆಗೆ ಶಿಕ್ಷಣ ನಡೆಸುತ್ತಿದ್ದಾರೆ. ಮುಂದೆ ಮಠಗಳ ಶಿಕ್ಷಣ ಸರಕಾರಿ ಮಾದರಿಯ ರೂಪದೊಳಗೆ ಮಾರ್ಪಡಿಸಿಕೊಂಡು ಸೇವೆಯನ್ನು ಮಾಡುತ್ತಿದ್ದಾರೆ. ಆದರೆ ಜಂಗಮರ ಕುರಿತ ಶಿಕ್ಷಣ ಮಟ್ಟವನ್ನು ಗಮನಿಸಿದರೆ ತುಂಬ ಕಡಿಮೆ ಪ್ರಮಾಣದಲ್ಲಿರುವುದು ಕಾಣುತ್ತೇವೆ.

ಏಕೆಂದರೆ ಹಿಂದೆ ಜಂಗಮರು ಹೆಚ್ಚಿನ ಶಿಕ್ಷಣಕ್ಕೆ ಮಹತ್ವವನ್ನು ಕೊಡದೇ ಕೆಲವು ವಂಶಪಾರಂಪರ್ಯವಾಗಿ ಬಂದ ಜಂಗಮ ಕಾಯಕವನ್ನು ಮಾಡಿಕೊಂಡು ಬರುತ್ತಿರುವುದರಿಂದ ಇವರಲ್ಲಿ ಶಿಕ್ಷಣದ ಮಟ್ಟ ತುಂಬ ಕುಂಠಿತವಾಗಿದೆ. ಇದಕ್ಕೆ ಬಲವಾದ ಕಾರಣ ಇವರ ವೃತ್ತಿ ಜೀವನವೇಯಾಗಿದೆ. ಏಕೆಂದರೆ ಈಗಿನ ಕಾಲದಲ್ಲಿ ಶೈಕ್ಷಣಿಕವಾಗಿ ಜಂಗಮ ಮುಂದುವರೆಯುವುದು ಅಸಂಭವವೆಯಾಗಿದೆ. ಇಂದಿನ ಶಿಕ್ಷಣವು ಸಂಪೂರ್ಣವಾಗಿ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿದೆಯೆಂಬುದನ್ನು ಸರ್ವವರಿಗೆ ಗೋತ್ತಾದ ವಿಷಯವಾಗಿದೆ . ಜಂಗಮರು ಭಿಕ್ಷೆ ಬೇಡಿ ಹೊಟ್ಟೆ ತುಂಬಿಸಿಕೊಳ್ಳುವುದೇ ಕಷ್ಟವಿರುವಾಗ ಅಷ್ಟೇ ಏಕೆ? ತೊಡುವ ಬಟ್ಟೆಯ ಚಿಂತೆಯನ್ನು ಮಾಡಲಾರದ ಜಂಗಮರಿದ್ದಾರೆ. ಹೀಗಾದರೆ ಶಿಕ್ಷಣದ ವಿಚಾರ ಅವರ ಹತ್ತಿರ ಬರಲಿಕ್ಕೆ ಸಾಧ್ಯವಿಲ್ಲ. ಅವರ ಮಕ್ಕಳು ಸ್ವಲ್ಪ ಓಡಾಡುವಂತಾದರೆ ಸಾಕು, ಆ ಮಕ್ಕಳ ಕೈಯಿಗೆ ತಂದೆ ತಾಯಿಗಳು ಒಂದು ಜೋಳಗಿ ಇನ್ನೊಂದು ಕೈಯಲ್ಲಿ ಕೋಲು ಕೊಟ್ಟು ಹಿಟ್ಟನ್ನು ಬೇಡಿಕೊಂಡು ಬಾ ನಮ್ಮ ಹಿರಿಯರ ಕಾಯಕವನ್ನು ಮುಂದುವರೆಸು ಎಂದು ಹೇಳುತ್ತಾರೆ. ಹಾಗಾದರೆ ಮಗುವಿನ ಶಿಕ್ಷಣ ಎತ್ತ ಕಡೆ ಸಾಗಬೇಕು? ಏಕೆ? ಹೀಗೆ? ಎಂದು ಪ್ರಶ್ನಿಸಿದರೆ ಮೂಲತ:ವಾಗಿ ಜಂಗಮರು ಆಸ್ತಿವಂತರಲ್ಲ. ಜಂಗಮ ಕಾಯಕದಿಂದ ಅವರ ಕುಟುಂಬಗಳು ಸಾಗುತ್ತಿಲ್ಲ, ಹೀಗಾಗಿ ತಮ್ಮ ಕಾಯಕವನ್ನು ಅಥವಾ ವೃತ್ತಿಯನ್ನು

ಬಿಟ್ಟು ಇತರ ಕೆಲಸಗಳಲ್ಲಿ ತೊಡಗಿಸಿಕೊಂಡು ಸಾಗುತ್ತಿರಬೇಕಾದರೆ ಶಿಕ್ಷಣ ಪಡೆಯಲು ಎಲ್ಲಿ ಸಾಧ್ಯವಾಗುತ್ತದೆ. ಮತ್ತೆ ತಮ್ಮಲ್ಲಿ ತಾವೇ ಧೈರ್ಯದಿಂದ ಹೇಳುತ್ತಾರೆ. ಯಾರು ಯಾವ ಆಸ್ತಿ ಕಸಿದುಕೊಂಡರೂ ದೇವರು ಕೊಟ್ಟ ಈ ಶ್ರೀ ಜೋಳಿಗೆ ಇದ್ದೇ ಇದೆ ಎಂದು ಸಮಾಧಾನ ಪಡುತ್ತಾರೆ. ಈ ಮಾತು ಜಂಗಮರಲ್ಲಿ ಸರ್ವೇಸಾಮಾನ್ಯವಾದದ್ದು. ಹೀಗಾಗಿ ಜಂಗಮರು ಶೈಕ್ಷಣಿಕವಾಗಿ ಕಲಿತು ಮುಂದೆ ಬರಬೇಕೆಂದು ಹಂಬಲ ಇಚ್ಛೆವುಳ್ಳ ಕೆಲವರು ಮನೆ, ಮಠಗಳಲ್ಲಿ ಪೂಜಾದಿಗಳನ್ನು ಮಾಡಿಕೊಂಡು, ಉಚಿತ ಪ್ರಸಾದ ನಿಲಯಗಳಲ್ಲಿ ವಾರದ ಮನೆಗಳಲ್ಲಿ ಊಟಮಾಡಿ, ಪುಸ್ತಕ ಬಟ್ಟೆ, ಶಾಲಾ ಶುಲ್ಕ ಮೊದಲಾದವುಗಳಿಗಾಗಿ ಹಣ ಬಟ್ಟೆ ಮಾಡಿ ಶಾಲಾ-ಕಾಲೇಜುಗಳನ್ನು ಮುಗಿಸಿಕೊಂಡು ಕೆಲವೇ ಕೆಲವರು ಮುಂದೆ ಬಂದಿರುವುದು ಕಾಣುತ್ತೇವೆ. ಆದರೆ ಇಂದಿಗೂ ಇಂತಹ ಸಾಹಸ ಮಾಡದೆ ಎಷ್ಟೋ ಜಂಗಮರು ಅತ್ತ ತಮ್ಮ ವೃತ್ತಿಯಲ್ಲಿ ಮುಂದೆ ಬರದೇ ಇತ್ತಾ ಇತರ ಕೆಲಸಗಳಲ್ಲಿ ಪರಿಣಿತಿಯಿಲದೆ ಹತ್ತು ಹಲವಾರು ಕೆಲಸಗಳಲ್ಲಿ ಮತ್ತು ಕೂಲಿಯನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಆದರೂ ಕೆಲವರು ತಮ್ಮ ಸ್ವಂತ ಕಾಲಿನ ಮೇಲೆ ನಿಂತು ಅವರ ಮಕ್ಕಳು ಮೊಮ್ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ಒದಗಿಸಿದ್ದು ಕಾಣುತ್ತೇವೆ. ಆದರೂ ಇಂದು ಅವರು ಡಾಕ್ಟರ್‌ವಿರಬಹುದು, ಇಂಜಿನೀಯರ್, ಉಪನ್ಯಾಸಕರು ಯಾರೇ ಇರಲಿ, ಅವರು ಇಂದು ನಾವು ಜಂಗಮ ಕಾಯಕ ಮಾಡುವುದಿಲ್ಲ ಎಂದು ಹೇಳುತ್ತಾರೆ. ಆದರೆ ಅದು ತಪ್ಪಾಗುತ್ತದೆ. ಅವರ ಹಿಂದಿನ ಪೂರ್ವಜರು ಜಂಗಮ ಕಾಯಕ ಮಾಡಿಯೋ ತಮಗೆ ಕಲಿಸಿದ್ದಾರೆ, ಎಂಬುದನ್ನು ಯಾರೂ ಮರೆಯುವಂತಿಲ್ಲ. ಸಾಮಾನ್ಯವಾಗಿ ಹೇಳುವುದಾದರೆ ಜಂಗಮರು ಶಿಕ್ಷಣ ರಂಗದಲ್ಲಿ ಇಂದು ಹಿಂದುಳಿದವರಾಗಿದ್ದು ಕೇವಲ ಕೆಲವರು ಮಾತ್ರ ಶೈಕ್ಷಣಿಕವಾಗಿ ಮುಂದುವರೆದವರು ಸಿಗುತ್ತಾರೆ ಎನ್ನಬಹುದು.

ಇಂದಿನ ಮಠಗಳು ಜಂಗಮ ಮಕ್ಕಳಿಗೆ ಒಳ್ಳೆಯ ಸಂಸ್ಕಾರದ ಜೊತೆಗೆ ಶಿಕ್ಷಣ ನೀಡುವುದು ತುಂಬ ಅವಶ್ಯಕತೆಯಾಗಿದೆ. ಕೆಲವು ಮಠಗಳು ತುಂಬ ಮಹತ್ವ ಕಾರ್ಯ ಮಾಡುತ್ತಿದ್ದಾರೆ. ಇನ್ನು ಕೆಲವು ಮಠಗಳು ಕೇವಲ ತೋರಿಕೆಗಾಗಿ ತಮ್ಮ ಕಾರ್ಯಮುಂದುವರೆಸುವುದು ಕಾಣುತ್ತಿದ್ದೇವೆ. ಹೀಗೆ ಮಾಡುವುದರಿಂದ ಜಂಗಮರ ಸಮಾಜಕ್ಕೆ ಮಾದರಿಯಾದ ಸಂಸ್ಕೃತಿ ನಶಿಸಿ ಹೋಗುವ ಕಾಲ ಬರಬಹುದು. ಈಗಿನ ಜಂಗಮ ಮಕ್ಕಳಿಗೆ ಆಚಾರ-ವಿಚಾರ, ವೇದ, ಜೋತಿಷ್ಯ ಗೊತ್ತಿಲ್ಲ. ಸರಕಾರಿ ನೌಕರಿ ಓದಿದ್ದರೂ ಸಿಗುವುದಿಲ್ಲ. ಆ ಕಡೆಗೆ ಶಾಸ್ತ್ರೀಯವಾಗಿ ಜೋತಿಷ್ಯ ನಡೆಸಬೇಕೆಂದರೆ ಅದು ಪರಿಪೂರ್ವವಾಗಿ ಕಲಿತಿಲ್ಲ. ಡಿಗ್ರಿ ಮಾಡಿ ಕುಳಿತು ನೌಕರಿ ಮಾಡಿಸಿಕೊಳ್ಳುವ ಶಕ್ತಿ ಇವರಿಗಿಲ್ಲ. ವಸೂಲಿ ಹಚ್ಚಿ ಕೆಲಸ ಮಾಡುವ ರಾಜಕಾರಣಿಗಳು

ಇವರಲ್ಲಿಲ್ಲ. ಸಚಿವರು ಮೊದಲೇ ಇಲ್ಲ. ಜಂಗಮರಿಗೆ ಜಂಗಮ ವೃತ್ತಿಯೋ ಬಡತನವಾಗಿದೆ. ಹೀಗಾಗಿ ಜಂಗಮರು ಮನಸ್ಸಿಗೆ ಬಂದ ವೃತ್ತಿಯನ್ನು ತೋಡಗಿಸಿಕೊಂಡು ಸಾಗುತ್ತಿದ್ದಾರೆ. ಸರಕಾರದ ಯಾವುದೇ ಸೌಲಭ್ಯವಿಲ್ಲದ ಕಾರಣ ತುಂಬ ಚಿಂತೆಯಲ್ಲಿ ಎಷ್ಟು ಓದಿಕೊಂಡ ಕುಟುಂಬಗಳಿವೆ. ಇದು ಸರಕಾರದವರು ಪರಿಶೀಲಿಸುವುದು ಸೂಕ್ತವಾಗಿದೆ. ಜಿಲ್ಲೆಯ ಜಂಗಮರ ಶಿಕ್ಷಣ ಮಟ್ಟವನ್ನು (ಕೋಷ್ಟಕ ೧ ನೋಡಿ).

**ಕೋಷ್ಟಕ ೧**

**ಬೀದರ ಜಿಲ್ಲೆ ಜಂಗಮರ ತಾಲೂಕುವಾರು ಸಾಕ್ಷರತೆಯ ಪ್ರಮಾಣ**

| ಕ್ರ.ಸಂ. | ತಾಲೂಕುಗಳು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಔರಾದ | ೭೨.೫೮ | ೨೯.೩೩ | ೫೦.೯೫ |
| ೨ | ಬಸವಕಲ್ಯಾಣ | ೯೨.೮೮ | ೯೬.೯೧ | ೯೪.೮೯ |
| ೩ | ಭಾಲ್ಕಿ | ೧೬.೬೯ | ೪೮.೦೮ | ೩೨.೩೮ |
| ೪ | ಬೀದರ | ೨೬.೫೭ | ೩೮.೩೭ | ೩೨.೪೭ |
| ೫ | ಹುಮನಾಬಾದ | ೩೧.೪೪ | ೪೯.೬೧ | ೪೦.೫೨ |
| | ಒಟ್ಟು | ೪೪.೧೮ | ೫೪.೦೧ | ೪೯.೦೯ |

ಬೀದರ ಜಿಲ್ಲೆ ಜಂಗಮರ ೫ ತಾಲೂಕುಗಳ ಸಾಕ್ಷರತೆಯನ್ನು ಹೋಲಿಸಿದಾಗ ಬಸವಕಲ್ಯಾಣ ಅತಿ ಹೆಚ್ಚು , ಭಾಲ್ಕಿ ಅತಿ ಕಡಿಮೆ ಸಾಕ್ಷರತೆ ಹೊಂದಿದ ತಾಲೂಕುಗಳಾಗಿವೆ. ಇವರಲ್ಲಿ ಹೆಂಗಸರ ಸಾಕ್ಷರತೆಯ ಪ್ರಮಾಣ ಶೇ.೫೪ರಷ್ಟು ಪ್ರಮಾಣದಲ್ಲಿದೆ. ಗಂಡಸರಿಗಿಂತಲೂ ಹೆಂಗಸರ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದು ಗಮನಿಸತಕ್ಕದ್ದು. ಆದರೆ ಗಂಡಸರ ಸಾಕ್ಷರತೆಯ ಪ್ರಮಾಣ ಶೇ.೪೪ರಷ್ಟು ಹೊಂದಿದೆ. ಉನ್ನತ ಶಿಕ್ಷಣ ಪಡೆದರು ಯಾವುದೇ ಸರಕಾರಿ ನೌರಕರಿಗಳಾಗಲಿ, ಸೌಲಭ್ಯಗಳಾಗಲಿ ಇರದ ಕಾರಣಕ್ಕಾಗಿ ತಕ್ಕಮಟ್ಟಿಗೆ ಶಿಕ್ಷಣವನ್ನು ಪಡೆದುಕೊಂಡು ತಮ್ಮ ಜಂಗಮ ಕಾಯಕದೊಂದಿಗೆ ಇತರ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ಇವರ ಸಾಕ್ಷರತೆಯ ಪ್ರಮಾಣವು ಶೇ.೪೯ರಷ್ಟು ಮಾತ್ರ ಹೊಂದಿದೆ. ಇದರಿಂದ ಈ ಸಮುದಾಯವು ಶಿಕ್ಷಣದ ಕಡೆ ಗಮನಹರಿಸುವುದು ಅವಶ್ಯಕವಾಗಿದೆ.

ಜಂಗಮರ ವಿವಿಧ ಶಿಕ್ಷಣದ ಮಟ್ಟವನ್ನು (ಕೋಷ್ಟಕ ೨ ನೋಡಿ) ಮಠಗಳು ೫೦ ವರ್ಷಗಳ ಹಿಂದೆ ಜಂಗಮರಿಗೆ ಎಲ್ಲಾ ರೀತಿಯ ವ್ಯವಸ್ಥೆಯನ್ನು ನೀಡಿ ಶಿಕ್ಷಣ ಕಲಿಸುತ್ತಿದ್ದರು. ಆದರೆ ಬರಬರುತ್ತಾ ಮಠಾಧೀಶರು ಕೂಡಾ ಜಂಗಮರ ಮಕ್ಕಳಿಗೆ ವ್ಯವಸ್ಥಿತವಾದ ಶಿಕ್ಷಣ ಒದಗಿಸುವ ವ್ಯವಸ್ಥೆ ಮಾಡಿದರೆ ಇಂದು ಎಷ್ಟೋ ಜಂಗಮ ಮಕ್ಕಳು ಮುಂದು ಬರುತ್ತಿದ್ದರು. ಆದರೆ ಸಮಾಜ ಸೇವೆಯನ್ನು ತನ್ನ ಮೂಲ ಗುರಿಯೊಂದು ತಿಳಿದು ನಡೆಯುವ ಯಾವುದೇ ಆಸ್ತಿಯನ್ನು ಹೊಂದದೆ ಸಮಾಜವನ್ನೇ ಅಭಿವೃದ್ಧಿಯತ್ತಾ ತರುವುದನ್ನು ಬಿಟ್ಟು ಆ ಕಾರ್ಯ ಮಾಡಿದ ಫಲವಾಗಿ ಭೀಕ್ಷೆಯನ್ನು ತೆಗೆದುಕೊಂಡು ಬರುವುದನ್ನೇ ನಮ್ಮ ಮಠಾಧೀಶರು ಹೇಳುತ್ತಾ ಬಂದಿದ್ದಾರೆ. ಹೊರೆತು ಇದನ್ನು ಬಿಟ್ಟರೆ ಇತರ ಯಾವುದೇ ವೃತ್ತಿಪರ ಶಿಕ್ಷಣವನ್ನು ನೀಡದ

## ಕೋಷ್ಟಕ ೭

# ಬೀದರ ಜಿಲ್ಲೆಯ ಜಂಗಮರ ತಾಲೂಕುವಾರು ಶಿಕ್ಷಣ ಮಟ್ಟ

| ಶಿಕ್ಷಣ | ಔರಾದ | ಬಸವಕಲ್ಯಾಣ | ಬೀದರ | ಭಾಲ್ಕಿ | ಹುಮನಾಬಾದ | ಒಟ್ಟು |
|---|---|---|---|---|---|---|
| ಪ್ರಾಥಮಿಕ | ೨೬.೯೮ | ೧.೩೩ | ೨೫.೮೭ | ೧೯.೪೭ | ೨೪.೦೭ | ೧೯.೮೭ |
| ಮಾಧ್ಯಮಿಕ | ೨೫.೪೭ | ೧.೮೮ | ೨೯.೧೨ | ೨೫.೮೬ | ೨೭.೧೪ | ೨೨.೮೧ |
| ಪ್ರೌಢ | ೩೧.೭೯ | ೭೦.೫೮ | ೩೧.೫೦ | ೩೪.೩೦ | ೨೯.೩೨ | ೩೮.೨೦ |
| ಪಿ.ಯು.ಸಿ. | ೯.೨೨ | ೨೧.೬೪ | ೯.೨೫ | ೧೨.೧೨ | ೧೧.೩೦ | ೧೨.೫೭ |
| ಡಿಪ್ಲೊಮಾ | ೦.೬೦ | ೧.೪೪ | ೦.೧೨ | ೧.೨೨ | ೦.೮೦ | ೦.೭೩ |
| ಬಿ. ಎ. | ೫.೦೧ | ೦.೭೭ | ೩.೧೨ | ೪.೭೪ | ೫.೯೭ | ೪.೨೧ |
| ಎಂ. ಎ. | ೦.೬೦ | ೧.೧೦ | ೦.೭೫ | ೦.೭೮ | ೦.೪೮ | ೦.೭೩ |
| ಇತರ | ೦.೩೦ | ೧.೨೨ | ೦.೨೫ | ೧.೪೫ | ೦.೮೮ | ೦.೮೫ |
| ಒಟ್ಟು | ೯೯.೨೪ | ೯೯.೯೬ | ೯೯.೯೮ | ೯೯.೯೬ | ೯೯.೯೬ | ೯೯.೯೭ |

ಬೀದರ ಜಿಲ್ಲೆಯ ಜಂಗಮರ ಸಮುದಾಯದ ಶಿಕ್ಷಣ ಪ್ರಮಾಣಪತ್ರ ಪ್ರಾಥಮಿಕ ಹಂತದಲ್ಲಿ ಶೇಕಡ೨೦ರಷ್ಟು, ಮಾಧ್ಯಮಿಕ ಮಟ್ಟದಲ್ಲಿ ಶೇಕಡ ೨೩ರಷ್ಟು, ಪ್ರೌಢ ಶಿಕ್ಷಣವು ಶೇ.೩೮ರಷ್ಟು, ಪದವಿಪೂರ್ವದಲ್ಲಿ ಶೇ.೧೩ರಷ್ಟು, ಪದವಿಯಲ್ಲಿ ಶೇ.೪ರಷ್ಟು, ಸ್ನಾತಕೋತ್ತರದ ಮತ್ತು ಇತರರಲ್ಲಿ ಶೇ೧ರಷ್ಟು. ಜಂಗಮರು ಪ್ರೌಢ ಶಾಲೆಯವರೆಗೆ ಸರಿಯಾದ ಶಿಕ್ಷಣ ಮಟ್ಟವನ್ನು ಗುರುತಿಸಬಹುದು. ನಂತರ ಬರುವ ಉನ್ನತ ಶಿಕ್ಷಣದಲ್ಲಿ ಹೇಳಿಕೊಳ್ಳುವಷ್ಟು ಸಾಧನೆ ಕಂಡುಬರುವುದಿಲ್ಲ. ಪ್ರೌಢ ಶಿಕ್ಷಣ ಮಟ್ಟಕ್ಕೆ ಭಿಕ್ಷೆ ಬೇಡಿಕೊಂಡು, ಮಠಗಳಲ್ಲಿ ಇದ್ದುಕೊಂಡು ಕಲಿತುಕೊಂಡಿದ್ದಾರೆ. ಮುಂದಿನ ಶಿಕ್ಷಣ ಕಲಿಯಲು ಆರ್ಥಿಕ ಸಬಲತೆ ಇಲ್ಲದರಿಂದ ಸಮುದಾಯಕ್ಕೆ ಸರಕಾರದ ಸೌಲಭ್ಯಗಳು ಇರದ ಕಾರಣಕ್ಕಾಗಿ ಉನ್ನತ ಶಿಕ್ಷಣ (ವೃತ್ತ ಚಿತ್ರ ನೋಡಿ) ಕಡಿಮೆ ಕಂಡುಬರುತ್ತದೆ.

ಕಾರಣಕ್ಕಾಗಿ ಅವರು ಆರ್ಥಿಕವಾಗಿ ಅಭಿವೃದ್ಧಿಯಾಗದಿರುವುದರಿಂದ ಇಂದಿನ ಶಿಕ್ಷಣ ಆರ್ಥಿಕವಾಗಿ ಹಿಂದುಳಿದವರಿಗೆ ಸಿಗದ ಕಾರಣಕ್ಕಾಗಿ ಇವರು ಉನ್ನತ ಶಿಕ್ಷಣದತ್ತ ತಲೆ ಹಾಕದೇ ಧಾರ್ಮಿಕ ಕಾರ್ಯವು ಹಾಗೆ ಮಾಡಿಕೊಂಡು ಇತರ ಕೆಲಸಗಳಲ್ಲಿ ತೊಡಗಿಸಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಮಠದವರ ಸಹಕಾರವಿಲ್ಲದೆ ಜೊತೆಗೆ ಸರಕಾರದವರು ಇವರಿಗೆ ಯಾವುದೇ ರೀತಿಯ ಮಿಸಲಾತಿಯ ವ್ಯವಸ್ಥೆ ಕೊಡಲಿಲ್ಲ. ಇದರಿಂದ ತಮ್ಮ ಹೊಟ್ಟೆಪಾಡಿಗಾಗಿ ಬದುಕುವ ಸಮಯ ಬಂದಾಗ ತಾನು ಮಾಡುವ ಕಾಯಕವನ್ನು ತಾನೇ ತಾನಾಗಿ ಬಿಟ್ಟು ಇತರ ಕೆಲಸಕ್ಕೆ ಹೋಗಬೇಕಾಗುತ್ತದೆ. ಹೀಗಾದರೆ ಶಿಕ್ಷಣವನ್ನು ಪಡೆಯಲು ಸಾಧ್ಯ ಎಂಬುದು ಗಮನಿಸಬೇಕಾಗಿದೆ.

ವೃತ್ತಚಿತ್ರ ೧. ಬೀದರ ಜಿಲ್ಲೆಯ ಜಂಗಮರ ಶೈಕ್ಷಣಿಕ ಸ್ಥಾನಮಾನ




ಜಂಗಮರು ತಮ್ಮ ಧಾರ್ಮಿಕ ಕಾಯಕದೊಂದಿಗೆ ಮಠಗಳಲ್ಲಿ ಶಿಕ್ಷಣ ನೀಡುತ್ತಾ ಬರುತ್ತಿದ್ದಾರೆ. ಆದರೆ ಜಂಗಮರಲ್ಲಿ ಶಿಕ್ಷಣ ಮಟ್ಟ ಕೆಳ ಪ್ರಮಾಣದಲ್ಲಿ ಕಂಡುಬರುತ್ತದೆ. ಧಾರ್ಮಿಕ ಕಾಯಕಗಳು ಇಂದು ಕೇವಲ ಹೊಟ್ಟೆಪಾಡಿಗಾಗಿ ಮಾಡುತ್ತಿರುವುದು ಕಾಣುತ್ತೇವೆ.

ಒಟ್ಟಿನಲ್ಲಿ ಜಂಗಮರು ವೀರಶೈವ ಧರ್ಮವನ್ನು ಎಲ್ಲಾ ಜನಾಂಗಗಳ ಕಡೆಗೆ ತೆಗೆದುಕೊಂಡು ಹೋಗುವ ವ್ಯವಸ್ಥೆ. ಪ್ರಸಾರ ಇಂದು ಕಾಣುತ್ತಿದ್ದೇವೆ. ಮಠಗಳಲ್ಲಿ ಮಂದಿರಗಳಲ್ಲಿ ಕೆಳವರ್ಗದವರಿಗೆ ಪ್ರವೇಶ ನಿಷೇಧಿಸಲಾಗಿತ್ತು. ಆದರೆ ಇಂದು ಪ್ರತಿಯೊಂದ ರಲ್ಲಿ ಭಾಗವಹಿಸಿಕೊಂಡು ಸರಿಸಮನಾಗಿ ಬರುತ್ತಿರುವುದು ಮಠಗಳು ಪ್ರಯತ್ನಿಸುತ್ತಿವೆ. ಜೊತೆಗೆ ಶಿಕ್ಷಣವನ್ನು ಒದಗಿಸುತ್ತಿವೆ. ಭಾಲ್ಕಿ ಹಿರೇಮಠವು ಶಿಕ್ಷಣ ಕ್ಷೇತ್ರದಲ್ಲಿ ತುಂಬು ಮುಂದುವರೆದಿದೆ. ನಂತರ ಸಿದ್ಧರೂಢ ಮಠವು ಎರಡನೇ ಸ್ಥಾನದಲ್ಲಿದೆ. ನಂತರ ಈ ಮಠಗಳಂತೆ ಉಳಿದ ಮಠಗಳು ಕೂಡ ಆಧುನಿಕಖ ಶಿಕ್ಷಣದ ಮಾದರಿಯೊಳಗೆ ಸರಕಾರದ ಸಹಕಾರದ ಮೂಲಕ ಮುಂದುವರೆಯುತ್ತಿವೆ.

## ಆಧಾರಗ್ರಂಥಗಳು


೦೧. ತಿಪ್ಪೇರುದ್ರಸ್ವಾಮಿ ಎಲ್., ೧೯೬೯, **ವಚನಗಳಲ್ಲಿ ವೀರಶೈವ ಧರ್ಮ,** ಡಿ.ವಿ.ಕೆ.ಮೂರ್ತಿ ಪ್ರಕಾಶನ, ಪು. ೧,೫,೨೯೪, ೧೩೨, ೧೬೪, ೧೭೬, ೨೪೭.

೦೨. ಶ್ರೀ ಮಾತೇ ಮಹಾದೇವಿ, **ಬಸವತತ್ವ ದರ್ಶನ,** ವಿಶ್ವಕಲ್ಯಾಣ ಮಿಷನ್, ಬಸವಮಂಟಪ, ಬೆಂಗಳೂರು, ಪು. ೧೯೦.

೦೩. ಬ್ಯಾಳಿ ಕೆ.ಬಿ., ೧೯೯೪, **ನಾವು-ನಮ್ಮವರು,** ತಾಯಿ ಪ್ರಕಾಶನ, ಕುಕನೂರು, ಪು.೧೦, ೭.

೦೪. ಮಲ್ಲಾಪುರ ಬಿ.ವಿ.(ಲೇ), ೧೯೮೭, **ವೀರಶೈವ ತತ್ವಾರ್ಥ ವಿವೇಚನೆ,** ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ, ಪು.೭೦.

೦೫. ಶಾಸ್ತ್ರಿ ತೋಟಪ್ಪ, ೧೯೬೮, ಶಿವಾಚಾರ ನವರತ್ನ ಅಥವಾ ಭಕ್ತ-ಮಹೇಶ್ವರ ಕೈಪಿಡಿ, ಪು. ೧೫೭, ೧೫೯, ೧೬೧, ೧೬೨, ೧೩೬.

೦೬. ಶ್ರೀನಿವಾಸಮೂರ್ತಿ, ಎಂ. ಆರ್., ೧೯೯೦, **ವಚನ ಧರ್ಮಸಾರ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು. ೧೪೨, ೧೪೪, ೧೫೬, ೧೨೫.

೦೭. ತಿಪ್ಪೇರುದ್ರಸ್ವಾಮಿ, ೧೯೬೯, **ವಚನಗಳಲ್ಲಿ ವೀರಶೈವ ಧರ್ಮ,** ಉದ್ಧೃತ: ಸಿದ್ಧಾಂತ ಶಿಖಾಮಣಿ:೧೯, ೭-೮, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ಪು.೨೩೨.

೦೮. ಕಲಬುರ್ಗಿ ಎಂ. ಎಂ., ೧೯೯೩, **ಬಸವಣ್ಣನವರ ವಚನ ಸಂಪುಟ-೧,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು.೨೧.

೦೯. ಭೂಸನೂರಮಠ ಶಿ.(ಸಂ), **ತಿವಾರಿ ಎಸ್.ಜಿ,** ೧೯೯೨, ಶ್ರೀ ಮದ್ವೀರಶೈವ ಶಿವಯೋಗ ಮಂದಿರ, ಬಾದಾಮಿ, ಪು.೯೨, ೧೦೫.

೧೦. ಹೆಬ್ಬಾಳೆ ಜಗನ್ನಾಥ(ಸಂ), ೧೯೯೪, ಬೀದರ ಜಿಲ್ಲಾದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಬೀದರ, ಪು.೧೬೬.

೧೧. ಸವದತ್ತಿಮಠ ಸಂಗಮೇಶ (ಸಂ), ೨೦೦೦, **ವೀರಶೈವ ವಿನ್ಯಾಸ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೨, ೩.

೧೨. ಬಸವರಾಜ ಎಲ್.(ಸಂ), ೧೯೯೦, **ಅಲ್ಲಮನ ವಚನಗಳು,** ಗೀತಾ ಬುಕ್ ಹೌಸ್, ಮೈಸೂರು, ಪು.೧೦೨.

೧೩. ಚನ್ನಬಸಪ್ಪ ಬೆಟ್ಟದೂರ (ಸಂ), ೧೯೯೧, ಸಿಂಪಿ ವೀರೇಂದ್ರ(ಲೇ), **ಕಾಯಕ ಪರಿಣಾಮಿ,** ಶ್ರೀ ಪೂಜ್ಯ ಚನ್ನಬಸವದೇವರ ಶತಮಾನೋತ್ಸವ ಸಮಿತಿ, ಭಾಲ್ಕಿ, ಪು. ೯, ೨೧೨.

೧೪. ಸಬರದ ಬಸವರಾಜ (ಸಂ), ೨೦೦೦, **ಹೈದ್ರಾಬಾದ್ ಕರ್ನಾಟಕದ ತತ್ವಪದಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು.೧೯೧-೧೯೨.

ಅಧ್ಯಾಯ ೬

# ಬೀದರ ಜಿಲ್ಲೆಯ ಜಂಗಮರ ಸಾಹಿತ್ಯ ಮತ್ತು ಕಲೆ

## ೧. ಜಿಲ್ಲೆಯಲ್ಲಿ ಜಂಗಮರ ಸಾಹಿತ್ಯ ಬೆಳೆದು ಬಂದದ್ದು

### ೧.೧. ಮಠಗಳಿಂದ ಸಾಹಿತ್ಯದ ಕೊಡುಗೆ

೧.೧.೧. ಭಾಲ್ಕಿ ಹಿರೇಮಠ

೧.೧.೨. ಹಾರಕೂಡ ಮಠ

೧.೧.೩. ಹುಲಸೂರ ವಿರಕ್ತ ಮಠ

೧.೧.೪. ಸಿದ್ಧಾರೂಢ ಮಠ,ಬೀದರ

೧.೧.೫. ಭಾತಂಬ್ರಾ ವಿರಕ್ತಮಠ

### ೧.೨. ಸಾಹಿತ್ಯದಲ್ಲಿ ಜಂಗಮರ ಕೃಷಿ

೧.೨.೧. ಮರಕುಂದಿ ಬಸವಣ್ಣಪ್ಪ ತತ್ವಪದಕಾರ

೧.೨.೨. ನಿಜಲಿಂಗ ಭದ್ರೇಶ್ವರ ತತ್ವಪದಕಾರ

೧.೨.೩. ಹುಲಸೂರ ಶಿವಾನಂದ ಸ್ವಾಮಿಗಳು

೧.೨.೪. ವೀರಪಾಕ್ಷಯ್ಯ ಸ್ವಾಮಿ ಗೋರ್ಟಾ

೧.೨.೫. ಸೂರೇಶಸ್ವಾಮಿ ಹಿರೇಮಠ ಗೋರ್ಟಾ

೧.೨.೬. ವೀರಪಾಕ್ಷಯ್ಯ ಶಿವಲಿಂಗಯ್ಯ ಮಠಪತಿ ಗೋರ್ಟಾ

೧.೨.೭. ವಿ. ಎಂ.ಡಾಕುಳಗಿ

೧.೨.೮. ಪ್ರೊ. ಸಿದ್ರಾಮಯ್ಯಸ್ವಾಮಿ ಗೋರ್ಟಾ

೧.೨.೯. ಶ್ರೀ ಪಂಚಾಕ್ಷರಿ ಹಿರೇಮಠ

೧.೨.೧೦. ಪ್ರೊ. ಶಿವಕುಮಾರ ನಾಗವಾರ

೧.೨.೧೧. ಶ್ರೀಮತಿ ನೀಲಾ ಕೆ.

೧.೨.೧೨. ಶರಣಯ್ಯ ಸ್ವಾಮಿ ಮಠಪತಿ

ನಮ್ಮ ದೇಶದಲ್ಲಿ ಧರ್ಮ ಮತ್ತು ಸಾಹಿತ್ಯ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಭಾರತದ ಹೆಚ್ಚಿನ ಸಾಹಿತಿಕ ಕೃತಿಗಳು ಅಂದಿನಿಂದ ಇಂದಿನ ಕಾಲದವರೆಗೆ ಧಾರ್ಮಿಕ ತಹದಿಯ ಮೇಲೆ ಹುಟ್ಟಿದು ಕಾಣುತ್ತೆವೆ. ಅದಕ್ಕಾಗಿಯ ಧರ್ಮ ಮತ್ತು ಸಾಹಿತ್ಯಕಾಲದಿಂದ ಕಾಲಕ್ಕೆ ಭಾರತದ ತುಂಬ ವೈವಿಧ್ಯ ಮತ್ತು ವೈಭವದಿಂದ ರಾಜಮಹಾರಾಜರು ಆಸ್ಥಾನದಲ್ಲಿ ಬೆಳೆಸಿ ಪೂಸಿಸಿಕೊಂಡು ಬಂದಿದ್ದಾರೆ. ಹಾಗೇಯೇ ಜಂಗಮರ ಮಠಗಳು ಮತ್ತು ಜಂಗಮರು ತಮ್ಮ ಸಮಾಜ ಧಾರ್ಮಿಕ ಸೇವೆಯೊಂದಿಗೆ ಸಾಹಿತ್ಯವನ್ನು ಬೆಳೆಸಿಕೊಂಡು ಬಂದವರು. ಅದಕ್ಕೆ ಭಾರತದ ತುಂಬ ಧರ್ಮ ಮತ್ತು ಸಾಹಿತ್ಯ ತಾಯಿ ಮಕ್ಕಳ ಹೊಕ್ಕುಳ ಬಳ್ಳಿಯಂತೆ ಬೆಳೆದು ಬಂದಿದೆ ಇದಕ್ಕೆ ಬೀದರ ಜಿಲ್ಲೆಯು ಹೊರೆತಾಗಿಲ್ಲ.

ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಸಾಹಿತ್ಯಿಕ ದೃಷ್ಟಿಯಿಂದ ಬೀದರ ಜಿಲ್ಲೆಗೆ ವಿಶೇಷ ಸ್ಥಾನವಿದೆ. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ರಚಿಸಿದ ವಚನ ಸಾಹಿತ್ಯ ಇಡೀ ವಿಶ್ವಕ್ಕೆ ಅಮೂಲ್ಯ ಕೊಡುಗೆಯಾಗಬಲ್ಲ ಸಾಹಿತ್ಯವಾದ್ದರಿಂದ ಈ ಜಿಲ್ಲೆ ಶರಣರ ವಚನಗಳ ಕಂಪಿನಿಂದ ಸಾಹಿತ್ಯ ಫಸಲು ಹುಲುಸಾಗಿ ಬೆಳೆಯಲು ಪ್ರಾರಂಭವಾಯಿತು.

ಮುಖ್ಯವಾಗಿ ಜಿಲ್ಲೆಯ ಸಾಹಿತ್ಯ ಮತ್ತು ಶೈಕ್ಷಣಿಕ ಸಮೃದ್ಧಿಗೆ ಇಲ್ಲಿನ ಜಂಗಮರ ಮಠಗಳು ನೀಡಿದ ಕೊಡುಗೆ ಅಪಾರ. ಭಾಲ್ಕಿ ಹಿರೇಮಠ, ಸಿದ್ಧಾರೂಢ ಮಠ, ಹುಲಸೂರ ವಿರಕ್ತಮಠ, ಭಾತಾಂಬ್ರ ವಿರಕ್ತ ಮಠ, ಹಾರಕೂಡ ಮಠ ಉಡಂನಳ್ಳಿ ಪಂಚಾಂಗಮಠ ಮುಂತಾದ ಮಠಗಳು ಸಾಹಿತ್ಯಿಕವಾಗಿ ಅನೇಕ ಗ್ರಂಥಗಳನ್ನು ಹೊರತಂದು ಪ್ರಕಾಶಿಸಿ ಜಿಲ್ಲೆಯ ಜನೆತೆಗೆ ಶರಣ ಪರಂಪರೆಯ ಮತ್ತು ವಚನ ಸಾಹಿತ್ಯದ ಸವಿಯನ್ನು ಉಣಬಡಿಸಲು ಶ್ರಮಿಸಿವೆ ಶ್ರಮಿಸುತ್ತಲ್ಲಿವೆ. "ಶೈಕ್ಷಣಿಕ ಕ್ಷೇತ್ರದ ಶಿರೋರತ್ನದ ಮಠಾಧೀಶರು ಸಾಹಿತ್ಯದ ರಕ್ಷಕರು ಆಗಿದ್ದಾರೆ. ಸಮಾಜದಲಿ ತುಂಬಿಕೊಂಡ ಕಂದಚಾರ, ಭೃಷ್ಟತೆ, ಅಂಧಶ್ರದ್ಧೆ ಮತ್ತು ಅನ್ಯೆತಿಕತೆಯನ್ನ ಶಿಕ್ಷಣದ ಮೂಲಕ ಬೇರು ಸಹಿತ ಕಿತ್ತೊಗೆದು ಧರ್ಮದ ಜಾಗೃತಿಯ ಜೊತೆಗೆ ಜನತೆಯ ನಡೆನುಡಿಗಳೊಂದಾಗಿಸಿ, ಸಮಾಜದ ಏಳ್ಗೆಗಾಗಿ ತಮ್ಮನ್ನೇ ಸಮರ್ಪಿಸಿ ಕೊಂಡಿರುವದನ್ನು ನೋಡಿದರೆ ಅವರ ಅನುಭವದ ಆಳದಲ್ಲಿ ಜ್ಞಾನದ ಶಿಖರವನ್ನು

ವಿಹರಿಸುತ್ತಿದ್ದೆಂಬುದಕ್ಕೆ ಮಠಗಳಲ್ಲಿ ರಚಿಸಿರುವ ಕೃತಿಗಳ ಲೇಖನಗಳೇ ಸಾಕ್ಷಿಯಾಗಿವೆ"(ಮೂಲಗೆ ರಮೇಶ:೧೯೯೮:೪೦). ಅಂತೆಯೇ ಜಿಲ್ಲೆಯ ಮಠಗಳ ಸಾಹಿತ್ಯಿಕ ಕೊಡುಗೆಯನ್ನು ಕೆಳಗಿನಂತೆ ಗಮನಿಸೇಕಾದದ್ದು.

## ೧.೧. ಮಠಗಳಿಂದ ಸಾಹಿತ್ಯದ ಕೊಡುಗೆ

**೧.೧.೧. ಭಾಲ್ಕಿ ಹಿರೇಮಠ :** ಭಾಲ್ಕಿ ಹಿರೇಮಠದ ಧಾರ್ಮಿಕ,ಸಾಮಾಜಿಕ, ಶೈಕ್ಷಣಿಕ ಮತ್ತು ಸಾಹಿತ್ಯಿಕ ಮೊದಲಾದ ಕಾರ್ಯಗಳಿಗೆ ಪ್ರಮುಖವೆನಿಸಿಕೊಂಡಿದೆ. ಜಿಲ್ಲೆಯ ಬಹುತೇಕ ಮಠಗಳಿಗೆಲ್ಲ ಮಾರ್ಗದರ್ಶಕವಾಗಿ, ಕೇಂದ್ರ ಬಿಂದುವಾಗಿ ನಿಂತಿರುವುದು ಈ ಮಠಕ್ಕೆ ಎಂಟು ನೂರು ವರ್ಷಗಳಷ್ಟು ಪ್ರಾಚೀನ ಇತಿಹಾಸವನ್ನು ಪಡೆದಿದೆ. ಇದರ ಮೂಲ ಜಂಗಮರು ಶ್ರಿ ಚನ್ನಬಸವೇಶ್ವರರು ತರುವಾಯ ಅನೇಕ ಮಠಗಳಾಗಿ ಗತಿಸಿದ ನಂತರ ಡಾ. ಚನ್ನಬಸವ ಪಟ್ಟದ್ದೇವರು ಮಠದ ಅಧಿಕಾರವನ್ನು ಸ್ವೀಕರಿಸಿ ಮಠವನ್ನು ಪ್ರತಿಯೊಂದು ಕ್ಷೇತ್ರಗಳಲ್ಲಿ ಉದ್ಧಾರಮಾಡಿದರಿಂದ ಪಟ್ಟಾಧಿಕಾರ ಮಾಡಲು ನೇಮಿಸಲಾಯಿತು. ತರುವಾಯ ೧೯೨೪ ರಲ್ಲಿ ಶ್ರೀಗಳಿಗೆ ಪೀಠಾರೋಹಣದ ಕಿರೀಟವನ್ನಿಕ್ಕಿ ಸನ್ಮಾನಿಸಿದರು. ಅಂದಿನಿಂದ ಮಠದ ಪ್ರತಿಯೊಂದು ಜವಾಬ್ದಾರಿ ಶ್ರೀಗಳ ಮೇಲೆಯೇ ಹೇರಲಾಯಿತು. ಇವರಿಗೆ ಶಿಕ್ಷಣದ ಮತ್ತು ಸಾಹಿತ್ಯದ ವಲಯದಲ್ಲಿ ತುಂಬ ಆಸಕ್ತರಿದ್ದರು. ಆದ್ದರಿಂದ ಸಂಸ್ಕೃತ ಕುಮಾರ ಸಂಭವ ರಘುವಂಶ ಮತ್ತು ಕನ್ನಡದ ಮಗ್ಗೆಯ ಮಾಯಿದೇವರ ಶತಕತ್ರಯಗಳನ್ನು ಗುರು ಮುಖೇನ ಕಲಿತರು. ಇವರ ಬುದ್ಧಿ ಚುರುಕುತನಕ್ಕೆ ಶಿವಾನುಭವದ ಮೂಲಕ ನಿಜಗುಣ ಶಿವಯೋಗಿಗಳ ಕೃತಿಯನ್ನು ತಿಳಿದುಕೊಂಡಿರುವುದು ಸಾಕ್ಷಿಯಾಗಿದೆ. ಮಗ್ಗೆಯ ಮಾಹಿದೇವರ ಶತಕತ್ರಯದಲ್ಲಿಶಿವಾಧವ ಶತಕ, ಶಿವಾವಲ್ಲಭ ಶತಕ, ಐಪುರಿಶ್ವರ ಶತಕ ಮುಂತಾದವುಗಳು ಪಠಣ ಮಾಡಿದವರು.

೧೨ನೇಯ ಶತಮಾನದಲ್ಲಿ ಬಸವಣ್ಣನವರು ಬಿತ್ತಿದ ಧರ್ಮದ ಬೀಜವನ್ನು ಹೆಮ್ಮರವಾಗಿ ಬೆಳೆಸಿದರು. ಧಾರ್ಮಿಕ ಬೆನ್ನೆಲುಬಾಗಿ ಧರ್ಮದ ಮರ್ಮವನ್ನರಿತು ದಯವಿಲ್ಲದ ಧರ್ಮವ ದಾವುದಯ್ಯ ಎಂಬ ಶರಣರ ವಾಣಿಯನ್ನು ತಮ್ಮ ನಡೆ-ನುಡಿಯಲ್ಲಿ ಕ್ರಿಯೇಗಳಲ್ಲಿ ನಡೆದು ಅದಕ್ಕೆ ಸತ್ಯವಾಗಿಸಿದ್ದವರು. ಧರ್ಮವನ್ನು ಬೆಳೆಸುತ್ತಾ, ರಕ್ಷಿಸುತ್ತಾ, ಹಗಲು-ಇರಳು ಸಂಚರಿಸಿ ಪ್ರಸಾರಪಡಿಸಿದ್ದರು. ಕನ್ನಡ ಸಾಹಿತ್ಯವನ್ನು ಬೆಳೆಸುವಲ್ಲಿ ತುಂಬ ಶ್ರಮಿಸಿದವರು. ಕನ್ನಡಮ್ಮನ ಭೂಮಿಯಲ್ಲಿ ಹುಟ್ಟಿ ತಾಯಿ ಜಲವನ್ನು ಕುಡಿದು ಕನ್ನಡವನ್ನು ಮೈಗೂಡಿಸಿಕೊಂಡು

ಕನ್ನಡಮ್ಮನ ಸೇವೆಗೆ ಹಗಲು- ಇರುಳು ದುಡಿಯುವಲ್ಲಿ ಪಣತೊಟ್ಟ ಮಹತ್ವದ ಕಾರ್ಯಗಳು ಮಾಡಿದವರು, ಬೀದರ ಜಿಲ್ಲೆಯಲ್ಲಿ ಕನ್ನಡ ಭಾಷೆಗೆ ಬೆಳೆಯಲು ಇಂದಿನಂತೆ ಅವಕಾಶವಿರಲಿಲ್ಲ. ಉರ್ದು- ಇಂಗ್ಲೀಷ ಭಾಷೆಗಳು ಜಿಲ್ಲೆಯ ತುಂಬ ತುಂಬಿಕೊಂಡಿದವು. ಆಗ ಜಂಗಮ ಮೂರ್ತಿ ಶ್ರೀಗಳು ಹೊರಗೆ ಉರ್ದು ಬೋರ್ಡ ಹಾಕಿ ಒಳಗೆ ಕನ್ನಡ ಕಲಿಸುತ್ತಿದ್ದರು. ಮುಂದೆ ಶಾಂತಿ ವರ್ಧಕ ಶಿಕ್ಷಣ ಸಂಸ್ಥೆಯನ್ನು ತೆಗೆದರು. ಇದು ಇಂದು ಎಲ್ಲಾ ರಂಗಗಳಲ್ಲಿ ಶಿಕ್ಷಣವನ್ನು ಪ್ರಸಾರಮಾಡುತ್ತಿರುವದು ಹೆಮ್ಮೆಯ ವಿಷಯ. ಮುಂದೆ ಮಠದ ಮೂಲಕ ಅನೇಕ ಗ್ರಂಥಗಳನ್ನು ಬಿಡುಗಡೆ ಮಾಡಿ ಸಾಹಿತ್ಯ ಲೋಕವನ್ನು ಬೆಳೆಸಿದ್ದರು.

೧ನೇ ಡಿಸೆಂಬರ ೧೯೭೧ರಂದು 'ಶಾಂತಿಕಿರಣ 'ಎಂಬ ವಾರಪತ್ರಿಕೆಯ ರೂಪದಲ್ಲಿ ಪ್ರಪ್ರಥಮವಾಗಿ ಪ್ರಕಟಣೆಗೊಂಡಿತ್ತು. ಈ ಪತ್ರಿಕೆಯಲ್ಲಿ ಡಿಸೆಂಬರ ೮ - ೧೯೭೨ರ ಸಂಪಾದಕರಾದ ಡಾ.ಜಿ.ಬಿ. ವಿಸಾಜಿಯವರು ಹೀಗೆ ಬರೆದಿರುವದನ್ನು ನೆನೆಯಬಹುದು. "ಕರ್ನಾಟಕದ ಗಡಿನಾಡಿನಲ್ಲಿ ಕನ್ನಡ ಬಾವುಟವನ್ನು ಹೆಮ್ಮೆಯಿಂದ ಎತ್ತಿ ಹಿಡಿದ ಪತ್ರಿಕೆ ಶಾಂತಿಕಿರಣ ನಾಲ್ಕು ಪುಟದ ಹೃದಯದಲ್ಲಿ ಎಷ್ಟೊಂದು ವೈವಿಧ್ಯ. ಕವನ, ಕಥೆ, ಪ್ರಬಂಧ, ವಿಮರ್ಶೆ, ಸಾಹಿತ್ಯಿಕ ವ್ಯಕ್ತಿಗಳ ಸುದ್ದಿಗಳ ವರದಿ ಮತ್ತು ವಿವಿಧ ಜಾಹಿರಾತುಗಳಿಂದ ಜನರ ಮನಸ್ಸನ್ನು ಸೂರೆಗೊಂಡಿದೆ". ಅಲ್ಲದೆ ಮಠದ ವತಿಯಿಮದ 'ಚೆಂಬೆಳಕು' ಕವನ ಸಂಕಲನದ ಹೊತ್ತಿಗೆ ಪ್ರಕಟಿಸಿ ಬಿಡುಗಡೆ ಮಾಡಿದ್ದಾರೆ. ಪೂಜ್ಯ ಚನ್ನಬಸವ ಪಟ್ಟದ್ದೇವರ ಬಗ್ಗೆ ಪ್ರಕಟವಾದ 'ವಿನಯ ಭಂಡಾರಿ' ಎನ್ನುವ ಗದ್ಯ ಲೇಖನವುಳ್ಳ ಪುಸ್ತಕ ಹದಿನೆಂಟು ಲೇಖಕರ ಹದಿನೆಂಟು ಬಿಡಿ ಲೇಖನಗಳಿಂದ ಕೂಡಿದೆ. ಬಸವಚೇತನ, ಚನ್ನಬಸವ, ಶ್ರೀ ಚನ್ನಬಸವ ಪಟ್ಟದ್ದೇವರುಗಳೆಂಬ ಕೃತಿಗಳನ್ನು ಒಂದೇ ಸಮಯಕ್ಕೆ ಬಿಡುಗಡೆ ಯಾಗಿವೆ. ಇವುಗಳಲ್ಲಿ ಡಾ. ಜಿ.ಬಿ. ವಿಸಾಜಿಯವರು ಬರೆದ 'ಶ್ರೀ ಚನ್ನಬಸವ ಪಟ್ಟದ್ದೇವರ ಭಾಲ್ಕಿ' ಎಂಬ ಕೃತಿಯಲ್ಲಿ ಶ್ರೀಗಳ ಜೀವನ ಚರಿತ್ರೆ ತೆರೆದಿಟ್ಟ ಕನ್ನಡಿಯಂತಿದೆ. ಅಲ್ಲದೆ ಸರಳ ಶೈಲಿಯಲ್ಲಿದೆ.

ಶ್ರೀ ಚನ್ನಬಸವ ಪಟ್ಟದ್ದೇವರ ೧೦೧ನೇಯ ಹುಟ್ಟು ಹಬ್ಬದ ಶುಭ ಸಂದರ್ಭದಲ್ಲಿ ಪ್ರೀತಿ ಭಕ್ತಿಗಳಿಂದ ಸಮರ್ಪಿಸಿದ ಗೌರವ ಗ್ರಂಥವಾದ 'ಕಾಯಕ ಪರಿಣಾಮಿ' ಎಂಬುದು ಶತಮಾನೋತ್ಸವ ನಿಮಿತ್ತವಾಗಿ ಬಹಳ ವಿಜೃಂಭಣೆಯಿಂದ ಬಿಡುಗಡೆ ಮಾಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೇಮಿಯ ಹಿಂದಿನ ಅಧ್ಯಕ್ಷರಾದ ಶಾಂತರಸ ರಾಯಚೂರ, ಚನ್ನಬಸಪ್ಪ ಬೆಟ್ಟದೂರ ಲಿಂಗಣ್ಣ ಸತ್ಯಂಪೇಟ ಮತ್ತು ಎಂ. ಬಂಡೆಪ್ಪಾ ಇವರುಗಳ ಸಂಪಾದಕತ್ವದಲ್ಲಿ ಹೊರ ಬಂದ ಗ್ರಂಥ ೧೪೩೦ ಪುಟಗಳುಳ್ಳ ಬೃಹತ ಗ್ರಂಥವಾಗಿದೆ. ನಾಡಿನ ಖ್ಯಾತ

ಲೇಖಕರಾದ ಡಾ. ಎಂ. ಚಿದಾನಂದ ಮೂರ್ತಿ, ಡಾ. ಸಿದ್ಧಯ್ಯ ಪುರಾಣಿಕ, ಸಿಂಪಿ ಲಿಂಗಣ್ಣ, ಚನ್ನವೀರಕಣವಿ, ಡಾ. ದೇವೇಂದ್ರಕುಮಾರ ಹಕಾರಿ, ವೀರೇಂದ್ರ ಸಿಂಪಿ, ಬಿ.ಸಿ. ಜವಳಿ, ಡಾ. ವೀರಣ್ಣ ರಾಜೂರ, ಡಾ. ಬಸವರಾಜ ಸಬರದ, ಡಾ. ಬಿ.ವ್ಹಿ. ಶಿರೂರ, ಡಾ. ಎಂ. ಜಿ. ಬಿರಾದಾರ, ಡಾ. ವಸಂತ ಕುಷ್ಟಗಿ, ಡಾ. ಎಂ. ಎಸ್. ಲಠ್ಠೆ ಡಾ.ಎಲ್. ತಿಪ್ಪೆರುದ್ರಸ್ವಾಮಿ, ಡಾ. ಬಿ.ಬಿ.ಹೆಂಡಿ, ಡಾ. ಸಂಗಮೇಶಸವದತ್ತಿಮಠ, ಡಾ. ದೇ. ಜವರೇಗೌಡ-ಹೀಗೆ ೧೨೫ ಪ್ರಮುಖ ಗಣ್ಯ ಲೇಖಕರು ಇದರಲ್ಲಿ ಪಾಲ್ಗೊಂಡಿದ್ದಾರೆ. ಇವರುಗಳ ಸರಳ ಶೈಲಿಯಲ್ಲಿ ಲೇಖನಗಳು ಓದುಗನಿಗೆ ಓದಿಸದೇ ಬಿಡಲಾರವು.

೧೯೯೨ರಲ್ಲಿ 'ಚನ್ನನ ಮಹಿಮೆ' ಎಂಬ ಕವನ ಸಂಕಲನವನ್ನು ಹೊರ ತಂದಿದ್ದಾರೆ. ಈ ಕವನಗಳಲ್ಲಿ ಇಡೀ ಶ್ರೀಗಳ ವರ್ಣನೆ ಕುರಿತ ಕವನಗಳೇ ಆಗಿವೆ. ೧೯೯೫ರಲ್ಲಿ ವೈರಾಗ್ಯನಿಧಿ ಲಿಂಗಾಂಗಯೋಗಿ ಶತಾಯುಷಿ ಡಾ. ಚನ್ನಬಸವ ಪಟ್ಟದ್ದೇವರು ಎಂಬ ಪುಸ್ತಕದಲ್ಲಿ ಶ್ರೀಗಳ ಜೀವನ ಚರಿತ್ರೆಯನ್ನು ಶ್ರೀ ವೀರಶೆಟ್ಟಿ ಬಾವುಗೆಯವರು ಬರೆದು ಪ್ರಕಟಿಸಿದ್ದಾರೆ.

'ಬಸವೇಶ್ವರ ಮತ್ತು ಅಂಬೇಡ್ಕರ' ಕುರಿತ ಕೃತಿಯನ್ನು ಡಾ.ದೇ. ಜವರೇಗೌಡರು ಬರೆದಿದ್ದಾರೆ. ಇದನ್ನು ಪ್ರಕಟಿಸಲಾಗಿದೆ. ಬಸವೇಶ್ವರರ ಜೀವನ ಮತ್ತು ಅಂಬೇಡ್ಕರವರ ಜೀವನ ವಿಚಾರ ಮತ್ತು ತತ್ವಗಳ ಹೊಲಿಕೆ ಸಮಾಜದ ಆಗು ಹೋಗುಗಳ ಬಗ್ಗೆ ಇಬ್ಬರ ಚಿಂತನೆ ಸ್ಪಷ್ಟವಾಗಿ ಚಿತ್ರಿಕರಿಸಿದ್ದಾರೆ ಡಾ: ದೇ. ಜವರೇಗೌಡರು.

ಭಾಲ್ಕಿ ಹಿರೇಮಠದಲ್ಲಿ ಪ್ರತಿ ತಿಂಗಳ ಹುಣ್ಣಿಮೆಗೆ ಶಿವಾನುಭವಗೋಷ್ಠಿ ನಡೆಯುತ್ತದೆ. ಚನ್ನಬಸವ ಪಟ್ಟದ್ದೇವರ ಕರಕಮಲ ಸಂಜಾತರಾದ ಪೂಜ್ಯ ಬಸವಲಿಂಗಪಟ್ಟದ್ದೇವರು ಈ ಗೋಷ್ಠಿಗೆ ನಾಡಿನ ಹೆಸರಾಂತ ಸಾಹಿತಿಗಳನ್ನು ಆಮಂತ್ರಿಸಿ ಅವರಿಂದ ಜ್ಞಾನ ದಾಸೋಹವನ್ನು ಉಣಬಡಿಸುತ್ತಾರೆ. ಇತ್ತೀಚೆಗೆ ಲಿಂಗೈಕ್ಯರಾದ ಡಾ.ಚನ್ನಬಸವಪಟ್ಟದ್ದೇವರ ಲಿಂಗೈಕ್ಯ ಸ್ಥಳಕ್ಕೆ 'ಪುಣ್ಯಾಶ್ರಮ' ಎಂದು ಹೆಸರಿಟ್ಟು, ಅಲ್ಲಿಯು ಸಹ ತಿಂಗಳಿಗೊಮ್ಮೆ ವಚನಗಳ ಪಾರಾಯಣ ಮತ್ತು ಗೋಷ್ಠಿಗಳನ್ನು ನಡೆಸುತ್ತಾರೆ. ವಿದ್ವಾಂಸರನ್ನು ಜಂಗಮರನ್ನು, ಸಾಹಿತಿಗಳನ್ನು ಮತ್ತು ಅನುಭವಸ್ಥರ ಮೂಲಕ ಸಮಾಜದಲ್ಲಿನ ಕೊಳಕನ್ನು ಹೋಗಲಾಡಿಸುವ ಉದ್ದೇಶಗಳನ್ನು ಸದಾ ಬೋಧಿಸುತ್ತಾ ನಿರಂತರ ಜಂಗಮ ಸೇವೆ ನಡೆಯುತ್ತದೆ. ಹೀಗೆ ಭಾಲ್ಕಿ ಹಿರೇಮಠವು ಜಂಗಮ ಸೇವೆಯ ಜೊತೆಗೆ ಸಾಹಿತ್ಯಕವಾಗಿ ತನ್ನದೇ ಆದ ಪ್ರಭಾವವನ್ನು ಬೀರಿ ಉದಯೋನ್ಮುಖ ಬರಹಗಾರರನ್ನು, ಕವಿಗಳನ್ನು ಬೆಳಕಿಗೆ ತರುವಲ್ಲಿ ಮುಂದೆ ಬರುತ್ತಿದೆ.

**೧.೧.೨. ಹಾರಕೂಡ ಮಠ :** ಭಾಲ್ಕಿ ಹಿರೇಮಠದಂತೆ ಬಸವಕಲ್ಯಾಣ ತಾಲ್ಲೂಕಿನ ಹಾರಕೂಡ ಹಿರೇಮಠವು ಸಾಹಿತ್ಯಕವಾಗಿ ಅನೇಕ ಕೃತಿಗಳನ್ನು ಹೊರಗೆ ತಂದು ಸಾಹಿತ್ಯ ರಂಗವನ್ನು ವಿಸ್ತಾರಗೊಳಿಸುತ್ತಿದೆ. ಈ ಮಠವು ಬಸವಕಲ್ಯಾಣದಿಂದ ಹೋಗುವ ಉತ್ತರ ಮಾರ್ಗದಲ್ಲಿ ಸುಮಾರು ೨೫ ಕಿ.ಮೀಟರ ದೂರದಲ್ಲಿರುವ ಹಾರಕೂಡ ಎಂಬ ಚಿಕ್ಕ ಗ್ರಾಮದ ಹೊರವಲಯದಲ್ಲಿ ಪ್ರಕೃತಿಯ ವಾತಾವರಣದಲ್ಲಿ ಭವ್ಯವಾಗಿ ಬೆಳೆದು ನಿಂತಿದೆ. ಈ ಮಠಕ್ಕೆ ಸಾವಿರಾರು ವರ್ಷದ ಇತಿಹಾಸವಿದ್ದರೂ ದೊರೆಯುತ್ತಿರುವ ಸಾಮಾಗ್ರಿಗಳ ಪ್ರಕಾರ ನಾಲ್ಕು ಶತಮಾನಗಳ ಹಿಂದಿನ ಚಾರಿತ್ರ್ಯ ಹೊತ್ತು ನಿಂತಿರುವುದು ಕಾಣುತ್ತದೆ. ಭಕ್ತಿ, ವೈರಾಗ್ಯ, ಜ್ಞಾನಗಳ ತ್ರಿವಿಧ ದಾಸೋಹಕ್ಕೆ ಹೆಸರಾದ ಹೆಸರಾಂತ ಸಂಗಮ ತಾಣ. ಒಂದು ಕಡೆ ಪೂಜಾ ಅರ್ಚನಾ ಪ್ರಸಾದವಾದರೆ ಇನ್ನೊಂದು ಕಡೆ ಅನುಭವ ಗೌರವಗಳ ಚಿಂತನ-ಮಂಥನ ಸದಾ ಜಂಗಮತ್ವ ಹಳೆಯ ಹೊಸತುಗಳನ್ನು ರಚನಾತ್ಮಕ ಸಕಾರತ್ವ ಇವೇ ಈ ಮಠದ ಪ್ರಮುಖ ಉದ್ದೇಶಗಳಾಗಿವೆ.

ಈ ಮಠದ ಗುರುಪರಂಪರೆ ಹಲವಾರು ಗುರುಗಳಿಂದ ಬೆಳೆದು ನಿಂತಿದೆ. ಈ ಶತಮಾನದ ಮಧ್ಯ ಭಾಗದಲ್ಲಿ ಬಾಳಿ ಬೆಳಗಿದಂತಹ ಆರನೆಯ ಮಠಾಧೀಶರಾದ ಶ್ರೀ ಚನ್ನಬಸವ ಶಿವಯೋಗಿಗಳು ಬಾಲ ತಪಸ್ವಿಗಳಾಗಿ, ಪವಾಡ ಪುರುಷರಾಗಿ, ಗುರು ರೂಪದ ಹರನಾಗಿದ್ದರು. ತಮ್ಮ ಜೀವಿತವನ್ನು ಬಡವರ ದಲಿತ ಹಾಗೂ ಹಿಂದುಳಿದವರ ಏಳ್ಗಿಗೆಗಾಗಿ ಮುಡುಪಾಗಿಟ್ಟು ಲೋಕ ಕಲ್ಯಾಣಕ್ಕಾಗಿ ಜನಕಲ್ಯಾಣಕ್ಕಾಗಿ ಪೂಜಾ ತಪಸ್ಸಿನಿಂದ ಭಕ್ತರನ್ನು ಉದ್ಧರಿಸಿ ಚರಿತ್ರನಾಯಕನಾಗಿ ಕಂಗೋಳಿಸಿರುವರು. "ತಮ್ಮ ನಿರಂತರ ಧರ್ಮ ಪ್ರಸಾರದ ಸಂದರ್ಭದಲ್ಲಿ ಅನೇಕ ಪವಾಡಗಳೊಂದಿಗೆ ಜನಕಲ್ಯಾಣವನ್ನು ಮಾಡಿದ್ದಾರೆ. ಅದಕ್ಕಾಗಿಯೇ ಜನತೆ ಇವರನ್ನು ಕಲ್ಯಾಣ ನಾಡಿನ ಕಾರಣಿಕ ಪುರುಷರೆಂದು" ನೆನೆಯುತ್ತಾರೆ(ಸವದತ್ತಿಮಠ ಸಂಗಮೇಶ:೧೯೯೬:೨).

ಓದು ಬರಹಗಳು ವಿರಳವಾದ ಸಂದರ್ಭದಲ್ಲೂ ಶ್ರೀಗಳು ಸಾಹಿತ್ಯ ಆಸಕ್ತರಾಗಿದ್ದರು. ಅನೇಕ ಕಲಾವಿದರಿಗೆ, ಕವಿಗಳಿಗೆ ಪ್ರೋತ್ಸಾಹಿಸಿದರು. ಅದಕ್ಕೆ ಇವರನ್ನು ಕುರಿತು ಜಾನಪದರು ಕೆಳಗಿನಂತೆ ಹೊಗಳಿದ್ದಾರೆ.

"ಹಾರಕೂಡ ಮುತ್ಯಾನ ಭಜನಿ
ಹಗಲ ಇರಳ ಮಾಡುವೆ ನಾನು
ಸಾವಧಾನ ಶಕ್ತಿಯೂ ನಾ
ಭಾವದಲ್ಲಿ ಪರಮಾತ್ಮನ ನೆನೆಸುವೆ ನಾ

ಹೇಳತೀನಿ ಕೇಳಾ ಆತನ ವರ್ಣಾ
ಕೈ ಕಾಲು ಮೈಬಣ್ಣ
ಮಾರಿ ಹಸರ ಚನ್ನ
ಶುದ್ಧ ಸೂರ್ಯನ ವರ್ಣ
ಜಂಗಮ ಚನ್ನಬಸವ"(ಅವರೇ:೪೬)

ಶಿವಯೋಗಿಗಳ ಬಗ್ಗೆ ಇಟ್ಟಿರುವ ಭಕ್ತಿ ಮೇಲಿನ ಪದಗಳಲ್ಲಿ ಹಾಸುಹೊಕ್ಕಾಗಿದೆ.

ಶ್ರೀ ಚನ್ನಬಸವ ಶಿವಯೋಗಿಗಳ ಕರಕಮಲ ಸಂಜಾತರಾಗಿ ಷ.ಬ್ರ. ಶ್ರೀ ಚನ್ನವೀರ ಶಿವಾಚಾರ್ಯರ ಜಂಗಮರು ಹಾರಕೂಡ ಹಿರೇಮಠದ ನೂತನ ಉತ್ತರಾಧಿಕಾರಿಯಾದರು. ಚಿಕ್ಕಂದಿನಿಂದಲೇ ಶ್ರೀ ಚನ್ನವೀರ ಶಿವಾಚಾರ್ಯರರು ತುಂಬ ಚುರುಕಾಗಿದ್ದರು. ಪ್ರಾಥಮೀಕ ಶಿಕ್ಷಣದಿಂದಲೇ ಸತತ ಅಭ್ಯಾಸ ಇವರದು. ಪ್ರಾಥಮಿಕ ಶಿಕ್ಷಣವನ್ನು ತಮ್ಮ ಹುಟ್ಟುರಾದ ಹಾರಕೂಡದಲ್ಲಿ ಮುಗಿಸಿಕೊಂಡು ಪ್ರೌಢ ಅಧ್ಯಯನಕ್ಕೆ ಗುಲಬರ್ಗಾಕ್ಕೆ ತೆರಳಿದ್ದರು. ಯಾವಾಗಲೂ ಓದಿನಲ್ಲೇ ಕಾಲಕಳೆಯುವವರು ನಂತರ ಹುಬ್ಬಳಿಗೆ ಹೋದರು. ಪ್ರಖ್ಯಾತ ಜಗದ್ಗುರು ಮೂರು ಸಾವಿರ ಮಠದ ಆಶ್ರಯದಲ್ಲಿ ಸೇರ್ಪಡೆಯಾಗಿ ಶ್ರೀ ಕುಮಾರೇಶ್ವರ ಶಿವಯೋಗ ಸಂಘದಲ್ಲಿ ಸಾಧಕರಾಗಿ ಪ್ರವೇಶಿಸಿದರು. ಸತತ ಅಭ್ಯಾಸದಿಂದ ಜ್ಞಾನದ ಪರ್ವತವಾಗುತ್ತಾ ಭವಿಷ್ಯತ್ತಿನ ನೆಲೆಯನ್ನು ಗಟ್ಟಿಯಾಗಿ ಕಂಡುಕೊಳ್ಳುವುದರ ಜೊತೆಗೆ ಧಾರ್ಮಿಕ ಮತ್ತು ಲೌಕಿಕ ಶಿಕ್ಷಣದ ವಿಶೇಷ ಅಧ್ಯಯನ ಮಾಡಿದರು. ಓದಿನೊಂದಿಗೆ ತಮ್ಮ ಕ್ರಿಯಾತ್ಮಕ ಚಟುವಟಿಕೆಯಿಂದ ಹಿರಿಯರ ಪ್ರೋತ್ಸಾಹ ಗಳಿಸಿಕೊಂಡು ಜಂಗಮ ಸೇವೆ ನಿರಂತರವಾಗಿ ಮುಂದುವರೆಸುತ್ತಿರುವರು.

ಧರ್ಮವನ್ನು ಜನರ ಮನೆಯ ಬಾಗಿಲಿಗೆ ಕೊಂಡುಯ್ಯುವುದು ಅದರ ಸಾಕಾರತೆಗಾಗಿ ಧಾರ್ಮಿಕ ಆಚರಣೆಗಳು, ಶಿವಾನುಭವಗೋಷ್ಠಿ, ಅನ್ನದಾಸೋಹದ ಜೊತೆಗೆ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸೇವೆಗೈಯುತ್ತಿರುವರು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದ್ದು ಎನ್ನುವಂತೆ ಇವರ ಕೀರ್ತಿ ದಶದಿಕ್ಕುಗಳಲ್ಲಿ ಹರಡಿದೆ. ಹಾರಕೂಡ ಮಠವು ಸಾಹಿತ್ಯಿಕ ಕ್ಷೇತ್ರಕ್ಕೆ ಕೊಟ್ಟ ಕೊಡುಗೆ ಅಪಾರ. ಮಠದಲ್ಲಿ ಅನುಭವ ಪ್ರಚಾರೋಪನ್ಯಾಸ ಮಾಲೆ ಸಮಿತಿಯನ್ನು ರಚಿಸಿದ್ದಾರೆ. ಅಲ್ಲದೆ ಸೃಜನಶೀಲ ಕೃತಿಗಳನ್ನು ಬಿಡುಗಡೆ ಮಾಡುವುದು ಈ ಮಠದ ಮುಖ್ಯ ಲಕ್ಷಣವೆನ್ನಬೇಕು.

ಹಾರಕೂಡ ಹಿರೇಮಠದ ಶ್ರೀ ಸದ್ಗುರು ಚನ್ನಬಸವ ಸ್ವಾಮಿಗಳ 'ಅಷ್ಟೋತ್ತರ ಶತನಾಮಾವಳಿ' ಎಂಬ ಗ್ರಂಥವನ್ನು ಮೊಟ್ಟ ಮೊದಲು ಪ್ರಕಟಣೆ ಮಾಡಿದ್ದಾರೆಂದು

ಹೇಳಬಹುದು. 'ಅನುಭವ ಮಂಟಪದಲ್ಲಿ ವೀರಶೈವ ಸಂಸ್ಕೃತಿ' ಶ್ರೀ ವಿ. ಎಸ್. ಚಿರಂತಿ ಮಠ, 'ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು', ಪ್ರೊ. ಸೂಗಯ್ಯಾ ಹಿರೇಮಠ, 'ಅಂತರ' ಇದು, ಸಣ್ಣ ಕಥೆಗಳ ಸಂಕಲವಾಗಿದೆ ಪ್ರೊ. ಸೂಗಯ್ಯಾ ಹಿರೇಮಠ, 'ವಚನ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು', ಡಾ. ಎಂ. ಎಸ್. ಲಠ್ಠೆ, 'ಅನುಭಾವಿಯ ಆತ್ಮ ಕಥನ', ಡಾ. ಎಸ್. ಆರ್. ಗುಂಜಳ, 'ಶರಣರ ದಾಸೋಹ ಮತ್ತು ಕಾಯಕ', ಶಿವರಾಜ ಬಿ. ಪಾಟೀಲ, 'ಶರಣರ ವಚನದಲ್ಲಿ ಸಮಾಜ ಕಾರ್ಯದರ್ಶನ', ಎಸ್. ಆರ್. ಶಾಸ್ತ್ರಿ 'ಸನ್ನಿಧಿ', ಡಾ. ಸಂಗಮೇಶ ಸವದತ್ತಿಮಠ 'ಪುಣ್ಯಚಿತ್ತರು' - ಡಾ. ಪಂಚಾಕ್ಷರಿ ಹಿರೇಮಠ, 'ಶೂನ್ಯ ಸಂಪಾದನೆಯ ಮುಖಗಳು', - ಡಾ. ಸಂಗಮೇಶ ಸವದತ್ತಿಮಠ, 'ಕಲ್ಯಾಣ ನಾಡಿನ ಪರಂಜ್ಯೋತಿ' ಡಾ. ಎಂ. ಎಸ್. ಲಠ್ಠೆ, ೧೯೯೬ರಲ್ಲಿ 'ಶ್ರೀ ಚನ್ನವೀರ' ಶಿವಾಚಾರ್ಯ ಸ್ವಾಮಿಗಳವರ ಪಟ್ಟಾಧಿಕಾರ ನಿಮಿತ್ತವಾಗಿ ಸ್ಮರಣ ಸಂಪುಟವಾದ ಚನ್ನವೀರ ಎನ್ನುವ ಸಂಪಾದಿತ ಕೃತಿಯನ್ನು ಡಾ. ಸಂಗಮೇಶ ಸವದತ್ತಿಮಠ ಸಂಪಾದಿಸಿದ ಬೃಹತ್ ಗ್ರಂಥವಾಗಿದೆ. ನಾಡಿನ ಪ್ರಮುಖ ಸಾಹಿತಿಗಳ ಲೇಖನಗಳೊಂದಿಗೆ ಶ್ರೀಗಳ ಜೀವನ ಚರಿತ್ರೆಯನ್ನು ಪ್ರಮುಖವಾಗಿ ಚಿತ್ರಿಸಿದ್ದಾರೆ. ಎಲ್ಲಾ ಲೇಖನಗಳು ಸರ್ವರಿಗೂ ಓದಿಸಿಕೊಂಡು ಹೋಗುತ್ತ ಅಲ್ಲದೆ ಮಠದಲ್ಲಿ ನಡೆಯುವ ಕಾರ್ಯಕ್ರಮಗಳು ತುಂಬ ಅಚ್ಚುಕಟ್ಟಾಗಿ ತಿಳಿಸಿದ್ದಾರೆ. ಈ ಗ್ರಂಥವು ಜಿಲ್ಲೆಗೆ ಕೀರ್ತಿ ತಂದಿದೆ. ಬಸವೋತ್ತರ ಯುಗದ ವಚನಕಾರರು, ಡಾ.ವೀರಣ್ಣ ರಾಜೂರ ಇತ್ತೀಚೆಗೆ ಪ್ರಕಟಗೊಂಡಿದೆ. ಒಟ್ಟಿನಲ್ಲಿ ಹಾರಕೂಡ ಹಿರೇಮಠವು ಹೀಗೆ ಹಲವಾರು ಸೃಜನಶೀಲ ಸಾಹಿತ್ಯದ ಬಗ್ಗೆ ಕೃತಿಗಳನ್ನು ಪ್ರಕಟಿಸಿ, ಪ್ರಕಟಿಸುವಲ್ಲಿ ಮತ್ತು ಸಾಹಿತ್ಯ ಸೇವೆಯ ಮುಂಚುಣಿಯಲ್ಲಿದೆನ್ನಬಹುದು. ಅನೇಕ ಲೇಖಕರಿಗೆ, ಯುವ ಬರಹಗಾರರಿಗೂ ಸ್ವಾಮಿಗಳು ಪ್ರೋತ್ಸಾಹಿಸಿ, ಸಾಹಿತ್ಯ ಕೃತಿಗಳನ್ನು ನೀಡುವುದರ ಮೂಲಕ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ರಂಗಗಳಲ್ಲಿ ಎಡಬಿಡದೆ ಶ್ರೀ ಚನ್ನವೀರ ಶಿವಾಚಾರ್ಯ ಜಂಗಮರು ಸತತವಾಗಿ ನಡೆಸಿಕೊಂಡು ಸದಾ ಭಕ್ತರ ಸೇವೆಯನ್ನು ಮಾಡುತ್ತಾ ಮಠದ ಸರ್ವಾಧಿಕಾರವನ್ನು ಭಕ್ತರ ಜೀವನ ಅಭಿವೃದ್ಧಿಗೆ ಮುಡುಪಾಗಿಟ್ಟು ಸಾಗುತ್ತಿರುವರು. ಹಾರಕೂಡ ಮಠದ ಅನೇಕ ಶಾಖಾ ಮಠಗಳಿವೆ. ಶ್ರೀಗಳು ಆಗಾಗ್ಗೆ ಅವುಗಳಿಗೆ ಸಂಚರಿಸಿ ಅಲ್ಲಿಯೂ ಕೂಡಾ ಸಾಹಿತ್ಯ ಕಿರುಗೋಷ್ಠಿಗಳನ್ನು ಏರ್ಪಡಿಸುತ್ತಾರೆ. ಅನೇಕ ಗ್ರಾಮಗಳಿಗೆ ಸಂಚರಿಸಿ ತಮ್ಮ ಅನುಭವದ ಅಮೃತ ವಾಣಿಯನ್ನು ನೀಡುತ್ತಿರುತ್ತಾರೆ.

**೧.೧.೩. ಹುಲಸೂರ ವಿರಕ್ತಮಠ :** ಹಾರಕೂಡ ಮಠದಂತೆ ಹುಲಸೂರ ಮಠವು ಬೀದರ ಜಿಲ್ಲೆಯ ವಿರಕ್ತ ಮಠಗಳಲ್ಲಿಯೇ ಪ್ರಮುಖವೆನಿಸಿಕೊಂಡಿದೆ. ಇದು ಭಾಲ್ಕಿಯಿಂದ ಬಸವ

ಕಲ್ಯಾಣಕ್ಕೆ ಹೋಗುವ ದಾರಿಯ ಮಧ್ಯದಲ್ಲಿ ಹೋಬಳಿ ಗ್ರಾಮವಿದೆ. ಈ ಮಠವು ಬಹಳ ಪ್ರಾಚೀನ ಎಂಬುದಕ್ಕೆ ಕೆಲವು ಪುರಾವೆಗಳು ದೊರೆಯುತ್ತವೆ. ಇದು ಮೂಲತಃ ಪಂಚಾಚಾರ್ಯ ಚೌಕಿ ಮಠವಾಗಿತ್ತು. ಹನ್ನೆರಡನೆಯ ಶತಮಾನದ ಸುಮಾರಿಗೆ ಶ್ರೀ ಗುರು ಬಸವೇಶ್ವರನೆಂಬುವರು ತಮ್ಮ ಹಸ್ತವಾದಗಳಿಂದ ಚೌಕಿಮಠವನ್ನು ವರ್ಗಾವಣೆ ಮಾಡಿ ಅದಕ್ಕೆ ವಿರಕ್ತಮಠವೆಂದು ನಾಮಕರಣ ಮಾಡಿದರು. ಜೊತೆಗೆ ಪ್ರಭುದೇವರನ್ನು ಪ್ರಥಮ ಪೀಠಾಧಿಪತಿಯಾಗಿ ಆಯ್ಕೆ ಮಾಡಿದರು. ಪ್ರಭುದೇವರು ಅಂದರೆ ಅಲ್ಲಮ ಪ್ರಭುದೇವರು ಎಂಬುದಕ್ಕೆ ಸಾಕ್ಷಿಯಾಗಿ ಅವರ ಪವಿತ್ರ ಹಸ್ತದಿಂದ ಬರೆದ ತಾಮ್ರ ಲಿಪಿಯು ಶ್ರೀ ಮಠದಲ್ಲಿ ಇರುವುದೇ ಇದಕ್ಕೆ ಗಟ್ಟಿಯಾದ ಸಾಕ್ಷಿಯಾಗಿದೆನ್ನಬಹುದು. ಇದನ್ನು ನೂತನ ಶ್ರೀಗಳಾದ ಪೂಜ್ಯಶ್ರೀ ಶಿವಾನಂದ ಮಹಾಸ್ವಾಮಿಗಳು ತೋರಿಸಿದ್ದಾರೆ. ಹೀಗಾಗಿ ಈ ಮಠಕ್ಕೆ ಸುಮಾರು ಹತ್ತಾರು ಗುರುಗಳು ಆಗಿ ಹೋಗಿದ್ದಾರೆ. ಪ್ರಸ್ತುತವಾಗಿ ಶ್ರೀ ಶಿವಾನಂದ ಮಹಾಸ್ವಾಮಿಗಳು ಸದ್ಯದ ಸ್ವಾಮಿಗಳು.

ಪೂಜ್ಯ ಶ್ರೀಗಳವರು ಈಗಿನ ಬಾಗಲಕೋಟ ಜಿಲ್ಲೆಯ ಸಿಂಗಾಪೂರ ಗ್ರಾಮದಲ್ಲಿ ೧೯೫೭ರಲ್ಲಿ ಶ್ರೀ ಗುರುಪಾದಯ್ಯಾ ಶ್ರೀಮತಿ ಕಾಶೀಬಾಯಿಯವರ ಪುಣ್ಯ ಉದರದಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಮತ್ತು ಪ್ರೌಢ ಶಿಕ್ಷಣವನ್ನು ತನ್ನ ಹುಟ್ಟೂರಿನಲ್ಲಿಯೇ ಮುಗಿಸಿದರು. ಹೆಚ್ಚಿನ ವ್ಯಾಸಂಗ ಹುಬ್ಬಳ್ಳಿ ಮೂರು ಸಾವಿರ ಮಠದಲ್ಲಿ ಮುಗಿಸಿದರು. ಮುಂದೆ ಅಲ್ಲಿಯ ಸಂಸ್ಕರದಲ್ಲಿ ಹೆಚ್ಚಿನ ಅಧ್ಯಯನ ಮಾಡಿದರು. ಚಿಕ್ಕವರಿರುವಾಗಲೇ ದಿನದಲಿತರ ಸೇವೆ, ಸಮಾಜ ಸೇವೆ, ಬಸವ ತತ್ವವನ್ನು ತಮ್ಮ ಜೀವನದ ಉಸಿರಾಗಿಸಿಕೊಂಡವರು. ವಿಶಾಲ ಹೃದಯದ ಶ್ರೀಗಳು ಜನಸೇವೆಯೇ ಜನಾರ್ಧನ ಸೇವೆ ಎಂದರಿತು ಸಕಲರ ಕಲ್ಯಾಣ, ಸಮಾಜದ ಉದ್ಧಾರ ಮಾಡುವಲ್ಲಿ ಅತಿ ಪ್ರಿಯರು. ಧರ್ಮವನ್ನು ನೆಲೆಯಾಗಿಟ್ಟುಕೊಂಡು ಬಂದ ಇವರಲ್ಲಿ ಯಾವುದೇ ಬಗೆಯರ ತಾರತಮ್ಯವಿಲ್ಲ, ಜಾತಿ ಭೇಧವಿಲ್ಲ. ಮಠಕ್ಕೆ ಬಂದ ಅನಾಥರಿಗೆ, ಅತಿಥಿಗಳಿಗೆ ಊಟ ವಸತಿ ಸೌಕರ್ಯವನ್ನು ಸದಾ ಇಟ್ಟಿದ್ದಾರೆ. ಹೀಗಾಗಿ ಹುಲಸೂರು ಪೀಠಾಧಿಪತಿಗಳಾಗಿ ಈ ಭಾಗದ ಜನಪ್ರಿಯ ಜಂಗಮರಾಗಿದ್ದಾರೆ. ಅಂತೆಯೇ ಭಕ್ತರು ಇವರನ್ನು ಬಸವತತ್ವದ ಹುಲಸೂರು ಹುಲಿ ಎಂದೇ ಗುರುತಿಸುತ್ತಾರೆ.

ಧರ್ಮದ ಬೀಜವನ್ನು ಬಿತ್ತುತ್ತಾ, ಲೋಕ ಕಲ್ಯಾಣಕ್ಕಾಗಿ, ಸಮಾಜ ಕಲ್ಯಾಣಕ್ಕಾಗಿ ದುಡಿಯುತ್ತಿರುವ ಶ್ರೀಗಳು ಶಾಂತ ಸ್ವಭಾವದವರಾಗಿದ್ದಾರೆ. ಜ್ಞಾನದ ಖಣಿಯಾಗಿದ್ದಾರೆ ಎಂಬುದರಲ್ಲಿ ಸಂದೇಹವಿಲ್ಲ. ಸಾಹಿತ್ಯದ ಬಗ್ಗೆ ಅಪಾರ ಅಭಿಮಾನವುಳ್ಳ ಇವರು ನೂತನ

ವಚನಕಾರರೆಂದೇ ಕಲ್ಯಾಣ ನಾಡಿನಲ್ಲಿ ಪ್ರಖ್ಯಾತಿ ಪಡೆದಿದ್ದಾರೆ. ಸ್ವತಃ ಕವಿಗಳೂ, ಸಾಹಿತಿಗಳೂ ಅಹುದು, ಅವರು ರಚಿಸಿದ ಕೃತಿ ಶಿವಾನಂದ ಸ್ವಾಮಿಗಳ ವಚನಗಳು ಎಂಬ ವಚನ ಗ್ರಂಥವನ್ನು ಪ್ರಕಟಿಸಿದ್ದಾರೆ. ಇವರ ಅಂಕಿತನಾಮ ಶಿವಾನಂದ ಪ್ರೀಯಾ ಗುರು ಬಸವ ಪ್ರಭುವೆ ಎಂಬ ವಚನಾಂಕಿತ ನಾಮವಾಗಿದೆ. ಇವರ ವಚನಗಳನ್ನು ಶರಣರ ವಚನಗಳಿಗೆ ಅಲ್ಪ ಸ್ವಲ್ಪ ವರ್ಗಾವಣೆ ಮಾಡಿ ಪುನ : ರಚಿಸಿರುವುದು ಅವರ ವಚನಗಳಲ್ಲಿಯೇ ಅರಿಯಬೇಕು.

"ಶರಣರ ನಡೆಗಲಿತೆನಯ್ಯಾ
ಶರಣರ ನುಡಿಯಿಂದ ನುಡಿಗಲಿತೆನಯ್ಯಾ
ಶರಣರ ಕಾಯಕದಿಂದ ಕಾಯಕಗಲಿತೆನಯ್ಯಾ
ಶರಣರ ದಾಸೋಹದಿಂದ ದಾಸೋಗಲಿತೆನಯ್ಯಾ
ಶರಣರ ದಯದಿಂದ ದಯಾಗಲಿತೆನಯ್ಯಾ
ಶರಣರ ವಚನದಿಂದ ವಚನಗಲಿತೆನಯ್ಯಾ
ಶಿವಾನಂದ ಪ್ರಿಯಾ ಗುರುಬಸವ ಪ್ರಭುವೆ"

(ಮಹಾಸ್ವಾಮಿಗಳು ಶಿವಾನಂದ:೧೯೮೮:೭೭)

ಎಂಬ ವಚನವೇ ಸಾಕ್ಷಿಯಾಗಿ ಸಾಹಿತ್ಯಕ ತಿರುಳನ್ನು ತುಂಬಿಕೊಂಡಿವೆ.

'ಕಲ್ಯಾಣ ಕೈಲಾಸ ತತ್ವಪದಗಳು' ಎಂಬ ಕೃತಿಯನ್ನು ಶ್ರೀಗಳು ೨೦೦೧ರಲ್ಲಿ ಪ್ರಕಟಿಸಿದರು. ಇವರ ಈ ಕೃತಿಯ ಮೇಲೆ ಕನ್ನಡ ನಾಡಿನ ಶರಣರು, ನಿಜಗುಣ ಶಿವಯೋಗಿ, ಸರ್ಪ ಭೂಷಣ ಶಿವಯೋಗಿ ಹಾಗೂ ಸ್ಥಳೀಯ ತತ್ವಪದಕಾರರ ಪ್ರಭಾವವು ಇವರ ತತ್ವಪದಗಳಿಂದ ನಿಚ್ಚಳವಾಗಿ ಕಂಡುಬರುತ್ತದೆ.

"ಓಂ ನಮ: ಶಿವಾಯ ಮಂತ್ರವ ನುಡಿ
ಜ್ಞಾನದಿಂದ ಹೊಳ್ಳಿಬಾರದ ಮುಕ್ತಿಪಡಿ
ಆರು ಗುಣದ ಅರಹು ತಿಳಿ, ಮೂರು ಗುಣದ ಮೂಲ ತಿಳಿ
ಆರು ಮೂರು ನಿಂತು ತಿಳಿ, ಗುರುಚರಣ ಕಮಲ ತಿಳಿ
ಮಾಯದ ಬಳ್ಳಿ ತಿಳಿ, ಕಾಯಕ್ಕೆ ಸುತ್ಯಾದ ಹೊಲ್ಳಿ ತಿಳಿ
ಮಾಯಾ ಜಾಲವ ಮುರಿದು ತಿಳಿ, ಕಾಯಿ ಬೇಕು ಕಿತ್ತೊಗೆದ ತಿಳಿ

(ಮಹಾಸ್ವಾಮಿಗಳು ಶಿವಾನಂದ:೨೦೦೧:೫೦)

ಗುರು ಸಂಗ ಮಾಡೋ ಮನುಜ
ಗುರು ಬಿಟ್ಟು ಬೇರೆ ಇಲ್ಲ ನೋಡೋ .....(ಅವರೇ:೧೨)

ಶ್ರೀಗಳು ಗುರುವಿನೊಡನಿರುವ ತಮ್ಮ ದಾಂಪತ್ಯದ ಕುರುಹಾಗಿವೆ. ಇಲ್ಲಿನ ಹಾಡಿನ ಧಾಟಿ, ಸಂಗೀತಗಳ ಬಂಧನದಿಂದಾಗಿ ಈ ರಚನೆಗಳಲ್ಲಿ ಗಮನಿಸಬಹುದು.

ಯುವ ಪ್ರತಿಭೆಗಳಿಗೆ ಸ್ಫೂರ್ತಿ ನೀಡಿ ಮಾರ್ಗದರ್ಶನ ಮಾಡುವಲ್ಲಿ ಜಂಗಮರು ಸದಾ ಸಿದ್ಧರು. ಬೀದರ ತಾಲ್ಲೂಕಿನ ಮಮದಾಪೂರ ಗ್ರಾಮದ ರಮೇಶ ಮೂಲಗೆಯವರ 'ಬೀದರ ಜಿಲ್ಲೆಯ ವೀರಶೈವ ಮಠಗಳು' ಎಂಬ ಎಂ. ಫೀಲ್ ಕೃತಿಯನ್ನು ತಮ್ಮ ಮಠದ ವತಿಯಿಂದ ಪ್ರಕಾಶನಗೊಳಿಸಿ ದ್ದಾರೆ. ಅಲ್ಲದೇ ಈ ಸಂಶೋಧಕ ಯುವಕನನ್ನು ಹುರಿದುಂಬಿಸಿ ಸನ್ಮಾನಿಸಿದುಂಟು.

ಶ್ರೀಗಳ ಮತ್ತೊಂದು ಕವನ ಸಂಕಲನವಾದ 'ಕನ್ನಡದ ಕೋಗಿಲೆ' ಇದರಲ್ಲಿ ೨೭ ಕವನಗಳ ಗೊಂಚಲನ್ನು ಕಾಣಬಹುದಾಗಿದೆ. 'ಪತಿವೃತೆಯ ಪ್ರಭಾವವೆನ್ನುವ' ನಾಟಕವನ್ನು ಸದರಿ ಮಠದಿಂದ ಪ್ರಕಟಗೊಳ್ಳಲು ಸಜ್ಜಾಗಿದೆ. ಡಾ. ಬಸವರಾಜ ಸಬರದ ಅವರ 'ಬೀದರ ಜಿಲ್ಲೆಯ ಅನುಭಾವಿ ಕವಿಗಳು' ಎನ್ನುವ ಕಿರುಹೊತ್ತಿಗೆಯನ್ನು ಹುಲಸೂರ ಮಠದಿಂದ ಪ್ರಕಾಶನಗೊಳಿಸಲಾಗಿದೆ. ಸುಮಾರು ೩೦ಕ್ಕೂ ಮೇಲ್ಪಟ್ಟ ಬೀದರ ಜಿಲ್ಲೆಯ ಅನುಭಾವಿ ಕವಿಗಳ ಪರಿಚಯ ಮಾಡಿಕೊಡಲಾಗಿದೆ. ಅಲ್ಲದೇ ಅನೇಕ ಬಿಡಿ ಬಿಡಿ ಲೇಖನಗಳನ್ನು ಬರೆದ್ದು ಕನ್ನಡಾಂಬೆ ಸರಮಾಲೆಯಲ್ಲಿ ಮಠದ ಮೂಲಕ ಹಲವಾರು ಕೃತಿಗಳನ್ನು ಪೋಣಿಸಲು ಪ್ರಯತ್ನಿಸುತ್ತಿರುವರು.

ಶ್ರೀಗಳು ಸದಾ ಸಂಚಾರ ಮಾಡುತ್ತ ಶರಣರ ತತ್ವಗಳನ್ನು ಬೋಧಿಸುತ್ತಾ ಸಮಾಜ ಸೇವೆಯನ್ನು ಗೈಯುತ್ತಾ ಜೂನ್ ೨೦೦೦ ರಂದು ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಸ್ವಿಜರ್‌ಲ್ಯಾಂಡ್, ಕೆನಡಾ, ಅಮೇರಿಕಾ ಮುಂತಾದ ೧೬ ದೇಶಗಳಲ್ಲಿ ಬಸವತತ್ವ ಪ್ರಚಾರ ಮಾಡಿ ಹೈದ್ರಾಬಾದ್ ಕರ್ನಾಟಕದಲ್ಲಿ ಪ್ರಥಮ ವಿದೇಶಕ್ಕೆ ಪ್ರವಾಸ ಮಾಡಿರುವ ಜಂಗಮ ಎಂದು ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ.

**೧.೧.೪. ಸಿದ್ಧಾರೂಢ ಮಠ ಬೀದರ:** ಬೀದರಿನ ಸಿದ್ಧರೂಢ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ಕೊಡುಗೆಯನ್ನು ಸಲ್ಲಿಸಿದೆ. ಕೆಂಪು ಮಣ್ಣಿನ ತಂಪು ಪರಿಸರದಲ್ಲಿ ಹುಟ್ಟಿಕೊಂಡು ಬೀದರ ಸಿದ್ಧಾರೂಢ ಮಠವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಸಾಹಿತ್ಯಿಕ ಮೊದಲಾದ ಮಹತ್ಕಾರ್ಯಗಳಿಗೆ ಪ್ರಮುಖವೆನ್ನಿಸಿಕೊಂಡಿದೆ.

ಸಿದ್ಧಾರೂಢರ ಜನ್ಮಸ್ಥಾನವಾದ ಚಳಕಾಪೂರದ ಶಾಖಾ ಮಠವೇ ಇಂದು ಬೀದರಿನಲ್ಲಿ ಹೆಮ್ಮರವಾಗಿ ಬೆಳೆದು ನಿಂತಿದೆ. ಈ ಮಠವು ಮೂಲ ಚಳಕಾಪೂರದಲ್ಲಿದ್ದು ಬೀದರಕ್ಕೆ ಶಾಖಾ ಮಠ ವರ್ಗಾವಣೆಯನ್ನಾಗಿ ಮಾಡಿದ ಪೂಜ್ಯ ಶ್ರೀ ಶಿವಕುಮಾರ ಮಹಾಜಂಗಮರೇ ಕಾರಣ ಕೃರ್ತರು.

ಶ್ರೀಗಳು ಜನಿಸಿದ್ದು ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಪಡನೂರ ಎಂಬ ಗ್ರಾಮದಲ್ಲಿ. ಅಗರ್ಭ ಶ್ರೀಮಂತರು, ಸ್ವಾತಂತ್ರ್ಯ ಹೋರಾಟಗಾರರು, ಶಾಸ್ತ್ರ ನಿಪುಣರಾದ ಶ್ರೀ ಕಲ್ಲಪ್ಪಾ ಮತ್ತು ಪಾರ್ವತಮ್ಮರೆಂಬ ದಂಪತಿಗಳಿಗೆ ೧೯೪೪ರಲ್ಲಿ ಜನಿಸಿದವರು. ಶ್ರೀಗಳು ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ವಿಜಾಪುರದಲ್ಲಿಯೇ ಮಾಡಿದ್ದರು. ಸದಾ ಪರಮಾತ್ಮನ ಧ್ಯಾನ್ಯದಲ್ಲಿಯೇ ಇರುತ್ತಿದ್ದರು. ಪರಮಾತ್ಮ ಸರ್ವವ್ಯಾಪಿ ಎಂದು ತಿಳಿದು ಅಲ್ಲಿಂದ ನೇರವಾಗಿ ಹುಬ್ಬಳಿಯ ಶ್ರೀ ಸಿದ್ಧರೂಢ ಮಹಾಸ್ವಾಮಿಗಳ ಕರಕಮಲ ಸಂಜಾತರಾದ ಶ್ರೀ ಶಿವಪುತ್ರ ಮಹಾಸ್ವಾಮಿಗಳ ಸಹಕಾರ ಆಶ್ರಯದಿಂದ ಅಲ್ಲಿಯೇ ನೆಲೆಸಿ ಕಠಿಣ ಶ್ರಮದಿಂದ ಸಂಪೂರ್ಣ ಷಟ್‌ಶಾಸ್ತ್ರಗಳನ್ನು ಕರಗತ ಮಾಡಿಕೊಂಡರು. ಅಲ್ಲಿಂದ ಕಾಶಿ ಬನಾರಸ ಹಿಂದು ವಿಶ್ವವಿದ್ಯಾಲಯದಿಂದ ಹಿಂದಿ ಬಿ. ಎಡ್. ಮಾಡಿಕೊಂಡು ನಂತರ ಪುನಾ ಹರಿದ್ವಾರಕ್ಕೆ ಹೋಗಿ ಎರಡು ವರ್ಷಗಳ ಕಾಲ ಸಂಸ್ಕೃತ ಅಭ್ಯಾಸ ಮಾಡಿದರು.

ಶಿಕ್ಷಣದ ಜೊತೆಗೆ ಶ್ರೀಗಳು ಆಧ್ಯಾತ್ಮ ತತ್ವದಲ್ಲಿ ಅಸಾಧಾರಣ ಪ್ರಗತಿಯನ್ನು ಸಾಧಿಸಿಕೊಂಡು ಕಾಶೀಯ ವಿದ್ಯಾಪೀಠದಿಂದ ಎಂ. ಎ. ತತ್ವ ಜ್ಞಾನವನ್ನು ಉತ್ತಮ ದರ್ಜೆಯಲ್ಲಿ ಪಡೆದುಕೊಂಡರು. ಅಂತೆಯೇ ಯಾವಾಗಲೂ ಸಮಾಜದ ಓರೆ-ಕೋರೆಗಳನ್ನು ತಿದ್ದುತ್ತ ಭಗವಂತನೆಡೆಗೆ ಕೊಂಡೊಯ್ಯುವ ದಾರಿಗಳು ಹುಡುಕಿ ಭಕ್ತರಿಗೆ ಗುರಿಮುಟ್ಟಲು ಸಾಧ್ಯವೆಂದು ಪಾಠ ಪ್ರವಚನದಲ್ಲಿ ಭೇದಿಸುವದುಂಟು.

'ಸರ್ವೆಜನಾ ಸುಖಿನೋಭವಂತು' ಎನ್ನುವ ಶ್ರೀಗಳು ಭಕ್ತರ ಕರೆಗೆ ಬಂದು ಸಮಾಜದಲ್ಲಿ ಸಂಚಾರಗೆದು ಜನಹಿತ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವರು. ಜ್ಞಾನ ದಾಸೋಹದ ಕಾರ್ಯಕ್ರಮಗಳು ತಮ್ಮ ಎಲ್ಲಾ ಶಾಖಾ ಮಠಗಳಲ್ಲಿ ನಡೆಸಿಕೊಂಡು ಬರುವರು. ವಿದ್ಯಾ ಮೂರ್ತಿಗಲಾದ ಶ್ರೀಗಳು ವಿದ್ಯೆಗೆ ಪ್ರಮುಖ ಸ್ಥಾನ ನೀಡಿ ಮಕ್ಕಳಿಗೆ ಶಿಕ್ಷಣದ ಪ್ರಗತಿಯಿಂದ ಅಭಿವೃದ್ಧಿಯಾಗಲು ಸಾಧ್ಯವೆಂದು ೧೯೮೧ರಲ್ಲಿ ಶ್ರೀ ಚಿದಂಬರ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ, ಇದರ ಅಧೀನದಲ್ಲಿ ಅನೇಕ ಶಾಲಾ ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಅಧ್ಯಾತ್ಮದ ಅಮುಲ್ಯ ತತ್ವಗಳು ನಾಡಿನ ಸರ್ವರ ಮನ ಮುಟ್ಟಲೆಂದು ಶ್ರೀ ಸಿದ್ಧ ಭಾರತಿ ಎಂಬ ಮುದ್ರಾಣಾಲಯವು

ತೆರೆದರು. ನಂತರ 'ಶ್ರೀ ಆರೂಢ ಪ್ರಕಾಶನ' ಎಂಬ ಪ್ರಕಾಶನದಿಂದ ಅನೇಕ ಕೃತಿಗಳು ಹೊರತಂದು ಜಿಲ್ಲೆಯ ಸಾಹಿತ್ಯ ಕ್ಷೇತ್ರವನ್ನು ಹೆಚ್ಚಿಸಿದ್ದಾರೆ.

'ಶ್ರೀ ಮ. ನಿಜುಗುಣ ಶಿವಯೋಗಿಗಳೂ ಅನುಭಾವಸಾರ' ಒಂದನೆ ಸಂಧಿ ಟೀಕಾ ಇದನ್ನು ಶ್ರೀಗಳು ೨೦೦ ಪುಟಗಳಷ್ಟು ವಿಸ್ತಾರಿಸಿ ಬರೆದುದ್ದನ್ನು ಗಮನಿಸಿದರೆ ಅವರ ವಿದ್ವತಿನ ಅರಿವಾಗುತ್ತದೆ. ೧೯೮೯ರಲ್ಲಿ ತೆರೆದ ಶ್ರೀ ಆರೂಢ ಪ್ರಕಾಶನದ ಮುಖಾಂತರ ಹಲವಾರು ಕೃತಿಗಳನ್ನು ಹೊರ ತಂದಿರುವಲ್ಲಿ ಫಲಕಂಡಿದ್ದಾರೆ. 'ಸ್ಥಿತ ಪ್ರಜ್ಞೋಪನಿಷತ್ತು', 'ಭಜಗೋವಿಂದಮ್', ಅನುಭವಸಾರ ಭಾಗ-೧, ಅಷ್ಟಾವರಣ, ಶಿವಶತಕ, ಜಪವಿಜ್ಞಾನ, ಮೃತ್ಯೋಮ್ಯಾತಮಗಮಯ ಭಾಗ-೨, ಪೂಜಾಯೋಗ, ಭಜನಾಮಾಲಾ, ಧ್ಯಾನಸ್ತೋತ್ರ, ನೂರಾರು ಪದ್ಯಗಳು, ವಚನಗಳು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಅದಕ್ಕೆ ಅನೇಕ ಬಿರುದುಗಳು ಹೂಡುಕಿಕೊಂಡು ಸಂದಿವೆ. ಶಿವಾದ್ವೈತ ಭೂಷಣ, ವೇದಂತವಾಗೀಶ, ಗೀತೋತ್ಸಮ ಆಚಾರ್ಯ, ಮುಂತಾದವುಗಳು. ಇವರ ಹಲವು ಕೃತಿಗಳು ಸಂಸ್ಕೃತದಿಂದ ಕೂಡಿದವುಗಳಾಗಿರುವುದರಿಂದ ಸಾಮಾನ್ಯರಿಗೆ ತಿಳಿದುಕೊಳ್ಳಲು ಅರ್ಥಮಾಡಿ ಕೊಳ್ಳಲು ತುಂಬ ಕಷ್ಟಕರಗಳಾಗಿವೆನ್ನಬಹುದು ಮಠದಿಂದ ಶ್ರೀ 'ಸಿದ್ಧಸುದಾ ಮಾಸಿಕ' ಪತ್ರಿಕೆಯ ಮೂಲಕ ಅಮೂಲ್ಯ ಸಂದೇಶಗಳನ್ನು ಹೊತ್ತು ಸಮಾಜದ ಅಭಿವೃದ್ಧಿಗೆ ಸಾಧನವಾಗಿದೆ.

ಒಟ್ಟಿನಲ್ಲಿ ಸಿದ್ಧರೂಢ ಮಠವು ಸಾಹಿತ್ಯ ಲೋಕಕ್ಕೆ, ತಾಯಿ ಸರಸ್ವತಿಯ ಭಂಡಾರವನು ನೀಡಿ ಕಲ್ಯಾಣ ನಾಡಿನ ಕ್ಷೇತ್ರದಲ್ಲಿ ಅಪಾರವಾದ ಪ್ರಗತಿಯನ್ನು ಸಾಧಿಸಿ ಸುಂದರ ಸಮಾಜ ರಚನೆಯಲ್ಲಿ ನೆರವಾಗಿದೆ.

**೧.೧.೫. ಭಾತಂಬ್ರಾ ವಿರಕ್ತ ಮಠ :** ಬೀದರ ಜಿಲ್ಲೆಯಲ್ಲಿ ಭಾತಾಂಬ್ರ ವಿರಕ್ತ ಮಠವು ಪ್ರಮುಖ ಮಠಗಳಲ್ಲಿ ಒಂದು ಶಾಖಾ ಮಠವಾದ ಇದು ಬಸವ ಮುಕ್ತಿ ಮಂದಿರವೆಂದು ಕರೆಯಲ್ಪಟ್ಟಿದೆ. ನೂತನ ಶ್ರೀಗಳಾದ ಶಿವಯೋಗಿಶ್ವರ ಜಂಗಮರು ಸದಾ ಶಾಂತವಾಗಿ ತಮ್ಮ ಕಾರ್ಯವನ್ನು ನಡೆಸಿಕೊಂಡು ಹೆಚ್ಚಿನ ಅಬ್ಬರ ವಿಲ್ಲದೆ ನಿರಂತರವಾಗಿ ಸಮಾಜ ಸೇವೆಯನ್ನು ಮಾಡುತ್ತಾ ಕಳೆದ ಇಪ್ಪೆತ್ತೈದು ವರ್ಷದಿಂದ ಜನಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ. ನೂರಾರು ಬಡ ಹಾಗೂ ಅನಾಥ ಮಕ್ಕಳಿಗಾಗಿ ಅನಾಥಾಶ್ರಮ ಗುರುಕುಲವನ್ನು ನಡೆಸುತ್ತ ಬರುತ್ತಿದ್ದಾರೆ. ಶ್ರೀಗಳವರ ಸೇವೆ ಮಠಗಳಿಗೆಷ್ಟೇ ಸೀಮಿತವಾಗಿಲ್ಲ. ಅವರು ಪ್ರತಿವರ್ಷ ಬೀದರ ಜಿಲ್ಲೆಯ ಸಮೀಪದ ಕರ್ನಾಟಕ , ಮಹಾರಾಷ್ಟ್ರ, ಆಂಧ್ರದ ಹಳ್ಳಿಗಳಿಗೆ ಸ್ವಪ್ರೇರಣೆಯಂತೆ ಬಸವತತ್ವ ಪ್ರಸಾರ ಯಾತ್ರೆ ಮಾಡಿ ಜನರಲ್ಲಿ ಧರ್ಮ ಬೋಧನೆಗೈದು ಮದ್ಯಪಾನ, ಜೂಜಾಟ, ತಂಬಾಕು

ಸೇವನೆ, ಮಟ್ಕಾಗಳನ್ನು ಬಿಟ್ಟು ಕೊಡುವಂತೆ ಪ್ರೇರಣೆ ನೀಡಿದವರು. ಸ್ವಾಮಿಗಳ ಅದ್ಭುತ ಸಾಮಾಜಿಕ ಆಂದೋಲನವನ್ನು ಗಮನಿಸಬಹುದು.

ಶ್ರೀಗಳು ಜನಿಸಿದ್ದು ಗಡಿಭಾಗವಾದ ಆಂಧ್ರಪ್ರದೇಶದ ನಾರಾಯಣಖೇಡ ತಾಲೂಕಿನ ಅಬ್ಬೆಂದಿ ಗ್ರಾಮದಲ್ಲಿ ತಂದೆ ಬಸಯ್ಯಾ ತಾಯಿ ಗುಜ್ಜಮ್ಮ ರವರ ದಂಪತಿಯ ಪುತ್ರ. ಪ್ರಾಥಮಿಕ ಶಿಕ್ಷಣ ಹುಟ್ಟೂರಿನಲ್ಲೀ ಮಾಡಿಕೊಂಡು ಮುಂದೆ ಚನ್ನಬಸವಪಟ್ಟದೇವರ ಶಾಂತಿವರ್ಧಕ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಾಯನ ಮುಂದುವರೆಸಿದರು.

ಹುಟ್ಟು ಶಿವಯೋಗಿ ಎಂದು ಅಂಕಿತನಾವನ್ನಿರಿಸಿಕೊಂಡು ಬೆಳೆದ ಶ್ರೀಗಳವರು ಹನ್ನೆರಡು ವರ್ಷದ ಬಾಲಕನಿದ್ದಾಗಲೇ ಭಾಲ್ಕಿ ಹಿರೇಮಠದ ಉತ್ತರಾಧಿಕಾರಿಗಳಾಗಿ ಆರಿಸಲ್ಪಟ್ಟರು. ನಂತರ ಶ್ರೀಗಳು ಹೆಚ್ಚಿನ ಅಧಯಯಯನಕ್ಕಾಗಿ ಬನಾರಸ ವಿಶ್ವವಿದ್ಯಾಲಯಕ್ಕೆ ಹೋದರು. ಒಂಬತ್ತು ವರ್ಷಗಳ ಕಾಲ ಸತತ ಅಭ್ಯಾಸ ಮಾಡಿ ಸ್ನಾತಕೋತ್ತರ ಪದವಿ ಪಡೆದು ತಾಯ್ನಾಡಿಗೆ ಮರಳಿ ಬಂದರು.

ಸರಳತೆ ನಿಸ್ವಾರ್ಥತೆ, ಸಮರ್ಪಣ ಗುಣಗಳನ್ನು ತಮ್ಮ ಆಧ್ಯಾತ್ಮಿಕಗುರುಗಳಾದ ಹಾನಗಲ್ ಕುಮಾರ ಸ್ವಾಮಿಗಳಿಂದ ಬಳುವಳಿ ಪಡೆದ ಶ್ರೀ ಶಿವಯೋಗಿಶ್ವರ ಜಂಗಮರು ಭಾಲ್ಕಿ ವಿರಕ್ತಮಠ ಹಾಗೂ ಭಾತಾಂಬ್ರಾ ವಿರಕ್ತ ಮಠಗಳ ಅಧಿಪತ್ಯವನ್ನು ಸ್ವೀಕರಿಸಿರುವರು.

ಮಠದ ಅಧಿಪತಿಯಾಗಿ ಶ್ರೀಗಳು ಜಡವಸ್ತುವಾಗಿ ಒಂದೇ ಸ್ಥಳದಲ್ಲಿ ಸ್ಥಾವರ ಲಿಂಗವಾಗಿ ಕುಳಿತುಕೊಳ್ಳದೇ ಚರಜಂಗಮರಾಗಿ ೧೦೧ ಹಳ್ಳಿಗಳವರೆಗೆ ಪಾದಯಾತ್ರೆ ಕೈಗೊಂಡು ಸಮಾಜ ಸುಧಾರಣೆಯ ಪ್ರಸಾರ ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ೧೯೬೩ರಲ್ಲಿ ಶ್ರೀಗಳವರು ಹಾನಗಲ್ಲ್ ಕುಮಾರೇಶ್ವರ ಕಿರಿಯ ಪ್ರಾಥಮಿಕ ಶಾಲೆಯನ್ನು ೧೯೬೫ರಲ್ಲಿ ಶಿವಯೋಗಿಶ್ವರ ಪ್ರೌಢ ಶಾಲೆಯನ್ನು ಪ್ರಾರಂಭಿಸಿ ಒಳ್ಳೆಯ ಶಿಕ್ಷಕ ಶಿಕ್ಷಕಿಯರನ್ನು ನೇಮಿಸಿ ಇಂದು ಆದರ್ಶ ವಿದ್ಯಾ ಸಂಸ್ಥೆಗಳ ಸಾಲಿಗೆ ನಿಲ್ಲುವಂತೆ ಮಾಡಿದ್ದಾರೆ.

ಈ ಮಠದ ಮೂಲಕ ಸಾಹಿತ್ಯ ಕಾರ್ಯ ಅಷ್ಟೊಂದು ಪ್ರಮುಖವಾದ ಕಾರ್ಯ ಮಾಡದ ಬಸವ ಮುಕ್ತಿ ಮಂದಿರವು ಕೆಲವು ಶರಣರ ವಚನಗಳನ್ನು ಸರಿಪಾದಿಸಿ ಕಿರು ಹೊತ್ತಿಗೆಯ ರೂಪದಲ್ಲಿ ಪ್ರಕಟಿಸಿದೆ. ಅದರಲ್ಲೂ ಬಸವಣ್ಣನವರ ವಚನಗಳು, ಸಿದ್ಧರಾಮೇಶ್ವರರ ವಚನಗಳು, ಅಕ್ಕಮಹಾದೇವಿ ವಚನಗಳು, ದೇವರ ದಾಸಿಮಯ್ಯದ ವಚನಗಳು ಇತ್ಯಾದಿ ಪ್ರಕಟಿಸಿದೆ. ಇತ್ತೀಚಿಗೆ ಶ್ರೀಗಳ ಪಟ್ಟಾಧಿಕಾರದ ರಜತಮಹೊತ್ಸವದ ಅಂಗವಾಗಿ ಅಥವ ಶುಭ ಸಂದರ್ಭದಲಿ 'ಬಯಲ ಕಾರಣಿಕ' ಎನ್ನವ ಬೃಹತ್ ಗ್ರಂಥವನ್ನುಗುಲ್ಬರ್ಗಾ

ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಸಂಗಮೇಶ ಸವದತ್ತಿಮಠ ಅವರು ಸಂಪಾದಿಸಿದ್ದಾರೆ. ಇದರಲ್ಲಿ ನಾಡಿನ ಹೆಸರಾಂತ ಲೇಖಕರ ಲೇಖನಗಳು ಸೇರ್ಪಡೆಯಾಗಿವೆ. ಮತ್ತು ಶ್ರೀಗಳು ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ನಿರಂತರ ಒಂದು ತಿಂಗಳ ಕಾಲ ಪ್ರವಚನವನ್ನೇರ್ಪಡಿಸಿ ಹೆಸರಾಂತ ಅನುಭಾವಗಳನ್ನು ಬರಮಾಡಿಕೊಂಡು ಸಾಹಿತ್ಯದ ದಿವ್ಯಜ್ಞಾನವನ್ನು ನೀಡುವಲ್ಲಿ ಕಾರಣಿಭೂತರಾಗಿದ್ದಾರೆ.

ಹುಮನಾಬಾದ ತಾಲೂಕಿನ ಉಡಂವಳ್ಳಿ ಮಠವು ಸಾಹಿತ್ಯ ಕ್ಷೇತ್ರದಲ್ಲಿ ಸೇವೆಯನ್ನು ಮಾಡಿಕೊಂಡು ಬರುತ್ತಿದೆ. ಈ ಮಠವು ಹಿಂದಿನಿಂದಲೂ ಪಂಚಾಂಗ ತಯಾರಿಸುವ ಮತ್ತು ಎಲ್ಲಾ ಕಡೆ ಈ ಪಂಚಾಂಗವನ್ನೇ ಜಂಗಮರು ಬಳಸಿಕೊಳ್ಳುತ್ತಾರೆ. ಹೀಗಾಗಿ ಈ ಮಠವು ಪಂಚಾಂಗ ಮಠವೆಂದು ಜೊತೆಗೆ ಪಂಚಾಂಗ ತಯಾರಿಸುವ ಮಠವೆಂದು ಪ್ರಸಿದ್ಧಿ ಹೊಂದಿದೆ. ಹೀಗಾಗಿ ಈ ಮಠವು ಸಾಹಿತ್ಯ ಕ್ಷೇತ್ರದಲ್ಲಿ ಪ್ರಮುಖಸ್ಥಾನ ಹೊಂದಿದೆ ಎನ್ನಬಹುದು.

ಹೀಗೆ ದೊಡ್ಡ ಮಠಗಳನ್ನು ಬಿಟ್ಟು ಇತರ ಅನೇಕ ಮಠಗಳು ಜಿಲ್ಲೆಯಲ್ಲಿ ಶಾಲೆಯನ್ನು ನಡೆಸುತ್ತಿವೆ. ಔಷಧಿಗೆ ಸಂಬಂಧಿಸಿದ ಎಷ್ಟೋ ಮಠಗಳು ಕೂಡ ಔಷಧ ಕೊಡುವ ಸದ್ಯ ಕಾರ್ಯದಲ್ಲಿ ನಿರಂತವಾಗಿವೆ. ಒಟ್ಟಿನಲ್ಲಿ ಇಂತಹ ಚಿಕ್ಕ ಪುಟ್ಟ ಹಲವಾರು ಮಠಗಳು ಬೀದರ ಜಿಲ್ಲೆಯಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಅಲ್ಪ ಸ್ವಲ್ಪ ಮಟ್ಟಿಗಾದರೂ ತಮ್ಮದೇ ಆದ ಕಾರ್ಯವನ್ನು ಸಾಗಿಸಿಕೊಂಡು ನಡೆಯುತ್ತಿವೆ. ಬೇಮಳಖೇಡದ ಹಿರೇಮಠ, ನೀಡವಂಚಾದ ಭದ್ರೇಶ್ವರ ಮಠ, ಹಿರೇನಾಗಾಂವದ ಗವಿಮಠ, ಚಾಂಬೋಳದ ಹಿರೇಮಠ, ಹುಲಕುಂಠಿಯ ವಿರಕ್ತಮಠ ಹುಡುಗಿಯ ಹಿರೇಮಠ, ಹೀಗೆ ಹತ್ತು-ಹಲವು ಮಠಗಳು ಶಾಲಾ ಸಂಸ್ಥೆಗಳನ್ನು ಸ್ಥಾಪಿಸಿ, ವಿದ್ಯಾಭಿವೃದ್ಧಿಗೆ ಗಮನಹರಿಸಿವೆ. ಅಂತೂ ಹೈದ್ರಾಬಾದ ಕರ್ನಾಟಕದ ಗಡಿಭಾಗವಾದ ಕಲ್ಯಾಣನಾಡಾದ ಬೀದರ ಜಿಲ್ಲೆಯಲಿ ಪ್ರಮುಖ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕಾರ್ಯಗಳಿಗೆ ಮುಂದಾಗಿ ಅದರಲ್ಲೂ ಸಾಹಿತ್ಯಿಕ ಸೇವೆಗೆ ಶ್ಲಾಘನೀಯ ಶಕ್ತಿಯಾಗಿ ಭಾರ್ಗಗವಿಯಾಗಿ, ಜ್ಞಾನಜ್ಯೋತಿಯಾಗಿ ಜಿಲ್ಲೆಯ ಜಂಗಮ ಮಠಗಳು ಕಂಗೊಳಿಸುತ್ತಿವೆ.

## ೧.೨. ಸಾಹಿತ್ಯದಲ್ಲಿ ಜಂಗಮರ ಕೃಷಿ

ಶರಣರ ಪ್ರಭಾವ ಮಠಗಳ ಪ್ರಭಾವದಿಂದ ಇಲ್ಲಿನ ಜನರು ತಮ್ಮ ಕೈಲಾದ ಮಟ್ಟಿಗೆ ಸಾಹಿತ್ಯದ ಹಲವಾರು ರಂಗಗಳಲ್ಲಿ ಸೇವೆಯನ್ನು ಮಾಡಿ ಸಾಹಿತ್ಯದ ಹರವನ್ನು ಹೆಚ್ಚಿಸುವುದರಲ್ಲಿ ಜಂಗಮರು ಒಬ್ಬರು. ಇವರ ಸಾಹಿತ್ಯಿಗಳ ಸಾಹಿತ್ಯವನ್ನು ಈ ಕೆಳಗಿನಂತೆ ಅವಲೋಕಿಸಲಾಗಿದೆ.

ಈ ಭಾಗದಲ್ಲಿ ಸ್ವರವಚನಗಳ ರಚನೆ ೧೨ನೇ ಶತಮಾನದ ವಚನಕಾರರಿಂದ ಪ್ರಾರಂಭ ವಾಯಿತು. ಬಸವಣ್ಣ ಚನ್ನಬಸವಣ್ಣ, ಅಕ್ಕಮಹಾದೇವಿ, ಸಕಲೇಶ ಮಾದರಸ, ಅಲ್ಲಮ ಪ್ರಭು ಈ ಮುಂತಾದ ವಚನ ಕಾರರು ರಚಿಸಿರುವದರ ಜೊತೆಗೆ ಸ್ವರವಚನಗಳನ್ನು ರಚಿಸಿದ್ದಾರೆ. ಈ ಸ್ವರವಚನ ಪರಂಪರೆ ಈಗಾಗಲೇ ಶಿಷ್ಟ ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಿದೆ(ಸಬರದ ಬಸವರಾಜ:೨೦೦೧:೨). ಈ ಸ್ವರವಚನದಂತಹ ಕಾವ್ಯ ರೂಪವನ್ನು ಸರಳಗೊಳಿಸಿ ತಮ್ಮ ದಿನನಿತ್ಯದ ಬದುಕಿನ ಕ್ರಿಯೆಗಳ ಮೂಲಕ ಅನುಭಾವದೆತ್ತರವನ್ನು ಮುಟ್ಟಿದವರು ತತ್ವಪದಕಾರರು. ಮೊದಲನೆಯ ಘಟ್ಟ ಬೀದರ ಜಿಲ್ಲೆಯಲ್ಲಿ ಮರಕುಂದಿ ಬಸವಣ್ಣಪ್ಪ ಜಂಗಮರಿಂದ ಪ್ರಾರಂಭವಾಯಿತು. ೧೮ನೇ ಶತಮಾನದಲ್ಲಿ ತತ್ವಪದಕಾರರ ಪರಂಪರೆ ಉದಯಿಸಿತು. ಹೀಗಾಗಿ ಜಿಲ್ಲೆಯಲ್ಲಿ ಸಾಹಿತ್ಯದ ಹಲವಾರು ಪ್ರಕಾರದಲ್ಲಿ ಕೃತಿ ಮಾಡಿರುವ ಜಂಗಮರನ್ನು ಕುರಿತು ಒಬ್ಬೊಬ್ಬರಂತೆ ನೋಡಬಹುದು.

**೧.೨.೧. ಮರಕುಂದಿ ಬಸವಣ್ಣಪ್ಪ ತತ್ವಪದಕಾರ (೧೭೮೦ - ೧೮೫೦) :** ಬಸವಣ್ಣಪ್ಪ ನವರು ಬೀದರ ಜಿಲ್ಲೆಯ ಪ್ರಥಮ ತತ್ವಪದ ಕಾರರಾಗಿದ್ದಾರೆ. ಕ್ರಿ.ಶ. ೧೭೮೦ರಲ್ಲಿ ಚಿತ್ತಾಪುರ ತಾಲೂಕಿನ ಬಾಗೋಡಿ ಗ್ರಾಮದಲ್ಲಿ ಜಂಗಮ ಕಾಯಕದ ಮನೆತನದಲ್ಲಿ ಹುಟ್ಟಿ ಬಂದವರು. ಹುಟ್ಟಿದೂರನ್ನು ಬಿಟ್ಟು ಬೀದರ ಜಿಲ್ಲೆಯ ಮರಕುಂದಿ ಗ್ರಾಮದಲ್ಲಿ ಉಳಿದುಕೊಂಡರು. ಗುಡಿ ಎಂಬುದು ಇವರ ಮನೆತನದ ಹೆಸರಾಗಿತ್ತು. ಚಿಕ್ಕ ವಯಸ್ಸಿನಲಿಯೇ ಅಧ್ಯಾತ್ಮದತ್ತ ಒಲವು ಮೂಡಿತು. ಸಿರಡಿಗೆಪುರ ಸಿದ್ದೇಶ್ವರರು ಅವರ ಗುರುಗಳಾಗಿದ್ದರು. ದೇಶ ಸಂಚಾರ ಕೈಗೊಂಡಾಗ ಕರಕಮುಕಲಿ ಗ್ರಾಮಕ್ಕೆ ಬರುತ್ತಾರೆ ಅಲ್ಲಿ ಸೂಗಮ್ಮ ಎಂಬ ಹೆಣ್ಣುಮಗಳೊಂದಿಗೆ ಸಂಬಂಧವನ್ನು ಬೆಳೆಸುತ್ತಾರೆ. ಆಗ ಇವರಿಗೆ ಒಂದು ಹೆಣ್ಣು, ಎರಡು ಗಂಡು ಮಕ್ಕಳು ಜನಿಸುತ್ತವೆ. ನಂತರ ಸ್ಥಿರವಾಗಿ ಮರಕುಂದಾ ಗ್ರಾಮದಲ್ಲಿ ನೆಲೆಸಿ ಅಲ್ಲಿಯೇ ನೂರಾರು ತತ್ವಪದಗಳನ್ನು ರಚಿಸಿದ. ಒಂಭತ್ತು ಅಧ್ಯಯಗಳನ್ನೊಳಗೊಂಡ ನವಖಂಡ ಭಜನೆ ಬರೆದರೆಂದು ತಿಳಿದು ಬರುತ್ತದೆ. ಸಿದ್ಧಲಿಂಗ ರೇವಣಸಿದ್ಧ, ಕಾಡಸಿದ್ಧ ಇವರುಗಳ ಅಂಕಿತಗಳಿಂದ ತತ್ವಪದಗಳನ್ನು ರಚಿಸಿದ್ದಾರೆ.

ಬಸವಣ್ಣಪ್ಪ ರಚಿಸಿರುವ ಪದಗಳನ್ನು ತತ್ವ ಪದಗಳು, ಸುತ್ತಿ ಪದಗಳು ಮತ್ತು ಆಭಂಗಗಳೆಂದು ಅಧ್ಯಾಯನುಕಾರರು ವಿಭಾಗಿಸಿಕೊಂಡಿದ್ದಾದೆನ್ನಬಹುದು. ಇವರ ಎಂಬತ್ತು ಪದಗಳನ್ನು ಡಾ. ಮಾಣಿಕರಾವ ಧನಶ್ರೀ ಮತ್ತು ಎಚ್. ಕಾಶಿನಾಥ ರೆಡ್ಡಿ ಇವರುಗಳು ಮರ ಕುಂದಿ ಬಸವಣ್ಣಪ್ಪನವರ ಭಜನೆ ಹಾಗೂ ತತ್ವಪದಗಳು ಎಂಬ ಹೆಸರಿನಿಂದ ಹುಮನಾಬಾದದ ಬಸವ ತೀರ್ಥ ಪ್ರಕಾಶನದ ಮೂಲಕ ಪ್ರಕಟಿಸಿದ್ದಾರೆ.

ಇವರು ಸಮಾಜದಲ್ಲಿನ ಗುರು ಭಕ್ತಿ, ಅನುಭವ, ಸಾಮಾಜಿಕ ವಿಡಂಭನೆ, ಸಾಮಾಜದಲ್ಲಿನ ಮೂಢ ನಂಬಿಕೆಗಳು ಮತ್ತು ಶರಣರ ಸ್ತುತಿಗಳು ಇವರ ತತ್ವಪದಗಳಲ್ಲಿ ಕಾಣುತ್ತೇವೆ.

"ಮಡಿಯೆಂಬುದು ಆದ ಯಾವಲ್ಲಿ ಮಲ
ಮಡಿಲಿಂದೆ ಪುಟ್ಟಿಸಿದ ಬ್ರಹ್ಮ ಜಗದಲ್ಲಿ
ಹಡಿ ಹೊಲಸು ನರದೇಹದಲ್ಲಿ ಹಸಿ
ಗಡಗಿ ಬಸರುವುದೋ ಅನುದಿನದಲ್ಲಿ"
"ಬಸವ ನಾಮ ನುಡಿಯಲು ಬೇಕೊ !
ಹಾದಿ ಹಸನಮಾಡಿ ನಡೆಯಲಿಬೇಕೊ"
"ತೂಕ ನೆಟ್ಟಿಕ ತೂಗೋ ತಮ್ಮ
ಫಾಸಿ ಹಾಕಬೇಕೆಂಬವರ ನಸೀಬು ಕಮ್ಮ"

ಹೀಗೆ ಇವರ ತತ್ವಪದಗಳಲ್ಲಿ ಸಮಾಜದ ವಿಡಂಬನೆ, ಶರಣರ ಸುತ್ತಿ, ದೇಹ ಅಶಾಶ್ವತ, ದೇವರು ಸರ್ವವ್ಯಾಪಿಯೆಂಬುದು ಮುಂತಾದ ಮೌಲಿಕ ವಿಚಾರಗಳನ್ನು ಇವರ ಪದಗಳಲ್ಲಿ ಕಾಣುತ್ತೇವೆ. ಇವರ ಪದಗಳ ಮೇಲೆ ಉರ್ದು, ಮರಾಠಿ, ಭಾಷೆಗಳ ಪ್ರಭಾವ ಎದ್ದು ಕಾಣುತ್ತದೆ. ಬಸವಣ್ಣಪ್ಪ ಜಂಗಮರು ಸಮಾಜ ಸುತ್ತುತ್ತಾ ತನ್ನ ಮತ್ತು ಸಮಾಜದಲ್ಲಿನ ಕೊಳಕನ್ನು ತತ್ವಪದಗಳ ಮೂಲಕ ಎತ್ತಿ ತೋರಿಸಿ ಶುಚಿಗೆದ್ದರು.

**೧.೨.೨. ನಿಜಲಿಂಗ ಭದ್ರೇಶ್ವರನ ತತ್ವಪದಕಾರ :** ಬೀದರ ತಾಲ್ಲೂಕಿನ ನಿಡವಂಚಿ ಗ್ರಾಮ ದಲ್ಲಿ ೧೮೩೨ರಲ್ಲಿ ಸಿದ್ದಯ್ಯಾ ಮತ್ತು ರುದ್ರಮ್ಮ ಎಂಬ ಜಂಗಮರ ದಂಪತಿಗಳ ಉದರದಲ್ಲಿ ಜನಿಸಿದ. ಹುಟ್ಟಿನಿಂದಲೇ ದೇವರ ಧ್ಯಾನ, ಲಿಂಗಪೂಜೆಯ ಒಲವು ಹೆಚ್ಚಾಗಿತ್ತು. ಎಂಟು ವರ್ಷವಿದ್ದಾಗಲೇ ಮನೆಯನ್ನು ಬಿಟ್ಟು ಊರಿನ ಮಹಾದೇವ ಮಂದಿರದಲ್ಲಿ ಲಿಂಗಪೂಜೆ ಮಾಡುತ್ತಾ ಧ್ಯಾನದಲ್ಲಿ ಮಗ್ನನಾಗಿದ್ದರು. ಭದ್ರೇಶ್ವರರು ಕಲ್ಲಮ್ಮ ಎಂಬ ಕನ್ಯೆಯೊಡನೆ ಮದುವೆಯಾಗುತ್ತದೆ. ಆದರೆ ಸುಖ ಸಂಸಾರಿಕ ಜೀವನ ಸರಿಯಾಗಿ ನಡೆಯಲಿಲ್ಲ. ಹೆಂಡತಿ ಜೊತೆ ಜಗಳವಾಡಿ ಮನೆ ಬಿಟ್ಟು ಹೋಗುತ್ತಾಳೆ. ಇದರಿಂದ ಜೀವನದಲ್ಲಿ ಜಿಗುಪ್ಸೆಗೊಂಡು ಇಂದ್ರಿಯ ನಿಗ್ರಹ ಮಾಡಿ ಶಿವಯೋಗ ಸಾಧನೆ ಮಾಡಿಕೊಳ್ಳುವಲ್ಲಿ ತೊಡಗುತ್ತಾರೆ.

ಭದ್ರೇಶ್ವರರು ಉದಗೀರ ಶಂಕರಲಿಂಗ ಮಠದ ಗುರುಗಳಾಗಿದ್ದ ರಾಚೋಟೇಶ್ವರರನ್ನು ಗುರುಗಳನ್ನಾಗಿ ಮಾಡಿಕೊಂಡು ಶಿವಯೋಗ ಸಾಧನೆಯಿಂದ ಜ್ಞಾನಿಯಾಗಿ, ಅನುಭವಿಯಾಗು ತ್ತಾರೆ. ಅನುಭವದಿಂದ ನುಡಿದ ಮಾತು, ಕಾರ್ಯಗಳು ನಿಜವಾಗುತ್ತವೆ. ಇಂತಹ ಜ್ಞಾನವನ್ನು

ಪಡೆದ ಭದ್ರೇಶ್ವರರು ಭಕ್ತ ಅಜ್ಞಾನವನ್ನು ಕಷ್ಟ ಪರಿಹಾರವನ್ನು ಹುಡುಕುತ್ತಾ ಸಮಾಜ ಸುಧಾರಣೆಗೆ ಪ್ರಯತ್ನಿಸುತ್ತಾ ಅನೇಕ ತತ್ವಪದಗಳು ಹುಟ್ಟಿಕೊಂಡು ಬಂದವು. ಇವರ ೧೩೩ಪದಗಳು ಡಾ. ಎಂ. ಎಸ್. ಲಠ್ಠೆ ಹಾಗೂ ಎಚ್. ಕಾಶಿನಾಥ ರೆಡ್ಡಿ, ನಿಜಲಿಂಗ ಭದ್ರೇಶ್ವರ 'ಅನುಭವ ಪದಗಳು' ಎಂಬ ಹೆಸರಿನಲ್ಲಿ ೧೯೮೭ರಲ್ಲಿ ಇಟಗಾದ ಶ್ರೀ ಭದ್ರೇಶ್ವರ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಇವರ ತತ್ವ ಪದಗಳಲ್ಲಿ ಕುಲ-ಜಾತಿಯನ್ನು ಮೀರಿ, ಜಾತ್ಯಾತೀತ ಮೌಲ್ಯವನ್ನು ಸ್ಥಾಪಿಸುವ ಉದ್ದೇಶದ ಭಾವನೆಗಳು ಅವರ ತತ್ವಪದಗಳಲ್ಲಿ ಕಾಣಬಹುದು.

'ಜಾತ ಜಂಗಮಕಿ
ಬಾತ - ಮುಸಲ್ಮಾನಕಿ'
'ಕುಲ ಕುಲ ಕುಲ ಕುಲ ಅಂತೀರಿ
ನಿಮದ್ಯಾವ ಕುಲ ನಮಗ ಹೇಳಿರಿ !
ವರ್ಮಾ ತಿಳಿಯಲಾರದೆ ಕುಂತೀರಿ
ಮರ್ಮಾವಗೆಟ್ಟು ಸುತ್ತೀರಿ!'(ಸಬರದ ಬಸವರಾಜ:೨೦೦೦:೧೯೫)

ಭದ್ರೇಶ್ವರರು ನಿಡಂವಚಿ ಭದ್ರೇಶ್ವರ ಈ ಅಂಕಿತಗಳ ಮೂಲಕ ತತ್ವಪದಗಳನ್ನು ರಚಿಸಿದ್ದಾರೆ. ಒಟ್ಟಿನಲ್ಲಿ ಭದ್ರೇಶ್ವರ ಜಂಗಮರು ಗುರುಮಹತ್ವ, ಅರಿವಿನ ಪ್ರಾಮುಖ್ಯತೆ, ಅಹಂಕಾರದ ಅಳಿವು, ಜಾತ್ಯಾತೀತ ಮನೋಭಾವದಿಂದ ಕೂಡಿದವುಗಳಾಗಿವೆ. ಜಂಗಮ ಸೇವೆಯ ಕಾರ್ಯದಲ್ಲಿ ಸದಾ ನಿರತರಾಗಿದ್ದರು.

**೧.೨.೩. ಹುಲಸೂರ ಶಿವಾನಂದ ಸ್ವಾಮೀಜಿಗಳು :** ಶ್ರೀ ಶಿವಾನಂದ ಜಂಗಮರು ಹುಲಸೂರ ಶ್ರೀ ಗುರುಬಸವೇಶ್ವರ ಸಂಸ್ಥಾನ ಮಠದ ಪಟ್ಟಾಧ್ಯಕ್ಷರಾಗಿದ್ದಾರೆ. ಶಿವಯ್ಯಾನವರು ಚಿಕ್ಕಂದಿನಿಂದಲೂ ಬಸವಧರ್ಮ ಪ್ರಸಾರ ಪಡಿಸಬೇಕು. ಅಲ್ಲಲ್ಲಿ ಶರಣರ ವಚನಗಳನ್ನು ಬೋಧಿಸಬೇಕೆಂದು ತುಂಬ ಹಂಬಲದಿಂದ ಹುಬ್ಬಳ್ಳಿ ಶಿವಯೋಗ ಮಂದಿರದಲ್ಲಿ ವಿದ್ಯಾಭ್ಯಾಸ ಮುಗಿಸಿಕೊಂಡು ಬಂದರು. ಆಗ ಚಿಂಚೋಳಿ ತಾಲ್ಲೂಕಿನ ಮುಕರಂಬಾ ವಿರಕ್ತಮಠದ ಜಂಗಮರು ಇವರ ಅನುಭವ ಬುದ್ಧಿಯನ್ನು ಕಂಡು ಮಠ ಅಧಿಪತಿಯನ್ನಾಗಿ ಮಾಡುತ್ತಾರೆ. ಆ ಮೇಲೆ ೧೯೮೧ರಲ್ಲಿ ಬೀದರಿನ ಹುಲಸೂರ ವಿರಕ್ತಮಠದ ಪಟ್ಟಾಧ್ಯಕ್ಷರಾಗಿ ಆಯ್ಕೆಯಾಗಿ ಧರ್ಮ ಪ್ರಸಾರದಲ್ಲಿ ತೊಡಗಿಸಿಕೊಂಡರು.

ಇವರು ಅನೇಕ ಹಳ್ಳಿಹಳ್ಳಿಗಳಿಗೆ ತಿರುಗಾಡಿ ದಿನದಲಿತರ ಗುಡಿಸಲುಗಳಿಗೆ ಭೆಟ್ಟಿಯಿತ್ತು, ಜಾತಿಯತೆಯನ್ನು ಹೊಡೆದೊಡಿಸುವಲ್ಲಿ, ಬರಗಾಲ ಬಿದ್ದಾಗ ದನಕರುಗಳಿಗೆ ಮೇವು

ಭೀಕ್ಷೆಯನ್ನು ಬೇಡಿ ಪ್ರಾಣಿಗಳ ಪ್ರಾಣವನ್ನು ಉಳಿಸಿರುವರು. ಜೊತೆಗೆ ವಿರಕ್ತಮಠದ ಆಸ್ತಿಪಾಸ್ತಿಗಳನ್ನೆಲ್ಲಾ ಗಿರವಿಯಿಟ್ಟು, ಶ್ರೀಮಂತ ದಾನಿಗಳಿಂದ ಭೀಕ್ಷೆ ಬೇಡಿ ಗಂಜಿ ಕೇಂದ್ರ ಗಳನ್ನು ಸ್ಥಾಪಿಸಿ ಜನಸೇವೆಯನ್ನು ಮಾಡಿದ ಚರ ಜಂಗಮರಾಗಿದ್ದಾರೆ. ಹಳ್ಳಿ ಹಳ್ಳಿಗಳಿಗೆ ಸಂಚರಿಸಿ ಗುರು ಬಸವ ಅಂಕಿತದಿಂದ ತತ್ವ ಪದಗಳು ರಚಿಸಿ ಸಮಾಜಕ್ಕೆ ನೀಡಿದ್ದಾರೆ. ಅವರ ಪದಗಳು ತಮ್ಮ ಭಕ್ತ - ಭಕ್ತೆಯರ ಉಸಿರಾಗಿವೆ. ಗುರುವಿನೊಡನಿರುವ ತಮ್ಮ ದಾಂಪತ್ಯದ ಕುರುಹಾಗಿವೆ. ಗುರುಬಸವರ ವರವಾಗಿವೆ.

"ಲಿಂಗಪೂಜೆ ಮಾಡಬೇಕು ತಂಗೆಮ್ಮ
ಲಿಂಗ ಸತಿ ತಿಳಿಯಬೇಕಮ್ಮಾ
ಶರಣ ಸತಿ ಲಿಂಗ ಪತಿಯಮ್ಮಾ
ಲಿಂಗ ಹೋದ ಮೇಲೆ ನೀ ರಂಡಿ ಮುಂಡೆಮ್ಮಾ"

ಹೀಗೆ ಗುರು, ಲಿಂಗ, ಜಂಗಮ, ಭಕ್ತರ, ಕುರಿತು ಹೆಣದಿರುವ ತತ್ವಪದಗಳಾಗಿವೆ. ಸದ್ಯ ಹುಲಸೂರ ಪಟ್ಟಾಧೀಶರಾಗಿ ಸಮಾಜ ಸೇವೆಯನ್ನು ಮಾಡುತ್ತಿರುವರು.

ಈ ಜಂಗಮ ತತ್ವ ಪದಕಾರರನ್ನು ಗಮನಿಸಿದರೆ ತಮ್ಮ ಮೂಲ ಕಸುಬು ಜಂಗಮ ಕಾಯಕವೆಂದೇ ತಿಳಿದು ಸಮಾಜದಲ್ಲಿನ ಕಶ್ಮಲಗಳನ್ನು ಹೋಗಲಾಡಿಸಿ, ಸರ್ವವರು ಸಮಾನರು, ಜಾತಿ-ಮತಗಳನ್ನು ಕಿತ್ತೊಗೆಯಲು ಪ್ರಯತ್ನಿಸಿದ ವಿಷಯಗಳನ್ನು ಅವರ ತತ್ವಪದಗಳಿಂದಲೇ ನೋಡಬಹುದಾಗಿದೆ. ಜಂಗಮರ ತ್ಯಾಗ, ಧರ್ಮ, ಕಾರ್ಯ ಎಂತಹದನ್ನು ಅರಿಯಬೇಕಾ ದದ್ದು. ಇಂದಿಗೂ ಹಳ್ಳಿ ಹಳ್ಳಿಗಳಲ್ಲಿ ಈ ಜಂಗಮರ ತತ್ವ ಪದಗಳು ಭಜನೆಗಳಲಿ, ಪ್ರವಚನ ಪ್ರಸಾರದಲ್ಲಿ, ತಿಳಿ ಹೇಳುವಲ್ಲಿ ಅರಳಿದ ಕುಸುಮಗಳಂತೆ ಸುವಾಸನೇ ಬೀರುತ್ತವೆ. ಒಟ್ಟಿನಲ್ಲಿ ತತ್ವಪದಗಳು ಮುಮುಕ್ಷುಗಳಿಗೆ ಮುಕ್ತಾಯ ಸಾಧನವಾಗಿ ಪರಿಣಮಿಸಿದವು ಎನ್ನಬಹುದಾಗಿದೆ.

**೧.೨.೪. ವೀರಪಾಕ್ಷಯ್ಯಾ ಸ್ವಾಮಿ ಗೋರ್ಟ :** ಸ್ವಾತಂತ್ರ್ಯಾನಂತರ ಕನ್ನಡ ಸಾಹಿತ್ಯ ನಿರ್ಮಾಣವು ಪ್ರಾರಂಭಗೊಂಡದ್ದು ಬೀದರ ಜಿಲ್ಲೆಯ ಕ್ರಾಂತಿ ಭೂಮಿಯಾದ ಗೋರಟಾದ ನೆಲದಿಂದ ಅದು ವೀರಪಾಕ್ಷಯ್ಯಾ ಸ್ವಾಮಿಯವರಿಂದ. ವೀರಪಾಕ್ಷಯ್ಯಾನವರು ಸದಾ ದೇವರ ಪೂಜೆ ಮಾಡುವುದು, ಶರಣ ಸಂಸ್ಕೃತಿಯನ್ನು ಬೆಳೆಸುವುದು, ವೀರಶೈವ ಧಾರ್ಮಿಕ ಸಂಸ್ಕಾರಗಳನ್ನು ಮಾಡುವುದು, ಭಕ್ತರಿಗೆ ಸನ್ಮಾರ್ಗದೆಡೆಗೆ ಕರೆತರುವುದು ಕಾಯಕವನ್ನು ಮಾಡುತ್ತಿರುವುರು. ಸದ್ಯ ಇವರಿಗೆ ೮೦ ವರ್ಷಗಳಾಗಿವೆ. ಇವರ ಮೂಲ ವೃತ್ತಿ ಜಂಗಮ ಕಾಯಕ. ಸೀದಾ - ಸಾದ ಸರಳ ಸಜ್ಜನಿಕೆಗೆ ಪಾತ್ರರಾಗಿದ್ದಾರೆ. ಇವರು ರುದ್ರೇಶ್ವರ ಸಂಗೀತ

ಸಂಸ್ಥೆಯನ್ನು ಸ್ಥಾಪಿಸಿ ಇದರ ಮೂಲಕ ಸಂಗೀತಾ ಪ್ರಸಾರ ಮಾಡುವರು. ಜೊತೆಗೆ ರುದ್ರಾಭಿಕ್ಷಕವನ್ನು ಕಟ್ಟಿ ಜಿಲ್ಲೆಯ ತುಂಬ ಭಕ್ತರ ಮನೆಯಲ್ಲಿ ಅವರ ಮಂಗಳಕರವಾದ ಅಭಿಷೇಕವನ್ನು ನೆರವೇರಿಸುತ್ತಾರೆ. ಇಂದಿಗೂ ವೀರಶೈವ ಭಕ್ತರ ಮನೆಯಲ್ಲಿ ರುದ್ರಾಭಿಷೇಕವನ್ನು ಓದುತ್ತಾರೆ. ಪಂಚಾಂಗವನ್ನು ನೋಡುವುದು, ತಮ್ಮ ಮಠದಲ್ಲಿ ಭಕ್ತರಿಗೆ ಒದಗಿ ಬರುವ ಕೆಲವು ಕಾಯಿಲೆಗಳಿಗೆ ಔಷಧವನ್ನು ಒದಗಿಸುವುದು, ಭಕ್ತರ ಸೇವೆಯಲ್ಲಿಯೇ ನಿರಂತರವಾಗಿ ಕಾಲ ಕಳೆಯುವ ಜಂಗಮ ಮೂರ್ತಿಯಾಗಿದ್ದಾರೆ. ನಿಜಾಮ ಮತ್ತು ರಜಾಕಾರ ಚಳುವಳಿಯ ಸಂದರ್ಭದಲ್ಲಿ ಕನ್ನಡ ಭಾಷೆಯ ಆಸ್ತಿತ್ವವೇ ಇಲ್ಲದ, ಕನ್ನಡ ಬರಹಗಾರರ ಬರಗಾಲದ ಆ ಕಾಲದ ಪ್ರಮುಖ ಚಳುವಳಿಯು ಸಾಹಿತ್ಯದಲ್ಲಿ ದಾಖಲಾಗದೇ ಹೋಯಿತು. ಇತಿಹಾಸದಲ್ಲೂ ಕೂಡ ಈ ಕಾಲ ಘಟ್ಟದ ದಾಖಲೆಯು ಒಂದು ರೀತಿಯಿಂದ ವ್ಯಾಕ್ಯೂಮ್ ಆಗಿಯೇ ಉಳಿದಿದೆ(ಅಂಬಲಗಿ ಕಾಶಿನಾಥ: ೧೯೯೪:೬). ಆದರೆ ಜಾನಪದರು ಈ ರಜಾಕಾರರ ಚಳುವಳಿಗೆ ತೀವ್ರವಾಗಿ ಸ್ಪಂದಿಸಿದ್ದಾರೆ. ೧೯೫೮ರಲ್ಲಿ ರಜಾಕಾರರು ಮಾಡಿದ ಸಾಮೂಹಿಕ ಹತ್ಯೆಯ ಪ್ರತ್ಯಕ್ಷದರ್ಶಿಯಾದ ಕೆಳಗಲ್ಲಿಯ ಹಾಗೂ ಮೇಲಗಲ್ಲಿಯ ವೀರೂಪಾಕ್ಷಯ್ಯಾ ನವರು ಅದೇ ವರ್ಷ ಬುಲಾಯಿ ಎಂಬ ಜಾನಪದ ಪ್ರಕಾರ ಕಾವ್ಯವನ್ನು ೧೧೮ ನುಡಿಗಳಲ್ಲಿ ಈ ಕ್ರಾಂತಿಯ ಕಥೆಯನ್ನು ಕಣ್ಣಿಗೆ ಕಟ್ಟುವಂತೆ ರಚಿಸಿದ್ದಾರೆ. ಮೊಟ್ಟ ಮೊದಲು ಜಾನಪದ ಕಾವ್ಯ ಪ್ರಕಾರವನ್ನು ನೀಡಿದವರು ವೀರಪಾಕ್ಷಯ್ಯಾನವರು. ಹೀಗಾಗಿ ರಜಾಕಾರರ ಬುಲಾಯಿ ಹಾಡುಗಳು ಈ ಭಾಗದಲ್ಲಿ ಪ್ರಸಿದ್ಧವಾಗಿವೆ. ಈ ಪದಗಳ ಮೂಲಕ ಇಲ್ಲಿನ ಸ್ವಾತಂತ್ರ್ಯ ಚಳುವಳಿಯಾದ ರಜಾಕಾರ ಚಳುವಳಿಯ ಇತಿಹಾಸ ಕಟ್ಟಬೇಕಾದದ್ದು ಅವಶ್ಯಕವಾಗಿದೆ. ಒಟ್ಟಿನಲ್ಲಿ ವೀರಪಾಕ್ಷಯ್ಯಾನವರು ತಮ್ಮ ಕಾವ್ಯದಲ್ಲಿ ರಜಾಕಾರರು ಕೊಟ್ಟ ಹಿಂಸೆ, ಅತ್ಯಾಚಾರ, ಅನಾಚಾರ ಮತ್ತು ಕೊಲೆ-ಸುಲಿಗೆಗಳನ್ನು ಕಣ್ಣಾರೇ ಕಂಡು ಬರೆದ ದು:ಖಮಯ ಕಾವ್ಯವಾಗಿದೆ. ಇಂದಿಗೂ ಕನ್ನಡ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಅಂದಿನ ಧೈರ್ಯವನ್ನು ಯುವಕರಲ್ಲಿ ತುಂಬುತ್ತಿರುತ್ತಾರೆ. ಇವರ ಸೇವೆಯನ್ನು ಮನಗಂಡು ಕರ್ನಾಟಕ ಸರಕಾರವು ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಅಲ್ಲದೇ ಬೀದರ ಜಿಲ್ಲಾಡಳಿತ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಅನೇಕ ಗೌರವ ಸನ್ಮಾನಗಳು ಲಭಿಸಿವೆ.

**೧.೨.೫. ಸೂರೇಶ ಸ್ವಾಮಿ ಹಿರೇಮಠ - ಗೋರ್ಟಾ :** ಇವರು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾದವರೆ ಯಾಗಿದ್ದಾರೆ. ಮೊದಲಿನಿಂದಲು ಸಾಹಿತ್ಯವನ್ನು ಓದುವುದು, ಬರೆಯುವುದು ಗುಣವನ್ನು ಬೆಳೆಸಿಕೊಂಡವರು. ಸದಾ ಜಂಗಮ ಕಾಯಕದಲ್ಲಿ ಪುರಾಣ - ಪ್ರವಚನಗಳಲ್ಲಿ

ಭಾಗವಹಿಸುವುದು, ಭಕ್ತರಿಗೆ ಬೋಧನೆ ಮಾಡುವುದರಲ್ಲಿ ತುಂಬ ಆಸಕ್ತಿ ಹೊಂದಿದವರಾಗಿದ್ದಾರೆ. ಇವರು ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಹಲವು ಕೃತಿಗಳನ್ನು ನೀಡಿ ಸಾಹಿತ್ಯ ರಂಗವನ್ನು ಹರವುಗೊಳಿಸುವಲ್ಲಿ ಪ್ರಯತ್ನಿಸಿದ್ದಾರೆ. ಇವರು

೧. ಮಾನವನ ಧರ್ಮ ಶಾಸ್ತ್ರ
೨. ಧರ್ಮ ಮತ್ತು ವಿಜ್ಞಾನ, ಸ್ವರಾಜ ವಿಜ್ಞಾನ
೩. ಅಸ್ಪ್ರಶ್ಯರು ಯಾರು?

ಇಂತಹ ಗ್ರಂಥಗಳನ್ನು ನೀಡಿದ್ದಾರೆ. ಅಲ್ಲದೆ ಅನೇಕ ವಿಷಯಗಳ ಮೇಲೆ ಬಿಡಿ ಬಿಡಿ ಲೇಖನಗಳನ್ನು ಬರೆದಿದ್ದಾರೆ. ಕನ್ನಡ ಮತ್ತು ಹಿಂದಿಯಲ್ಲಿಯೂ ತಮ್ಮ ಬರವಣಿಗೆಯನ್ನು ದಾಖಲಿಸಿದ್ದಾರೆ.

**೧.೨.೬. ವೀರಪಾಕ್ಷಯ್ಯಾ ಶಿವಲಿಂಗಯ್ಯಾ ಮಠಪತಿ ಗೋರ್ಟಾ** : ಇವರು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾದವರೆಯಾಗಿದ್ದಾರೆ. ವೀರಪಾಕ್ಷಯ್ಯಾನವರು ಚಿಕ್ಕಂದಿನಿಂದಲೂ ಓದುವ ಹವ್ಯಾಸ ಮಾಡಿ ಕೊಂಡವರು. ಸದಾ ಪುಸ್ತಕಗಳ ಮಧ್ಯದಲ್ಲಿಯೇ ಇರುವವರು. ಇವರು ತಮ್ಮ ಮಠಪತಿಯ ವೃತ್ತಿಯನ್ನು ಸಮಾಜದಲ್ಲಿ ನೇರವೇರಿಸಿಕೊಂಡು ಬರುತ್ತಿದ್ದಾರೆ. ಜೊತೆಗೆ ಪುರಾಣ ಹೇಳುವುದು, ಪ್ರವಚನವನ್ನು ಬೋಧನೆ ಮಾಡುವುದರ ಮೂಲಕ ಭಕ್ತರ ಧಾರ್ಮಿಕ ವಿಧಿ ವಿಧಾನಗಳಿಗೆ ಕರೆದರೆ ಹೋಗಿ ಕ್ರಿಯೆಗಳನ್ನು ಮುಗಿಸಿಕೊಂಡು ಮತ್ತೆ ತಮ್ಮ ಪುಸ್ತಕದಲ್ಲಿ ಮಗ್ನನಾಗುತ್ತಿರುತ್ತಾರೆ. ಅಂತೆಯೇ ಇವರು ಅನೇಕ ಮಹತ್ವದ ಗ್ರಂಥಗಳನ್ನು ನೀಡಿ ಜಿಲ್ಲೆಯ ಸಾಹಿತ್ಯದ ಋಣಿಯನ್ನು ಹೆಚ್ಚಿಸಿದ್ದಾರೆ.

೧. ರಾಚೋಟೇಶ್ವರ ಪುರಾಣ
೨. ಗುರುಗಾನ ಪ್ರಭೆ (ಕವನ ಸಂಕಲನ)
೩. ಗುರುಗಾನ ಸುಧೆ

ಕೃತಿಗಳು ರಚಿಸಿದ್ದಾರೆ. ಇವುಗಳಲ್ಲಿ ಹೆಚ್ಚಾಗಿ ಗುರುವಿನ ಮಹತ್ವ ಗುರುವಿನಿಂದಲೇ ಭಕ್ತರ ಮುಕ್ತಿ ಲಿಂಗ, ಜಂಗಮ ಮುಂತಾದ ಅಂಶಗಳು ಹೇಳುವಲ್ಲಿ ಕಂಡು ಬರುತ್ತವೆ. ಬಿಡಿ ಬಿಡಿ ಲೇಖನಗಳು ಸ್ಥಳೀಯ ಪತ್ರಿಕೆಗಳಲ್ಲಿಯೇ ಪ್ರಕಟಿಸುವರು.

**೧.೨.೭. ವಿ. ಎಂ. ಡಾಕುಳಗಿ :** ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಖಟಕಚಿಂಚೋಳಿ ಗ್ರಾಮದವರು. ವಿಶ್ವನಾಥಯ್ಯಾ ತಂದೆ ಮಹಾರುದ್ರಯ್ಯಾ ಡಾಕುಳಗಿ. ಆದರೂ ಇವರು ಜಿಲ್ಲೆಯಲ್ಲಿ ವಿ. ಎಂ. ಡಾಕುಳಗಿ ಎಂದೇ ಪರಿಚಿತರು. ಇವರು 'ಕವಿಮಾಡ' ಕಾವ್ಯನಾಮದಿಂದ ಕವನಗಳನ್ನು ರಚಿಸಿದ್ದಾರೆ. ಈ ಸಂಕ್ಷಿಪ್ತ ಹೆಸರಿನಿಂದಲೇ ಸಾಹಿತ್ಯ ಲೋಕದಲ್ಲಿ ಪರಿಚಿತರಾಗಿ

ದ್ದಾರೆ. ಸದ್ಯ ನ್ಯಾಷನಲ್ ಪ್ರೌಢ ಶಾಲೆಯ ಮುಖ್ಯ ಗುರುಗಳಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರು ಸಾಹಿತ್ಯ ಕೃಷಿಗೆ ಎಲ್ಲಾ ರಂಗಗಳಲ್ಲಿ ಕೊಡುಗೆಯನ್ನು ಕೊಟ್ಟಿರುವುದು ಅವರ ಕೃತಿ, ಲೇಖನಗಳಿಂದ ಗಮನಿಸಬಹುದಾಗಿದೆ. ಕಥೆ, ಕವನ, ಪ್ರಬಂಧ, ಸಂದರ್ಶನ ಲೇಖನಗಳು, ಚಿಂತನೆಗಳು, ಸಂಕಲನ ಕವನಗಳು, ವ್ಯಕ್ತಿ ಚಿತ್ರಣ ಮುಂತಾದವುಗಳಲ್ಲಿ ಅವರ ಹೆಸರು ಪ್ರಜ್ವಲಿಸುತ್ತದೆ. ಕವನಗಳು ನೂರಾರು, ಕಥೆಗಳು ಹತ್ತು ಪ್ರಬಂಧಗಳು ಐದು ಹಿಂದಿಗೆ ಅನುವಾದ ಮಾಡಿದ್ದಾರೆ.

೧. ನಮ್ಮ ಭವಿಷ್ಯತ್ತಿನ ಭವ್ಯ
೨. ಮಕ್ಕಳ ಸಾಹಿತ್ಯ ಒಂದು ಅವಲೋಕನ
೩. ದೇಶದ ಪ್ರಗತಿಯಲ್ಲಿ ಯುವಕರು
೪. ವಿದ್ಯಾರ್ಥಿಗಳಲ್ಲಿ ಸಚ್ಚರಿತ್ರೆ
೫. ವಯಸ್ಕರ ಶಿಕ್ಷಣದ ಅವಶ್ಯಕತೆ

ಮುಂತಾದ ಪ್ರಬಂಧಗಳು ಲೇಖನಗಳು ರಚಿಸಿದ್ದಾರೆ. ಇವುಗಳು ಗುಲಬರ್ಗಾ ಆಕಾಶವಾಣಿಯಿಂದ ಪ್ರಸಾರ ಗೊಂಡಿವೆ. ಮುದ್ದು ಕೊಟ್ಟ ತಪ್ಪು ಸಂಶಯ, ಕಥೆಯು ಹಿಂದಿಗೆ ಅನುವಾದ ಗೊಂಡಿದೆ. 'ಎಲ್ಲಾರೂ ನಿದ್ರೆ ಮಾಡೋಣ ಬನ್ನಿ', 'ಓಕಳಿ', ಸಂಚಯನ, ಚಲನೆ ಶುದ್ಧ, ನೂರಕವನಗಳು ನೂರು ಕವಿಗಳು ಕುರಿತು ವಿಮರ್ಶೆ ಲೇಖನಗಳಾಗಿವೆ. ಬಲ್ಲೇಗೇರಿಯ ದೇಶ ಕುರಿತು, ಡಾ : ಪದ್ಮಾ ಕುಮಾರ ಪಶು ಸಂಗೋಪನೆ ಇಲಾಖೆ, ಜರ್ಮನ ಮತ್ತು ಭಾರತ ಸಂಸ್ಕೃತಿಯ ಕುರಿತು, ಸ್ವಾತಂತ್ರ್ಯ ಹೋರಾಟಗಾರರು, ಜಾನಪದ ತಜ್ಞನರ ಕುರಿತು ಸಂದರ್ಶನ ಲೇಖನಗಳು ಪ್ರಕಟಗೊಂಡಿವೆ. ನೆಹರು ಜೀವನ ಕುರಿತು ಮತ್ತು ನಮ್ಮ ಭವಿಷ್ಯತ್ತಿನ ಬಗ್ಗೆ ಕುರಿತು ಸಂದರ್ಶನಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ.

ಅನೇಕ ಚಿಂತನೆಗಳು ಆಕಾಶವಾಣಿಯಿಂದ ಬಿತ್ತರಗೊಂಡಿವೆ. ಅಲ್ಲದೇ ಅನೇಕ ಸಂಘ ಸಂಸ್ಥೆಗಳಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ. ಅನೇಕ ಯುವಕ ಮಂಡಳಿ, ಯುವಕ-ಯುವತಿಯರಿಗೆ ಸದಸ್ಯರಿಗೆ ತರಬೇತಿ ನೀಡಿದ್ದಾರೆ. ಪತ್ರಿಕೆಯ ವರದಿಗಾರರಾಗಿ, ಅನೇಕ ಮಹಾನ ವ್ಯಕ್ತಿಗಳಾದ, ಗಳಗನಾಥರು, ಪಿ. ಬ್ರಂಧಾ ನೃತ್ಯಗಾಯಕಿ ಬೆಂಗಳೂರ, ಎಚ್. ಶಿವರಾಮ, ಇಂದ್ರ ಕೌಟುಂಬ, ಮಲ್ಲಿಕಾರ್ಜುನ ಮನ್ಸೂರ, ಸಿದ್ರಾಮಯ್ಯಾ ಮಠಪತಿ, ಡಾ : ಬಿ. ಆರ್. ಅಂಬೇಡ್ಕರ ಕವಸಾಳೆ ಮಾದಯ್ಯಾ ಹಾನಗಲ್ಲ ಕುಮಾರ ಸ್ವಾಮಿ, ಬೆಳಗಲ್ಲು ವೀರಣ್ಣಾ, ಸಂಗಪ್ಪ ಕರಡ್ಡಿಯಾಳ, ಮುಂತಾದವರ ವ್ಯಕ್ತಿ ಚಿತ್ರಣವನ್ನು ಬರೆದಿದ್ದಾರೆ. ಇವರ ಸೇವೆಯನ್ನು ಕಂಡು ಕರ್ನಾಟಕ

ಸರಕಾರದಿಂದ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ, ಜಿಲ್ಲಾ ಆಡಳಿತದಿಂದ ಜಿಲ್ಲಾ ಮಟ್ಟದ ಪ್ರಶಸ್ತಿ, ಕ್ರೀಡಾ ಅಭಿವೃದ್ಧಿಗಾಗಿ ರಾಜ್ಯ ಮಟ್ಟದ ಪ್ರಶಸ್ತಿಗಳು ಬಂದಿವೆ. ಇನ್ನು ಅನೇಕ ನಾಗರೀಕರಿಂದ ಸನ್ಮಾನಗಳು ಸಂದಿವೆ. ಇನ್ನು ಹಲವಾರು ಲೇಖನಗಳು ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಮತ್ತು ಸ್ಥಳೀಯ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟಗೊಂಡಿವೆ.

ಒಟ್ಟಿನಲ್ಲಿ ವಿ. ಎಂ. ಡಾಕುಳಗಿಯವರು ಸದಾ ಸಾಹಿತ್ಯ ಚಟುವಟಿಕೆಗಳಲ್ಲಿ ನಿರಂತರಾಗಿದ್ದು ಜೊತೆಗೆ ಯುವಕರನ್ನು ಪ್ರಗತಿ ಮಾಡುವಲ್ಲಿ ಪ್ರಯತ್ನಿಸುವದು, ವೈಚಾರಿಕತೆ ಬೆಳೆಸುವುದು ಸದಾ ಹಸನ್‌ಮುಖಿಯಾಗಿ ಸಾಹಿತ್ಯದ ಪ್ರತಿಯೊಂದು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಕೈಲಾದ ಮಟ್ಟಿಗೆ ಸಾಹಿತ್ಯಕ್ಕೆ ಕೊಡುಗೆ ಕೊಡುವುದು ಅವರ ಸದಾ ಉದ್ದೇಶವಾಗಿದೆ.

**೮. ಪ್ರೊ. ಸಿದ್ರಾಮಯ್ಯಾ ಸ್ವಾಮಿ ಗೋರ್ಟಾ :** ಇವರು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾ ಗ್ರಾಮದವರು. ಪುರಾಣ ಪಠಣ, ಸಂಗೀತಾ ಪ್ರಸಾರ ಮತ್ತು ಪ್ರವಚನ ಬೋಧನೆಯ ಪರಂಪರೆಯ ಮನೆತನದಿಂದ ಬಂದವರು. ಹೀಗಾಗಿ ಸಂಗೀತ ಕ್ಷೇತ್ರದಲ್ಲಿ ಜಿಲ್ಲೆಗೆ ಹೆಸರುವಾಸಿಯನ್ನು ಮಾಡಿದವರು. ಸದಾ ನಗುಮುಖದಿಂದ ವ್ಯವಹರಿಸುವರು. ಸಂಗೀತದಲ್ಲಿ ಎಂ. ಎ. ಪದವಿಯನ್ನು ಮುಗಿಸಿಕೊಂಡು ಬಾಗಲಕೋಟೆಯಲ್ಲಿ ಸಂಗೀತ ಅಧ್ಯಾಪಕರಾಗಿ ಸದ್ಯ ಸೇವೆ ಸಲ್ಲಿಸುತ್ತಿದ್ದಾರೆ. ಯಾವಾಗಲು ಇವರಿಗೆ ಒಂದಲ್ಲ ಒಂದು ಕಡೆ ಭಕ್ತ ಕರೆ ಬಂದೇ ಬಂದಿರುತ್ತದೆ. ಅವರ ಕರೆಗೆ ಓಗೊಟ್ಟು ಜನರಿಗೆ ಸಂಗೀತದ ಸವಿಯನ್ನು ಉಣಬಡಿಸುತ್ತಾರೆ. ಅನೇಕ ಧ್ವನಿ ಸುರುಳಿಯನ್ನು ಬಿಡುಗಡೆ ಮಾಡಿರುವರು. ರಾಜ್ಯ ಮಟ್ಟದ ಕಲಾವಿದರಲ್ಲಿ ಇವರೊಬ್ಬರು. ಜಿಲ್ಲೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ನೀಡಿ ಸಂಗೀತ ಪ್ರೇಮಿಗಳ ಮನಸೂರೆಗೊಳಿಸುವುರಲ್ಲದೇ ಓದುಗರಿಗೆ ಅನೇಕ ಕೃತಿಗಳನ್ನು ನೀಡಿ ಸಾಹಿತ್ಯದ ಕ್ಷೇತ್ರವನ್ನು ಹೆಚ್ಚಿಸಿದ್ದಾರೆ. ಇವರು :

೧. ಸಂಗೀತಾ ಶ್ರೀ ರುದ್ರಾ

೨. ಹಿಂದುಸ್ಥಾನಿ ಸಂಗೀತಗಾರರು : ಭಾಗ - 1, 2

೩. ಅಮರ ಗುಚ್ಛ (ಸಂಪಾದನೆ)

೪. ಶ್ರೀ ರುದ್ರಾ

ಇತ್ಯಾದಿ ಕೃತಿಗಳು ನೀಡಿದರಲ್ಲದೆ ಎರಡು ನೂರಕ್ಕಿಂತಲು ಹೆಚ್ಚಾಗಿ ಸಂಗೀತ ಕುರಿತು ಸಂಶೋಧನ ಲೇಖನಗಳು ರಚಿಸಿದ್ದಾರೆ. ತುಂಬ ಮೃದು ಸ್ವಭಾವದವರು ಅನೇಕ ಶಿಷ್ಯರನ್ನು ಬೆಳೆಸಿದ್ದಾರೆ, ಬೆಳೆಸುತ್ತಿದ್ದಾರೆ. ಇವರ ಸೇವೆಗೆ ಅನೇಕ ಪ್ರಶಸ್ತಿ ಸನ್ಮಾನಗಳು ಬಂದು ಸಂದಿವೆ.

ಇವರು ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಸಂಗೀತ ಕುರಿತು ಪಿಎಚ್.ಡಿ. ಮಾಡುತ್ತಿದ್ದಾರೆ. ಇಂತಹ ಸಂಗೀತಗಾರರು ನಮ್ಮ ಜಿಲ್ಲೆಯಲ್ಲಿ ಹುಟ್ಟಿದ್ದು ವೈಶಿಷ್ಟ್ಯ ಎನ್ನಬಹುದು.

**೧.೨.೯. ಶ್ರೀ ಪಂಚಾಕ್ಷರಿ ಹಿರೇಮಠ :** ಪಂಚಾಕ್ಷರಿಯವರು ಬಸವಕಲ್ಯಾಣದವರು. ಶಿಕ್ಷಕ ವೃತ್ತಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಹಿರೇಮಠ ಅವರು ಕನ್ನಡ ಸಾಹಿತ್ಯ ಒಲವು ತುಂಬ ಗಮನಾರ್ಹವಾದದ್ದು. ಯಾವಾಗಲೂ ಕನ್ನಡ ಎಂದೇ ಕನ್ನಡ ಪ್ರಸಾರವೆಂದೇ ಎಂಬ ನುಡಿ ಯಾವಾಗಲು ತಮ್ಮ ಧ್ವನಿಯಲ್ಲಿ ಕೇಳಿಬರುತ್ತದೆ. ಶಿಕ್ಷಣ ವೃತ್ತಿಯನ್ನು ಮುಗಿದ ಕ್ಷಣವೇ ತಾಲ್ಲೂಕಿನಲ್ಲಿ ಕನ್ನಡಪರ ಕಾರ್ಯಕ್ರಮಗಳನ್ನು ಇದ್ದರೇ ಮನೆಗೆ ಹೋಗದೇ ಕಾರ್ಯಕ್ರಮದಲ್ಲಿ ಭಾಗವಹಿಸಿದ ನಂತರವೇ ತಮ್ಮ ಮನೆಗೆ ಹೋಗುತ್ತಿದ್ದರು. ಹೀಗಾಗಿ ಕನ್ನಡ ಪ್ರಭಾವ ಅವರಿಗೆ ಮೊದಲಿನಿಂದಲೂ ಬರೆಯುವುದು, ಓದುವುದು ಅವರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು. ಹಿರೇಮಠ ಅವರು ಸಾಹಿತ್ಯ ಲೋಕಕ್ಕೆ ಹಲವು ಕೃತಿಗಳನ್ನು ನೀಡಿದ್ದಾರೆ. ಮಿನುಗುವ ನಕ್ಷತ್ರಗಳು, ನಮ್ಮ ಶೈಕ್ಷಣಿಕ ವ್ಯವಸ್ಥೆ, ಕೃತಿಗಳ ಮೂಲಕ ಸಾಹಿತ್ಯ ಲೋಕವನ್ನು ಪ್ರವೇಶಿಸಿದ್ದಾರೆ. ಅಲ್ಲದೆ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ಹತ್ತು ಹಲವಾರು ಉಪನ್ಯಾಸಗಳನ್ನು ನೀಡಿರುವರು. ಅಲ್ಲದೇ ಅನೇಕ ಕವನಗಳು, ಬಿಡಿ ಬಿಡಿ ಲೇಖನಗಳು ಸ್ಥಳೀಯ ಪತ್ರಿಕೆಗಳಲ್ಲಿ, ಸ್ಥಳೀಯ ಸ್ಮರಣ ಸಂಚಿಕೆಗಳಲ್ಲಿ ಹಿರೇಮಠರ ಕವನವು ಇದ್ದೇ ಇರುತ್ತದೆ. ಶರಣ ಸಂಸ್ಕೃತಿ, ವೀರಶೈವ ತತ್ವಗಳ, ಪಠಣ, ಪ್ರಸಾರವು, ಜಂಗಮ ಕಾಯಕವು ಇಂದಿಗೂ ನಡೆಸಿಕೊಂಡು ಬರುತ್ತಿದ್ದಾರೆ.

**೧.೨.೧೦. ಪ್ರೊ: ಶಿವಕುಮಾರ ನಾಗವಾರ :** ಪ್ರೊ. ಶಿವಕುಮಾರ ನಾಗವಾರವರು ಹುಮನಾಬಾದ ತಾಲ್ಲೂಕಿನ ಮರಕುಂದಿ ಗ್ರಾಮದವರು. ಆರ್. ಆರ್.ಕೆ. ಎಸ್. ಕಾಲೇಜಿನಲ್ಲಿ ಪ್ರಚಾರಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸಾಹಿತ್ಯ ಆಸಕ್ತಿ ಚಿಕ್ಕಂದಿನಿಂದಲೂ ಅವರ ಮೇಲೆ ಪ್ರಭಾವವನ್ನು ಬೀರಿದ್ದನ್ನು ಕಂಡು ಬರುತ್ತದೆ. ಯಾವಾಗಲೂ ಸಾಹಿತ್ಯ ಚಟುವಟಿಕೆ ಗಳಲ್ಲಿ ಭಾಗವಹಿಸುವರು. ಯುವಕರಿಗೆ ಉತ್ಸಾಹ, ಪ್ರೋತ್ಸಾಹಗಳನ್ನು ನೀಡುವುದರ ಮೂಲಕ ತಾವು ತಮ್ಮ ಸಾಹಿತ್ಯ ದಿಗ್ಗಂತವನ್ನು ಹೆಚ್ಚಿಸಿಕೊಳ್ಳುವರು. ಬೀದರ ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾಗಿ ಬೀದರ ತಾಲ್ಲೂಕಿನ ಹಲವಾರು ಕನ್ನಡಪರ ಕಾರ್ಯಕ್ರಮಗಳನ್ನು ನೀಡಿ ಜನಮನ ಸೂರೆಗೊಂಡವರು.

ನಾಗವಾರವರು ಸಾಹಿತ್ಯದ ಕಥಾ ಪ್ರಕಾರದಲ್ಲಿ ಹೊಸ ಯುಗವನ್ನೇ ಪ್ರಾರಂಭಿಸಿರುವರು. ಹೈದ್ರಾಬಾದ ಕರ್ನಾಟಕದ ಭಾಗದಿಂದ ಅಷ್ಟು ಸಾಹಿತ್ಯ ಪರಿಪಕ್ವವಾಗಿ ಇರುವುದಿಲ್ಲ ಎಂಬ

ಮಾತಿಗೆ ಬಲಿಯಾಗಿತ್ತು. ನಾಗವಾರವರು ಈ ಭಾಗದ ಸಮಸ್ಯೆಯನ್ನು ತುಂಬಿ ಜಿಲ್ಲೆಗೆ ಕೀರ್ತಿ ತಂದು ಕೊಟ್ಟಿದ್ದಾರೆ. ಈ ಭಾಗದ ಶ್ರೇಷ್ಠ ಕತೆಗಾರರು ಜೊತೆಗೆ ವಿಮರ್ಶ ಮನೋಭಾವವುಳ್ಳವರು. ಬೇಕಾದರೆ ಶ್ರೇಷ್ಠ ಮಟ್ಟದ ಪದಪ್ರಯೋಗಿಸುವ ಹಂಬಲವುಳ್ಳವರು. ಎರಡು ಸಾವಿರದ ಎರಡರಲ್ಲಿ 'ಹಣದಿ' ಕತೆ ಸಂಕಲನವು ಲೋಹಿಯಾ ಪ್ರಕಾಶನದ ಮೂಲಕ ಪ್ರಕಟಿಸಿದ್ದಾರೆ. ಪ್ರತಿಯೊಂದು ಕಥೆಗಳು ರಾಜ್ಯ ಮಟ್ಟದ ಪ್ರಶಸ್ತಿಗಳನ್ನು ಪಡೆದವುಗಳಾಗಿವೆ. ಅವರ ಕಥೆಗಳಲ್ಲಿ ಕುಟುಂಬದ ಸಂಬಂಧಗಳು ಸಾಮಾಜಿಕ ಮೌಲ್ಯಗಳು, ಗ್ರಾಮಿಣ ರಾಜಕೀಯ, ಅಕ್ಷರಜ್ಞಾನದ ಬೆಳಕು ಮಾನಸಿಕ ಹಿಂಸೆಗಳು ಮತ್ತು ನಿಜಾಮ ಆಡಳಿತದ ವ್ಯವಸ್ಥೆ ಮುಂತಾದ ಮಗ್ಗುಲುಗಳನ್ನು ಅಡಗಿವೆ. ಮಿತವಾದ ಸ್ಥಳೀಯ ಭಾಷೆ ಪ್ರಯೋಗ ಉತ್ಸಾಹ ಪೂರ್ಣವಾಗಿ ಓದಿಸಿಕೊಂಡು ಹೋಗುವ ತಂತ್ರ ನಾಗವಾರ ಅವರಿಗೆ ಸಿಕ್ಕಿದೆ. ಇಂದಿಗೂ ಪ್ರತಿಯೊಂದು ಸ್ಪರ್ಧೆಗಳಿಗೆ ತಮ್ಮ ಕಥೆಯನ್ನು ಹೆಣೆದು ಕಳುಹಿಸುತ್ತಾರೆ. ಸದಾ ಸಾಹಿತ್ಯ ಅವಲೋಕ, ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಸಿಕೊಳ್ಳುವರು.

**೧.೨.೧೧. ಶ್ರೀಮತಿ ನೀಲಾ ಕೆ. :** ಇವರು ಬಸವಕಲ್ಯಾಣದವರು ಸರಳ ಸಜ್ಜನಿಕೆಗೆ ಹೆಸರುವಾಸಿಯಾದವರು. ಸಣ್ಣಂದಿನಿಂದಲೂ ಬಂಡಾಯದ ಧ್ವನಿಯನ್ನು ಮೈತುಂಬ ತೂಂಬಿಕೊಂಡವರು ಇವರು ರಾಜ್ಯ ಮಹಿಳಾ ಪ್ರತಿನಿಧಿಯ ಕಾರ್ಯದರ್ಶಿಯಾಗಿ ರಾಜ್ಯದ ತುಂಬ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವರು.

ನೀಲಾ ಕೆ.ಯವರ ಮಾತು, ಬರಹ ಮತ್ತು ಬದುಕು ಮೂರರಿಂದಲೂ ಅಪ್ಪಟ ಬಂಡಾಯದ ಬರಹಗಾರರು. ನೀಲಾ ಕೆ ಹೆಣ್ಣೆ ? ಎನ್ನುವ ಸಾಹಿತಿಗಳೂ ಬೀದರಿನಲ್ಲಿದ್ದಾರೆ. ಅವಳು ಗಂಡೆದೆಯ ಹೆಣ್ಣು ಸಾಹಿತಿಯೆಂದು ಮೆಚ್ಚಿಗೆ ವ್ಯಕ್ತ ಪಡಿಸುವ ಡಾ.ಎಲ್. ಆರ್. ಕುಲಕರ್ಣಿಯವರಂಥ ಮುಕ್ತ ಮನಸ್ಸಿನ ಸಾಹಿತಿಗಳೂ ಇಲ್ಲಿದ್ದಾರೆ (ಹುಡುಗಿ ದೇಶಾಂಶ:೯೯೫:೫೦). ಹೀಗೆ ನೀಲಾ ಕೆ. ಅವರ ಧರ್ಮಸಹಾಸಕ್ಕೆ ಮೆಚ್ಚುಗೆಯ ಮಾತು ಗಮನಿಸಿದರೆ ಅವರ ವ್ಯಕ್ತಿತ್ವ ಅರಿಯ ಬೇಕಾಗುತ್ತದೆ.

ಮಗುವಾಗಿದ್ದಾಗಿನಿಂದ ದಲಿತರ ಮಧ್ಯದಲ್ಲಿ ಆಡಿ ಬೆಳೆದ ಬಸವಾದಿ ಶರಣರ ವಚನಗಳ ಚಿಂತನೆಗಳಲ್ಲಿ ಮುಳುಗಿ ಜನಪರ ವಿಚಾರವಾದವಳಾಗಿಯೇ ರೂಪುಗೊಂಡು, ತಮ್ಮ ದಾಂಪತ್ಯ ಜೀವನದಲ್ಲಿ ಅಂತರಜಾತಿ ವಿವಾಹಕ್ಕೆ ಒಳಗಾಗಿದವರು. ಕುಟುಂಬದವರಿಂದ ಬಹಿಷ್ಕಾರವನ್ನು ಅನುಭವಿಸಿದವರು. ಜಿಲ್ಲಾ ಮಟ್ಟದ ರಾಜ್ಯಮಟ್ಟದ ನಾಟಕಗಳಲ್ಲಿ ಭಾಗವಹಿಸಿ ಅಭಿನಯಿಸಿ

ದ್ದಾರೆ. ಮತ್ತು ಏಳನೇ ವರ್ಗದಿಂದಲೇ ಕವನ ಬರೆಯುವ ಹವ್ಯಾಸವನ್ನು ಹಾಕಿಕೊಂಡವರು. ಚಿಂತಕ ಲಂಕೇಶ ಮತ್ತು ಸ್ಥಳೀಯ ಪತ್ರಿಕೆಗಳಲ್ಲಿ ಕವನ ಹಾಗೂ ಲೇಖನಗಳು ಪ್ರಕಟಗೊಂಡಿವೆ. ಇವರ ಪ್ರತಿಯೊಂದ ಕವನಗಳಲ್ಲಿ, ಲೇಖನಗಳಲ್ಲಿ ಬಂಡಾಯದ ಧ್ವನಿ ಎದ್ದುಕಾಣುತ್ತದೆ. 'ಬದುಕು ಬೀದಿಯ ಪಯಣ'ವೆಂಬ ಕವನ ಸಂಕಲನ ಗಂಡು ಹೆಂಡತಿಯ ಸಂಯುಕ್ತ ಸಂಕಲನಕ್ಕೆ ಕಿಚ್ಚಾಗಿ ಸೇರಿದಾರೆ. ಕಾರ್ಲಮಾರ್ಕ್ಸ್, ಬಸವಣ್ಣ ಹಾಗೂ ಅಕ್ಕಮಹಾದೇವಿಯರ ಪ್ರಭಾವ ಇವರಲ್ಲಿ ಬಂಡಾಯಕ್ಕಿಳಿದಿದೆ.

"ಎಲ್ಲಿ ಹೋದಿರಿ ನನ್ನವರೇ
ನೀವೆಲ್ಲಿ ಹೋದಿರಿ ನನ್ನ ಹೆತ್ತವರೇ
ಕಲ್ಲು ಕರಗುವೆ ನನ್ನೆದೆಯ ನೋವ ಕಂಡು
ಕಗ್ಗಲ್ಲಿಗಿಂತ ಕಡೆಯಾದರೇ ನೀವು?"

ಈ ಕವನದ ಸಾಲುಗಳಲ್ಲಿ ತಾಯ್ತಂದೆಯರನ್ನು ತುಂಬ ದು:ಖದಿಂದ ನೆನೆಸಿಕೊಂಡಿರುವುದು ಕಾಣುತ್ತದೆ. ಈ ಮುಂದಿನ ಪದ್ಯದ ಸಾಲುಗಳೇ ಶೋಷಿತ ಸಮಾಜದ ನೋವಿನ ಪ್ರತಿಧ್ವನಿಯಾಗುವಲ್ಲಿ ಪ್ರಯತ್ನಸಲಾಗಿರುವುದು. ಬದುಕು ಬಂದೀಖಾನೆ ಬದುಕಿನ ಕುರಿತು ಬದುಕಿಗೆ ಅಂಟುಕೊಂಡಿರುವ ಸಮಾಜದ ರೋಗಳನ್ನು ಬಂಡಾಯದ ಮೂಲಕ ಕಿತ್ತೊಗೆಯುವಲ್ಲಿ ಪ್ರಯತ್ನಿಸಲಾಗಿರುವದು. 'ಸ್ಟೂಡೆಂಟ್ಸ ಫೆಡರೇಷನ ಆಫ್ ಇಂಡಿಯಾ', ಭಾರತೀಯ ಪ್ರಜಾಸತ್ತಾತ್ಮಕ ಯುವ ಸಂಘಟನೆ, ಜನವಾದಿಮಹಿಳಾ ಸಂಘಟನೆಗಳಲ್ಲಿ ನೇರವಾಗಿ ತಮ್ಮನ್ನು ತೊಡಗಿಸಿಕೊಂಡವರು ಸದಾ ವರದಕ್ಷಿಣೆ, ಜಾತಿ-ಮತ ಹೆಣ್ಣಿನ ಮೇಲೆ ಅತ್ಯಾಚಾರ, ಅನಾಚರ, ಅಶ್ಲೀಲ ಭಿತ್ತಿ ಪತ್ರಗಳ ವಿರೋದ್ಧ ಹೋರಾಟಗಳಲ್ಲಿ ತೊಡಗಿಸಿಕೊಂಡ ಮಹಿಳೆಯರನ್ನು ಅನ್ಯಾಯದ ವಿರೋಧ ಹುರಿದುಂಬಿಸಿ ನ್ಯಾಯಕ್ಕಾಗಿ ಹೊರಾಡುತ್ತಾ ಮುನ್ನಡೆಯುತ್ತಿರುವರು.

ಅವರು ತಮ್ಮ ಬಗ್ಗೆ ಮಾತನ್ನು ಕೆಳಗಿನಂತೆ ಹೇಳಿದ್ದು ಗಮನಿಸಬಹುದು. "ನಾನು ಜನಪರ ದಿಕ್ಕಿನತ್ತ ಸಾಗುವ ಮಹಿಳೆ. ತಾಯಿಯನ್ನು ಕಳೆದುಕೊಂಡು ಮಗುವಿನ ಆರ್ತತೆ ನನ್ನಲ್ಲಿದ್ದದ್ದು ನಿಜ. ಸಮಾಜದ ಎಲ್ಲಾ ಮಹಿಳೆಯರು ತೌರು ಮನೆ ಕಳೆದುಕೊಂಡವರಂತೆ, ಎಲ್ಲ ವರ್ಗ ಹಾಗೂ ವರ್ಣದ ಮಹಿಳೆಯರ ಅವಸ್ಥೆ ಹೀಗೆಯೇ ಇದೆ. ಈ ವ್ಯವಸ್ಥೆಯೇ ನನ್ನನ್ನು ಬಂಡಾಯಕ್ಕಿಳಿಸಿ ಸಿಟ್ಟು, ರೋಚ್ಚು - ಕಿಚ್ಚು ಅದಕ್ಕೆ ಹಿನ್ನೆಲೆಯಾಗಿ ನಿಂತಿವೆ ಎನ್ನುತ್ತಾರೆ ನೀಲಾ

ಕೆ." (ಅವರೇ:೯೩). ನೀಲಾ ಕೆ. ಅವರು ಮಹಿಳಾ ಸಂಘಟನೆಯ ರಾಜ್ಯ ಕಾರ್ಯದರ್ಶಿಯಾಗಿ ಸದಾ ಬಂಡಾಯದ ಧ್ವನಿಗಳಿಂದ ಮಹಿಳೆಯರಿಗೆ ಸಮಾಜದಲ್ಲಿ ಅನ್ಯಾಯವಾಗಿರುವ ವಿಷಯಗಳನ್ನು ತಮ್ಮ ಬಂಡಾಯದ ಮನೋಭಾವದ ಮೂಲಕ ಹಲವಾರು ಪತ್ರಿಕೆಗಳಲ್ಲಿ ಬಿತ್ತಿಸಿರುತ್ತಾರೆ.

**೧.೨.೧೨. ಶರಣಯ್ಯಾ ಸ್ವಾಮಿ ಮಠಪತಿ :** ಶರಣಯ್ಯಾನವರು ಭಾಲ್ಕಿದವರಾಗಿದ್ದಾರೆ. ಇವರು ಪದವಿ ಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಸಾಹಿತ್ಯದಲ್ಲಿ ತುಂಬ ಆಸಕ್ತಿಯನ್ನು ಹೊಂದವರಾಗಿದ್ದು, ಜಿಲ್ಲೆಯಲ್ಲಿ ನಡೆಯುವ ಪ್ರತಿಯೊಂದು ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸುವರು. ಹಲವಾರು ಕಾರ್ಯಕ್ರಮಗಳಲ್ಲಿ ಪ್ರವಚನ, ಲೇಖನ ಮಂಡನೆ ಮುಂತಾದವುಗಳಲ್ಲಿ ಎತ್ತಿದ ಕೈ ಎನ್ನಬೇಕು. ಯಾವುದೇ ಕಾರ್ಯಕ್ರಮದಲ್ಲಿ ಭಾಗವಹಿಸಿದಾಗ ಒಂದು ಕವನ ಓದದೇ ಇರಲಾರರು. ಮಠಪತಿಯವರು ಅನೇಕ ಕವನಗಳು, ಬಿಡಿ ಬಿಡಿ ಲೇಖನಗಳು ಸ್ಥಳೀಯ ಪತ್ರಿಕೆಗಳಲ್ಲಿ ಆಗಾಗ ಪ್ರಕಟಿಸುತ್ತಿರುತ್ತಾರೆ. ಯುವಕರಿಗೆ ಸಾಹಿತ್ಯದ ಬಗ್ಗೆ ಓಲವು ಮೂಡಿಸಿ ಅವರಿಂದ ಸಾಹಿತ್ಯದ ಯಾವುದೇ ಪ್ರಕಾರ ಹೊರ ಬಿಳಬಹುದೆಂದು ತಿಳಿದು ತುಂಬ ಆತುರದಿಂದ ಸಹಾಯ, ಸಹಕಾರ ನೀಡಿ ಸದಾ ಸಹಕರಿಸುತ್ತಾರೆ.

**೧.೨.೧೩. ಶಿವಮೂರ್ತಿಸ್ವಾಮಿ ಔರಾದ :** ಇವರು ಔರಾದ ತಾಲ್ಲೂಕಿನ ಕೊಟಗ್ಯಾಳ ಗ್ರಾಮದವರು. ಹಿಂದಿ ಭಾಷೆಯಲ್ಲಿ ಎಂ. ಎ. ಪದವಿಯನ್ನು ಪಡೆದುಕೊಂಡು ಭಾಲ್ಕಿ ಚನ್ನಬಸವೇಶ್ವರ ಪದವಿ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಕೆಲಸ ನಿರ್ವಹಿಸಿದ್ದರು. ಸದ್ಯ ನಿವೃತ್ತ ಹೊಂದಿದ್ದಾರೆ. ಮೊದಲಿನಿಂದಲು ಹಿಂದಿ, ಕನ್ನಡ ಸಾಹಿತ್ಯದಲ್ಲಿ ಕೃಷಿ ಮಾಡುವ, ಗ್ರಂಥಗಳನ್ನು ಬರೆಯುವ ಒಲವು ಬಹಳವಾಗಿದೆ. ಹಾಗೆಯೇ ಅನೇಕ ಗ್ರಂಥಗಳು ರುದ್ರಮುನಿ ಪ್ರಕಾಶನದ ಮೂಲಕ ಪ್ರಕಟಿಸಿದ್ದಾರೆ.

೧. ರುದ್ರಲಿಂಗ ಸಂಸ್ಕೃತಿ

೨. ಕಾಲ ಸಂಘರ್ಷ

೩. ಪೂಜೆಯ ಬೆಡಗು

ಗುರು, ಲಿಂಗ, ಜಂಗಮ ಪೂಜಾಗಳ ಮಹತ್ವವನ್ನು ಕೃತಿಗಳ ತುಂಬ ಕಾಣಸುತ್ತದೆ. ವೀರಶೈವ ಧರ್ಮದ ತತ್ವ ವಿಧಾನಗಳು, ಉಪಯೋಗಿಸುವ ಕ್ರಮ, ಪೂಜೆಯ ಅವಶ್ಯಕತೆ ಮುಂತಾದ ವಿಚಾರಗಳು ಕಂಡು ಬರುವವು. ವೀರಶೈವ ಧರ್ಮಕ್ಕಾಗಿ ಸದಾ ಹಗಲು ಇರಳು ದುಡಿಯುತ್ತಾರೆ. ಭಕ್ತರಿಗೆ ಪಂಚಾಂಗ ನೋಡುವುದು, ಜ್ಯೋತಿಷ್ಯವನ್ನು ಹೇಳುವುದು

ಇಂದಿಗೂ ತಮ್ಮ ಮನೆಯ ಪರಂಪರೆಯ ಜಂಗಮ ಕಾಯಕವನ್ನು ಮುಂದುವರೆಸಿಕೊಂಡು ಸಾಗುತ್ತಿದ್ದಾರೆ. ಅಲ್ಲದೇ ಹಿಂದಿ ಮೀಲಾಪ ಪತ್ರಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಹೀಗಾಗಿ ವಿಮರ್ಶೆ ಮನೋಭಾವದಿಂದ ತೌಲನಿಕವಾಗಿ ರಚಿಸುವ ಕೃತಿಗಳು ತುಂಬ ಮಹತ್ವ ಪಡೆದುಕೊಂಡಿದವುಗಳು.

**೧.೨.೧೪. ಶಾಂತಲಿಂಗ ಸ್ವಾಮಿ ಲಾಡಗೇರಿ :** ಶಾಂತಲಿಂಗ ಸ್ವಾಮಿಗಳು ಲಾಡಗೇರಿ ನಿವಾಸಿಗಳು. ಶ್ರೀ ಸ್ವಾಮಿಗಳು ಬೀದರ ಜಿಲ್ಲೆಯಲ್ಲಿ ಶರಣ ಶರಣೆಯರ ಬಗ್ಗೆ ಅಭಿಮಾನ ವುಳ್ಳವರು. ವೀರಶೈವಧರ್ಮ ತತ್ವಗಳನ್ನು ಸದಾ ಪ್ರಚಾರ ಪಡಿಸುತ್ತಾ, ಬೋಧಿಸುತ್ತಾ ತಮ್ಮ ಕಾಲವನ್ನು ಕಳೆಯುತ್ತಾರೆ. ಸದಾ ಓದಿನಲ್ಲಿ ನಿರತರಾಗಿರುತ್ತಾರೆ. ಇದಕ್ಕೆ ಸಾಕ್ಷಿ ಎಂದರೆ ಖ್ಯಾತ ಕನ್ನಡ ವಾರ ಪತ್ರಿಕೆಗಳಲ್ಲಿ 'ಬೀದರ ಜಿಲ್ಲಾ ಮಹಾತ್ಮ ಪುರುಷರು' ಎಂಬ ಶೀರ್ಷಿಕೆಯ ಅಡಿಯಲ್ಲಿ ಶರಣ ಚರಿತಾಮೃತಗಳನ್ನು ಪ್ರಕಟಿಸಿದ್ದಾರೆ. ಮಹಾತ್ಮರ ತತ್ವಗಳು ಜಿಲ್ಲೆಯ ಜನತೆಗೆ ತಿಳಿಸುವಲ್ಲಿ ಪ್ರಮಾಣಿಕ ಪ್ರಯತ್ನ ಇವರದು. ಅಲ್ಲದೇ ವೀರಸಂಗಯ್ಯನ ಭಜನೆ ಪುಸ್ತಕ ಪ್ರಕಟಿಸಿದ್ದಾರೆ. ಶಿವಶರಣ ಬೊಮ್ಮಗೊಂಡೇಶ್ವರರು ಎಂಬ ಲೇಖನದಲ್ಲಿ ಶಿವಶರಣ ಬೊಮ್ಮಗೊಂಡೇಶ್ವರ ಸಂಕ್ಷಿಪ್ತ ಜೀವನವನ್ನು ವಿವರಿಸಿದ್ದಾರೆ. ವೀರಸಂಗಯ್ಯನವರ ಅಂಕಿತ ವನ್ನಾಗಿ ಇಟ್ಟುಕೊಂಡು ವಚನಗಳನ್ನು ರಚಿಸಿದ್ದಾರೆ.

"ಕಾಮ, ಕ್ರೋಧವ ತುಳಿದು, ಲೋಭ ಮೋಹಗಳಿಗೆ
ಬಡಿದೊಡಿಸಿ ಮದ-ಮತ್ಸರಗಳಿಗೆ ದಾಸೋಹವ ಗೈದು ಬೀದರ ನಗರದ
ತನ್ನ ರಾಜ್ಯವನ್ನೆಲ್ಲ ಶಿವನ ಸಾಮ್ರಾಜ್ಯವ ಗೈದು
ಭವಿಗಳನ್ನೆಲ್ಲ ಶಿವಲಿಂಗವ ಕಟ್ಟಿ ಶಿವಲೋಕವ ಗೈದ
ಗುರು ವೀರಸಂಗಯ್ಯನ ನೆನೆದು ಶರಣಾದೆನು ಬಸವಣ್ಣ"

(ಶರಣ ಸೌರಭ:೧೯೯೧:೫೨-೫೩)

ವೀರಸಂಗಯ್ಯನ ಶಿಷ್ಯ ಬೊಮ್ಮಗೊಂಡೇಶ್ವರರ ಗುರು ಭಕ್ತಿಯ ವಿಚಾರವನ್ನು ಈ ಮೇಲಿನ ವಚನದಿಂದ ಕಂಡುಕೊಳ್ಳಬಹುದು. ಇಂತಹ ಅನೇಕ ಶರಣರ ಮಹಾತ್ಮತೆಯನ್ನು ಸ್ಥಳೀಯ ಪತ್ರಿಕೆಯ ಮೂಲಕ ಜನತೆಗೆ ತಿಳಿಸಿದ್ದವರು ಶಾಂತಲಿಂಗಯ್ಯಾ ಸ್ವಾಮಿಗಳು. ಅಲ್ಲದೆ ಜಂಗಮ ಕಾಯಕವನ್ನು ಮುಂದುವರೆಸಿಕೊಂಡು ಪೂಜಾ - ಪಾಠದಿಗಳಲ್ಲಿ ಭಕ್ತಿಯಿಂದ ಕಾಪಾಡಿಕೊಂಡು ಬರುತ್ತಿರುವರು.

**೧.೨.೧೬. ಬಸವರಾಜ ಮಠಪತಿ :** ಹುಮನಾಬಾದ ತಾಲ್ಲೂಕಿನ ನಿರ್ಣಾ ಗ್ರಾಮದವರಾಗಿ ದ್ದಾರೆ. ವೃತ್ತಿಯಲ್ಲಿ ರೇಷ್ಮೆ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಇವರು 'ನಾನು ಮತ್ತು

ನಮ್ಮವರು' ಸಂಪಾದಿತ ಪುಸ್ತಕ ಹೊರ ತಂದಿದ್ದಾರೆ. 'ಶಾರದಾಸುತ' ಕಾವ್ಯ ನಾಮದಿಂದ ಸಾಹಿತ್ಯ ರಚನೆ ಮಾಡುತ್ತಿರುವರು. ಅಲ್ಲದೇ ರೇಷ್ಮೆಗೆ ಸಂಬಂಧಿಸಿದ ಲೇಖನಗಳು ಇತರ ಲೇಖನಗಳಲ್ಲಿ ವೈಚಾರಿಕತೆಯ ದೃಷ್ಟಿಕೋನಗಳಿಂದ ಸಾಹಿತ್ಯ ರಚಿಸಿದುಂಟು. ರೇಷ್ಮೆ ಇಲಾಖೆಯಲ್ಲಿ ಇದ್ದರೂ ಸದಾ ಸಾಹಿತ್ಯದ ಕಡೆಗೆ ಒಲವು ಅವರದು, ಹುಮನಾಬಾದಿನಲ್ಲಿ ನಡೆಯುವ ಕನ್ನಡಪರ ಸಂಸ್ಥೆಗಳ ಕಾರ್ಯಕ್ರಮದಲ್ಲಿ ಭಾಗಿಯಾಗಿ ತಮ್ಮ ಸಹಕಾರ, ಸಲಹೆ ಗಳನ್ನು ನೀಡಿ ಪ್ರೋತ್ಸಾಹಿಸುತ್ತಿರುತ್ತಾರೆ. ಅನೇಕ ಕವನಗಳು, ಲೇಖನಗಳು ಇಂದಿಗೂ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಿಸುತ್ತಿರುತ್ತಾರೆ.

**೧.೨.೧೭. ಸುರೇಶ ಸ್ವಾಮಿ ಗೋರ್ಟಾ :** ಸುರೇಶ ಸ್ವಾಮಿಗಳು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾ ಗ್ರಾಮದವರಾಗಿದ್ದಾರೆ. ಧರ್ಮದ ಬಗ್ಗೆ ಅಪಾರ ಕಾಳಜಿವುಳ್ಳವರಾಗಿದ್ದು, ಅವರು ಧರ್ಮಕ್ಕೆ ಸಂಬಂಧಿಸಿದ ಗ್ರಂಥವನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. 'ಧರ್ಮ ಮತ್ತು ರಾಷ್ಟ್ರ' 'ಮಾನವನ ಧರ್ಮ ಶಾಸ್ತ್ರ' ಎಂಬ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಸಂಪೂರ್ಣವಾಗಿ ಧರ್ಮ ಎಂದರೇನು? ಅದರ ಮಹತ್ವ ಮತ್ತು ಲಕ್ಷಣಗಳ ಕುರಿತು ವಿಷಯ ದಾಖಲಿಸಿದ್ದಾರೆ.

**೧.೨.೧೮. ವಿ. ಎನ್. ಮಠಪತಿ :** ವಿ. ಎನ್. ಮಠಪತಿ ಹುಮನಾಬಾದ ತಾಲ್ಲೂಕಿನವರು, ಯುವ ಪ್ರತಿಭಾವಂತ ಬರಹಗಾರರಾಗಿದ್ದು ಅನೇಕ ಕಥೆ, ಕವನಗಳನ್ನು ರಚಿಸಿದ್ದಾರೆ. ಇವರ ಎಲ್ಲಾ ಬರಹಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಅಲ್ಲದೆ 'ಕುಟುಂಬ ಯೋಜನೆ ಕುರಿತಂತೆ' ಬರೆದ ಲೇಖನಗಳು ಗುಲಬರ್ಗಾ ಆಕಾಶವಾಣಿಯಿಂದ ಬಿತ್ತರಿಸಿದೆ. ವೈಚಾರಿಕ ಮತ್ತು ಪ್ರಸ್ತುತ ವಿಚಾರಗಳ ದೃಷ್ಟಿಯನ್ನು ಇಟ್ಟುಕೊಂಡು ಬರೆದವುಗಳಾಗಿವೆ. ಕನ್ನಡ ನಾಡು, ನುಡಿಯ ಬಗ್ಗೆ ಚಿಂತನೆ ಮಂಥನ ಗಳಲ್ಲಿ ತೊಡಗಿಸಿಕೊಳ್ಳುವರು.

**೧.೨.೧೯. ರಾಜಶೇಖರಯ್ಯಾ ಸ್ವಾಮಿ ಗೋರ್ಟಾ :** ಇವರು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾ ಗ್ರಾಮದವರು. ಯುವ ಬರಹಗಾರರು, ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವ ಮಾದರಿಯಲ್ಲಿ ತಮ್ಮ ಸೇವೆಯನ್ನು ಮಾಡುವರು. ಎಂ. ಎ. ಮುಗಿಸಿ ಕೊಂಡು ಸದ್ಯ ಬೆಂಗಳೂರ ವಿಶ್ವವಿದ್ಯಾಲಯದಲ್ಲಿ ಪಂಚಾಚಾರ್ಯರು ಕುರಿತು ಪಿಎಚ್. ಡಿ. ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ನೇಪಾಳ ಮತ್ತು ದೇಶದ ತುಂಬಾ ಸಂಚಾರ ಮಾಡಿ ವೀರಶೈವ ಧರ್ಮದ ಬಗ್ಗೆ ಅನೇಕ ಸಂಶೋಧಿತ ಲೇಖನಗಳನ್ನು ಪ್ರಕಟಿಸಿದ್ದಾರೆ. ಶಾಸನಗಳಲ್ಲಿ ಪಂಚಾಚಾರ್ಯರು ಕಿರು ಹೊತ್ತಿಗೆ ಪ್ರಕಟಿಸಿ ಪಂಚಾಚಾರ್ಯರ ಇತಿಹಾಸಕ್ಕೆ ಅಮೂಲ್ಯ

ಕೊಡುಗೆ ಕೊಟ್ಟಿದ್ದಾರೆ. ಇನ್ನೊಂದು 'ಕಲ್ಯಾಣ ಕಲ್ಪ' ಎಂಬುವ ಪುಸ್ತಕವನ್ನು ಸಂಪಾದಿಸಿದ್ದಾರೆ. ಇವರಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ತತ್ವಗಳು, ಧರ್ಮ ಬೋಧನೆಗಳ ಕುರಿತು ಮೌಲಿಕ ಲೇಖನಗಳು ಒಳಗೊಂಡಿವೆ. ಸದಾ ಅಧ್ಯಯನದಲ್ಲಿ ಇರುತ್ತಾರೆ. ಸಂಗೀತ ರಂಗದಲ್ಲಿ ಆಸಕ್ತಿಯಿದೆ. ಜೊತೆಗೆ ಜಿಲ್ಲೆಯಲ್ಲಿ ನಡೆಯುವ ಪ್ರತಿಯೊಂದು ಧಾರ್ಮಿಕ ಕಾರ್ಯಗಳಲ್ಲಿ ಭಾಗಿಯಾಗುತ್ತಾರೆ. ಕನ್ನಡ - ನಾಡು - ನುಡಿಯ ಬಗ್ಗೆ ತುಂಬ ಗೌರವವುಂಟು. ಸದ್ಯ ಬಸವಕಲ್ಯಾಣ ತಾಲ್ಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮತ್ತು ಜಿಲ್ಲೆಯ ಜಂಗಮರ ಕ್ಷೇತ್ರಾಭಿವೃದ್ಧಿ ಸಂಘದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಸೀದಾ-ಸಾದಾ ಸಜ್ಜನಿಕೆಗೆ ಪಾತ್ರರಾಗಿ ಪೂಜಾ, ರುದ್ರಾ ಓದುವುದು ಜಂಗಮ ಕಾಯಕ ಮಾಡುವಲ್ಲಿಯೇ ತೊಡಗುತ್ತಾರೆ.

ಇನ್ನು ಅನೇಕ ಜಂಗಮರು ಸಾಹಿತ್ಯದಲ್ಲಿ ತೊಡಗಿಸಿಕೊಂಡಿರುವವರನ್ನು ಕಾಣುತ್ತೇವೆ. ಇವರು ಸ್ಥಳೀಯ ಪತ್ರಿಕೆಗಳಲ್ಲಿ ಹಲವಾರು ಸ್ಮರಣ ಸಂಚಿಕೆಗಳಲ್ಲಿ ಕವನ ಪ್ರಬಂಧ ಪ್ರಕಟಗೊಂಡಿವೆ. ಅವರುಗಳು ಕೆಳಗಿನಂತೆ ಕಂಡುಕೊಳ್ಳಬಹುದು. ರುದ್ರಮುನಿ ಶಾಸ್ತ್ರಿ, ಪ್ರೊ. ಚಿತ್ಕಲಾ ಸಾಲಿಮಠ, ಜಗದೇವಯ್ಯಾ ಮಠಪತಿ, ಶಿವಕುಮಾರ ಡಾಕುಳಗಿ, ಬಾಬುರಾವ ವಡ್ಡೆ, ಮುಂತಾದವರು ಜಿಲ್ಲೆಯ ಸಾಹಿತ್ಯ ಕ್ಷೇತ್ರವನ್ನು ಗಟ್ಟಿ ಮಾಡಲು ಜಂಗಮ ಸಾಹಿತಿಗಳು ಪ್ರಯತ್ನಿಸುತ್ತಿರುವರು. ಹೀಗೆ ಜಿಲ್ಲೆಯಲ್ಲಿ ಜಂಗಮರ ಮಠಗಳಿಂದ ಹಿಡಿದು ಜಂಗಮ ವ್ಯಕ್ತಿಗಳು ತಮಗೆ ಕೈಲಾದ ಮಟ್ಟಿನಲ್ಲಿ ಸಾಹಿತ್ಯದ ಹಲವಾರು ಪ್ರಕಾರದಲ್ಲಿ ಸಾಹಿತ್ಯ ರಚನೆ ಮಾಡಿ ಜಿಲ್ಲೆಯ ಸಾಹಿತ್ಯ ರಂಗಗಕ್ಕೆ ಜಂಗಮರು ಅಲ್ಪ - ಸ್ವಲ್ಪ ಕೊಟ್ಟ ಕೊಡುಗೆಯಾಗಿದೆ. ಅದರಲ್ಲಿ ಜಂಗಮ ಸಮುದಾಯದ ಸ್ಥಿತಿಗತಿಗಳ ಕುರಿತು ಸಾಹಿತ್ಯ ರಚನೆಯಾಗಿಲ್ಲವೆನ್ನಬಹುದು.

## ೨. ಸಂಗೀತ ಕಲೆ

ಕಲೆ ಎಂದರೆ ಮಾಡಿದ ತೋರಿದ ಕುಶಲತೆ, ಜಾಣ್ಮೆ, ಸತ್ಯತೆ, ಶುದ್ಧತೆ ಮತ್ತು ವಾಸ್ತವಿಕತೆ ನೆಲೆಸಿದಾಗ ಕಲೆಗೊಂದು ಸೌಂದರ್ಯ ಉಂಟಾಗುತ್ತದೆ. ಕಲಾಪೂರ್ಣ ಲಲಿತ ಸುಂದರ ಪ್ರತಿಭೆಯ ಸಾಕಾರವೇ ಕಲೆ ಎಂಬ ಮಾತುಗಳನ್ನು ಕಲೆಯ ಅರ್ಥ ವಿವರಣೆ ನೀಡಬಹುದಾದರೂ 'ಪ್ರತಿಭೆಯ ಕಲೆಯ ಅಭಿವ್ಯಕ್ತ ವಿಕಾಸ ರೂಪವೇ ಕಲೆ ಎನ್ನಬಹುದು'(ಮಹಾದೇವಿ ಮಾತೆ:೫೨೦). ಹಿಂದೆ ಪ್ರಸಿದ್ಧವಾದ ೬೪ ಕಲೆಗಳನ್ನು ಗುರುತಿಸಲಾಗಿದ್ದು ಅದರಲ್ಲೂ ಶಿಲ್ಪಕಲೆ, ನಾಟ್ಯಕಲೆ, ಚಿತ್ರಕಲೆ ಇತ್ಯಾದಿ ಕಲೆಗಳು ಸೇರಿ ಒಟ್ಟು ೬೪ ಕಲೆಗಳಿವೆ ಎಂದು ಪ್ರಾಚೀನ ಶಾಸ್ತ್ರಕಾರರು ಗುರುತಿಸಿದ್ದಾರೆ.

ಬೀದರ ಜಿಲ್ಲೆಯ ಜಂಗಮರು ಸಂಗೀತ ಕಲೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಈ ಜಿಲ್ಲೆಯ ಸಂಗೀತ ಕಲಾವಿದರೂ ಪ್ರತಿಭಾ ಸಂಪನ್ನರು. ಆದರೆ ಅವರಿಗೆ ಸೂಕ್ತ ಪ್ರೋತ್ಸಾಹ ಕೊರತೆ ಅಧಿಕ. ಇಲ್ಲಿಯ ಸಂಪನ್ಮೂಲಕ್ಕನುಗುಣವಾಗಿ ಬೀದರ ಜಿಲ್ಲೆಯ ಸಂಗೀತಗಾರರು ನಿಜಕ್ಕೂ ಪ್ರಶಂಸಾರ್ಹರೆಂದು ಹೇಳಬಹುದು.

ಜಂಗಮರು ಸದಾ ಧಾರ್ಮಿಕ ಕಾಯಕದಲ್ಲಿ ತೊಡಗಿಸಿಕೊಂಡಿರುವುದರಿಂದ ಭಕ್ತಿ ಭಾವದ ಸಂಗೀತ ಕಲೆಯಲ್ಲಿ (ಹೆಚ್ಚಿನ ಪ್ರೋತ್ಸಾಹ) ಅಥವ ಸಂಗೀತ ಕ್ಷೇತ್ರದಲ್ಲಿ (ಜಂಗಮರ ಮಠಗಳು) ಸರ್ವತೋಮುಖ ಬೆಳವಣಿಗೆಗಾಗಿ ಅದರ ಶ್ರೇಯಾಭಿವೃದ್ಧಿಗಾಗಿ ಜೀವಮಾನವಿಡಿ ಗಾಯಕರಾಗಿ, ವಾದಕರಾಗಿ ಸಂಗೀತಗಾರರಾಗಿ ಬೀದರ ಜಿಲ್ಲೆಯಲ್ಲಿ ದುಡಿಯುತ್ತಿರುವರು. ಜೊತೆಗೆ ಸಂಗೀತ ಶಿಕ್ಷಕರಾಗಿ, ಸಂಗೀತ ಕಛೇರಿಗಳನ್ನು ನೀಡಿ, ಸಂಗೀತ ಸಂಸ್ಥೆಗಳನ್ನು ಸ್ಥಾಪಿಸಿ ಪ್ರತಿಭಾವಂತ ಶಿಷ್ಯರನ್ನು ತಯಾರಿಸಿ ಸಂಗೀತ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಅನೇಕ ಜನ ಜಂಗಮ ಸಂಗೀತ ಕಲಾವಿದರು ಬೀದರ ಜಿಲ್ಲೆಯಲ್ಲಿದ್ದಾರೆ. ಅಂತಹ ಕಲಾವಿದರನ್ನು ಕೆಳಗಿನಂತೆ ಗುರುತಿಸಬಹುದಾಗಿದೆ.

**೨.೧. ನೂರಂದಯ್ಯ ಸ್ವಾಮಿ ಗವಾಯಿಗಳು :** ಬಸವಕಲ್ಯಾಣ ತಾಲೂಕಿನ ಗಡಿಗೌಡಗಾಂವದವರಾದ ನೂರಂದಯ್ಯಾ ಸ್ವಾಮಿ ಗವಾಯಿಗಳು ಬೀದರ ಜಿಲ್ಲೆಯ ಹಿರಿಯ ತಲೆಮಾರಿನ ಸಂಗೀತಗಾರರಲ್ಲೊಬ್ಬರು. ಅವರೊಬ್ಬ ಉತ್ತಮ ಹಾರ್ಮೋನಿಯಂ ವಾದಕರು. ಅತ್ಯುತ್ತಮ ಗಾಯಕರು, ಅನೇಕ ನಾಟಕಗಳಿಗೆ ಸಂಗೀತ ನಿರ್ದೇಶನವನ್ನು ಮಾಡಿ ಬೀದರ ಜಿಲ್ಲೆಯ ಗ್ರಾಮೀಣ ರಂಗಭೂಮಿಗೆ ತಮ್ಮ ಅಮೂಲ್ಯ ರಂಗ ಸಂಗೀತ ಸೇವೆ ಸಲ್ಲಿಸಿದ್ದಾರೆ. ಅಲ್ಲದೆ ಜಿಲ್ಲೆಯ ಹಲವಾರು ಭಾಗಗಳಲ್ಲಿ ಕಾರ್ಯ ಕ್ರಮಗಳನ್ನು ನೀಡಿ ಸಂಗೀತ ಆಸಕ್ತರಿಗೆ ಮತ್ತು ಸಂಗೀತ ಕಲಿಯಲು ಪ್ರೋತ್ಸಾಹವನ್ನು ಹುಟ್ಟುವಂತೆ ಮಾಡಿ ಅನೇಕ ಯುವ ಸಂಗೀತಗಾರರಿಗೆ ಸಂಗೀತ ಶಿಕ್ಷಣವನ್ನು ನೀಡಿ ಜನಮನಗಳಿಸಿದವರು.

**೨.೨. ರಾಚೋಟ ತಂದೆ ಶರಣಯ್ಯಾ ಮಠಪತಿ :** ಇವರು ಬಸವಕಲ್ಯಾಣ ತಾಲೂಕಿನ ಗೋರಟಾ (ಬಿ) ಗ್ರಾಮದವರು. ಹಿರಿಯ ಸಂಗೀತಗಾರರು ಹುಟ್ಟಿನಿಂದಲೂ ಸಂಗೀತದಲ್ಲಿ ತುಂಬಾ ಆಸಕ್ತರು ಅಂತೆಯೇ ತಮ್ಮ ಪ್ರತಿಭೆಯಿಂದ ಚಿಕ್ಕವಯಸ್ಸಿನಲ್ಲಿ ಹಾರ್ಮೋನಿಯಂ ಕುರಿತು ಪ್ರಭುತ್ವ ವನ್ನು ಪಡೆದು ಯಶಸ್ವಿಯಾದವರು. ಇವರು ಪಂ. ಪಂಚಾಕ್ಷರಿ ಗವಾಯಿಗಳಿಗೆ ಗುರುಗಳನ್ನಾಗಿ ಮಾಡಿ ಕೊಂಡವರು. ಜಿಲ್ಲೆಯಲ್ಲಿ ಅನೇಕ ನಾಟಕಗಳಲ್ಲಿ ಅಭಿನಯಿಸಿ, ಸಂಗೀತ ನಿರ್ದೇಶಕರಾಗಿ ಸಂಗೀತ ಕ್ಷೇತ್ರದಲ್ಲಿ ಸೇವೆ ಮಾಡಿ ತಮ್ಮ ಇಪ್ಪತ್ತೈನೆಯ

ವಯಸ್ಸಿನಲ್ಲಿಯೇ ರಜಾಕಾರರ ಹತ್ಯಕಾಂಡದಲ್ಲಿ ತನ್ನ ನೆಲೆಲದ ಸಂಸ್ಕೃತಿಯನ್ನು ರಕ್ಷಿಸುವಲ್ಲಿ ವೀರಮರಣವನ್ನಪ್ಪಿದರು. ಇಂತಹ ಧೀಮಂತ ವ್ಯಕ್ತಿಯ ಶಿಷ್ಯರುಗಳು ಅನೇಕರು. ಅವರಲ್ಲಿ ಗೋರಟಾದ ಶ್ರೀ ರುದ್ರ ಸಂಗೀತ ಸಂಘದ ಅಧ್ಯಕ್ಷರಾದ ಶ್ರೀ ವೀರುಪಾಕ್ಷಯ್ಯ ಮತ್ತು ಉಪಾಧ್ಯಕ್ಷರಾದ ಶ್ರೀ ವೀರೂಪಾಕ್ಷಯ್ಯಾ ಸ್ವಾಮಿ ಮೇಲಗಲಿ ಪ್ರಮುಖರಾಗಿದ್ದಾರೆ. ಇವರ ತಮ್ಮ ಗುರುಗಳ ದಾರಿಯಲ್ಲಿಯೇ ನಡೆದು ಇಂದು ತಮ್ಮ ಗುರುಗಳ ಹೆಸರು ಮಾಡಿದ್ದಾರೆ.

**೨.೩. ರೇವಣಯ್ಯಾ ತಂದೆ ಶಿವಲಿಂಗಯ್ಯಾ ಮಠಪತಿ :** ಇವರು ಕೂಡ ಬಸವಕಲ್ಯಾಣ ತಾಲೂಕಿನ ಗೋರಟಾ (ಬಿ) ಗ್ರಾಮದವರು. ಹಾರ್ಮೋನಿಯಂ ವಾದಕದಲ್ಲಿ ತುಂಬ ಪರಿಣಿತಿಯನ್ನು ಪಡೆದುಕೊಂಡವರು ಭಕ್ತಿ ಸಂಗೀತದಲ್ಲಿ ತುಂಬ ಹೆಸರುವಾಸಿಯಾದವರು. ಗಾಯನಯೋಗಿ ಪಂ. ಪಂಚಾಕ್ಷರಿ ಗವಾಯಿಗಳ ಶಿಷ್ಯರಾಗಿದ್ದಾರೆ. ಅವರಂತೆ ಅನೇಕ ಶಿಷ್ಯರನ್ನು ಪ್ರೋತ್ಸಾಹಿಸಿ ಬೆಳೆಸಿದ್ದಾರೆ. ಜಿಲ್ಲೆಯಲ್ಲಿ ಸಂಗೀತ ಸ್ಪರ್ಧೆಯನ್ನು ಇಡುವುದರ ಮೂಲಕ ಸಂಗೀತ ಬೆಳೆಸುವಲ್ಲಿ ಪ್ರಮುಖರಾಗಿದ್ದಾರೆ.

**೨.೪. ವಿರೂಪಾಕ್ಷಯ್ಯ ಸ್ವಾಮಿ ಗೋರ್ಟಾ(ಬಿ) :** ಇವರು ಬಸವಕಲ್ಯಾಣ ತಾಲೂಕಿನ ಗೋರ್ಟಾ(ಬಿ) ಗ್ರಾಮದವರು. ಇವರು ಸಂಗೀತ ಕ್ಷೇತ್ರ ಕೊಟ್ಟ ಕೊಡುಗೆ ಅಪಾರ ಜಿಲ್ಲೆಯ ಹಿರಿಯ ಸಂಗೀತಗಾರರಲ್ಲಿ ಒಬ್ಬರು ಹೈದ್ರಾಬಾದದ 'ಸಿತಾರ' ವಿದ್ವಾನ್. ಪಂ ನಾಗೇಶ ದಿವಾಣ ಅವರ ಮಾರ್ಗದರ್ಶನದಲ್ಲಿ 'ಸಿತಾರ' ವಾದನದಲ್ಲಿ ಸಂಗೀತರ ಅಲಂಕಾರ ಪದವಿಯನ್ನು ಪಡೆದವರು. ಸಂಗೀತವು ಜಿಲ್ಲೆಯಲ್ಲಿ ಬೆಳಸಬೇಕೆಂದು ಗೋರ್ಟಾ ಗ್ರಾಮದಲ್ಲಿ ಶ್ರೀ ಸಂಗೀತ ರುದ್ರ ಸಂಘವನ್ನು ಸ್ಥಾಪಿಸಿದರು. ಇದರ ಅಧ್ಯಕ್ಷರಾಗಿ ಐವತ್ತು ವರ್ಷಗಳಿಂದ ನಾಡಿನದ್ಯಾಂತ ಅನೇಕ ಸಂಗೀತರುದ್ರ ಕಾರ್ಯಕ್ರಮಗಳನ್ನು ನೀಡಿ ತಮ್ಮ ಸಂಸ್ಥೆಯ ಮೂಲಕ ಹೈದ್ರಾಬಾದ ಸಂಗೀತ ಸಮ್ಮೇಳನ ನಡೆಸಿ ಸಂಗೀತ ಆಸಕ್ತರಿಗೆ, ಸಂಗೀತ ಪ್ರೇಮಿಗಳಿಗೆ ಆನಂದಿಸಿದವರು. ಸಂಗೀತ ಜಿಲ್ಲೆಯಲ್ಲಿ ಪ್ರಸಾರ ಮಾಡಬೇಕೆಂದು ೧೯೫೪ ರಲ್ಲಿ ಶಾರದಾ ಸಂಗೀತ ವಿದ್ಯಾಲಯ ಸ್ಥಾಪಿಸಿ ಅದರ ಮೂಲಕ ಅನೇಕ ಶಿಷ್ಯವೃಂದವನ್ನು ಬೆಳೆಸಿದ ಶ್ರೇಯಸ್ಸು ಅವರದು. ರುದ್ರದ ನಮಕು ಚಮಕಗಳಿಗೆ ಸ್ವರ ಸಂಯೋಜಿಸಿರುವ ಅನೇಕ ಸ್ವರಲಿಪಿ ಬಂದಿಶ್‌ಗಳು ಮತ್ತು 'ಕನ್ನಡ ಲಕ್ಷಣಗೀತ' ಮುಂತಾದವುಗಳು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಇವರ ಸ್ಥಾಪಿಸಿದ ಶಾರದಾ ಸಂಗೀತ ವಿದ್ಯಾಲಯದ ಸಂಗೀತ ಕೊಡುಗೆ ಮತ್ತು ವೀರಪಾಕ್ಷನವರ ಸಂಗೀತ ಸೇವೆಯ ಕುರಿತು ಉತ್ತರ ಪ್ರದೇಶದ ಸಂಗೀತ ಹಿಂದಿ ಮಾಸಿಕ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ(ಮಠಪತಿ ಸಿದ್ರಾಮಯ್ಯ:೧೯೯೪:೬೦). ಅಲ್ಲದೆ ಅನೇಕ ಸಂಘ ಸಂಸ್ಥೆಗಳಿಂದ

ಪ್ರಶಸ್ತಿ ಪಡೆದುಕೊಂಡವರು. ಅಲ್ಲದೆ ಕರ್ನಾಟಕ ಸರಕಾರದಿಂದ ರಾಜ್ಯ ಪ್ರಶಸ್ತಿ ಪಡೆದು ಕೊಂಡವರು.

ಹೀಗೆ ಸಂಗೀತ ಸೇವೆಯನ್ನು ಮಾಡುತ ಅನೇಕ ಶಿಷ್ಯ ಬಳಗವನ್ನು ತಯಾರಿಸಿ ಸಂಗೀತ ಕ್ಷೇತ್ರವನ್ನು ವಿಸ್ತರಿಸಿದ ಕೀರ್ತಿ ವಿರೂಪಾಕ್ಷಯ್ಯನವರಿಗೆ ಸಲ್ಲುತ್ತದೆ. ಪ್ರಮುಖ ಶಿಷ್ಯರಾದ ಪ್ರೊ. ಸಿದ್ರಾಮಯ್ಯ ಸ್ವಾಮಿ, ಚನ್ನಬಸಯ್ಯ ಸ್ವಾಮಿ ವಡಗಾಂವ, ಗುರುಲಿಂಗಪ್ಪ, ವೀರಶೆಟ್ಟೆಪ್ಪ ಬಾವುಗೆ, ನಾಗಶೆಟ್ಟೆಪ್ಪ ಹೂಗಾರ, ಲಿಂ. ರೇವಣಪ್ಪ ಹೂಗಾರ, ಶ್ರೀಮತಿ ಸರಸ್ವತಿ ಪಾಟೀಲ, ಬೇಲೂರದ ಶ್ರೀ ವೀರಶೆಟ್ಟೆಪ್ಪ, ಮುಚಳಂಬಿಯ ರೇವಪ್ಪ ಮಾಸ್ತರ, ಮತ್ತು ರಾಚಯ್ಯಸ್ವಾಮಿ ದುಬಲಗುಂಡಿ ಮುಂತಾದವರಿಗೆ ಬೆಳೆಸಿದ್ದಾರೆ. ಇಂದಿಗೂ ಪ್ರತಿ ವರ್ಷ ತಮ್ಮ ಶಾರದಾ ಸಂಗೀತ ಸಂಘದಿಂದ ಜಿಲ್ಲೆಯ ಅನೇಕ ಕಡೆ ಸಂಗೀತ ಕಾರ್ಯಕ್ರಮಗಳು ಹಮ್ಮಿಕೊಂಡು ಸಂಗೀತ ಬೆಳೆಸುವಲ್ಲಿ ಗೋರ್ಟಾ ಶಾರದಾ ಸಂಗೀತ ಸಂಘ ಪ್ರಮುಖವಾಗಿದೆ.

**೨.೫. ವಿರೂಪಾಕ್ಷ ಶಿವಲಿಂಗಯ್ಯ ಮಠಪತಿ :** ಗೋರಟಾ ಗ್ರಾಮದ ಸುಪ್ರಸಿದ್ಧ ಶ್ರೀ ಸಂಗೀತ ರುದ್ರ ಸಂಘದ ಉಪಾಧ್ಯಕ್ಷರಾದ ವಿರೂಪಾಕ್ಷಯ್ಯನವರು ಬೀದರ ಜಿಲ್ಲೆಯ ಹಿರಿಯ ಸಂಗೀತ ಗಾರರಲ್ಲೊಬ್ಬರು. ಗೋರ್ಟಾ ಗ್ರಾಮದ ಒಂದೇ ಹೆಸರಿನ ಉಭಯ ವೀರಪಾಕ್ಷಯ್ಯ ನವರು ಬೀದರ ಜಿಲ್ಲೆಯ ಸಂಗೀತ ಪರಂಪರೆಗೆ ಮಹತ್ವದ ಕಾರ್ಯವೆಸಗಿದ್ದಾರೆ. ಇವರು ಶಾರದಾ ಸಂಗೀತ ಸಂಘದ ಬೆಳವಣಿಗೆಯಲ್ಲಿ ಇವರ ಪಾತ್ರ ಗಮನಾರ್ಹವಾಗಿದೆ. ರಜಾಕಾರ ಹತ್ಯಾಕಾಂಡ ಕುರಿತು ರಚನೆಗೊಂಡ ಬುಲಾಯಿಪದ ಪುಸ್ತಕ ರಚನೆಯಲ್ಲಿ ವಿರೂಪಾಕ್ಷಯ್ಯನವರ ಪರಿಶ್ರಮ ಅಧಿಕವಾಗಿದೆ. ಉತ್ತಮ ಪುರಾಣಿಕರು, ಪುರಾಣಕೃತಿ ರಚನಕಾರರು, ಸಂಗೀತ ನಿರ್ದೇಶಕರು ಅಲ್ಲದೆ ಅನೇಕ ನಾಟಕಗಳಿಗೆ ನಿರ್ದೇಶನ ನೀಡಿದ್ದು ಬಹುಮುಖ ಪ್ರತಿಭೆಗೆ ಸಾಕ್ಷಿಯಾಗಿದೆ.

**೨.೬. ಚನ್ನಯ್ಯ ಸ್ವಾಮಿ ಮಠಪತಿ :** ಬಸವಕಲ್ಯಾಣ ತಾಲೂಕಿನ ಮಂತಾಳದವರಾದ ಚನ್ನಯ್ಯಾ ಜಂಗಮರು ಬೀದರ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಶಾಸ್ತ್ರಿಯ ಸಂಗೀತವನ್ನು ಜನಪ್ರಿಯ ಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಅನೇಕ ಹಳ್ಳಿಗಳಲ್ಲಿ ನಾಟಕ ಕಲಿಸಿ ಸಂಗೀತ ವಿದ್ಯಾ ನೀಡಿ ಸಂಗೀತ ಕಲೆ ಜಿಲ್ಲೆಯಲ್ಲಿ ಶಾಶ್ವತವಾಗಿ ನೆಲೆಯೂರಲು ಪರಿಶ್ರಮ ಪಟ್ಟಿದ್ದಾರೆ.

**೨.೭. ಸಿದ್ರಾಮಯ್ಯ ಸ್ವಾಮಿ ದುಬಲಗುಂಡಿ :** ಇವರು ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ದುಬಲಗುಂಡಿ ಗ್ರಾಮದವರು ಹಿರಿಯ ಸಂಗೀತ ಕಲಾವಿದರಲ್ಲಿ ಒಬ್ಬರು. ಶರಣರ ತತ್ವ ಪದಗಳು (ಸಾಹಿತ್ಯ) ಹಾಗೂ ಅನುಭವಪದಗಳನ್ನು ಮನಮುಟ್ಟುವಂತೆ ಸುಶ್ರಾವ್ಯವಾಗಿ

ಹಾಡುವವರು ಜೊತೆಗೆ ತಬಲ, ಹಾರ್ಮೋನಿಯಂ ವಾದಕರಾಗಿದ್ದಾರೆ. ಸದಾ ಭಜನೆ ಕೀರ್ತನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

**೨.೮. ಗುರುಪಾದಯ್ಯ ಶಂಕರಗುಡಿ :** ಇವರು ಬಸವಕಲ್ಯಾಣದವರಾಗಿದ್ದಾರೆ. ಬಸವ ಕಲ್ಯಾಣದ ಶಂಕರದೇವಲಾಯದ ಪ್ರಮುಖ ಪೂಜಾರಿ ಯಾಗಿದ್ದಾರೆ. ಅದಕ್ಕಾಗಿ ಶಂಕರಗುಡಿ ಗುರುಪಾದಯ್ಯ ನೆಂದೆ ಹೆಸರುವಾಸಿಯಾಗಿದ್ದಾರೆ. ಹಿರಿಯ ತಲೆಮಾರಿನ ಸಂಗೀತಗಾರರು. ಬೀದರ ಜಿಲ್ಲೆಯ ಮೊದಲ ಪಿಟಿಲುವಾದಕರಾಗಿದ್ದಾರೆಂದು ಸಹ ಕರೆಯುವದುಂಟು.

**೨.೯. ಪ್ರಭುಲಿಂಗ ಸ್ವಾಮಿ ಮೇಹಕರ ಹಾಗೂ ಚನ್ನಬಸಯ್ಯಾ ಸ್ವಾಮಿ ಮೇಹಕರ :** ಭಾಲ್ಕಿ ತಾಲೂಕಿನ ಮೇಹಕರ ಗ್ರಾಮದವರಾದ ಈ ಇಬ್ಬರೂ ಸಹೋದರರು ಹುಟ್ಟಿನಿಂದ ಸಂಗೀತದಲ್ಲಿ ತುಂಬ ಆಸಕ್ತಿಯನ್ನು ಬೆಳೆಸಿಕೊಂಡವರು ತಬಲ ವಾದದಲ್ಲಿ ಜಿಲ್ಲೆಯ ಕಲಾವಿದರಲ್ಲಿ ಪ್ರಮುಖರಾಗಿದ್ದಾರೆ. ಇವರ ಸಹೋದರರ ತಬಲ ಕಲೆಯನ್ನು ನೋಡಿ ನಲಿಯುವದೇ ಒಂದು ಸಂತೋಷ. ಇವರು ಸದ್ಯಾ ಮಹಾರಾಷ್ಟ್ರದಲ್ಲಿ ಸಂಗೀತ ಸೇವಾ ಕಾರ್ಯಾದಲ್ಲಿ ಭಾಗಿಯಾಗಿದ್ದಾರೆ.

**೨.೧೦. ಪ್ರೊ. ದ್ರಾಮಯ್ಯ ಸ್ವಾಮಿ ಗೋರ್ಟಾ :** ಇವರು ಬಸವಕಲ್ಯಾಣ ತಾಲೂಕಿನ ಗೋರ್ಟಾ ಗ್ರಾಮದವರು. ಸುಪ್ರಸಿದ್ಧ ಶ್ರೀ ಸಂಗೀತ ರುದ್ರ ಸಂಘದ ಅಧ್ಯಕ್ಷರಾದ ಶ್ರೀ ವಿರೂಪಾಕ್ಷ ಸ್ವಾಮಿ ಪುತ್ರರು. ಜಿಲ್ಲೆಯ ಯುವ ಸಂಗೀತಗಾರರಲ್ಲಿ ಪ್ರಮುಖರಾಗಿದ್ದಾರೆ. ಇವರು ಬಾಗಲಕೋಟೆಯ ಬಸವೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಸಂಗೀತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕರ್ನಾಟಕದ ಹಲವಾರು ಕಡೆ ಸಂಗೀತ ಕಾರ್ಯಕ್ರಮಗಳನ್ನು ನೀಡಿದಲ್ಲದೇ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಅನೇಕ ಕಡೆಗಳಲ್ಲಿ ಸಂಗೀತ ಸುಧೆಯನ್ನು ಹರಿಸಿ ಜಿಲ್ಲೆಗೆ ಹೆಸರು ಮಾಡಿದವರು.

ಪದ್ಮ ಭೂಷಣ ಪಂ. ಬಸವರಾಜ ಗುರು ಅವರ ಶಿಷ್ಯರಾದ ಪ್ರೊ. ಸಿದ್ರಾಮಯ್ಯಾನವರು ಸಂಗೀತಕ್ಕೆ ಸಂಬಂಧಿಸಿದ ಸುಮಾರು ೬೫ಕ್ಕೂ ಹೆಚ್ಚು ಸಂಶೋಧಿತ ಲೇಖನಗಳನ್ನು ತರಂಗ, ಪ್ರಜಾವಾಣಿ, ಸಂಯುಕ್ತಕರ್ನಾಟಕ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಹೀಗಾಗಿ ಇವರೊಬ್ಬರು ಉತ್ತಮ ಸಾಹಿತಿಗಳಾಗಿದ್ದಾರೆ. 'ಭಾರತ ಪ್ರಸಿದ್ಧ ಸಂಗೀತಗಾರರು' ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದು ಸಂಗೀತ ಕ್ಷೇತ್ರಕ್ಕೆ ನೀಡಿರುವುದು ಪ್ರಮುಖ ಕೃತಿಗಳಲ್ಲೊಂದಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖಾವತಿಯಿಂದ ಪ್ರೋತ್ಸಾಹ ಧನ ಎರಡು ಸಾವಿರ ರೂಪಾಯಿಗಳು ದೊರೆತಿವೆ. 'ಸಂಗೀತ ಶ್ರೀರುದ್ರ' ಇದು ಎರಡನೇ ಪುಸ್ತಕ ಗೋರ್ಟಾ 'ಸಂಗೀತ ರುದ್ರ'

ಸಂಘದ ಕುರಿತು 'ಭಾವಗುಚ್ಛ' ಎಂಬುದು ಅವರ ಸಂಪಾದಿತ ಕೃತಿಯಾಗಿದೆ.

ಪ್ರೊ. ಸಿದ್ರಾಮಯನವರ ಸಂಗೀತ ಸೇವೆಯನ್ನು ಮನಗಂಡು ಕರ್ನಾಟಕ ಸರಕಾರ ಸಂಗೀತ ಪಠ್ಯ ಪುಸ್ತಕ ರಚನಾ ಸಮಿತಿಗೆ ಸದಸ್ಯರನ್ನಾಗಿ ನೇಮಿಸಿಕೊಂಡಿದು ಜಿಲ್ಲೆಗೆ ಹೆಮ್ಮೆ ತಂದಿದೆ. ಈಗ ಉತ್ತರ ಕರ್ನಾಟಕದ ರಂಗ ಸಂಗೀತ ಕುರಿತು ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪಿಎಚ್.ಡಿ. ಅಧ್ಯಯನ ಕೈಗೊಂಡಿದ್ದಾರೆ. ಹೀಗೆ ಬಹುಮುಖ ಪ್ರತಿಭೆಯುಳ್ಳ ಸಿದ್ರಾಮಯ್ಯನವರು ಅನೇಕ ಯುವಕಲಾ ವಿದರನ್ನು ಬೆಳೆಸುವಲ್ಲಿ ಪರಿಶ್ರಮ ಅಪಾರ. ಸಂಗೀತಕ್ಕೆ ಸಂಬಂಧಿಸಿದ ಧ್ವನಿ ಸುರುಳಿಗಳು ಪ್ರಕಟಿಸಿ ಸಂಗೀತ ಪ್ರಸಾರ ಮಾಡುವಲ್ಲಿ, ಬೆಳೆಸುವಲ್ಲಿ ಪ್ರಮುಖ ಪಾತ್ರ ಇವರದಾಗಿದೆ.

**೨.೧೧. ಗದಗಯ್ಯ ಮಠಪತಿ :** ಹುಮನಾಬಾದ ತಾಲೂಕಿನ ರಾಜೋಳ ಗ್ರಾಮದವರಾದ ಶ್ರೀ ಗದಗಯ್ಯ ಮಠಪತಿಯವರು ಜಿಲ್ಲೆಯ ಉತ್ತಮ ತಬಲಾವಾದಕರಲ್ಲಿ ಒಬ್ಬರಾಗಿದ್ದಾರೆ. ಗುಲಬರ್ಗಾದ ಶ್ರೀ ಕೆ. ಎಸ್. ಹಡಪದ ಅವರ ಶಿಷ್ಯರಾದ ಶ್ರೀ ಗದಗಯ್ಯನವರು ಗುಲಬರ್ಗಾ ಆಕಾಶವಾಣಿಯ ಮೂಲಕ ತಬಲಾವಾದನ ಕಲೆ ಪ್ರಸಾರ ಮಾಡುತ್ತಿದ್ದಾರೆ. ಅವರಿಗೆ ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕಿನ ನಿಂಬರ್ಗಾದಲ್ಲಿ ಸರಕಾರಿ ಪ್ರೌಢ ಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ ಇವರು ಸರಳ ಜೀವಿಗಳು ಸದಾ ಸಂಗೀತದ ಹೊಸ ಹೊಸ ಪರಿಕಾರಗಳನ್ನು ಹುಡುಕುತ್ತಾ, ಬೆಳೆಸುತ್ತಾ ಸಾಗುವರು.

**೨.೧೨. ಸಿದ್ಧಯ್ಯ ಮಠ :** ಸಿದ್ಧಯ್ಯನವರು ಗೋರ್ಟಾ ಗ್ರಾಮದವರು ಉತ್ತಮ ಹಾರ್ಮೋನಿಯಂ ವಾದಕರು ಹಾಗೂ ಒಳ್ಳೆಯ ಹಾಡುಗಾರರು, ವಿರೂಪಾಕ್ಷಯ್ಯ ಸ್ವಾಮಿ ಮೇಲಗಲ್ಲಿ ಅವರ ಶಿಕ್ಷರಾದ ಸಿದ್ಧಯ್ಯ ಮಠ ಅವರು ಅನೇಕ ನಾಟಕಗಳಿಗೆ ಸಂಗೀತ ನಿರ್ದೇಶನ ನೀಡಿದ್ದಾರೆ.

**೨.೧೩. ಪ್ರಭುಲಿಂಗ ಸ್ವಾಮಿ ಹುಮನಾಬಾದ :** ಜಿಲ್ಲೆಯ ಯುವ ಸಂಗೀತಗಾರರ ಲ್ಲೋಬ್ಬರಾದ ಪ್ರಭು ಸ್ವಾಮಿಗಳು ಮಾಣಿಕ ಪ್ರಭು ಸಂಸ್ಥಾನದಲ್ಲಿ ಹಾಗೂ ಬೀದರ ಜಿಲ್ಲೆಯ ಅನೇಕ ಕಡೆ ಸಂಗೀತ ಕಾರ್ಯಕ್ರಮ ನೀಡಿ ಬೆಳೆಯುತ್ತಾ ಬೆಳೆಸುತ್ತಿದ್ದಾರೆ.

ಇವರಂತೆಯೇ ಬಸ್ ಚಾಲಕರಾದ ಬಸಯ್ಯ ಸ್ವಾಮಿ ಸುಲೇಪೆಟ್ ಮುತ್ಯಾ ಮುಂತಾದವರು ಸಂಗೀತ ಕ್ಷೇತ್ರದಲ್ಲಿ ಮುನ್ನುಗ್ಗುತ್ತಿದ್ದಾರೆ. ಯುವ ಪೀಳಿಗೆಗಂತೂ ಜಿಲ್ಲೆಯ ಸಂಗೀತ ಕ್ಷೇತ್ರದಲ್ಲಿ ದಾಪುಗಾಲನ್ನು ಹಾಕುತ್ತಿದೆ. ಅದರಲ್ಲೂ ಕವಿತಾ ಹಿರೇಮಠ, ಚಂದ್ರಯ್ಯ ಸ್ವಾಮಿ,

ರಾಜಶೇಖರ ಸ್ವಾಮಿ ಗೋರ್ಟಾ, ಉದಯೋನ್ಮುಖ ಸಂಗೀತಗಾರರು ಅಭಿರುಚಿಯಿಂದ ಸಂಗೀತ ಕಲೆಗೆ ಮಹತ್ವ ನೀಡುತ್ತಿದ್ದಾರೆ. ಜಿಲ್ಲೆಯಲ್ಲಿ ವೀರಶೈವ ಮಠಗಳೂ ಸಹ ಸಂಗೀತ ಕ್ಷೇತ್ರಕ್ಕೆ ಸಹಕಾರ ನೀಡುವಲ್ಲಿ ಹಿಂದೆ ಬಿದ್ದಿಲ್ಲ ಎಂಬ ಮಾತು ಸೂಕ್ತವಾದದ್ದು. ಅದರಲ್ಲೂ ಭಾಲ್ಕಿ ಹಿರೇಮಠವು ನಿಲಾಂಬಿಕಾ ಸಂಗೀತ ಪಾಠ ಶಾಲೆಯನ್ನು ತೆರೆದು ಉಚಿತವಾಗಿ ನುರಿತ ಸಂಗೀತ ಶಿಕ್ಷಕರಿಂದ ಸಂಗೀತವನ್ನು ಕಲಿಸುತ್ತಿದೆ.

ಹೀಗೆ ಬೀದರ ಜಿಲ್ಲೆಯ ಸಂಗೀತ ಕಲೆಯ ಬೆಳವಣಿಗೆಗಾಗಿ ಅವಿರತವಾಗಿ ಶ್ರಮಿಸುತ್ತ ಸಂಗೀತ ಕ್ಷೇತ್ರವನ್ನು ಶ್ರೀಮಂತಗೊಳಿಸುವುದನ್ನು ನೋಡಿದರೆ ಸಂಗೀತ ಕ್ಷೇತ್ರಕ್ಕಿರುವ ಒಳ್ಳೆಯ ಭವಿಷ್ಯವೆಂದೇ ಹೇಳಬಹುದು. ಜಂಗಮರು ಹೆಚ್ಚಾಗಿ ಶರಣ ವೀರಶೈವ ಸಾಹಿತ್ಯ ಮತ್ತು ಸಂಗೀತ ಕಲೆಯ ಕುರಿತು ಸಾಹಿತ್ಯದ ಮೇಲೆ ಸಾಹಿತ್ಯ ರಚನೆಯಾಗಿದ್ದು ಕಂಡುಬರುತ್ತದೆ. ಆದರೆ ತಮ್ಮ ಸಮುದಾಯದ ಪ್ರಗತಿ- ಅಪ್ರಗತಿ ಕುರಿತು ಕೆಲವೇ ಕೆಲವು ಲೇಖನಗಳು ಬಿಟ್ಟರೆ ಪುಸ್ತಕದ ರೂಪದಲ್ಲಿ ಸಾಹಿತ್ಯ ನಿರ್ಮಾಣವಾಗಿಲ್ಲವೆನ್ನಬಹುದು. ಇವರು ಇತರ ಅಂದರೆ ಕೆಳವರ್ಗದ ಪರವಾದ ಸಾಹಿತ್ಯ ಹೆಚ್ಚಾಗಿ ಇವರಲ್ಲಿ ಕಂಡುಬರುವುದಿಲ್ಲ. ಇನ್ನು ಜಂಗಮರು ಸಾಹಿತ್ಯ ಕ್ಷೇತ್ರದಲ್ಲಿ ಬೆಳೆಯಬೇಕಾಗಿದೆ. ಸಂಗೀತದಲ್ಲಿ ಕೆಲವರು ತುಂಬ ಪ್ರಸಿದ್ಧಿಯನ್ನು ಕಂಡು ಹೊಸ ಹೊಸ ಅವಿಷ್ಕಾರಗಳ ಮೂಲಕ ಸಂಗೀತ ಕಲೆ ಬೆಳೆಸುತ್ತಿರುವರು. ಸಂಗೀತ ಕಲೆ ಜಿಲ್ಲೆಯಲ್ಲಿ ಎಲ್ಲಾ ಸಮುದಾಯ ಮಟ್ಟಕ್ಕೆ ತರುವ ಪ್ರಯತ್ನಗಳು ನಡೆಯಬೇಕಾಗಿದೆ. ಗೋರ್ಟಾ ಗ್ರಾಮದಿಂದ ಅನೇಕ ಜಂಗಮರು ಸಂಗೀತ ಕ್ಷೇತ್ರದಲ್ಲಿ ಮುಂದೆ ಬಂದಿರುವುದು ಕಾಣುತ್ತವೆ. ಏಕೆಂದರೆ ೬ನೇ ವಿಕ್ರಮಾದಿತ್ಯ(ಚಾಲುಕ್ಯ) ಕಾಲದಲ್ಲಿ ಸಂಗೀತ ಅಗ್ರಹಾರವಿತ್ತೆಂದು ಅಲ್ಲಿ ಸಿಕ್ಕಿದ ಶಾಸನದಿಂದ ತಿಳಿಯುತ್ತದೆ. ಹೀಗಾಗಿ ಅಂದಿನಿಂದ ಇಂದಿನವರೆಗೂ ಸಂಗೀತದ ವೈಭವವನ್ನು ಅಲ್ಲಿನ ಜಂಗಮರು ಕಾಯಿದುಕೊಂಡು ಬಂದದ್ದು ಗಮನಾರ್ಹವಾಗಿದೆ. ಅಂತೆಯೇ ವೀರಪಾಕ್ಷಯ್ಯನವರು ಸಂಗೀತ ಸಂಸ್ಥೆಯನ್ನು ನಿರ್ಮಿಸಿಕೊಂಡು ಅದರ ಮೂಲಕ ಜಿಲ್ಲೆಯಲ್ಲಿ ಸಂಗೀತ ಬೆಳೆಸಿಕೊಂಡು ಬರುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ.

ಕರ್ನಾಟಕ ಸರ್ಕಾರ ಬೀದರ ಜಿಲ್ಲೆಯು ಹಿಂದುಳಿದ ಪ್ರದೇಶವೆಂದು ಬಗೆದು ಸರ್ಕಾರದ ಸವಲತ್ತಿನಿಂದ ವಂಚಿತಗೊಳಿಸದೇ ಬೀದರ ಜಿಲ್ಲೆಯ ಜಂಗಮ ಸಂಗೀತಗಾರರಿಗೆ ಉತ್ತಮ ಅವಕಾಶ ನೀಡಿ ರಾಜ್ಯದ ಸಂಗೀತ ಕ್ಷೇತ್ರದ ಸರ್ವೋತೋಮುಖ ಅಭಿವೃದ್ಧಿಗೆ ಜಿಲ್ಲೆಯ ಸಂಗೀತಗಾರರಿಗೆ ಆಸ್ಪದ ನೀಡುವುದು ಅಗತ್ಯವಾಗಿದೆ. ಹೀಗೆ ಜಂಗಮರು ಕಲೆಗೆ ತಮ್ಮ ಕೈಲಾದ ಮಟ್ಟಿಗೆ ಜಿಲ್ಲೆಗೆ ಕೊಡುಗೆಯನ್ನು ನೀಡಿ ಸಮಾಜವನ್ನು ಸಂತೋಷದ ಸಾಗರದಲ್ಲಿ ತೆಲುವಂತೆ ಮಾಡಿದವರು.

## ಆಧಾರ ಗ್ರಂಥಗಳು

೧. ಮೂಲಗೆ ರಮೇಶ, ೧೯೯೮, **ಬೀದರ ಜಿಲ್ಲೆಯ ವೀರಶೈವ ಮಠಗಳು ಒಂದು ಅಧ್ಯಯನ,** ಶ್ರೀ ಗುರುಧರ್ಮ ಪ್ರಕಾಶನ ಕೇಂದ್ರ, ಹುಲಸೂರು, ಪು.೪೦.

೨. ಗೋರ್ಟಾ ರಾಜಶೇಖರ ಸ್ವಾಮಿ(ಲೇ), ಸವದತ್ತಿಮಠ ಸಂಗಮೇಶ(ಸಂ), ೧೯೯೬, **ಚನ್ನವೀರ,** ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ, ಪು.೨.

೩. ರೆಡ್ಡಿ ಕಾಶಿನಾಥ(ಲೇ), ಸವದತ್ತಿಮಠ ಸಂಗಮೇಶ(ಸಂ), ೧೯೯೬, **ಚನ್ನವೀರ,** ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ, ಪು.೪೬.

೪. ಮಹಾಸ್ವಾಮಿಗಳು ಶಿವಾನಂದ, ೧೯೯೮, **ಶ್ರೀ ಶಿವಾನಂದ ಮಹಾಸ್ವಾಮಿಗಳ ವಚನಗಳು,** ಶ್ರೀ ಗುರುಧರ್ಮ ಪ್ರಕಾಶನ ಕೇಂದ್ರ, ಹುಲಸೂರು, ಪು.೨೨.

೫. ಮಹಾಸ್ವಾಮಿಗಳು ಶಿವಾನಂದ, ೧೯೯೮, **ಕಲ್ಯಾಣ ಕೈಲಾಸ,** ಶ್ರೀ ಗುರುಧರ್ಮ ಪ್ರಕಾಶನ ಕೇಂದ್ರ, ಹುಲಸೂರು, ಪು. ೧೨, ೫೦.

೬. ಸಬರದ ಬಸವರಾಜ, ೨೦೦೧, **ಬೀದರ ಜಿಲ್ಲೆಯ ಅನುಭಾವ ಕವಿಗಳು,** ಶ್ರೀ ಗುರುಧರ್ಮ ಪ್ರಕಾಶನ ಕೇಂದ್ರ, ಹುಲಸೂರು, ಪು. ೨.

೭. ಸಬರದ ಬಸವರಾಜ, ೨೦೦೦, **ಹೈದ್ರಾಬಾದ್ ಕರ್ನಾಟಕದ ತತ್ವಪದಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು.೧೯೫.

೮. ವಡ್ಡೆ ಬಾಬುರಾವ, ಜಿ.ವಿ.ವಿಸಾಜಿ(ಸಂ), ೧೯೯೪, **ಅಂಬಲಗೆ ಕಾಶಿನಾಥ ಅಧ್ಯಕ್ಷರ ಭಾಷಣ ಚೆಂಬೆಳಕು,** ೪ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೀದರ ಜಿಲ್ಲೆ, ಪು.೬

೯. ಹುಡುಗಿ ದೇಶಾಂಶ, ೧೯೯೫, **ನಾ ಕಂಡ ನನ್ನವರು,** ಕನ್ಯಾಕುಮಾರಿ ಪ್ರಕಾಶನ, ಹುಡುಗಿ, ಪು. ೯೦, ೯೩.

೧೦. ಶರಣ ಸೌರಭ, **ಸ್ಮರಣ ಸಂಚಿಕೆ,** ೧೯೯೧, ಕನ್ನಡ ಸಾಹಿತ್ಯ ಪರಿಷತ್ತು, ಬೀದರ, ಪು.೫೨, ೫೩.

೧೧. ಮಹಾದೇವಿ ಮಾತೆ, **ಬಸವತತ್ವ ದರ್ಶನ,** ಪು.೫೨೦.

೧೨. ಮಠಪತಿ ಸಿದ್ರಾಮಯ್ಯ(ಲೇ) ವಡ್ಡೆಬಾಬುರಾವ್, ಜಿ.ವಿ.ವಿಸಾಜಿ(ಸಂ), **ಚೆಂಬೆಳಕು,** ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೀದರ, ಪು.೬೦.

ಕರ್ನಾಟಕದಲ್ಲಿ ಜಂಗಮರಿಗೆ ಮುತ್ಯಾ, ಸ್ವಾಮಿ, ಅಪ್ಪರೊ, ಮಹೇಶ್ವರರು, ಅಯ್ಯನವರು ಎಂದು ನಾನಾ ರೀತಿಯಿಂದ ಕರೆಯುವರು. ಇವರಿಗೆ ಸಮಾಜದವರು ಗುರುಗಳ ಸ್ಥಾನವನ್ನು ಕೊಟ್ಟು ಗೌರವಿಸುತ್ತಾರೆ. ಕೇವಲ ವೀರಶೈವ ಸಮಾಜದವರಿಗೆ ಮಾತ್ರ ಇವರುಗಳು ಗುರುಗಳಾಗಿರದೆ ಹಿಂದೂ ಧರ್ಮವನ್ನು ಪ್ರಸಾರಿಸುವ ಎಲ್ಲಾ ಜಾತಿ - ಪಂಗಡಗಳ ಜನರಿಗೆ ಆರಾಧ್ಯದೈವವಾಗಿದ್ದು ಮಾರ್ಗದರ್ಶಕರಾಗಿ ನಡೆದುಕೊಂಡು ಬರುತ್ತಿರುವುದು ಇತಿಹಾಸ ಗಮನಿಸಬಹುದು. ಜಂಗಮರು ಹಳ್ಳಿಯಿಂದ ಹಳ್ಳಿಗೆ ಸಂಚರಿಸಿ ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸುತ್ತಾ, ಭಕ್ತರಿಗೆ ಸಮಸ್ತ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಒದಗಿಸುತ್ತಾ ಜನ ಸೇವೆಯೇ ಈಶಸೇವೆ ಎಂದು ತಿಳಿದು ಸಮಾಜದ ಅಭಿವೃದ್ಧಿಗಾಗಿ ದುಡಿಯುತ್ತಾ ಬಂದವರು. ಇವುಗಳ ಪ್ರತಿಫಲವಾಗಿ ಭಕ್ತರು ಸುಗ್ಗಿಯ ಸಮಯದಲ್ಲಿ ಇವರಿಗೆ ದವಸ ಧಾನ್ಯಗಳನ್ನು ಒದಗಿಸುತ್ತಿದ್ದರು. ಮಠಗಳಲ್ಲಿ ಶಾಲೆಯನ್ನೆ ಹಾಕಿ ಶಿಕ್ಷಣ ನೀಡುತ್ತಿದ್ದರು. ಅಂತೆಯೇ ಇಂದಿಗೂ ಜಿಲ್ಲೆಯಲ್ಲಿ ಅನೇಕ ಸಾಲಿಮಠಗಳು ಕಂಡು ಬರುತ್ತವೆ. ಅನೇಕ ಕಾಯಿಲೆಗಳಿಗೆ ಮಠಗಳಲ್ಲಿ ಔಷಧವನ್ನು ನೀಡಿ ವಾಸಿ ಮಾಡುತ್ತಿದ್ದರು. ಇಂದಿಗೂ ಮಠಗಳಲ್ಲಿ ಎಷ್ಟೋ ಜಂಗಮರು ಹಲವಾರು ಕಾಯಿಲೆಗಳಿಗೆ ಔಷಧವನ್ನು ಕೊಡುವರು. ಇಂತಹ ಔಷಧವು ಸರಕಾರದವರು ಪರಿಗಣಿಸಿ, ಸಹಕಾರ ನೀಡಿದ್ದರಿಂದ ಅವರ ವೈದ್ಯಕೀಯ ಕಾರ್ಯವು ಮುಂದುವರೆಯುತ್ತಿದೆ. ಸಮಾಜದ ಜನರಿಗೆ ಕಾಯಿಲೆಯಿಂದ ಮುಕ್ತಿ ಸಿಗುವುದರ ಜೊತೆಗೆ ಔಷಧವನ್ನು ಉಳಿಸಿದಂತೆಯಾಗುತ್ತದೆ. ಹೀಗಾಗಿ ಇದನ್ನು ರಕ್ಷಿಸಿ ಬೆಳೆಸುವುದು ಇಂದು ಅನಿವಾರ್ಯವಾಗಿದೆ. ಊರಿನ ಪ್ರತಿಯೊಂದು ಕಾರ್ಯಗಳಲ್ಲಿ ಭಾಗಿಯಾಗುತ್ತಿದ್ದರು. ಕಾಯಕವೇ ಕೈಲಾಸ ಎನ್ನುವ ಬಸವಣ್ಣನವರ ಉಕ್ತಿಗೆ ಇವರು ಜ್ವಲಂತ ಉದಾಹರಣೆಯಾಗಿದ್ದಾರೆ. ಹೀಗೆ ಜಂಗಮ ಮಠಗಳಲ್ಲಿ ಹಲವಾರು ಕಲೆಗಳನ್ನು ಹೇಳಿಕೊಡುತ್ತಾ, ಅನೇಕ ಕಾವ್ಯಗಳ ಸುಭಾಷಿತಗಳ ಪ್ರಸಾರ ಕ್ರಿಯೆಯನ್ನು ವ್ಯವಸ್ಥಿತವಾಗಿ ಮಾಡುತ್ತಾ ಬಂದಿರುವುದು ಕಾಣುವುದು. ವ್ಯಕ್ತಿಯ ಹುಟ್ಟಿನಿಂದ ಮೊದಲುಗೊಂಡು ನಾಮಕರಣ ದೀಕ್ಷೆ, ವಿವಾಹ

ಮುಂತಾದ ಹದಿನಾರು ಸಂಸ್ಕಾರಗಳ ನಿರ್ವಹಣೆಯನ್ನು ಆಯಾ ಸಂದರ್ಭಗಳಲ್ಲಿ ಭರಿಸಿ ಧರ್ಮ ರಕ್ಷಣೆ ಮಾಡಿದರು. ಈ ಕಾರ್ಯಗಳಿಗೆ ಜನತೆ ಅರ್ಪಿಸುತ್ತಿದ್ದ ಧನಧಾನ್ಯ ಮುಂತಾದವುಗಳಿಗೆ ಅವರ ಜೀವನ ನಡೆಸಲಿಕ್ಕೆ ಆಧಾರವಾಗಿದ್ದವು. ಈ ವ್ಯವಸ್ಥೆ ಇಂದಿಗೂ ಸಾಕಷ್ಟು ಹಳ್ಳಿಕಡೆ ಕಂಡುಕೊಳ್ಳಬಹುದು. ಹೀಗಾಗಿ ಜಂಗಮ ಸಮಾಜದ ಆಧಾರಸ್ತಂಭನಾಗಿ ಧರ್ಮಚರಣೆ ವಿಧಿಗಳ ಅಡಿಗಲ್ಲಾಗಿ, ವೀರಶೈವ ಸಂಸ್ಕೃತಿಯ ಸೌಧವಾಗಿ ನಿಂತಿರುವುದು ಚರಿತ್ರಾರ್ಹವಾಗಿರುವುದು.

## ಸಮಸ್ಯೆಗಳು

೧. ಆದಿ ವೀರಶೈವರಲ್ಲಿ ಜಂಗಮರ ಕಾರ್ಯವನ್ನು ವೀರ ಮಹೇಶ್ವರರು ಮಾಡುತ್ತಿದ್ದರು. ೧೨ನೇ ಶತಮಾನದಲ್ಲಿ ಬಸವಾದಿ ಶರಣರಿಂದ ವೀರಶೈವ ಧರ್ಮ ಪುನರುತ್ಥಾನಗೊಂಡಾಗ ವೀರಮಹೇಶ್ವರರು ಜಂಗಮರಾದರು. ಪ್ರತಿಯೊಬ್ಬರಿಗೂ ಒಂದು ಕಾಯಕವಿರುವಂತೆ ಜಂಗಮನಿಗೆ ವ್ಯಕ್ತಿ ಕಾಯಕವಿಲ್ಲ. ಸಮಾಜದ ಧಾರ್ಮಿಕ ಜಾಗೃತಿಯ ಅವರ ಮಹತ್ವ ಕಾಯಕ. ಇದರಿಂದ ಊರಿಂದ ಊರಿಗೆ, ಕೇರಿಯಿಂದ ಕೇರಿಗೆ ನಡೆಯುತ್ತ ಧರ್ಮ ಜಾಗೃತಿ ಮಾಡುವುದು ಭಕ್ತರನ್ನು ಶುದ್ಧಮಾರ್ಗಕ್ಕೆ ಕರೆತರುವುದೇ ಇವರ ಕಾಯಕವಾಗಿತ್ತು. ಸದಾ ಸಂಚರಿಸುತ್ತಾ ಇರುವುದರಿಂದಲೇ ಇವರಿಗೆ ಗುರುವಿನಿಗಿಂತಲು, ಲಿಂಗಕ್ಕಿಂತಲೂ ಜಂಗಮನೇ ಹೆಚ್ಚು ಮಹತ್ವ ಬಸವಣ್ಣನವರು ಕೊಟ್ಟಿದ್ದು ಕಾಣುತ್ತೇವೆ. ೧೨ನೇ ಶತಮಾನದ ನಂತರ ಜಂಗಮರ ಕಾಯಕವು ಮೊದಲಿನಂತೆ ಸಾಗಿತ್ತು. ಧಾರ್ಮಿಕ ಜ್ಞಾನದ ಜೊತೆಗೆ ಮಠಗಳಲ್ಲಿ ಶಿಕ್ಷಣವನ್ನು ಕೊಡುತ್ತಿದ್ದರು. ಆ ಮೇಲೆ ಜನಸಂಖ್ಯೆ ಹೆಚ್ಚಾದಂತೆಲ್ಲಾ ಜಂಗಮರ ಕುಟುಂಬವು ದೊಡ್ಡದಾಗಿ ತಮ್ಮ ಕುಟುಂಬ ಪೋಷಣೆಗೆ ಇತರ ವೃತ್ತಿಗಳನ್ನು ಅವಲಂಬಿಸಬೇಕಾಯಿತು. ಕೆಲವರು ಪುರಾಣ, ಪ್ರವಚನ, ಧಾರ್ಮಿಕ ವಿಧಿಗಳು ನೇರವೇರಿಸಿ, ಪ್ರತಿಫಲವಾಗಿ ಭೀಕ್ಷೆ ಬೇಡುವ ವೃತ್ತಿ ಅವಲಂಬಿಸಿದರೆ ಇನ್ನು ಕೆವರು ಒಕ್ಕಲುತನ, ಕೂಲಿ, ವ್ಯಾಪಾರ, ನೌಕರಿಗಳಲ್ಲಿ ತೊಡಗಿಸಿಕೊಂಡು ಸಾಗುತ್ತಿರುವುದು ಮುಂದುವರೆಯಿತು.

೨. ವೀರಶೈವ ಸಮಾಜದ ಗುರುಗಳಲ್ಲಿ ಎರಡು ಪ್ರಭೇದಗಳಿವೆ. ಒಂದು ಪಂಚಾಚಾರ್ಯರಿಗೆ ಸಂಬಂಧಪಟ್ಟ ಗುರುವರ್ಗ ಇನ್ನೊಂದು ಶರಣರಿಗೆ ಸಂಬಂಧಪಟ್ಟ ವಿರಕ್ತವರ್ಗ. ಪಂಚಾಚಾರ್ಯದಲ್ಲಿರುವ ಐದು ಪೀಠಗಳಲ್ಲಿ ಹಂಚಿ ಹೋಗಿರುವಂತಹ ವೀರಶೈವ ಸಮಾಜದ ಗುರುವರ್ಗವು ಅದರಲ್ಲಿ ಅನೇಕ ಪ್ರಭೇದಗಳನ್ನು ಒಳಗೊಂಡದು.

ಜಗದ್ಗುರುಗಳು ತಮ್ಮ ಪೀಠಕ್ಕೆ ಸಂಬಂಧಪಟ್ಟ ಶಿಷ್ಯವರ್ಗಕ್ಕೆ ಮಾರ್ಗದರ್ಶನ ನೀತಿ ಹೇಳಿ ಅವುಗಳಲ್ಲಿ ಸ್ಥಾನಮಾನಗಳನ್ನು ನೀಡಿ ಪ್ರಮುಖರಿಗೆ ಚರ ಪಟ್ಟಾಧಿಕಾರ ನೇಮಿಸಿಕೊಂಡು ಇದರ ಕೆಳಗೆ ಮತ್ತೆ ಹಿರೇಮಠದವರನ್ನು ನೇಮಿಸಿ ಮತ್ತೆ ಸೂತಕ ಕಾರ್ಯಗಳನ್ನು ಮಾಡಲು ಮಠಪತಿ ನೇಮಿಸಿಕೊಂಡಿದ್ದರು. ಈ ರೀತಿಯೊಳಗೆ ಪಂಚಾಚಾರ್ಯ ಪೀಠಗಳು ಆಡಳಿತವರ್ಗದಿಂದ ಅಂದಿನ ಕಾಲದಲ್ಲಿ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿದ್ದವು. ಹೀಗಾಗಿ ಹುಟ್ಟಿದ ಮಗುವಿನಿಂದ ಹಿಡಿದು ಸಾಯುವವರೆಗೂ ಎಲ್ಲಾ ಧಾರ್ಮಿಕ ಕ್ರಿಯೇಗಳನ್ನು ಈ ಪಂಚಾಚಾರ್ಯ ಪೀಠದ ಮಠಾಧೀಶರು, ಹಿರೇಮಠದವರು, ಮಠಪತಿ ಸುಕಾಸ್ಥಿ ಮತ್ತು ಗಣಾಚಾರಿಗಳು ನಡೆಸಿಕೊಡುತ್ತಿದ್ದರು. ನಿತ್ಯವು ಅವರ ಮನೆಗೆ ಹೋಗಿ ನೀತಿ, ಧರ್ಮ ಮತ್ತು ಸಂಪ್ರಾದಾಯ ಕ್ರಿಯೆಗಳಲ್ಲಿ ತೊಡಗಿಸಿಕೊಳ್ಳು ವುದು ಮಾಡುತ್ತಿದ್ದರು. ಇನ್ನು ವೇದ, ಶಾಸ್ತ್ರ, ಪುರಾಣ ಹೇಳುವ ಪಾಂಡಿತ್ಯ ಇರುವುದರಿಂದ ಶಾಸ್ತ್ರಗಳು, ಪಂಡಿತರು ಎಂತಲೂ ಕರೆಯುತ್ತಿದ್ದರು. ಇನ್ನು ಅನೇಕ ಮಠ, ಮಠಪತಿ ಜಂಗಮರು ಮನೆಯಲ್ಲಿಯೋ ಶಿಕ್ಷಣವನ್ನು ಕಲಿಸುತ್ತಿದ್ದರು. ಅದಕ್ಕಾಗಿಯೋ ಅವರನ್ನು ಸಮಾಜದಲ್ಲಿ ಗುರು ಎಂದು ವಿದ್ಯಾವಂತ ವರ್ಗ ಎಂದು ಕರೆಯಿಸಿಕೊಂಡಿತ್ತು. ಸಾಂಪ್ರದಾಯಕವಾಗಿ ಗುರುವರ್ಗ ಬಹಳ ಕಾಲದಿಂದ ನಮ್ಮ ದೇಶದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ಜೊತೆಯಲ್ಲಿ ನೀತಿಬೋಧನೆಯೊಂದಿಗೆ ಆ ಜನಾಂಗದ ಆಚಾರ ವಿಚಾರಗಳನ್ನು ತಿಳಿಸಿಕೊಡುವ ಜವಾಬ್ದಾರಿಯು ಕೂಡ ಇವರದೇ ಆಗಿತ್ತು. ಅದಕ್ಕಾಗಿ ಅಂದಿನ ಸಮಾಜದೊಳಗೆ ಈ ಗುರುವರ್ಗದ ಸ್ವಾಮಿಗಳಿಗೆ, ವೃತ್ತಿಗಾಯಕರಿಗೆ ಹಚ್ಚಾಗಿ ಜನ ಗೌರವ ಕೊಡುತ್ತಿದ್ದರು. ಪ್ರತಿಯೊಂದು ಧಾನ್ಯ ತಮ್ಮ ಹೊಲದಲ್ಲಿ ಬೆಳೆದುದನ್ನು ಮೊಟ್ಟ ಮೊದಲು ಸ್ವಾಮಿಗಳಿಗೆ ಅರ್ಪಿಸಿ ಊಟ ಮಾಡುತ್ತಿದ್ದರು. ಪ್ರತಿಯೊಂದು ವಸ್ತ್ರವಾದರೂ ಸ್ವಾಮಿಗಳ ಪಾದಕ್ಕೆ ಮುಟ್ಟಿಸಿ ಅದನ್ನು ಉಡುತ್ತಿದ್ದರು. ಮನೆಯಲ್ಲಿ ಯಾವುದೇ ಸಮಾರಂಭ ವಿರಲಿ ಇವರನ್ನು ಬಿಟ್ಟು ಮಾಡುವಂತಿಲ್ಲ. ಇದು ಒಂದು ಕಾಲದಲ್ಲಿ ಇವರಿಗೆ ಕೊಟ್ಟ ಒಂದು ಉಚ್ಚ ಸ್ಥಾನವಿತ್ತು. ಗುರು ಕೂಡ ಅವರ ಎಲ್ಲಾ ಕ್ರಿಯಾತ್ಮಕ ಕಾರ್ಯಗಳಲ್ಲಿ ನೆರವಾಗುತ್ತಿದ್ದ, ಆದ್ದರಿಂದ ಬಂದಂತಹ ಕಾಣಿಕೆಯನ್ನು ಮಾತ್ರ ಸ್ವೀಕರಿಸುತ್ತಿದ್ದರು. ಅವರು ಕೊಟ್ಟಂತಹ ಕಾಣಿಕೆಯಲ್ಲಿಯೋ ತಮ್ಮ ಉಪಜೀವನ ಸಾಗುತ್ತಿತ್ತು. ಎಲ್ಲೋ ಕೆಲವು ಜನರಿಗೆ ರಾಜ್ಯರಿಂದಲೂ ಶ್ರೀಮಂತರಿಂದಲೂ ಇವರಿಗೆ ಉಂಬಳಿಯಾಗಿ, ಹೊಲನೋ, ಗದ್ದೆನೋ, ಸ್ವಲ್ಪ ಮಟ್ಟಿಗೆ ಮಠಗಳ ಖರ್ಚಿಗಾಗಿ ಗೋದಾನಗಳನ್ನು ಕೊಟ್ಟಿದ್ದು ಅನೇಕ

ಉದಾಹರಣೆಗಳು ಕಂಡುಬರುತ್ತವೆ. ಆದರೆ ಹೆಚ್ಚಾಗಿ ಜನ ಬರೇ ಕಾಯಕ ಮಾಡಿ ಕ್ರಿಯಾ ದೀಕ್ಷೆಯನ್ನು ಕೊಡುತ್ತಾನೆ ಉಪಜೀವನ ನಡೆಸುತ್ತಿದ್ದರು. ಇದರಿಂದ ಇವರು ಧಾರ್ಮಿಕ ವಿಧಾನಗಳೆಲ್ಲವು ಸಮಾಜದಲ್ಲಿ ಪ್ರಚಲಿತದಲ್ಲಿದ್ದವು. ಪ್ರತಿಯೊಬ್ಬ ಮನುಷ್ಯನಿಗೆ ಸಂಸ್ಕಾರವೆನ್ನುವುದು ಮುಖ್ಯ ಎಂದು ಅವರ ನೀತಿಯಾಗಿತ್ತು. ಅದರಿಂದಲೇ ಪ್ರತಿಯೊಂದು ಮನೆಯು ಸಂಸ್ಕಾರದ ಕೇಂದ್ರವಾಗಿತ್ತು. ಆ ಕಾರಣದಿಂದ ಮನೆಯಲ್ಲಿನ ಎಲ್ಲಾ ಕ್ರಿಯಾ ಸಂಸ್ಕಾರಗಳು, ಕಾರ್ಯಕ್ರಮಗಳಿಗೆ ಇವರು ಮುಖ್ಯಸ್ಥರಾಗುತ್ತಿದ್ದರು. ಹಗಲೆಲ್ಲಾ ಇವರಿಗೆ ಕಾಣಿಕೆ ಸಿಗುತ್ತಿತ್ತು. ದಿನ ಮುಂಜಾನೆ ಭೀಕ್ಷಾಟನೆ ವೃತ್ತಿಗೆ ಹೋದ ಅನಂತರವ ಅವರು ಎಲ್ಲಾ ಕ್ರಿಯಾಗಳಲ್ಲಿ ಅಂದರೆ ಹೊಲಕ್ಕೆ ಹೋಗುವುದರಿಂದ ಧಾನ್ಯ ಕೊಯ್ಯುವುದರಿಂದ, ಮಡಿಮಾಡುವುದರಿಂದ, ಮನೆ ತಂದು ತಂದು ಇಡುವುದರಿಂದಾಗಲಿ, ಮನೆಯಲ್ಲಿ ಅಡುಗೆ ಮಾಡುವುದರಿಂದಾಗಲಿ, ಹಬ್ಬ ಮಾಡುವುದರಿಂದಾಗಲಿ, ಇತರ ಯಾವುದೇ ಕಾರ್ಯಕ್ರಮಗಳಾಗಲಿ ಇವರೇ ಮಾರ್ಗದರ್ಶಕರಾಗುತ್ತಿದ್ದರು. ಈ ದೃಷ್ಠಿಯಿಂದ ಇವರಿಗೆ ಆಗಾಗ ಕಾಣಿಕೆಗಳು ಸಿಗುತ್ತಿದ್ದವು. ಆದ್ದರಿಂದ ಪಡಿ, ವಸ್ತ್ರ, ಇವುಗಳೆಲ್ಲ ಸಿಗುವುದರಿಂದ ಇವರಿಗೆ ಹೆಚ್ಚಿನ ಸಮಯ ಓದುವುದಕ್ಕೆ, ಅಭ್ಯಾಸ ಮಾಡುವುದಕ್ಕೆ, ಜನರಿಗೆ ನೀತಿ ಬೋಧನೆ ಮಾಡುವುದಕ್ಕೆ ಮೀಸಲಾಗಿರುತ್ತಿತ್ತು. ಕಾಲ ಕ್ರಮೇಣದಲ್ಲಿ ಏನಾಯಿತು? ಜನಜೀವನದಲ್ಲಿ ಬದಲಾವಣೆಗಳು ಈ ದೇಶದಲ್ಲಿ ಕಾಣುವಂತಹ ಪರಿಸ್ಥಿತಿ ಬಂತು. ೧೦ನೇ ಶತಮಾನದ ನಂತರ ಸಾಹಿತ್ಯ ಮತ್ತು ಧರ್ಮದಲ್ಲಿ ಅನೇಕ ರೀತಿಯಲ್ಲಿ ಬದಲಾವಣೆಗಳು ಕಂಡು ಬಂದವು. ಅದೇ ರೀತಿಯಿಂದ ರಾಜಕೀಯದಲ್ಲಿ ಅನೇಕ ರೀತಿಯ ಬದಲಾವಣೆಗಳು ಉಂಟಾದವು. ಅದರಲ್ಲೂ ಮುಸ್ಲಿಂಮರು ಈ ದೇಶಕ್ಕೆ ಅಕ್ರಮಣ ಮಾಡಿದ ನಂತರ ಇಡೀ ಭಾರತೀಯ ಸಮಾಜದ ಧರ್ಮ ವ್ಯವಸ್ಥೆಯಲ್ಲಿ ಬದಲಾವಣೆಯಾಯಿತು. ಈ ಕಾರಣದಿಂದ ಆ ದಬ್ಬಾಳಿಕೆಯನ್ನು ಸಹಿಸಿಕೊಳ್ಳುವುದಕ್ಕೆ ಆಗಲಾರದಂತಹವರು ಅನೇಕ ಸಲ ಪಲಾಯನ ಮಾಡುವಂತಹ ಪರಿಸ್ಥಿತಿ ಬಂತು. ಮತ್ತು ಆಕ್ರಮಣ ಕಾರ್ಯ ಪ್ರವೃತ್ತಿಯಿಂದ ಆಕ್ರಮಿಸಿಕೊಂಡದ್ದು ಅವರು ಬಿಟ್ಟು ಹೋಗುವ ಪರಿಸ್ಥಿತಿಯನ್ನು ಬಂತು. ಹೀಗಾಗಿ ಧರ್ಮದಲ್ಲಿ ಮತ್ತು ಸಮಾಜದಲ್ಲಿ ಅಲ್ಲೋಲಕಲ್ಲೋಲವಾಯಿತು. ಆ ಪರಿಣಾಮವಾಗಿ ಮೂಲಭೂತವಾಗಿ ಮೊದಲಿನಿಂದ ನಡೆಸಿಕೊಂಡು ಬರುತ್ತಿರುವವಿಧಿ ವಿಧಾನಗಳಿಗೆ ಪೆಟ್ಟು ಬಿತ್ತು, ಇದು ಒಂದು ಕಾರಣ.

೩. ಸಾಮಾಜಿಕವಾಗಿ ಬಂದಂತಹ ವೈಚಾರಿಕ ಇನ್ನೊಂದು ಪ್ರಭೇದ ಶರಣರದು. ಇದು ಕೂಡ ಹಿಂದಿನಿಂದಲೂ ಸಾಂಪ್ರಾದಾಯಿಕವಾಗಿ ವಿಧಿ ವಿಧಾನ ಉಳಿಸಿಕೊಂಡು ಹೋಗುವಂತಹ ಗುರುವರ್ಗಕ್ಕೆ ಇನ್ನೊಂದು ಸವಾಲನ್ನು ಒಡ್ಡಿತ್ತು. ಏಕೆಂದರೆ ಒಂದು ಕಾಲಕ್ಕೆ ಬರೇ ಪೂಜೆ, ಭಕ್ತಿ, ನಿಷ್ಠೆಯಲ್ಲಿಯೋ ತೊಡಗಿದ್ದ ಈ ಜನಕ್ಕೆ ಒಂದು ವೈಚಾರಿಕ ಪ್ರಜ್ಞೆ ಬಂದು ಸೇರಿತ್ತು. ಹೀಗಾಗಿ ಧರ್ಮ ಅಂದರೆ ಯಾವುದು? ತತ್ವ ಅಂದರೆ ಯಾವುದು? ಪೂಜೆ ಅಂದರೆ ಯಾವುದು? ಲಿಂಗ ಅಂದರೆ ಯಾವುದು? ಇಷ್ಟಲಿಂಗಯೆಂದರೆ ಯಾವುದು? ಎಂಬುದು ಆರ್ಥಿಕ ಯೋಜನೆಗಳು ಬಂದವು. ಅಲ್ಲಿಂದ ವೃತ್ತಿಯಲ್ಲಿ ಸ್ವಲ್ಪ ಮಟ್ಟಿನ ವ್ಯತ್ಯಾಸಗಳು ಕಾಣಿಸಲ್ಪಟ್ಟವು. ಹೀಗಾಗಿ ಹಿಂದೆ ಆಗಿ ಹೋದಂತಹ ಮಠಗಳೆಲ್ಲ ಕಾಲಕ್ಕನುಸಾರವಾಗಿ ಸಂದು ಬಿಟ್ಟ ಬಿಟ್ಟವು. ಕ್ರಿಯಾಚಾರಕೊಂಡುವ ಗುರುವರ್ಗದ ಮಠಗಳು ಈ ಘರ್ಷಣೆಗೆ ಒಳಗಾಗಿ ಬರಿ ಪಲಾಯನವಾಗುವುದರಿಂದ ಅಥವಾ ಮಾರ್ಪಟ್ಟಾಗುವುದರಿಂದ ಆ ಭಕ್ತರಲ್ಲಿ ಸಂಪರ್ಕ ಕಡಿಮೆಯಾಯಿತು. ಇನ್ನು ಶಿಷ್ಯವೃಂದದಲ್ಲಿ ಕೂಡ ವೈಚಾರಿಕತೆ ಬೆಳೆಯುತ್ತಿರುವುದರಿಂದ, ಔದ್ಯೋಗಿಕರಣ ಕ್ರಾಂತಿ ಪರಿಣಾಮದಿಂದ, ವಸಾಹತುಶಾಹಿಗಳ ಪರಿಣಾಮದಿಂದ, ಬೇರೆ ರಾಜಕೀಯ ವ್ಯವಸ್ತೆಯ ಪರಿಣಾಮದಿಂದ ಅವು ಕೂಡ ಇದಕ್ಕೆ ಒಳಗಾಗುವುದರಿಂದ ಅಲ್ಲಿರುವಂತಹ ಭಕ್ತಿ ಮತ್ತು ಶ್ರದ್ಧೆ ಕಡಿಮೆಯಾಯಿತು. ಈ ಕಾರಣದಿಂದ ಧಾರ್ಮಿಕ ವಿಧಾನದಲ್ಲಿ ವ್ಯತ್ಯಾಸಗಳು, ಪರಿವರ್ತನೆಗಳು ಕಂಡು ಬಂದವು. ಅಲ್ಲದೆ ಮೊದಲಿರುವಂತಹ ರಾಜಾಶ್ರಯಗಳು ನೆಲೆ ತಪ್ಪಿ ಅನಂತರ ಬಂದಂತಹ ಬೇರೆ ಧರ್ಮದ ರಾಜರುಗಳು ಇವರಿಗೆ ಅಭ್ಯುಧಯಕ್ಕೆ ಅಷ್ಟೊಂದು ಪ್ರಾಶಸ್ತ್ಯ ನೀಡಲಿಲ್ಲ. ಇಂದು ಪ್ರಬಲವಾದ ಸಮಸ್ಯೆಯಾಯಿತು.

೪. ಬ್ರಿಟಿಷರ ಕಾಲದಲ್ಲಿ ತನ್ನದೆ ಆದ ರೀತಿಯ ಶೈಕ್ಷಣಿಕ ವ್ಯವಸ್ಥೆಯನ್ನು ತಂದಿರುವುದರಿಂದ ಆಧುನಿಕ ಸರ್ಕಾರ ಅದನ್ನೇ ಮುಂದುವರೆಸಿಕೊಂಡು ಹೋಗುವುದರಿಂದ [illegible] ಜಂಗಮರು ತಮ್ಮ ಮಠಗಳ ಶಾಲೆಯಿಂದ ಉಪಜೀವನ ನಡೆಸುತ್ತಿದ್ದರೂ ಅದು ಕೂಡ ನಿಲ್ಲುವ ಪರಿಸ್ಥಿತಿ ಬಂತು. ಮೊದಲನೆಯದು ಬೇರೆ ಜನಾಂಗ ರಾಜಾಶ್ರಯದಲ್ಲಿರುವಂತಹ ಜನರಿಗೆ ಮೊದಲು ಪೆಟ್ಟು ಬಿತ್ತು. ಎರಡನೆಯದು ಔದ್ಯೋಗಿಕ, ಸಾಮಾಜಿಕ ಬದಲಾವಣೆ, ಶರಣರ ಕ್ರಾಂತಿ ಪರಿಣಾಮದಿಂದ ಧಾರ್ಮಿಕತೆಯ ಮೇಲೆ ಪರಿಣಾಮ ಬಿರಿತು. ಮೂರನೆಯದು ಬ್ರಿಟಿಷರು ಬಂದು ಶಾಲೆಯಲ್ಲಿ ಪರಿವರ್ತನೆ ಮಾಡುವುದರಿಂದ ಸರ್ಕಾರಿ ಶಾಲೆಗಳು ತೆಗೆದರು. ಇದರಿಂದ ಓದಿಸುವ ಕಾರ್ಯ ನಿಲ್ಲಿಸಿ ಬಿಟ್ಟರು. ಈ ಮೇಲಿನ

ಕಾರಣಗಳಿಂದ ಸಮುದಾಯ ತತ್ತರಿಸುತ್ತಿತ್ತು. ಮೊದಲೇ ಅವರು ಆರ್ಥಿಕದಿಂದ ದುರ್ಬಲರು. ಕಾಣಿಕೆ ಕೊಟ್ಟಿದ್ದರಿಂದಲೇ ಅವರು ಉಪಜೀವನ ಮಾಡುವಂತಹವರು. ಆ ವಿಧಿ ವಿಧಾನಗಳೇ ಬದಲಾವಣೆಯಾಗಿ, ವೈಚಾರಿಕತೆ ಬೆಳೆದು ಜೀವನವೇ ಮಾರ್ಪಾಟಾಗಿದ್ದುದರಿಂದ ಸಮಾಜವೇ ಪರಿವರ್ತನೆಯಾಗಿದರಿಂದ ಅವರ ವಿಧಾನಗಳು ಕುಂಠಿತಗೊಂಡು ಆ ವೃತ್ತಿ ಕಾಯಕ ನಿಂತು ಹೋಯಿತು. ಈ ಕಾರಣದಿಂದ ಅವರ ಆರ್ಥಿಕ ದುರ್ಬಲತೆಗೆ ಕಾರಣವಾಯಿತು. ದುರ್ಬಲತೆಯಾದರೂ ಆಗಲಿ ಆದರೆ ಆಸ್ತಿಯಾದರೂ ಇರಬೇಕಾಗಿತ್ತು. ಆದರೆ ಆಸ್ತಿಯು ಇರಲಿಲ್ಲ, ಇದ್ದದ್ದು ಉಂಬಳಿ ಜೊತೆಗೆ ಭಕ್ತರ ಕೆಲವು ಊರುಗಳು ಇರುತ್ತಿದ್ದವು. ಆದರೆ ಮಠಾಧೀಶರ ಮೇಲಿನ ಆಕ್ರಮಣದಿಂದ ಪಲಾಯನ ಅಥವಾ ಬದಲಾವಣೆ ಆಗುವುದರಿಂದ ಧಾರ್ಮಿಕ ವಿಧಾನಗಳಲ್ಲಿ ವೈಚಾರಿಕತೆ ಹೆಚ್ಚು ಜನರಲ್ಲಿ ಬೆಳೆದುದ್ದರಿಂದ ಮೊದಲಿನ ಶ್ರದ್ಧೆ - ಭಕ್ತಿಯಿಂದ ಕರೆಯುವುದು ಬಿಟ್ಟು ಬಿಟ್ಟರು ಅಥವಾ ಮಾರ್ಪಡಿಗೆ ಒಳಗಾದರು. ಈ ಎಲ್ಲಾ ಕಾರಣಗಳಿಂದ ಇವರ ಆರ್ಥಿಕ ವ್ಯವಸ್ಥೆಗೆ ದೊಡ್ಡ ಪೆಟ್ಟು ಬಿತ್ತು. ಮುಂದೆ ಶಾಸ್ತ್ರ ಕಾರ್ಯಕ್ಕೆ ಮಾತ್ರ ಅವರನ್ನು ಕರೆಯುವ ವಾಡಿಕೆ ಬಂತು. ಹೀಗಾಗಿ ನಮ್ಮ ಗುರುಪೀಠ ಧಾರ್ಮಿಕ ವಿಧಾನದಲ್ಲಿ ದೊಡ್ಡ ಕುತ್ತಾ (ಕಂಠಕ ಪ್ರಾಯ)ಬಂತು.

೫. ಹೀಗಾಗಿ ಜಂಗಮರ ಆರ್ಥಿಕ ಪರಿಸ್ಥಿತಿ ತುಂಬ ಕೆಳಮಟ್ಟಕ್ಕೆ ಇಳಿಯಿತು. ಇದರಿಂದ ಅವರು ಇನ್ನೊಂದು ವೃತ್ತಿ ಅಲಂಬಿಸಬೇಕಾಯಿತು. ಪಂಚಾಂಗ ಹೇಳುವವ ಪಂಚಾಂಗನೇ ಹೇಳಿ ಬದುಕುತ್ತಿದ್ದರು. ಅರಸರು, ಶ್ರೀಮಂತರು, ಬಡವರು, ವ್ಯಾಪಾರಸ್ಥರು, ಗ್ರಹಸ್ಥರು, ರೈತರು ಎಲ್ಲರೂ ಪಂಚಾಂಗ ಕೇಳುತ್ತಿದ್ದರು. ವೈಚಾರಿಕತೆಗೆ ಒಳಗಾಗಿರುವುದರಿಂದ ಪಂಚಾಂಗ ಕೇಳುವವರೇ ಇಲ್ಲ. ಹೀಗಾಗಿ ಪಂಚಾಂಗ ಹೇಳಿ ಬದುಕುವುದು ಅಸಾಧ್ಯ ವಾಯಿತು. ಆಗಿನ ವಿದ್ಯಾವಂತರು ಇದ್ದರು. ಆಗಿನ ವಿದ್ಯೆ ಆಗಿನ ಪಂಚಾಂಗ ವಿದ್ಯೆಗೂ ಉಪಜೀವನಕ್ಕೆ ಸರಿ. ಹೀಗಾಗಿ ಕೆಲವು ಓದಿದವರು ಸರಕಾರಿ ನೌಕರಿಯಲ್ಲಿ ಸೇರಿದರು. ಕೆಲವು ಇದ್ದ ಗದ್ದೆಗಳಲ್ಲಿ ಒಕ್ಕುಲತನ ಮಾಡಲು ಸೇರಿದ್ದರು. ಕೆಲವರು ಸಣ್ಣ ಸಣ್ಣ ಅಂಗಡಿ ಮಾಡಿಕೊಂಡರು. ಕೆಲವರು ಉದ್ದಿಮೆಗಳಲ್ಲಿ ಕೆಲಸಕ್ಕೆ ಸೇರಿದರು. ಮತ್ತೆ ಕೆವಲರು ಜಂಗಮ ವೃತ್ತಿಯನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು.

೬. ಮುಂದೆ ಸಾಮಾಜಿಕ ವ್ಯವಸ್ಥೆಯಲ್ಲಿ ಬರಬರುತ್ತಾ ಸಾಮಾಜಿಕ ಪ್ರಬೇಧ ಹೆಚ್ಚಾದವು. ಜಾತಿ-ಪ್ರಬೇಧ ಹುಟ್ಟಿಕೊಂಡವು. ಹೀಗಾಗಿ ಸಮಾಜದಲ್ಲಿ ಸಮ್ಮಿಶ್ರ ಸಮಾಜದ

ನಿರ್ಮಾಣವಾಯಿತು. ಒಬ್ಬ ಸಮಾಜದ ಗುರು ಮತ್ತೊಬ್ಬರಿಗೆ ಬೇಕಾಗಿರುತ್ತಾರೆ. ಹೀಗಾಗಿ ಯಾರಿಗೆ ಹಿಡಿದುಕೊಳ್ಳಬೇಕು. ಇದರಿಂದ ಮೂರನೆ ಗುರು ಸೃಷ್ಟಿ ಮಾಡುವ ಕೆಲಸ ನಡೆಯಿತು. ಮೂಲದವರಿಗೆ ಹಿಂದಿನಿಂದಲೂ ಮಾಡಿಕೊಂಡು ಬರುವ ಜಂಗಮ ಕಾಯಕದ ಜಂಗಮರಿಗೆ ಇದು ಬಲವಾದ ಸಮಸ್ಯೆಯಾಯಿತು.

ಇಂದು ಸಾಮಾಜಿಕ ಸ್ಥಿತಿಗತಿಗಳು ತುಂಬಾ ಬದಲಾಗಿವೆ. ಜನತೆಯ ನೀತಿ ನೀಲುವುಗಳು ನೆಲೆದಪ್ಪಿವೆ. ಎಲ್ಲೆಡೆ ಅಧರ್ಮ ಅನಾಚಾರ, ಅತ್ಯಾಚಾರಗಳು ತಾಂಡವಾಡುತ್ತಿವೆ. ವಿಶ್ವಮಾನ್ಯ ವೀರಶೈವ ಧರ್ಮದ ಅನುಯಾಯಿಗಗಳು ಕೂಡ ಅಭಿಮಾನ ಶೂನ್ಯರಾಗಿ ವರ್ತಿಸುತ್ತಿದ್ದದ್ದು ಗಮನಿಸಬಹುದು. ಸ್ವಾರ್ಥ ಸಾಧನೆಗಾಗಿ ನೂರಾರು ಸಮಸ್ಯೆಗಳನ್ನು ಹುಟ್ಟು ಹಾಕಿ ಸಾಮಾನ್ಯ ಜನತೆಯನ್ನು ದಿಕ್ಕು ತಪ್ಪಿಸುತ್ತಿರುವರು. ಈ ಜಾಡ್ಯ ಸಮಾಜದ ಎಲ್ಲಾ ಸ್ತರಗಲ್ಲು ಬಲವಾಗಿ ಬೇರೂರಿ ಬಿಟ್ಟಿದೆ. ಜಂಗಮರಂತೂ ಮೇಲೆರಲಾರದೆ, ಕೆಳಗಿಳಿಯಲೂ ಆಗದೆ ಅಂತರ್ ಪಿಶಾಚಿಗಳಂತಾಗುತ್ತಿದ್ದಾರೆ. ಇಂದು ಸಮಾಜವು ಜಂಗಮರನ್ನು ಒಗ್ಗರಣೆಗೆ ಮಾತ್ರ ಬಳಸಿ ನಂತರ ಹೊರಗಿಡುವ ಕರಿಬೇವಿನ ಸೊಪ್ಪಿನಂತೆ ಮಾಡಿದೆ. ಹುಟ್ಟಿನಿಂದ ಚಟ್ಟದವರೆಗೆ ಎಲ್ಲಾ ಧರ್ಮ ಸಂಸ್ಕಾರಗಳಿಗೂ ಜಂಗಮ ಬೇಕೇ ಬೇಕು. ಆದರೆ ಅವರ ಮೂಲಭೂತ ಜೀವನ ಸೌಲಭ್ಯಗಳಿಗೆ ಮಾತ್ರ ಇವರು ದೂರ ಇರಬೇಕು. ಎನ್ನುವಂತಹ ಸ್ಥಿತಿ ಅಥವಾ ಸಮಸ್ಯೆ ನಿರ್ಮಾಣವಾಗುತ್ತಿದೆ.

೭. ನಂತರ ೧೨ನೇ ಶತಮಾನದಲ್ಲಿ ಬಂದಂತಹ ವಿರಕ್ತ ಮಠದ ಜಂಗಮರು ಈ ಸ್ಥವಾರ ಮಠಕ್ಕಿಂತಲೂ ಏಕೆ? ಪ್ರಬಲವಾಗಿದ್ದವು ಎಂದರೆ ಲೌಕಿಕ ನಿಲುವಿನಲ್ಲಿ ವೈಚಾರಿಕತೆಯನ್ನು ಅಳವಡಿಸಿಕೊಂಡಿದ್ದರು. ಭಕ್ತ ವರ್ಗದ ಸಮುಹ ಅವರ ಚರ ಜಂಗಮರಾಗಿ ನಡೆದುಕೊಂಡಿದ್ದರು. ಹೆಚ್ಚು ಜನ ಸಮುಹ ಅವರನ್ನು ಹಂಬಲಿಸುತ್ತಿತ್ತು. ಮೂರನೆಯದಾಗಿ ಅವರು ಆಧುನಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟರು. ಶಿಕ್ಷಣ ಕೇಂದ್ರವನ್ನು ತೆಗೆದರು. ಸಾಮಾಜಿಕ ಶಿಕ್ಷಣ ಕೇಂದ್ರಕ್ಕೆ ಹೆಚ್ಚಿನ ಮಹತ್ವ ಕೊಟ್ಟರು. ಶಿಕ್ಷಣ ಹೇಗೆ ಅಭಿವೃದ್ಧಿ ಹೊಂದುತ್ತಾ ನಡೆಯಿತು,ಅವರು ಅದರಂತೆ ಅಭಿವೃದ್ಧಿ ಹೊಂದುತ್ತಾ ನಡೆದರು. ಮೂಲ ಸಂಪ್ರದಾಯ ಆಚರಿಸಿಕೊಂಡು ಬರುವ ಗುರುವರ್ಗದ ಮಠದವರು ಶಿಕ್ಷಣಕ್ಕೆ ಅಷ್ಟು ಮಹತ್ವ ನೀಡಿರಲಿಲ್ಲ. ಕೇವಲ ಓದು ಕಲಿಸುವ ಗುರುಗಳಿದ್ದರು. ಅಷ್ಟು ಆಧುನಿಕ ಪ್ರಮಾಣದ ಶಿಕ್ಷಣ ಒದಗಿಸುತ್ತಿರಲಿಲ್ಲ. ಇವರು ವ್ಯಕ್ತಿಯನ್ನು ಶಿಕ್ಷಣವಂತನ್ನಾಗಿ ಕ್ರಿಯಾವಂತನ್ನಾಗಿ ಮಾಡಿದರೆ ಅವರು ಇಡೀ ಸಮಾಜವನ್ನು ಶಿಕ್ಷಿತವಾಗಿ ರೂಪವಾಗಿ

ಮಾಡಲು ಸುರು ಮಾಡಿದರು. ವಿರಕ್ತ ಸಮಾಜದ ಪ್ರತಿಯೊಂದು ರಂಗಗಳಲ್ಲಿ ಪ್ರಬಲರಾದರು. ಯಾವುದು ಹೊಸ ಶಿಕ್ಷಣ ಕ್ರಮ ಬರುತ್ತವೆಯೋ ಅವುಗಳು ತೆಗೆದುಕೊಂಡು ಬೆಳೆಸಿದ್ದರು. ಹೀಗಾಗಿ ವಿರಕ್ತ ಬೆಳೆದರು. ಗುರುವರ್ಗದವರು ಹಿಂದೆ ಬಿದ್ದರು. ಗುರುಪೀಠದವರು ಓದಿಸುವುದು ಹೋಯಿತು. ಇಲ್ಲಿ ದೊಡ್ಡ ಬದಲಾವಣೆ ಎಂದರೆ ವಿರಕ್ತರು ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಟ್ಟು ತಾವು ಶಿಕ್ಷಣ ಬೆಳೆಸಿದರು. ಜೊತೆಗೆ ತಾವು ಬೆಳೆದರು. ಆದರೆ ಗುರುವರ್ಗದವರು ಮನೆಯಲ್ಲಿ ಶಾಲೆಯನ್ನಾಗಿ ಮಾಡಿದವರು. ಆದರೆ ಆಧುನಿಕ ಶಿಕ್ಷಣವನ್ನು ಅಳವಡಿಸಿಕೊಳ್ಳುವಲ್ಲಿ ವಿಫಲವಾದರು. ಇದರಿಂದ ಸಾಮಾಜಿಕ ಬದಲಾವಣೆಯಿಂದ ಹಿಂದುಳಿದಿದ್ದರು. ಆಧುನಿಕ ಶಿಕ್ಷಣದ ಕ್ರಮವನು ವಿರಕ್ತರು ಅಳವಡಿಸಿಕೊಂಡು ಶಿಕ್ಷಣ ಬೆಳೆಸಿದ್ದರು. ಗುರುವರ್ಗದವರು ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಮತ್ತು ಶೈಕ್ಷಣಿಕವಾಗಿ ಸಹಜವಾಗಿ ಹಿಂದುಳಿದಿದ್ದರು. ಹೀಗಾಗಿ ದೊಡ್ಡ ದೊಡ್ಡ ನೌಕರಿಯಲ್ಲಿ ಗುರುವರ್ಗದವರಲ್ಲಿ ಸಿಗುವುದಿಲ್ಲ, ಆದರೆ ವಿರಕ್ತರಲ್ಲಿ ಸಿಗುತ್ತಾರೆ.

೮. ಇಡೀ ಒಟ್ಟು ಇಂದಿನ ಸಾಮಾಜಿಕ ದೃಷ್ಟಿಯಿಂದ ಈ ಸಮುದಾಯ ನೋಡಿದರೆ ಸಮಾಜ, ಸರಕಾರ ಮತ್ತು ಗುರುವರ್ಗ ಇವುಗಳನ್ನು ಗಮನಿಸಿದರೆ ಸರಕಾರ ಇತರ ಜನಾಂಗಕ್ಕೆ ಸೌಲಭ್ಯಗಳು ಕೊಟ್ಟಂತೆ ಈ ಜನಾಂಗಕ್ಕೆ ಒದಗಿಸಲ್ಲಿಲ್ಲ. ವೀರಶೈವರಲ್ಲಿ ಬರುವುದರಿಂದ ಆಸ್ತಿವಂತರು ಎಂದು ಪರಿಗಣಿಸಿದ್ದಾರೆ. ಇವರು ಆರ್ಥಿಕ ದೃಷ್ಟಿಯಿಂದ ನೋಡಿದರೆ ಇವರು ದುರ್ಬಲ ವರ್ಗದವರೆಂದು ಪರಿಗಣಿಸಬೇಕಾಗುತ್ತದೆ. ಇದ್ದ ಆಸ್ತಿಯನ್ನು ಉಳುವನೇ ಭೂ ಒಡೆಯ ಎಂಬ ಕಾಯ್ದೆಗಳಲ್ಲಿ ಹೋಯಿತು. ಏಕೆಂದರೆ ಒಕ್ಕಲುತನ ಇವರ ಪ್ರಧಾನ ಕಾಯಕವಲ್ಲ, ಯಾರೂ ಮಾಡುವುದರಿಂದ ಇದ್ದ ಭೂಮಿ ಮೇಲಿನ ಕಾಯ್ದೆಯಿಂದ ಕಳೆದುಕೊಂಡರೂ ಅದರಿಂದ ಹಿಂದುಳಿಯುವುದಕ್ಕೆ ಕಾರಣ. ಕೆಲವೆ ಕೆಲವರು ಮಠಗಳಲ್ಲಿ ಓದಿಕೊಂಡು ಮುಂದೆ ಹೋಗಿರುವುದು ಕಾಣುತ್ತೇವೆ. ಕೆಲವರು ಶಾಲೆ ಬಿಟ್ಟು ಉಳಿದಿದ್ದಾರೆ. ಆದರೆ ಬಹುಸಂಖ್ಯಾತ ಜನರು ಈ ಭಿಕ್ಷಾಟನೆಯನ್ನು ಮಾಡಿಕೊಂಡೆ ಬದುಕುತ್ತಿರುವರು. ಮುಂದೆ ಕಾಯಕದ ಗೌರವ ಕಡಿಮೆಯಾಯಿತು. ವೃತ್ತಿಗಳು ಹೋದವು. ಮತ್ತು ಸಂಪ್ರದಾಯದ ಕಾರ್ಯಕ್ರಮಗಳು ಯಾರೂ ನಡೆಸಿಕೊಂಡು ಬರುತ್ತಿಲ್ಲ. ಹೀಗಾಗಿ ಆರ್ಥಿಕತೆಯಿಂದ ಹಿಂದುಳಿರುವುದು ಒಂದು ಸಮಸ್ಯೆಯಾಗಿದೆ. ಇನ್ನು ಸಂಸ್ಕಾರಿಕ ಚೌಕಟ್ಟಿನಲ್ಲಿ ನೋಡಿದರೆ ಮಠಾಧೀಶರಾಗಲಿ, ಪೀಠಾಧೀಶರಾಗಲಿ

ಇವರುಗಳು ಕೂಡ ನಮ್ಮ ಕೆಳವರ್ಗದಲ್ಲಿ ಕೆಲಸ ಮಾಡುವವರು ಎಂದು ತಿಳಿದು, ಯಾವುದೇ ಸೌಲಭ್ಯ ಸಹಕಾರ ನಿಡುತ್ತಿಲ್ಲ. ಭಕ್ತ ವರ್ಗವಿಲ್ಲ. ಪೀಠಾಧಿಶ್ವರು ಇಲ್ಲ ಮತ್ತು ಸರಕಾರವು ಇಲ್ಲ. ಈ ಮೂರು ಮಧ್ಯ ಹೇಗೆ ಬದುಕಬೇಕು ಎಂಬುದೇ ಈ ಸಮುದಾಯದ ಸಮಸ್ಯೆಯಾಗಿದೆ. ಏಕೆಂದರೆ ದೊಡ್ಡ ಪೀಠಗಳ ಗುರುಗಳಾಗಲಿ ಮಠಾಧೀಶರಾಗಲಿ ತಮ್ಮ ಶಿಕ್ಷಣ ಸಂಸ್ಥೆಯಲ್ಲಿ ಈ ಜಂಗಮ ಹುಡುಗನಿದ್ದಾನೆ ಎಂದು ಫೀಜ ತೆಗೆದುಕೊಳ್ಳಲಾರದೆ ಶಿಕ್ಷಣ ಒದಗಿಸಲು ಯಾವ ಪೀಠ, ಮಠ ಮುಂದೆ ಬರುತ್ತಿಲ್ಲ. ಇದರಿಂದ ಇವರಿಗೆ ಯಾವುದೇ ನೌಕರಿ ಕೊಡವುದಾಗಲಿ, ಹೆಣ್ಣು ಕೊಡುವುದಾಗಲಿ ಇದೊಂದು ದೊಡ್ಡ ಸಮಸ್ಯೆಯಾಗಿದೆ. ಹಾಗಾದರೇ ಇವರು ಹೀಗೆ ಬೆಳೆಯಬೇಕು. ಹೀಗಾಗಿ ತಮ್ಮ ಜಂಗಮ ಕಾಯಕದ ಜೊತೆಗೆ ಇತರ ವೃತ್ತಿಯನ್ನು ಅವಲಂಬಿಸಬೇಕಾಯಿತು. ಇವತ್ತು ಸರಕಾರ ನೋಡಬೇಕಾಗಿದೆ. ಆದರೆ ಸರಕಾರದ ದೃಷ್ಟಿಯೊಳಗೆ ಇವರು ಬರುತ್ತಿಲ್ಲ. ಯಾವ ದೃಷ್ಟಿಯಿಂದ ದುರ್ಬಲರು ಎನ್ನುವುದು ಗಮನಿಸಬೇಕಾಗಿದೆ. ಬರೇ ಜಾತಿ ಒಂದು ದೃಷ್ಟಿಯಲ್ಲಿ ಇಟ್ಟುಕೊಂಡು ನೋಡುವುದರಿಂದ ಆ ಸಮುದಾಯ ಪರಿಪೂರ್ಣವಾಗಿ ನೋಡಲು ಸಾಧ್ಯವಿಲ್ಲ. ಆ ಕಾರಣದಿಂದ ಪೀಠಗಳಿಂದಾಗಲಿ, ಭಕ್ತವರ್ಗದಿಂದಾಗಲಿ ಮತ್ತು ಸರಕಾರದಿಂದಾಗಲಿ ಯಾವುದೇ ಸೌಲಭ್ಯ ಇಲ್ಲವಾದರೆ ಈ ಮುಂದಿನ ಸಮುದಾಯದ ಸಂಸ್ಕೃತಿಯ ಅಳಿವು-ಉಳಿವು ಹೇಗೆ ಎಂಬುದೇ ಇಂದಿನ ಸಮಸ್ಯೆಯಾಗಿದೆ. ಅದಕ್ಕೆ ಒಂದಾದರೂ ಸೌಲಭ್ಯ ಸಿಗಬೇಕು. ಗೌರವವಂತು ಮೊದಲಿನಂತೆ ಸಿಗಲು ಸಾಧ್ಯವಿಲ್ಲ.

## ಪರಿಹಾರೋಪಯಗಳು

೧. ಜಂಗಮರು ಭಕ್ತರು ಕೊಡುತ್ತಾರೆಂದು ಆಸೆ ಮಾಡುವುದಿಲ್ಲ. ಏಕೆಂದರೆ ಅವರಲ್ಲಿಯೋ ಅನೇಕ ಸಮಸ್ಯೆಗಳಾಗಿವೆ. ಅವರು ಶ್ರದ್ಧಾ ಇಟ್ಟುಕೊಂಡು ಅವರಿಗೆ ಕೊಡುವುದಿಲ್ಲ. ಹೀಗಾಗಿ ಒಂದು ಜನಾಂಗದ ಅಳಿವು - ಉಳಿವು ಪ್ರಗತಿ - ಅಪ್ರಗತಿ ಗಮನಿಸಿ ಸರಕಾರ ಇದಕ್ಕೆ ಸೌಲಭ್ಯ ಕೊಡಬೇಕಾಗಿದೆ. ಇದು ಆಗಬೇಕಾದದ್ದು ಅವಶ್ಯವಾಗಿದೆ. ಏಕೆಂದರೆ ಇತರ ಸಮುದಾಯಗಳಿಗೆ ಸಿಗುವ ಸೌಲಭ್ಯಯಂತೆ ಈ ಸಮುದಾಯಕ್ಕೂ ಸಿಗಬೇಕಾಗಿದೆ. ಇದರಿಂದ ಸರಕಾರದ ಕಡೆ ಹೆಚ್ಚು ಒತ್ತು ತರುವುದು ಅವಶ್ಯಕವಾಗಿದೆ.

೨. ಇಂದಿನ ಸಮಾಜದಲ್ಲಿ ಈ ಸಮುದಾಯದವರು ರಾಜಕಾರಣಿಯಲ್ಲಿ ಹೆಚ್ಚಾಗಿ ಕಂಡು ಬರುವುದಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇತ್ತೀಚಿನ ದಿನಗಳಲ್ಲಿ ಜಾತಿ ರಾಜಕೀಯ

ಹೆಚ್ಚಾಗಿದೆ. ಯಾರೇ ಒಬ್ಬರಿಗೆ ಸೀಟ ಸಿಗಬೇಕಾದರೆ ಆ ಜಾತಿಯವರು ಎಷ್ಟು ಜನ ಇದ್ದಾರೆ ಎಂಬುದನ್ನು ಮೊದಲು ಏಣಿಕೆಯಾಗುತ್ತದೆ. ಹೀಗೆ ನೋಡಿದರೆ ಜಂಗಮ ಸಮುದಾಯವು ಇಡೀ ಒಂದು ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಮೊದಲನೆಯದಾಗಿ ಜನಾಂಗದ ಆಧಾರದ ಮೇಲೆ ಟಕೇಟ್ ಕೊಡುವುದರಿಂದ ಇವರಿಗೆ ಟಿಕೇಟ ಸಿಗುವುದಿಲ್ಲ. ಅಕಸ್ಮಿಕವಾಗಿ ಟಿಕೇಟ ಸಿಕ್ಕಿದ್ದರೆ ಅವನಲ್ಲಿ ಚುನಾವಣೆಗೆ ಖರ್ಚು ಮಾಡುವಷ್ಟು ಆರ್ಥಿಕ ಸಭಲತೆ ಇವರಲಿಲ್ಲ. ಒಂದು ವೇಳೆ ಆರಿಸಿ ಬಂದರೆ ಅದು ಅವರ ವ್ಯಕ್ತಿತ್ವ ಅವರ ಜನಪ್ರಿಯತೆ ಆಧಾರ. ಇದು ನಿಜವಾದ ಪ್ರಜಾಪ್ರಭುತ್ವ ಸರಕಾರವಾಗುತ್ತದೆ. ಗೆದ್ದವರು ಅವರು ತನ್ನ ಸವಲತ್ತು ತಾನು ನೋಡಿಕೊಳ್ಳುತ್ತಾರೆ. ಆದರೂ ಒಬ್ಬರಿಂದ ಏನು? ಮಾಡಲು ಸಾಧ್ಯವಿಲ್ಲ. ಇದರಿಂದ ರಾಜಕೀಯದಲ್ಲಿ ಮುಂದುವರೆಯಲಿಕ್ಕೆ ಸಾಧ್ಯವಿಲ್ಲ. ಸಿಕ್ಕ ಕೆಲವರು ಜನರು ಕೂಡ ಈ ಜನಾಂಗಕ್ಕೆ ಸೌಲಭ್ಯ ಮಾಡಿಲ್ಲ. ಸಣ್ಣ ಪುಟ್ಟ ಅವಕಾಶ ಸಿಕ್ಕಿರಬಹುದು. ಆದರೂ ಈ ಸಮುದಾಯಕ್ಕೆ ಯಾವುದೇ ಸವಲತ್ತುಗಳು ದೊರಕಿಸಿಕೊಟ್ಟಿಲ್ಲ. ಹೀಗಾಗಿ ಇಡೀ ಸಮುದಾಯವು ತುಂಬ ಬೆಳೆಯಬೇಕಾಗಿದೆ.

೩. ಜಂಗಮರು ಕೂಡ ತಮ್ಮ ಜೀವನದಲ್ಲಿ ಅಲ್ಲಸಲ್ಲದ ಕೆಲಸಗಳಲಿಲ್ಲ ತೊಡಗಿಸಿಕೊಂಡಿದ್ದು ಒಂದು ಕಾರಣವಾಗಿದೆ. ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಅಧ್ಯಾತ್ಮಕಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿತ್ತು. ಆತ್ಮ, ಪರಮಾತ್ಮ, ಶಕ್ತಿ, ಪ್ರಕೃತಿ, ಪುರುಷ, ಇವುಗಳಿಗೆ ಹೆಚ್ಚಿನ ಮಹತ್ವ ನೀಡಿದರು. ಅದಕ್ಕೆ ಯಾಗ, ಶಾಸ್ತ್ರ ಈ ಪರಂಪರೆಯೊಳಗನೆ ಈ ಸಮುದಾಯವಿರುವುದರಿಂದ ಇವರು ಕೂಡ ಬಾಹ್ಯ ಪ್ರಪಂಚದ ಆಸ್ತಿಗೆ ಹೆಚ್ಚು ಮಹತ್ವ ಕೊಟ್ಟಿಲ್ಲ. ಮುಖ್ಯವಾಗಿ ಆ ಕಾಲಕ್ಕೆ ಇವರು ರಾಜರ ಧರ್ಮಗುರುಗಳಾಗಿ ಪ್ರಬಲರಾಗಿದ್ದರು. ಅಧಿಕಾರ ಪಡೆದಿದ್ದರು. ಆವಾಗ ಆತ್ಮಜ್ಞಾನ ಕಾಯಕಕ್ಕೆ ಹೆಚ್ಚಿನ ಒತ್ತು ಕೊಟ್ಟದದ್ದರಿಂದ ಈ ದೇಹ ಆತ್ಮ ಮುಖ್ಯವಾಗಿತ್ತು. ವಿನಹ ಹೊಲ ಮನೆ ಆಸ್ತಿ ಪ್ರಮುಖವಾಗಿರಲಿಲ್ಲ. ಈ ಸಿದ್ಧಾಂತ ಇವರಲ್ಲಿ ಈವತ್ತಿಗೂ ಕೂಡ ಹೆಚ್ಚು ಗಳಿಸಬೇಕೆಂಬ ಭಾವನೆ ಬರುವುದಿಲ್ಲ. ಸಂಗ್ರಹ ಬುದ್ಧಿ ಇಲ್ಲವೇ ಇಲ್ಲ. ಈ ಕಾರಣದಿಂದ ಮುಂದೆ ಸಮಾಜದಲ್ಲಿ ಪರಿವರ್ತನೆ ಯಾದಾಗ ಇವರ ಅಭಿವೃದ್ಧಿಗೆ ಕುಂಠಿತವಾಯಿತು. ಮುಂದೆ ಇವತ್ತಿನ ಸಂದರ್ಭದಲ್ಲಿ ಬದುಕೆ ಮುಖ್ಯವಾಗಿದೆ. ಧರ್ಮದ ಮೇಲೆ ನಡೆಯುತ್ತೇನೆನ್ನುವುದು ಮುಖ್ಯವಲ್ಲ. ದುಡಿಯುವುದರ ಮೇಲೆ ಜೀವನ ಮುಖ್ಯವಾಗಿದೆ. ಪ್ರತಿಯೊಬ್ಬ ವ್ಯಕ್ತಿ ದುಡಿಮೆಮಾಡಬೇಕಾಗಿದೆ. ಆ ದುಡಿಮೆ ಅದು, ಇದು ಎನ್ನುವ ಕಲ್ಪನೆಕೂಡ ಇವರಿಗೆ ಬರಬಾರದು. ಈ ಜನಾಂಗ ಇವತ್ತು ಮೂಲ ಸ್ವರೂಪವನ್ನು ಬಿಟ್ಟು ಕೊಂಡಿತಲ್ಲದೆ ಈ

೫. ಜಂಗಮರು ಯಾವುದೇ ಕೆಲಸವಿರಲಿ ಅದು ಒಂದು ಕಾಯಕವೆಂದು ತಿಳಿದು ಕೆಲಸ ಮಾಡಬೇಕೆ ವಿನಃ ಅದು ಕೀಳು ಮಟ್ಟಕ್ಕೆ ಒಯ್ಯುತ್ತದೆ, ಎಂಬ ಭಾವನೆ ಬರಕೂಡದು. ಕೆಲವರು ಹಿಂದಿನಂತೆಯೇ ಮಠಗಳಲ್ಲಿ ಔಷಧ ಕೊಡಬೇಕೆಂದು ಅದರಿಂದಲೇ ಜೀವನ ನಡೆಸಬೇಕೆಂದು ಭಾವನೆಗಳು ಇದ್ದರೆ ಬಿಡಬೇಕಾಗುತ್ತದೆ. ಏಕೆಂದರೆ ಅವು ಇಂದಿನ ಪರಿವರ್ತನೆ ಯುಗದಲ್ಲಿ ಮಹತ್ವ ಕಳೆದುಕೊಂಡಿವೆನ್ನಬಹುದು. ಯಾರು ಡಾಕ್ಟರರನ್ನು ತೋರಿಸದೇ ಇಂತಹವರಲ್ಲಿ ಹೊಗುವದಿಲ್ಲ ಹೀಗಾಗಿ ಇದನ್ನು ಹಿಡಿದುಕೊಂಡು ಬದುಕುತೆನೆಂದರೆ ಆಗುವುದಿಲ್ಲ. ಈ ವೃತ್ತಿಗಳು ಮೊದಲು ನಡೆದಿವೆ ಹೆಸರುಕೂಡ ಬಂದಿವೆ. ಅವು ಆರ್ಥಿಕವಾಗಿಯು ಬೆಳೆದಿವೆ. ಆದರೆ ಕೆಲವರು ಅವುಗಳನ್ನು ಹಿಡಿದುಕೊಂಡು ಮನೆಯಲ್ಲಿಯೇ ಕುಳಿತುಕೊಂಡಿರುತ್ತಾರೆ. ಅಂತಹವರು ಅದೇ ಕೆಲಸವೆನ್ನುತ್ತಾರೆ. ಈಗ ಘಂಟೆ ಹೊಡೆಯುವವರು ಘಂಟೆ ಹೊಡೆಯುವದೇ ಕೆಲಸ ಎನ್ನುತ್ತಾರೆ. ಮುಳ್ಳಾಗಿ ಮೇಲೆ ಬಜಾರದಲ್ಲಿ ನಿಂತುಕೊಳ್ಳವದೊಂದೆ ಕೆಲಸ ಎನ್ನುತ್ತಾರೆ. ಹಿಂದಿನ ಕಾಲದಲ್ಲಿ ಈ ಕಾಯಕಗಳು ಮಹತ್ವ ಪಡೆದುಕೊಂಡಿದವು. ಜನರು ಒಂದು ಕಾಲಕ್ಕೆ ಜನರಿಗೆ ಎಚ್ಚರಿಸುತ್ತಿದ್ದವು. ಅದಕ್ಕೆ ಗೌರವ ಕೂಡ ಕೊಡುತ್ತಿದ್ದರು. ಈಗ ಹಾಗೆ ಮಾಡುತೇನೆಂದರೆ ನಡೆಯುವುದಿಲ್ಲ ಈಗ ಬಜಾರದಲ್ಲಿ ಹಾಗೆ ನಿಂತುಕೊಳ್ಳುತ್ತೆನೆಂದರೆ ಇಂದಿನ ಜನರು ಕೆಲಸಕ್ಕೆ ಬಾರದವ ನಿಂತಿಕೊಂಡಿದಾನೆಂದು ತಿಳಿದುಕೊಳ್ಳುತ್ತಾರೆ ಆದರೆ ಅದೇ ಸಮಯವನ್ನು ಬೇರೆ ಯಾವದೇ ಕೆಲಸಕ್ಕೆ ಉಪಯೋಗಿಸಿದರೆ ಆರ್ಥಿಕವಾಗಿ ಮುಂದೆ ಬರುತ್ತಾನೆ. ಅಥವಾ ಸಾಧ್ಯವಾದ ವ್ಯಾಪಾರ ಮಾಡಿದರೆ ಬದುಕುತ್ತಾನೆ. ಹೀಗೆ ವೃತ್ತಿಯಲ್ಲಿ ಬದಲಾವಣೆಯಾಗುವದು ಅನಿವಾರ್ಯ. ಹಳೆಯ ವೃತ್ತಿಗಳನ್ನು ಬಿಟ್ಟು ಹೊಸ ಸಮಾಜದಲ್ಲಿ ಪರಿವರ್ತಗೊಂಡ ವೃತ್ತಿಗಳನ್ನು ಮಾಡುತ್ತಾ ಮುಂದುವರೆಯಬೇಕಾಗಿದೆ. ಮೊದಲಿನಂತೆ ನನಗೆ ಗೌರವ ಸಿಗಬೇಕು ಎಂದರೆ ಅದು ಇಂದು ಸಿಗುವುದಿಲ್ಲ. ಆವಾಗ ಪ್ರತಿಯೊಂದಕ್ಕೆ ಮಾರ್ಗದರ್ಶಕರಾಗಿ ಇರುತ್ತಿದ್ದರು ಎಲ್ಲರೂ ಗೌರವ ಕೊಡುತ್ತಿದ್ದರು. ಆದರೆ ಇಂದು ವೈಚಾರಿಕತೆ ಬಂದಿದರಿಂದ ಅಂದಿನಂತೆ ಇಂದು ನಡೆಯುವದಿಲ್ಲ. ಅದಕ್ಕಾಗಿ ಜಂಗಮರು ವೃತ್ತಿಯಲ್ಲಿ ಬದಲಾವಣೆ ಮಾಡಿಕೊಂಡು ಚಲನಶೀಲವಾಗುವುದು ಇಂದು ತುಂಬ ಅನಿವಾರ್ಯವಾಗಿದೆ.

೬. ಜಂಗಮ ಸಮುದಾಯದಲ್ಲಿ ಕ್ರಿಯಾತ್ಮಕವಾಗಿ ಬದಲಾವಣೆಯಾಗಬೇಕಾದರೆ ಜಾತಿ ವಿನಾಶಕ್ಕೆ ಕೆಲಸ ಆಗಬೇಕು. ಏಕೆಂದರೆ ವೀರಶೈವ ಧರ್ಮದಲ್ಲಿ ಅನೇಕ ಒಳಪಂಗಡಗಳಾಗಿವೆ

ಇವುಗಳು ಹೊಗಲಾಡಿಸಬೇಕಾಗುತ್ತದೆ. ಮೊದಲು ಒಳ ಪಂಗಡಗಳು ಇರಲಿಲ್ಲ. ಹೀಗಾಗಿ ಸಮಾಜದಲ್ಲಿ ಸ್ಥಿರತೆ ಇತ್ತು. ಸ್ಥಿರತೆ ಇಲ್ಲವಾದರೆ ಸಮಾಜವು ದುರ್ಬಲತೆಯಾಗುತ್ತದೆ. ಇದು ಒಂದು ಬಲವಾದ ಸಮಸ್ಯೆಯಾಗಿದೆ. ಇದನ್ನು ಹೊಗಲಾಡಿಸುವದು ಮುಖ್ಯವಾಗಿದೆ. ಹಾಗೆಯೇ' ಈ ಸ್ಪರ್ದಾತ್ಮಾಕ ಯುಗದಲ್ಲಿ ಓದಿಗೂ ಹೆಚ್ಚಿನ ಒತ್ತು ಕೊಟ್ಟು ಮತ್ತು ಅಷ್ಟೇಯೆ ದುಡಿಮೆಗೂ ಬೆಲೆ ಕೊಡಬೇಕು. ಕೇವಲ ಧಾರ್ಮಿಕ ಕಾರ್ಯ ಮಾಡುತ್ತೇನೆಂದರೆ ಸರಿಯಲ್ಲ. ಏಕೆಂದರೆ ಮಾಡುವ ಕ್ರಿಯೇಗಳು ಸಮಾಜಕ್ಕೆ ಉಪಯೋಗವಾಗಬೇಕು ನಮ್ಮಗೂ ಸಹಾಯಕವಾಗಬೇಕು ಸಹಾಯಕವಾಗಲಿಲ್ಲ ಎಂದರೆ ಬಿಟ್ಟು ಬಿಡಬೇಕು. ಸಾಮಾಜದಂತೆ ಬದುಕಲು ಕಲಿಯಬೇಕು. ನಾನು ಹಾಗೇನೇ ಆ ಚರಣೆಗಳು ಮಾಡುಕೊಂಡು ಬರುತೆನೆಂದರೆ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಕಾಯಕಗಳ ಜೊತೆಗೆ ಇತರ ವೃತ್ತಿಗಳಲ್ಲಿ ಭಾಗಿಯಾಗಿ ನಡೆದರೆ ಸಮುದಾಯ ಮುಂದವರೆಯುತ್ತದೆ. ।

೭. ಕೆಲವರು ಪೂಜೆ ಮಾಡದೇ ಊಟ ಮಾಡುವದಿಲ್ಲ ಬೇರೆ ಕಡೆ ನೀರು ಸಹಿತ ಕುಡಿಯುವದಿಲ್ಲ. ಈ ಆಚರಣೆಗಳು ತಮ್ಮ ಆತ್ಮ ಶಾಂತಿಗಾಗಿಯೇ ಮಾಡಿಕೊಳ್ಳಬೇಕು ವಿನಹ ಇತರರ ಮೇಲೆ ಯಾರು ಬಲವಂತ ಮಾಡಕೂಡದು. ಕೇಲವರು ಮುಟ್ಟಿಕೊಳ್ಳದ ನೀರು ಬೇಡುತ್ತಾರೆ. ಅಂತಹ ನೀರು ತರಬೇಕಾದರೆ ಬಾವಿಗೂ ಕೊಳವೆ ಬಾವಿಗೂ ಹೊಗಿತರುವಲ್ಲಿ ಸಮಯ ವಿಳಂಭವಾಗುತ್ತದೆ. ಹೀಗೆ ಮಾಡುವದರಿಂದ ಸಮಯ ವ್ಯರ್ಥವಾಗುವದರ ಜೊತೆಗೆ ಉಪಯೋಗವು ಯಾಗುವದಿಲ್ಲ ಹೀಗಾಗಿ ಇಂತಹ ಆಚರಣೆಗಳು ಮಾಡುವದರಲ್ಲಿ ಸರಳೀಕರಣಗೊಳಿಸಬೇಕು. ಅದೇ ಸಮಯ ಬೇರೆಯಾವದಾದರೂ ಕೆಲಸಕ್ಕೆ ಉಪಯೋಗಿಸಿದರೆ ಮುಂದೆ ಬರಬಹುದು. ಆದರೆ ಸರಳ ಕಾಯಕ ಅಳವಡಿಸಿಕೊಳ್ಳಬೇಕು. ಇಲ್ಲಿ ಚುಚ್ಚುಕೊಂಡೆ ತಿನ್ನಬೇಕು, ಇಲ್ಲವೆ ಬೇಡಿಕೊಂಡೆ ತಿನ್ನ ಬೇಕು ಎಂದರೆ ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಇದರಿಂದ ಪರಿವರ್ತನೆಶೀಲರಾಗುವದು ಅತಿ ಅವಶ್ಯಕವಾಗಿದೆ.

೮. ವೀರಶೈವ ಸಮಾಜವ ಅಥವ ವೀರಶೈವ ಧರ್ಮ ಎಂಬುದು ಬೆಳೆಯಬೇಕಾದರೆ ಜಂಗಮರು ಮಠಗಳು ತುಂಬ ಮುಖ್ಯ. ಯಾವುದೆ ಒಂದು ಧರ್ಮವನ್ನು ಕಾಪಾಡಿಕೊಂಡು ಬರಬೇಕಾದರೆ ಆ ಧರ್ಮದ ಮುಖ್ಯ ಪುರೋಹಿತ ವರ್ಗವು ಸಮಾಜಕ್ಕೆ ಅಗತ್ಯ. ಅಂತೆಯೇ ಜಂಗಮರು ವೀರಶೈವ ಧರ್ಮಕ್ಕೆ ಮುಖ್ಯಸ್ಥರು. ಇದರಿಂದ ಆಧುನಿಕ ಯುಗದಲ್ಲಿ ಆಧುನಿಕ ಮೌಲ್ಯಗಳು ಕೂಡ ತಮ್ಮ ಕಾಯಕಗಳಲ್ಲಿ ಅಳವಡಿಸಿಕೊಂಡು ಸಾಗಿ ಭಕ್ತವರ್ಗಕ್ಕೆ

ಸ್ಪಂದಿಸಬೇಕು. ಜೊತೆಗೆ ಧಾರ್ಮಿಕ ವಿಧಿವಿಧಾನಗಳಲ್ಲಿ ಸರಳೀಕರಣಗೊಳಿಸಬೇಕು. ಹಿಂದಿನಂತೆ ಬಹಳ ಸಮಯದವರೆಗೆ ಯಾವುದೇ ವಿಧಿ ಇರಕೂಡದು.ಏಕೆಂದರೆ ಬಹಳ ಹೊತ್ತು ಕೂಡುವಷ್ಟು ಇಂದಿನ ಜನಗಳಲ್ಲಿ ಸಮಯವಿಲ್ಲ. ಇದರಿಂದ ಅವಶ್ಯಕವಾದ, ಸರಳವಾದ, ಸದಾಮನಸ್ಸುನು ಸನ್ನ ಮಾರ್ಗದಡಿಗೆ ಕರೆದುಕೊಂಡು ಹೋಗುವಂತ ವುಗಳಾಗಬೇಕು. ಹೀಗಾಗಿ ಜಂಗಮ ಪೀಠಧ್ಯಕ್ಷರು, ಜಂಗಮ ಮುಖ್ಯಸ್ಥರು, ಜಗದ್ಗುರುಗಳು ವಿಚಾರಿಸಿ ಇಂದಿನ ಸಮಾಜಕ್ಕೆ ತಕ್ಕಂತೆ ವರ್ತಿಸಿ ಅಭಿವೃದ್ಧಿಪರ ಪ್ರಯತ್ನಗಳು ಮಾಡುವುದರಿಂದ ಸಮಾಜದಲ್ಲಿ ಜಂಗಮರ ಸ್ಥಾನ ಮೊದಲಿನಂತೆಯಾಗಲು ಸಾಧ್ಯ.

೯. ಗುರುಸ್ಥಲದವರು ದೀಕ್ಷೆ ಕೊಡುವುದು, ನಾಮಕರಣ, ವಿವಹ ಮರಣಗಳಲ್ಲಿ ಅಪಕರ್ಮಗಳನ್ನು ಕೈಗೊಳ್ಳುವುದು ಪಂಚಾಪೀಠದ ಜಂಗಮ ಮಾಡುತ್ತಾರೆ. ವಿರಕ್ತರು ಕೇವಲ ಜ್ಞಾನಾರ್ಜನೆಯ ಕಡೆ ಹೆಚ್ಚು ಗಮನಕೊಟ್ಟು ಎಲ್ಲಾರೀತಿಯಿಂದ ಮಠವನ್ನು ಅಭಿವೃದ್ಧಿಪಡಿಸುವ ಕರ್ತವ್ಯವಾಗಿರುತ್ತದೆ. ಈ ಎರಡು ಪೀಠದ ಜಂಗಮರು ತಮ್ಮ ತಮ್ಮ ಕಾರ್ಯವ್ಯಾಪ್ತಿಯೊಳಗಡೆ ಕಾರ್ಯವನ್ನು ನಿರ್ವಹಿಸಿಕೊಂಡು ಹೋಗಿದರೆ ಇವರಲ್ಲಿ ಯಾವುದೇ ಸಮಸ್ಯೆಗಳು ಉಂಟಾಗುವುದಿಲ್ಲ. ಹೀಗಾಗದೆ ಇದ್ದಲ್ಲಿ ಒಬ್ಬರ ಕಾರ್ಯದಲ್ಲಿ ಇನ್ನೊಬ್ಬರು ಹಸ್ತಕ್ಷೇಪ ಮಾಡುವದರಿಂದ ಒಬ್ಬೊಬ್ಬರಲ್ಲಿ ಅಸುಯವನ್ನು ಹುಟ್ಟಿಕೊಂಡು ಒಳಜಗಳ ನಡೆಯುವುದುಂಟು. ಇದರಿಂದ ಗುರುವರ್ಗಪೀಠದವರು ವಿರಕ್ತಪೀಠದವರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ತಾವು ಅಗ್ರಗಣ್ಯರು ಎಂದು ತಿಳಿದು ಕೊಂಡು ಸೌಹಾರ್ದವನ್ನು ಬೆಳೆಸಿಕೊಂಡು ಸಾಗಿ ಸಮಾಜದಲ್ಲಿ ಸುಧಾರಣೆಗಳು ತರಲು ಸಾಧ್ಯವಾಗುತ್ತದೆ. ಹೀಗಾಗು ವುದರಿಂದ ಹಂತ ಹಂತವಾಗಿ ಜಂಗಮರಿಗೆ ಮೊದಲಿನ ಗೌರವಗಳು ತಾನೇ ತಾನಾಗಿ ಹುಡುಕಿಕೊಂಡು ಬರುತ್ತವೆ. ಏಕೆಂದರೆ ಸರಕಾರದ ಸೌಲಭ್ಯಗಳಿಲ್ಲ, ಪೀಠ, ಮಠಗಳ ಸಹಕಾರವಿಲ್ಲ, ಮೇಲಿಂದ ಆಸ್ತಿಯಿಲ್ಲ ಎಂದಾಗ ಸಮುದಾಯವು ಯಾವ ಮಾರ್ಗದೆಡೆ ಸಾಗಬೇಕು? ಆದರಿಂದ ಜಂಗಮರು ಜಂಗಮರಿಗೆ ನೋಡಬೇಕಾಗಿದೆ. ಜೊತೆಗೆ ಸಮಯದಾಯದಲ್ಲಿ ಪರಿವರ್ತನೆ ಮಾಡಬೇಕಾಗಿದೆ.

ಮಠಗಳ ವ್ಯವಸ್ಥೆಗಳಲ್ಲು ಅನೇಕ ಬದಲಾವಣೆಗಳು ಕಂಡುಬರುತ್ತಿವೆ. ಜಂಗಮ ಜಾತಿಯಲ್ಲಿ ಹುಟ್ಟಿದ ಜಂಗಮನನ್ನು ಬಿಟ್ಟು ಕೆಲವು ಮಠಗಳಿಗೆ ಇತರ ಬೇರೆ ಜಾತಿಯ ವರನ್ನು ಮಠಾಧ್ಯಕ್ಷರನ್ನಾಗಿ ಮಾಡುತ್ತಿರುವದು ಕಾಣಬಹುದು. ಇದರಿಂದ ಜಂಗಮ ಜಾತಿಯಲ್ಲಿ ಹುಟ್ಟಿರುವ ಜಂಗಮರು ಅವರಿಗೆ ಹೆಚ್ಚಿನ ಗೌರವ ಕೊಡುವುದಾಗಲಿ, ಅವರ

ಮಾತು ಕೇಳದಿರುವದಾಗಲಿ ಮಾಡುವದನ್ನು ನೋಡಬಹುದು. ಇದು ಸಾಮಾನ್ಯವಾದಂತ ಮಾತು. ಹೀಗೆ ಮಾಡುವದರಿಂದ ಜಂಗಮ ಸಮುದಾಯದ ಮೇಲೆ ಪರಿಣಾಮವನ್ನು ಬಿರುತ್ತದೆ ಇದರಿಂದ ಜಂಗಮರನ್ನು ಬಿಟ್ಟು ಇತರ ಯಾವದೇ ಜಾತಿಯ ಜನರನ್ನು ತಂದು ಮಠ ಪೀಠದ ಮೇಲೆ ಕುಳರಿಸುತ್ತಿರುವವರೆಂದು ಅಸಮಧಾನಗೊಂಡು ಜಂಗಮರು ತಮ್ಮ ವೃತ್ತಿಕಾಯಕವನ್ನು ಬಿಟ್ಟು ಇತರ ಕಾಯಕಗಳಲ್ಲಿ ಸೇರಿಕೊಂಡಿರುವದು ಕಾಣುತ್ತೇವೆ. ಏಕೆಂದರೆ ಮಠಾಧೀಶರು ಜಂಗಮರ ಸಮುದಾಯಕ್ಕೆ ಸೌಲಭ್ಯಗಳು ದೊರಕಿಸುವಲ್ಲಿ ಹಿಂದೆ ಬಿಳುತ್ತಾರೆ ಎಂಬ ನಂಬಿಕೆ ಅವರದು. ಗುರುಪೀಠದವರು, ವಿರಕ್ತಪೀಠದವರು ಈ ಕಡೆ ಗಮನ ಹರಿಸಿ ಇಂತಹ ಸೂಕ್ಷ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಸಾಗುವದು ಇಂದು ತುಂಬ ಅವಶ್ಯಕತೆಯಾಗಿದೆ. ಜೊತೆಗೆ ಆದರ್ಶ ಜಂಗಮನ ನಡತೆ ಈಗ ನಶಿಸಿ ಹೋಗದಂತೆ ನೋಡುವದು ಮುಖ್ಯವಾಗಿದೆ.

೧೦. ಮಠದ ಪೀಠಕ್ಕೆ ಆರಿಸುವಾಗ ಜಂಗಮನು ಆಧುನಿಕ ಮನೋವೃತ್ತಿಯುಳ್ಳವರಾಗಿ ಇಂದಿನ ಸಮಸ್ಯೆಗಳಿಗೆ ಪರಿಹಾರ ನೀಡುವಂತಹ ಜ್ಞಾನವನ್ನು ಪಡೆದಿರುವವನ್ನಾಗಿದ್ದರೆ ಆಧುನಿಕ ಜನರ ಮತ್ತು ಶಿಕ್ಷಣದ ಜೊತೆಗೆ ವೀರಶೈವ ಧರ್ಮದ ಅಲ್ಲದೆ ಇತರ ಧರ್ಮಗಳ ಬಗೆಗಿನ ತಿಳುವಳಿಕೆಯನ್ನು ಶಾಸ್ತ್ರೀಕ್ತವಾಗಿ ಪಡೆದವನಿರಬೇಕು. ಇದರಿಂದ ಮಠವನ್ನು ಕಟ್ಟುವಲ್ಲಿ, ಬೆಳೆಸುವಲ್ಲಿ, ನೈತಿಕ ಹಾಗೂ ಶೈಕ್ಷಣಿಕ ಸಾಧನೆಗಳು ಮಾಡುವಲ್ಲಿ ಸಹಾಯಕವಾಗಿರುತ್ತದಲ್ಲದೆ ಮಠದಿಂದ ಸಮಾಜಕ್ಕೆ ಸ್ವಲ್ಪದರು ಕೊಡುಗೆ ನೀಡಿದಂತೆಯಾಗುತ್ತದೆ. ಇಲ್ಲವಾದಲ್ಲಿ ಮಠವು ಎತ್ತೆತ್ತ ಕಡೆ ಸಾಗುತ್ತದೆ ಮುಂದೆ ಗುರುತಿಸಲಾಗದಂತೆ ಸಮಯ ಕೂಡ ಬರುತ್ತದೆ. ಇದರಿಂದ ಪೀಠಾಧೀಶರುಗಳು ಒಳ್ಳೆಯ ಜಂಗಮನನ್ನು ಮಠಕ್ಕೆ ನೇಮಿಸುವಲ್ಲಿ ಎಚ್ಚರವಹಿಸಬೇಕು. ಮಠಕ್ಕೆ ಜಂಗಮರನ್ನು ಆರಿಸುವಾಗ ಆತನ ಸಂಬಂಧಕರಿಗೆ ಇದರಲ್ಲಿ ಆವರ್ಣ ಮಾಡಿಕೊಡಬಾರದು ಜಂಗಮರ ಬುದ್ಧಿ ಶಕ್ತಿಯ ಆಧಾರದ ಮೇಲೆ ಆರಿಸುವದು ನೈತಿಕ ಮಟ್ಟದಲ್ಲಿ ನಡೆಯುವುದು ಅಗತ್ಯ. ಏಕೆಂದರೆ ಇಂದಿನ ಸಂದರ್ಭದಲ್ಲಿ ಧಾರ್ಮಿಕ, ನೈತಿಕ ಜವಾಬ್ದಾರಿಯ ಸಾಮರ್ಥ್ಯಗಳ ಆಧಾರದ ಮೇಲೆ ಜಂಗಮರನ್ನು ಆರಿಸಿದಲ್ಲಿ ಆನಾರೋಗದಿಂದ ತಡಪಾಡುತ್ತಿರುವ ವೀರಶೈವ ಲಿಂಗಾಯತ ಧರ್ಮದ ಕ್ಷೇಮಾಭಿವೃದ್ಧಿಯನ್ನು ಮಾಡುವಲ್ಲಿ ಸಹಾಯವಾಗುತ್ತದೆ.

೧೧. ಮಠದ ಆಸ್ತಿ ಪಾಸ್ತಿಗಳು ಮಠಾಧೀಶನ ಮನೆತನಕ್ಕಾಗಲಿ ಅಥವಾ ಅವರ ಸ್ವಂತದಕ್ಕೆ ಉಪಯೋಗಕ್ಕಾಗಲಿ ಹಾಳಾಗದಂತೆ ನೋಡಿಕೊಂಡು ನಿಯಂತ್ರಿತವಾಗುವಂತೆ ಮಾಡುವದು

ಪ್ರಮುಖವಾಗಿದೆ. ಮಠದ ಸರ್ವ ಭಕ್ತಾದಿಗಳು ದುರುಪಯೋಗಪಡಿಸದಂತೆ ಜಂಗಮನು ತನ್ನ ಸ್ವಂತಕ್ಕಾಗಿ ಬಳಸದಂತೆ ಯೋಜನೆಗಳನ್ನು ಹುಡುಕಿಕೊಂಡು ಮಠವು ಆಸ್ತಿ ಮಾಡಿಕೊಂಡು ಮೆರೆಯುವ ಸಂಸ್ಥೆಗಳಾಗದಂತೆ ದೊಡ್ಡ ವ್ಯಾಪಾರಿಗಳಂತಾಗಲಿ ಅಥವ ಬ್ಯಾಂಕುಗಳಾಗಲಿ ಸಾಲ ಕೊಡುವ ವ್ಯವಹಾರದ ಸಂಸ್ಥೆಗಳಾಗದಂತಾಗಲಿ ನೋಡಿಕೊಂಡು ಸಾರ್ವಜನಿಕ ಕಾರ್ಯಕ್ಕೆ ಖರ್ಚುಮಾಡಿ ಮಠವು ಸಮಾಜದ ಪ್ರತಿಯೊಂದು ರಂಗಕ್ಕೆ ಸ್ಪಂದಿಸುವಂತೆ ಮಾಡುವದು ಇಂದು ಜರೂರಿಯಾಗಿರುವದು ಸರ್ವರು ಗಮನಿಸಬೇಕಾಗಿದೆ.

೧೨. ಮಠದಿಂದ ಆರಂಭಗೊಂಡ ದೊಡ್ಡ ಶಿಕ್ಷಣ ಕ್ಷೇತ್ರಗಳಲ್ಲಿ ಜಂಗಮರ ಮಕ್ಕಳಿಗೆ ಮತ್ತು ಬಡಜನರ ಮಕ್ಕಳಿಗೆ ಉಚಿತ ಶಿಕ್ಷಣ ಪಡೆಯುವ ವ್ಯವಸ್ಥೆ ಮಾಡಬೇಕು ಕೇವಲ ಶ್ರೀಮಂತರ ಮಕ್ಕಳಿಗೆ ಶಿಕ್ಷಣ ಸಿಗುವಂತೆಯಾಗಿ ಬಿಟ್ಟರೆ ಅದು ಮಠವಾಗುವದಿಲ್ಲ ಅದು ಹಣದ ಸಂಸ್ಥೆಯಾಗಿ ಕಂಡುಬರುತ್ತದೆ. ಪೇಟೆಯಲ್ಲಿ ಅಂಗಡಿಯನ್ನು ತೆಗೆದುಕೊಂಡು ವ್ಯಾಪಾರ ಮಾಡುವ ಶೆಟ್ಟಿಗಳಂತೆ ಅಥವ ವ್ಯಾಪಾರಿಗಳಂತೆ, ಒಂದು ಕಡೆ ಹಣದಪೆಟ್ಟಿಗೆ ಇಟ್ಟುಕೊಂಡು ಇನ್ನೊಂದು ಕಡೆ ಟೆಲಿಫೋನ ಇಟ್ಟುಕೊಂಡು ತಮ್ಮಗೆ ಬೇಕಾದವರನ್ನು ತೆಗೆದುಕೊಳ್ಳುವ ದೊಡ್ಡ ಶೆಟ್ಟಿಗಳಾಗಿದ್ದರೆ ವಿದ್ಯಾರ್ಥಿಗಳ ಪ್ರವೇಶ ಅಧ್ಯಾಪಕರ ನೌಕರಿ, ಇವುಗಳ ಮೇಲೆ ಪರಿಣಾಮವುಂಟಾಗಿ ಮಠದ ಮಿಲಿನ ಗೌರವ ಹೊರಟುಹೋಗುತ್ತದೆ. ಇದರಿಂದ ಜಂಗಮರ ಮಠಗಳು ಜಂಗಮರಂತೆ ಅಲೆದಾಡುವಂತೆ ಅಸಾಹಾಯಕವಾಗಿ ಬಂದವರಿಗೆ ಅವರನ್ನು ಪರೀಕ್ಷಿಸಿ ಅನ್ನದಾಹ, ಶಿಕ್ಷಣ ದಾಹವನ್ನು ಹೊಗಲಾಡಿಸುವ ಹಿಂದಿನ ಪುರಾತನದ ಮಠಗಳಂತೆಯಾಗುವುದು ಇಂದು ಅವಶ್ಯಕವಾಗಿದೆ ಇದನ್ನು ಪೀಠಾಧ್ಯಕ್ಷರು, ಪಟ್ಟದ್ದೇವರು, ಪಟ್ಟಾಧೀಕಾರಿಗಳು, ಮಠದ ಆಡಳಿತವರ್ಗವು ಇತಕಡೆ ನೋಡಬೇಕಾಗಿದೆ.

ಒಬ್ಬನಲ್ಲಿ ಗುರು ವರ್ಗ ಜಂಗಮರಲ್ಲೇ ಮತ್ತು ವಿರಕ್ತ ಜಂಗಮರಲ್ಲೇ ಮೇಲು ಕೀಲುಗಳೆಂಬ ಭೇದಭಾವಗಳಿವೆ, ಅಂತಸ್ತುಗಳಿವೆ. ಒಂದೇ ಮನೆಯಲ್ಲಿ ಒಬ್ಬರನೊಬ್ಬರು ಭೇದ ಭಾವದಿಂದ ಕಾಣುತ್ತಿರಬೇಕಾದರೆ ಸರಿಸಮಾನತೆ ಕಣ್ಮರೆಯಾಗುವದು. ಮನೆ ಎಂದಿಗೂ ಅಭಿವೃದ್ಧಿಕಡೆ ಸಾಗುವದಿಲ್ಲ ಕೋನೆಗೆ ಆ ಮನೆಯ ಹೆಸರು ಒಂದು ದಿವಸ ಕಣ್ಮರೆಯಾಗುತ್ತದೆ. ಅದರಂತೆ ಜಂಗಮ ಜಂಗಮರಲ್ಲೇ ಭೇಧವನ್ನು ಬಿಟ್ಟು ಸರ್ವರು ಒಂದೇ ಎನ್ನುವುದನ್ನು ಕಲಿಯಬೇಕಾಗಿದೆ. ಏಕೆಂದರೆ ಶ್ರೀಮಂತ ಜಂಗಮರು ಇಂದು ಬಡ ಜಂಗಮರಿಗೆ ತೀರ ಕೀಳು ಮಟ್ಟದಲ್ಲಿ ಕಾಣುತ್ತಾರೆ. ಹೊರತು ಇದ್ದ ಸಹಾಯವನ್ನು ಮಾಡದಿರುವುದು ಕಾಣುತ್ತಿದ್ದೇವೆ.

ಹೀಗಾಗದೇ ಇದ್ದಲ್ಲಿ ಸಮುದಾಯ ಮುಂದೆ ಸಾಗಲಿಕ್ಕೆ ಸಾಧ್ಯ. ಏಕೆಂದರೆ ಸದ್ಯ ಮಠಾಧೀಶರ, ಪಟ್ಟದೇವರ ಮತ್ತು ಸರಕಾರದವರ ಈ ಮೂವರ ಕಡೆಯಿಂದ ಯಾವುದೇ ಸೌಲಭ್ಯಗಳು ಇಲ್ಲ ಜೊತೆಗೆ ಪರಂಪರೆಯ ಆಸ್ತಿ ಅಂತು ಇಲ್ಲವೇಯಿಲ್ಲ. ಹೀಗಾಗಿ ಈ ಸಮುದಾಯ ಯಾವ ಕಡೆ ಸಾಗಬೇಕು ಎನ್ನುವುದೇ ಪ್ರಶ್ನೆಯಾಗಿದೆ. ಆದ್ದರಿಂದ ಜಂಗಮರು ತಮ್ಮ ತಾವೇ ಶ್ರಮಿಸಬೇಕಾಗಿದೆ. ಮಠ ಮಾನ್ಯ ಗುರುಗಳು ಒಂದಾಗಿ ವೈಷಮ್ಯಗಳಿದ್ದರೆ ಮರೆತು ಒಂದಾಗಬೇಕು. ಹೀಗೆ ಮಾಡಿ ಸರ್ಕಾರಕ್ಕೆ ಮೊರೆ ಹೋಗಿ ಇತರ ಹಿಂದುಳಿದ ಜಾತಿ ಜನಾಂಗಗಳಿಗೆ ಸೌಲಭ್ಯಗಳು ಒದಗಿಸುವಂತೆ ಈ ಸಮುದಾಯವನ್ನು ಆರ್ಥಿಕ ದೃಷ್ಟಿಯಿಂದ ಗಮನಿಸಿ ಇದಕ್ಕೆ ಇತರ ಪಂಗಡಗಳಂತೆ ಸೌಲಭ್ಯಗಳು ಒದಗಿಸುವಂತೆ ಒತ್ತಾಯಿಸಬೇಕಾಗಿರುವುದು ಅಗತ್ಯವಾಗಿದೆ. ಕೆಲವು ಅಂಶಗಳು ಸರ್ಕಾರ ಮತ್ತು ಅಧಿಕಾರಿಗಳ ಗಮನಕ್ಕ ತರಲಾಗಿದೆ. ಈಗ ಸರ್ಕಾರ ಈ ಸಮುದಾಯ ಕಡೆಗೆ ಗಮನಿಸಬೇಕಾಗಿದೆ. ಜೊತೆಗೆ ಎಲ್ಲಾ ಜಂಗಮರು ಒಂದಾಗಿ ಮೇಲಿನ ಸಮಸ್ಯೆಗಳನ್ನು ಜೊತೆಗೆ ಪೂರಕ ಪರಿಹಾರವನ್ನು ಕಂಡುಕೊಂಡು ಆಧುನಿಕ ಸಮಾಜದಲ್ಲಿ ಪರಿವರ್ತನೆಗೊಂಡು ಬದುಕುವುದು ಅಗತ್ಯವಾಗಿದೆ.

ಜೊತೆಗೆ ಪೀಠಾಧ್ಯಕ್ಷರು, ಮಠಾಧೀಶರು, ಇಂದಿನ ಜಂಗಮ ಮಕ್ಕಳಿಗೆ ಜಂಗಮ ಸಂಸ್ಕಾರಗಳ ಕೊರತೆ ಕಂಡು ಬರುತ್ತಿದೆ. ಹೀಗಾಗಿ ಅವುಗಳಿಗೆ ಒಳ್ಳೆಯ ಸಂಸ್ಕಾರ ನೀಡುವಂತಹ ಕಾರ್ಯ ಇಂದು ಪ್ರಮುಖವಾಗಿದೆ. ಹೀಗೆ ಮಾಡುವುದರಿಂದ ಜಂಗಮ ಸಂಸ್ಕೃತಿಯು ಉಳಿಸಿಕೊಂಡು ಬರುವುದಕ್ಕೆ ಸಹಾಯವಾಗುತ್ತದೆ. ಜೊತೆಗೆ ಇಂದಿನ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಪರಿವರ್ತನೆಯ ಸಮಾಜಕ್ಕೆ ಹೊಂದಿಕೊಂಡು ಈ ಸಮುದಾಯ ವರ್ತಿಸುವುದು ಇಂದು ಅನಿವಾರ್ಯವಾಗಿದೆ.

ರಾಜ್ಯದಾದ್ಯಂತ ಅನೇಕ ಜಂಗಮರ ಅಭಿವೃದ್ಧಿಯ ಸಂಘಗಳು ಹುಟ್ಟಿಕೊಂಡಿವೆ. ಅವುಗಳು ಕ್ರಿಯಾತ್ಮಕವಾದ ಸೇವೆಯನ್ನು ಸಮುದಾಯಕ್ಕೆ ಕೊಟ್ಟು ಅಭಿವೃದ್ಧಿಪಡಿಸಿಕೊಂಡು ಸಾಗುವಲ್ಲಿ ಪ್ರಯತ್ನ ಮಾಡುವುದು ಅವಶ್ಯವಾಗಿದೆ. ಏಕೆಂದರೆ ಮುಂದಾದರು ಜಂಗಮರು ತಮ್ಮ ಕಾಲಿನ ಮೇಲೆ ನಿಂತುಕೊಳ್ಳುವ ಕಾರ್ಯ ಮಾಡಬೇಕು. ಜೊತೆಗೆ ತಮ್ಮ ಸಂಸ್ಕೃತಿಯನ್ನು ಬಿಟ್ಟುಕೊಡದಂತೆ ನಡೆಯಬೇಕಾಗಿದೆ ಏಕೆ? ಈ ಮಾತು ಹೇಳಬೇಕಾಗಿದೆ ಎಂದರೆ ತನ್ನ ಎಲ್ಲಾ ಆಸೆ ಆಕಾಂಷೆಗಳನ್ನು ಬಿಟ್ಟು ಇತರ ಅಥವಾ ಪರರ ಸಲುವಾಗಿ ದುಡಿಯುತ ಬಂದ ಭಾರತದಲ್ಲಿ ಅಂತಹ ಸಮುದಾಯವೆಂದರೆ ಜಂಗಮ ಸಮುದಾಯ. ಸಮಾಜಕ್ಕೆ ಅಪಾರ ಕೊಡುಗೆ ನೀಡಿದ ಅಸ್ಮರಣೀಯ ಸಂಸ್ಕೃತಿಯಾಗಿದೆ. ಆದರೆ ಇಂದು ಈ ಸಂಸ್ಕೃತಿಯ

ಸಮುದಾಯವನ್ನೆ ಸಮಾಜವು ಒಗ್ಗರಣೆಗೆ ಮಾತ್ರ ಬಳಸಿಕೊಂಡು ನಂತರ ಹೊರಗಿಡುವ ಕರಬೇವಿನ ಸೊಪ್ಪಿನಂತೆ ಮಾಡಿದೆ. ಹುಟ್ಟಿನಿಂದ ಚಟ್ಟದವರೆಗೆ ಎಲ್ಲಾ ಧರ್ಮ ಸಂಸ್ಕಾರಗಳಿಗೂ ಜಂಗಮ ಬೇಕೆಬೇಕು. ಆದರೆ ಅವರ ಮೂಲಭೂತ ಜೀವನ ಸೌಲಭ್ಯಗಳಿಗೆ ಮಾತ್ರ ದೂರವಿರಬೇಕು ಎನ್ನುವಂತಹ ಸ್ಥಿತಿ ನಿರ್ಮಾಣವಾಗುತ್ತಲ್ಲಿದೆ. ಅದಕ್ಕೆ ಕೆಲವು ಚಿಂತನಶೀಲ ಮನಸ್ಸುಗಳು ಒಂದಾಗಿ ಇಂದಿನ ಈ ಸಮುದಾಯದ ಸಮಸ್ಯೆಗಳ ಕುರಿತು ಅವುಗಳಿಗೆ ಪರಿಹಾರೋಪಾಯಗಳನ್ನು ನೀಡಬೇಕಾಗಿರುವುದು ಅನಿವಾರ್ಯ.

'ಜ' ಎಂದರೆ ಜಗತ್ ರಕ್ಷಕ, ಜಗದೋದ್ಧಾದಕ ಎಂಬುದನ್ನು ತಿಳಿಸುತ್ತದೆ. 'ಂ' ಎಂದರೆ ಇದು ಭಕ್ತರಲ್ಲಿರುವ ಅಜ್ಞಾನವನ್ನು ದೂರ ಮಾಡುವ ಶಕ್ತಿ ಇದರಲ್ಲಿ ಅಡಗಿದೆ. 'ಗ' ಎಂದರೆ ಗಣೇಶನಲ್ಲಿರುವ ಜ್ಞಾನ ಸಂಪತ್ತು ಸರ್ವ ವಿಘ್ನನಾಶ ಮಾಡುವಂತಹ ಶಕ್ತಿ ಇದರಲ್ಲಿದೆ. 'ಮ' ಎಂದರೆ ಮಾನವನ ಕುಲವನ್ನು ಉದ್ಧಾರ ಮಾಡಲು ಅನೇಕ ಮಹಾತ್ಮರು, ಶಿವಯೋಗಿಗಳು ಜನಿಸಿ ಲೋಕ ಕಲ್ಯಾಣಕ್ಕಾಗಿ ಸಂಚರಿಸಿದ್ದಾರೆ. ಇಂತಹ ಶಕ್ತಿ ತುಂಬಿದ ಸಮುದಾಯವೇ ಜಂಗಮ.

ಪ್ರಾಚೀನ ಕಾಲದಿಂದ ಜಂಗಮ ವೀರಶೈವ ಧರ್ಮದ ಪ್ರಚಾರಕನಾಗಿ ಭಕ್ತರಿಗೆ ಉಪದೇಶಿಸುತ್ತಾ ಅವರ ಕಷ್ಟ-ನಷ್ಟಗಳಲ್ಲಿ ಭಾಗಿಯಾಗಿ, ಭಕ್ತರ ಪ್ರತಿಯೊಂದು ಸಂಸ್ಕಾರಗಳಲ್ಲಿ ಭಾಗವಹಿಸಿ, ನೆರವೇರಿಸಿ ದಾರಿತಪ್ಪಿದವರನ್ನು ಸನ್ಮಾಗದಡೆಗೆ ತರುತ್ತಾ ಜನ ಸೇವೆಗಾಗಿಯೇ ತನ್ನ ತನವನ್ನು ಬಿಟ್ಟು ಸಮಾಜ ಕಾರ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡರು, ಜೊತೆಗೆ ಮಠವನ್ನು ಕಟ್ಟಿಕೊಂಡು ಅದರ ಮೂಲಕ ಶಿಕ್ಷಣ ಪ್ರಸಾರ ಮಾಡುತ್ತಾ ಲೋಕಿಕ ಜ್ಞಾನವನ್ನು ನೀಡುತ್ತಾ ಪ್ರತಿಯೊಂದಕ್ಕೆ ತಾನೆಂದು ವೀರಶೈವ ಧರ್ಮದ ಪುರೋಹಿತ ವರ್ಗವಾಗಿ ತನ್ನ ಕಾಯಕವನ್ನು ಮಾಡುತ್ತಾ ಬಂದ ಜನಾಂಗ. ಅದರ ಪ್ರತಿಫಲವಾಗಿ ಭಕ್ತರಿಂದ ಕಾಣಿಕೆ ಪಡೆಯುತ್ತಿದ್ದರು. ಪಡೆದು ಅನ್ನ ದಾಸೋಹವನ್ನು ಮಾಡಿ ಇದರ ಜೊತೆಗೆ ಜ್ಞಾನದ ದಾಸೋಹವನ್ನು ಉಣಬಡಿಸಿ ಭಕ್ತರನ್ನು ಪುನೀತರನ್ನಾಗಿಸುತ್ತಿದ್ದರು. ಹೀಗಾಗಿ ಭಕ್ತರೇ ಇವರನ್ನು ನೋಡಿಕೊಳ್ಳಬೇಕಾಗುತ್ತಿತ್ತು. ಭಕ್ತಿಯೇ ಬಂಡವಾಳವಾಗಿತ್ತು. ಮುಂದೆ ೧೨ನೇ ಶತಮಾನದ ಶರಣರ ಕ್ರಾಂತಿ, ಆಧುನಿಕರಣ, ವೈಜಾರಿಕತೆ, ಔದ್ಯೋಗಿಕರಣ, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ವಸಾಹತುಶಾಹಿಗಳ ಪರಿಣಾಮದಿಂದಾಗಿ ಸಮಾಜದಲ್ಲಿ ಅನೇಕ ಪರಿವರ್ತನೆಗಳು ಕಂಡು ಬಂದವು. ಇದರಿಂದ ಈ ಸಮುದಾಯದ ಮೇಲೆ ಸಾಕಷ್ಟು ಪರಿಣಾಮಗಳು ಬೀರಿ ಅನೇಕ ಪರಿವರ್ತನೆಗಳು ಕಂಡು ಬಂದಿವೆ. ಮೂಲ ಸಂಸ್ಕೃತಿಯ ನೆಲೆಯನ್ನು ಗುರುತಿಸದ ರೀತಿಯೊಳಗೆ ಮುಂದುವರೆಯುತ್ತಿದೆ. ಜಂಗಮರು ವೃತ್ತಿ ಮೂಲತಃ ಧಾರ್ಮಿಕ ಕಾಯಕಗಳನ್ನು ಮಾಡಿ ಬದುಕುವದಾಗಿತ್ತು. ಈ ಧಾರ್ಮಿಕ ಕಾಯಕಗಳು ಮೇಲಿನ ಕಾರಣದಿಂದ ನಿಂತು ಹೋದವು. ಭಕ್ತರಲ್ಲಿ ವೈಚಾರಿಕತೆ ಬೆಳೆಯುತ್ತಿರುವದರಿಂದ

ಅವರಲ್ಲಿರುವಂತಹ ಭಕ್ತ, ಶ್ರದ್ಧೆ ಕಡಿಮೆಯಾಯಿತ್ತು. ಹೀಗಾಗಿ ಜಂಗಮ ಕಾಯಕದಿಂದ ಜೀವನ ಸಾಗದಾಗಿದೆ. ಇದರಿಂದ ಜೀವನದ ರೀತಿ ನೀತಿಗಳನ್ನು ಬದಲಾಯಿಸಿಕೊಂಡರು. ಪರಂಪರೆಯ ರೀತಿ, ನೀತಿ, ಬದಲಾಯಿಸಿಕೊಂಡು ತಮ್ಮ ಉಪಜೀವನಕ್ಕಾಗಿ ಕೆಲವರು ಕೃಷಿ, ಕೂಲಿ, ಹೋಟೆಲ್ ನಡೆಸುವುದು, ದನ ಕಾಯುವುದು ಉದ್ದಿಮೆಗಳಲ್ಲಿ ನೌಕರಿ ಮಾಡುವುದು ಬಟ್ಟೆ ಹೊಲಿಯುವುದು ಇತರ ಅನೇಕ ವೃತ್ತಿಗಳನ್ನು ತಮ್ಮ ಧಾರ್ಮಿಕ ಕಾಯಕದೊಂದಿಗೆ ತಮ್ಮ ಜೀವನವನ್ನು ಸಾಗಿಸಿಕೊಂಡು ಬರುತ್ತಿದ್ದಾರೆ. ಇದನ್ನು ಬಿಟ್ಟರೆ ಬೇರೆ ಗತಿಯಿಲ್ಲ. ಈ ಸಮುದಾಯ ಅತ್ತಕಡೆ ಮೇಲವರ್ಗದಲ್ಲೂ ಇಲ್ಲ ಇತ್ತಕಡೆ ಕೆಳವರ್ಗದಲ್ಲೂ ಇಲ್ಲದಂತೆ ಬದುಕುತ್ತಿದೆ.

ಜಂಗಮ ಸಮುದಾಯವು ಆಧುನಿಕರಣಕ್ಕೆ ಒಳಗಾಗಿ ಮೂಲ ಕಾಯಕಕ್ಕೆ, ಹೊಡೆತಬಿತ್ತು. ಜೊತೆಗೆ ಮಠಗಳಲ್ಲಿ ಶಾಲೆಯನ್ನು ನಡೆಸುವದು ನಿಂತು ಹೋಯಿತ್ತು. ಇತರ ಕಾಯಿಲೆಗಳಿಗೆ ಔಷಧ ನೀಡುವುದು ಕಡಿಮೆಯಾಯಿತ್ತು. ಭಕ್ತರ ಭಕ್ತಿಯು ಕಡಿಮೆಯಾಯಿತ್ತು. ಈ ಎಲ್ಲಾ ಕಾರಣಗಳಿಂದ ಇಂದು ಸಮುದಾಯ ಆರ್ಥಿಕತೆಯಿಂದ ಹಿಂದುಳಿಯುತ್ತಾ, ಮೊದಲಿನ ಆಸ್ತಿ ಅಂತುಯಿಲ್ಲ, ಮಠಾಧೀಶ್ವರು, ಜಗದ್ಗುರುಗಳು ನಮ್ಮ ಕೆಳಗಿನ ಜಂಗಮರೆಂದು ತಿಳಿದು ಸಹಾಯವಿಲ್ಲ, ಭಕ್ತರ ಭಕ್ತಿಯಿಲ್ಲ ಮತ್ತು ಸರಕಾರದ ವತಿಯಿಂದ ಯಾವುದೇ ಸೌಲಭ್ಯಗಳಿಲ್ಲ ಇದರಿಂದ ಈ ಮೂರು ಇಲ್ಲದ ಮಧ್ಯ ಸಮುದಾಯದ ಸಂಸ್ಕೃತಿಯ ಅಳಿವು - ಉಳಿವು ಹೇಗೆ ಎಂಬುವುದೇ ಪ್ರಶ್ನಾರ್ಥಕವಾಗಿದೆ.

ಭಾರತ ಸರಕಾರವು ಭಾರತದಲ್ಲಿನ ಎಲ್ಲಾ ಜನ ಸಮುದಾಯಗಳನ್ನು, ಜನಾಂಗಗಳನ್ನು ರಕ್ಷಿಸಿಕೊಂಡು ಹೋಗುವುದು ಕರ್ತವ್ಯವಾಗಿದೆ. ಆದರೆ ಸರ್ಕಾರದ ದೃಷ್ಟಿಯಲ್ಲಿ ಈ ಸಮುದಾಯ ಬರುತ್ತಾಯಿಲ್ಲ. ಯಾವ ದೃಷ್ಟಿಯಿಂದ ಈ ಸಮುದಾಯ ಹಿಂದುಳಿದಿದೆ ಅಥವಾ ಯಾವ ದುರ್ಬಲತೆಯೆಡೆಗೆ ಸಾಗುತಿದೆ ಎಂಬುದನ್ನು ಗಮನಿಸಬೇಕಾಗಿದೆ. ಸರ್ಕಾರವು ಇಂತಹ ಹಿಂದುಳಿದ ವರ್ಗಗಳಿಗೆ ಸೌಲಭ್ಯಗಳನ್ನು ನೀಡಿದೆ. ಆದರೆ ಜಂಗಮ ಸಮುದಾಯದಲ್ಲಿ ಅವರಿಗಿಂತ ಹಿಂದೆ ಉಳಿದಿದ್ದಾರೆ. ಕೆಲವರಿಗೆ ವಾಸಿಸಲು ಮನೆಗಳಿಲ್ಲ ದುಡಿದು ತಿನ್ನಲು ಜಮೀನು ಮೊದಲೇ ಇಲ್ಲ. ಇನ್ನು ಕೆಲವರು ಉದರ ಪೋಷಣೆಗಾಗಿ ರಾತ್ರಿ ಕಂದೀಲು ಕೊಡೆ ಹಿಡಿದುಕೊಂಡು ಕಾಲಜ್ಞಾನ ಹೇಳುವರು, ಮುಳ್ಳು ಹಾವಿಗೆ ಮೇಲು ನಿಂತು ಜಾಗಟೆ ಬಾರಿಸುತ್ತ ಭಿಕ್ಷೆ ಕೇಳುವುದು, ಕೈಯಲ್ಲಿ ಬೆತ್ತ - ಜೋಳಿಗೆ ಹಿಡಿದುಕೊಂಡು ಹಿಟ್ಟು ಬೇಡುವರು, ಪಂಚಾಂಗ ಹೇಳುವುದು, ಅಲ್ಲದೇ ವೀರಶೈವ ಧರ್ಮದ ಕುರುಹುಗಳಾದ ಲಿಂಗ ಭಸ್ಮಗಳನ್ನು ತಯಾರಿಸಿ ಮನೆ ಮನೆಗೆ ಕೊಟ್ಟು ಪ್ರತಿಯಾಗಿ ಧಾನ್ಯ ಅನ್ನ ಭೀಕ್ಷೆ ತರುವದು ಕಾಣುತ್ತಿದ್ದೇವೆ. ಈ ರೀತಿ ಬೇಡಿ1 ಉಪಜೀವನ ನಡೆಸುತ್ತಿದ್ದಾರೆ. ಇಂತಹ ಸಮುದಾಯ

ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದವರೆ? ಎಂಬ ಪ್ರಶ್ನೆ ಬರುತ್ತದೆ. ಹೀಗಾಗಿ ಜಂಗಮರು ತಮ್ಮ ಸಂಸ್ಕೃತಿಯನ್ನು ಒಂದು ಕಡೆ ಉಳಿಸಿಕೊಳ್ಳಬೇಕು ಎಂದರೆ ಉಳಿಸಿಕೊಳ್ಳಲಿಕ್ಕೆ ಸಾಧ್ಯವಾಗದ ಸ್ಥಿತಿಯಲ್ಲಿ ಜಂಗಮ ಸಮುದಾಯ ನಿಂತಿದೆ.

ಎಲ್ಲಾ ಜನಾಂಗಗಳ ಜನರು ಕೂಡಿ ಕೆಲಸ ಮಾಡಬೇಕಾಗಿದೆ. ಆದುದರಿಂದ ಜಂಗಮರು ಅನಿವಾರ್ಯವಾಗಿ ಇನ್ನೊಂದು ಜನಾಂಗದ ಜೊತೆಗೆ ಬೆರೆತು ಬೆಳೆದುಕೊಂಡು ಬರುತ್ತಿದ್ದಾರೆ. ಇವತ್ತಿನ ಸಮಾಜದಲ್ಲಿ ಬದುಕುವುದನ್ನು ಕಲಿಯಬೇಕಾಗಿದೆ. ಬೇಡುವುದನ್ನು ಬೀಡಬೇಕಾಗಿದೆ. ಅದಕ್ಕಾಗಿ ಜೀವನವನ್ನು ಸುಧಾರಿಸಿಕೊಳ್ಳಲು ಅಗತ್ಯವಾದ ರೂಪರೇಷೆಗಳನ್ನು ಜಂಗಮರು ರೂಪಿಸಿಕೊಳ್ಳಬೇಕಾಗಿದೆ. ಏಕೆಂದರೆ ಬದಲಾಗುತ್ತಿರುವ ಸಮಾಜದಲ್ಲಿ ಹೊಸ ಹೊಸ ಅವಿಸ್ಕಾರಗಳು ಬಳಸಿಕೊಳ್ಳಲು ವಿಚಾರ ಮಾಡುವುದಿಲ್ಲವೋ ಬದುಕಲಿಕ್ಕೆ ಸಾಧ್ಯವಿಲ್ಲ. ಅದಕ್ಕೆ ಶಿಕ್ಷಣ ಮುಖ್ಯವಾಗಿದೆ. ಬಹುತೇಕ ಜಂಗಮ ತಮ್ಮ ಮಕ್ಕಳಿಗೆ ಶಾಲೆ ಬಿಡಿಸಿ ಜಂಗಮಕಾಯಕದಲ್ಲಿ ತೊಡಗಿಸುತ್ತಲ್ಲಿದ್ದಾರೆ. ಆದರಿಂದ ತಮ್ಮ ಮಕ್ಕಳನ್ನು ಶಿಕ್ಷಿತನಾಗಿ ಮಾಡುವುದು ಅತಿ ಅವಶ್ಯಕವಾಗಿದೆ. ಜೊತೆಗೆ ದುಡಿಯುವುದು ಅಷ್ಟೆ ಮುಖ್ಯವಾಗಿದೆ. ಏಕೆಂದರೆ ದುಡಿಯುವುದರ ಮೇಲೆ ಜೀವನ ಅವಲಂಬನೆಯಾಗಿದೆ. ಆದಕ್ಕಾಗಿ ಜಂಗಮರು ಪೂಜೆ ಮಾಡಿನೇ ಬದುಕುತ್ತೆನೆಂಬುದು ಬಿಡಬೇಕಾಗುತ್ತದೆ. ಆದಕ್ಕೆ ಸ್ವಾವಲಂಬಿಯಾಗಿ ಪ್ರತಿಯೊಬ್ಬ ಜಂಗಮ ದುಡಿಯಬೇಕಾಗಿದೆ. ಸರಳಕಾಯಕಗಳೊಂದಿಗೆ ಪರಿವರ್ತನಶೀಲನಾಗುವುದು ಅವಶ್ಯ. ಏಕೆಂದರೆ ತಮ್ಮ ತಮ್ಮಲ್ಲಿಯೇ ಜಾಗೃತೆಯಿಂದ ಬೆಳೆಯಬೇಕಾಗಿದೆ. ಇಲ್ಲವಾದರೆ ಮನಬಂದತೆ, ಅಲಿಸಿಗಳಾಗಿ ತಮ್ಮ ಕಾಲಕಳೆಯುವುದರಿಂದಲೇ ಜಂಗಮ ಸಮುದಾಯವು ಹಿಂದುಳಿಯಲಿಕ್ಕೆ ಕಾರಣವಾಗಿದೆ. ಅದಕ್ಕೆ ಯುವ ಜನರು ಈ ವಿಚಾರಗಳತ್ತ ಗಮನಹರಿಸಬೇಕಾಗಿದೆ.

ಈ ಸಮುದಾಯವು ಕ್ರಿಯಾತ್ಮಕವಾಗಿ ಬದಲಾವಣೆಯಾಗಬೇಕಾದರೆ ಅಥವಾ ಗಟ್ಟಿತನ ದಿಂದ ಉಳಿಯಬೇಕಾದರೆ ವೀರಮಹೇಶ್ವರರು ಒಂದಾಗಿ ಶ್ರಮಿಸಬೇಕಾಗುತ್ತದೆ. ಗುರುಪೀಠ, ವಿರಕ್ತಪೀಠಗಳೆರಡು ಒಮ್ಮತ ಮನಸ್ಸಿನಿಂದ ಸಮಾಜದ ಏಳ್ಗಿಗೆಗಾಗಿ ಶ್ರಮಿಸಬೇಕು. ಮಠ ಮಾನ್ಯ ಗುರುಗಳೆಲ್ಲರು ಒಂದಾಗಿ ಧರ್ಮದ ಬಗ್ಗೆ ಹೆಚ್ಚಿನ ಆಂದೋಲನ ನಡೆಯಬೇಕು. ಏಕೆಂದರೆ ವೀರಶೈವ ಸಮಾಜದ ಅಥವ ವೀರಶೈವ ಧರ್ಮ ಬೆಳೆಯಬೇಕಾದರೆ ಜಂಗಮರು ಮತ್ತು ಅವರ ಮಠಗಳು ತುಂಬ ಮುಖ್ಯ. ಯಾವುದೇ ಒಂದು ಧರ್ಮವನ್ನು ಸಂರಕ್ಷಣೆ ಮಾಡಿಕೊಂಡು ಬರಬೇಕಾದರೆ ಆ ಧರ್ಮದ ಮುಖ್ಯ ಪುರೋಹಿತ ವರ್ಗವು ಸಮಾಜಕ್ಕೆ ಅಗತ್ಯ, ಅಂತೆಯೇ ಜಂಗಮರು ವೀರಶೈವ ಧರ್ಮಕ್ಕೆ ಮುಖ್ಯಸ್ಥರು, ಇದರಿಂದ ತಮ್ಮ ಸಂಸ್ಕೃತಿ ಬೆಳೆಸಿ ಉಳಿಸಿಕೊಂಡು ಹೋಗುವಲ್ಲಿ ಸಹಕಾರವಾಗುತ್ತದೆ. ಜಂಗಮರ ಅಭಿವೃದ್ಧಿಗೊಸ್ಕರ

ಸಂಸ್ಥೆಗಳು ಸ್ಥಾಪಿತಗೊಂಡಿರುವುದು ಕಾಣುತ್ತೇವೆ. ಅವುಗಳು ಹಂತಹಂತವಾಗಿ ಕಾರ್ಯನಿರ್ವಹಿಸಿದರೆ ಮೊದಲಿನ ಘನತೆ, ಗೌರವಗಳು ಸಿಗುವುದು. ಯಾವಾಗಲು ವ್ಯವಸ್ಥೆ ಒಂದೇ ರೀತಿಯಾಗಿರುವುದಿಲ್ಲ ಅಭಿವೃದ್ಧಿ ಪರ ಅಂಶಗಳು ಒಂದಲ್ಲ ಒಂದು ದಿವಸ ಫಲಕಾರಿಯಾಗುತ್ತವೆ. ಹಾಗೇ ಬಿಟ್ಟರೆ ಮುಂದಿನ ಜನಾಂಗವು ಶಪಿಸುವದರಲ್ಲಿ ಎರಡು ಮಾತಿಲ್ಲ.

ಒಟ್ಟಿನಲ್ಲಿ ದೇಶದ ಹಾಗೂ ಕರ್ನಾಟಕದ ಹಲವಾರು ಸಮುದಾಯಗಳನ್ನು ಪರಿಶೀಲಿಸಿದರೆ ಜಂಗಮ ಸಮುದಾಯ ಇತರೆ ಸಮುದಾಯಗಳಿಗಿಂತ ಭಿನ್ನವಾಗಿ ಕಂಡಬರುತ್ತದೆ. ಈ ಸಮುದಾಯದ ಬಗೆಗೆ ಈವರೆಗೆ ನಡೆದಿರುವ ಸಂಶೋಧನೆಯ ಸಮೀಕ್ಷೆಯನ್ನು ಗಮನದಲ್ಲಿಟ್ಟುಕೊಂಡು ಹೊಸ ಹೊಸ ಮೌಲಿಕ ವಿಚಾರಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಅಲ್ಲದೆ ಬಹುಮುಖ ಸಮಸ್ಯೆಗಳಿಗೆ ಪರಿಹಾರ ಮಾರ್ಗಗಳನ್ನು ಸೂಚಿಸಲಾಗಿದೆ.

ಜಂಗಮರ ಜೀವನ ವಿಧಾನ ಪರಂಪರೆಯಡಿಯಲ್ಲಿ ಇಡೀ ಸಮಾಜದ ಒಟ್ಟು ಚಿತ್ರಣವನ್ನು ಗಮನಿಸಿಲಾಗಿದೆ. ಅವರ ಸಾಮಾಜಿಕ, ಆರ್ಥಿಕ ಮತ್ತು ಕೌಟುಂಬಿಕ ವ್ಯವಸ್ಥೆ, ಉಟೋಪಚಾರಗಳು, ವೇಷ ಭೂಷಣಗಳನ್ನು ಹಾಗೂ ಧಾರ್ಮಿಕತೆಯನ್ನು ವಿವರಿಸಲಾಯಿತು. ಜನನದಿಂದ ಮರಣದವರೆಗಿನ ಸಂಸ್ಕಾರಗಳ ಹಿನ್ನೆಲೆಯಲ್ಲಿ ಅವರ ಸಮಗ್ರ ಬದುಕನ್ನು ಎತ್ತಿ ತೋರಿಸಲಾಗಿದೆ. ಜಂಗಮರ ಸಾಮಾಜಿಕ ಸಂಘಟನೆಗಳಿಂದ ಕಂಡುಕೊಂಡ ಸಾಮಾಜಿಕ ಸಮಸ್ಯೆಗಳ ಪರಿಹಾರಗಳನ್ನು ತಿಳಿಸಲಾಗಿದೆ.

ಬೀದರ ಜಿಲ್ಲೆಯ ಜಂಗಮರ ಸಮುದಾಯವನ್ನು ಆಳವಾಗಿ ಅಭ್ಯಾಸ ಮಾಡುವಲ್ಲಿಯೇ ಇದೊಂದು ಪ್ರಪ್ರಥಮ ಪ್ರಯತ್ನ ಇಲ್ಲಿಯ ಅಂಕಿ ಸಂಖ್ಯೆಗಳ ವಿವರಗಳು ಮುಂದಿನ ಸಂಶೋಧಕರಿಗೆ ಉಪಯುಕ್ತವಾಗಬಲ್ಲವು. ಇದೊಂದು ಪ್ರಮಾಣಿಕವಾದ ಪ್ರಯತ್ನವಷ್ಟೆ

# ಅನುಬಂಧಗಳು

ಅಂಕಿ ಅಂಶಗಳು

ಬೀದರ ಜಿಲ್ಲೆಯ ತಾಲೂಕುವಾರು ಜಂಗಮ ಊರುಗಳ ಪಟ್ಟಿ

ಪ್ರಶ್ನಾವಳಿಗಳು

ಗ್ರಂಥ ಋಣ

ಪ್ರಮುಖ ವಕ್ತೃಗಳು

ಛಾಯಾಚಿತ್ರಗಳು

ಅಂಕಿಅಂಶಗಳು ೧. ಔರಾದ ತಾಲೂಕಿನ ಗ್ರಾಮವಾರು, ಜಂಗಮರ ಲಿಂಗವಾರು ಜನಸಂಖ್ಯೆ ಮತ್ತು ವಯೋಗುಂಪು

| ಊರುಗಳು | ಕುಟುಂಬ | ಜನಸಂಖ್ಯೆ | | | ವಯೋಗುಂಪು ೦ ೪ ವರ್ಷ | | | ೫ ೧೭ ವರ್ಷ | | | ೧೮ ೪೦ ವರ್ಷ | | | ೪೧ ೬೦ ವರ್ಷ | | | ೬೧ರ ಮೇಲ್ಪಟ್ಟು | | |
|---|---|---|---|---|---|---|---|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 |
| ೦೧ ಆಲೂರ | ೧ | ೨ | ೫ | ೭ | | ೧ | ೧ | ೧ | ೨ | ೩ | ೧ | ೧ | ೨ | | ೧ | ೧ | | | |
| ೦೨. ಆಲೂರ ಕೆ | ೭ | ೨೧ | ೨೦ | ೪೧ | ೧ | ೧ | ೨ | ೭ | ೬ | ೧೩ | ೧೨ | ೯ | ೨೧ | | ೩ | ೩ | ೧ | ೧ | ೨ |
| ೦೩. ಬಲ್ಲೂರ | ೫ | ೧೩ | ೧೧ | ೨೪ | ೩ | ೧ | ೪ | ೧ | | ೧ | ೭ | ೭ | ೧೪ | ೧ | ೨ | ೩ | ೧ | ೧ | ೨ |
| ೦೪. ಬರದಾಪೂರ | ೨ | ೪ | ೩ | ೭ | | | | | ೧ | ೧ | ೨ | | ೨ | ೨ | ೨ | ೪ | | | |
| ೦೫. ಬೆಲ್ದಾಳ | ೨ | ೯ | ೧೦ | ೧೯ | | | | | ೪ | ೪ | ೬ | ೪ | ೧೦ | ೨ | ೨ | ೪ | ೧ | | ೧ |
| ೦೬. ಬೆಲ್ಲೂರು | ೪ | ೧೨ | ೨೦ | ೩೨ | ೧ | ೧ | ೨ | ೫ | ೭ | ೧೨ | ೫ | ೫ | ೧೦ | ೧ | ೧ | ೨ | | ೪ | ೪ |
| ೦೭. ಬೋರಾಳ | ೧ | ೧೦ | ೮ | ೧೮ | | ೧ | ೧ | ೬ | ೨ | ೮ | ೩ | ೪ | ೭ | | ೧ | ೧ | ೧ | | ೧ |
| ೦೮. ಚಿಕ್ಕಲಿ | ೧೩ | ೩೬ | ೩೫ | ೭೧ | ೩ | ೭ | ೧೦ | ೧೨ | ೮ | ೨೦ | ೧೫ | ೧೪ | ೨೯ | ೪ | ೫ | ೯ | ೩ | | ೩ |
| ೦೯. ಚಿಂತಾಕಿ | ೬ | ೧೯ | ೧೧ | ೩೦ | ೨ | | ೨ | ೫ | ೪ | ೯ | ೮ | ೭ | ೧೫ | ೪ | | ೪ | | | |
| ೧೦. ಧೂಪತಮಾಗಾಂವ | ೬ | ೧೬ | ೧೩ | ೨೯ | ೧ | ೧ | ೨ | ೪ | ೪ | ೮ | ೮ | ೬ | ೧೪ | ೩ | ೨ | ೫ | | | |
| ೧೧. ಗಡಿಕುಸುನೂರ | ೫ | ೧೨ | ೧೬ | ೨೮ | | ೨ | ೨ | ೪ | ೨ | ೬ | ೫ | ೮ | ೧೩ | ೩ | ೨ | ೫ | | ೨ | ೨ |
| ೧೨. ಹೆಡ್ಗಾಪೂರ | ೧೨ | ೫೧ | ೩೬ | ೮೭ | ೧ | | ೧ | ೧೬ | ೧೦ | ೨೬ | ೨೨ | ೧೯ | ೪೧ | ೧೦ | ೭ | ೧೭ | ೧ | ೧ | ೨ |
| ೧೩. ಹೊರಂಡಿ | ೭ | ೧೭ | ೮ | ೨೫ | | | | ೨ | | ೨ | ೧೩ | ೩ | ೧೬ | ೨ | ೪ | ೬ | ೧ | | ೧ |
| ೧೪. ಹೋಳಸಮುದ್ರ | ೭ | ೩೯ | ೩೪ | ೭೩ | ೩ | ೧ | ೪ | ೧೦ | ೧೩ | ೨೩ | ೨೧ | ೧೩ | ೩೫ | ೪ | ೫ | ೯ | ೧ | ೨ | ೩ |
| ೧೫. ಜೋನ್ನೆಕೇರಿ | ೧೩ | ೩೬ | ೩೬ | ೭೨ | ೧ | | ೧ | ೪ | ೬ | ೧೦ | ೨೩ | ೨೩ | ೪೬ | ೭ | ೬ | ೧೩ | ೨ | | ೨ |
| ೧೬. ಕರಂಜಿ | ೪ | ೧೪ | ೧೪ | ೨೮ | | | | ೬ | ೬ | ೧೨ | ೪ | ೬ | ೧೦ | ೪ | ೧ | ೫ | | ೧ | ೧ |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 |
|---|---|---|---|---|---|---|---|---|---|---|---|---|---|---|---|---|---|---|---|
| ೧೭. ಕಾಶಂಪೂರ | ೭ | ೩೫ | ೩೪ | ೬೯ | ೪ | ೩ | ೭ | ೧೧ | ೧೩ | ೨೪ | ೧೩ | ೧೨ | ೨೫ | ೬ | ೫ | ೧೧ | ೧ | ೧ | ೨ |
| ೧೮. ಕೋಳೂರ | ೧೩ | ೪೭ | ೪೧ | ೮೮ | ೪ | ೧ | ೫ | ೨೦ | ೧೬ | ೩೬ | ೧೫ | ೧೧ | ೨೬ | ೭ | ೮ | ೧೫ | ೪ | ೨ | ೬ |
| ೧೯. ಕೌಡಗಾಂವ | ೮ | ೩೪ | ೨೦ | ೫೪ | ೨ | ೧ | ೩ | ೧೪ | ೭ | ೨೧ | ೭ | ೬ | ೧೩ | ೬ | ೪ | ೧೦ | ೪ | ೩ | ೭ |
| ೨೦. ಕೌರಾ | ೫ | ೨೮ | ೨೨ | ೫೦ | ೧ | ೩ | ೪ | ೧೨ | ೧ | ೧೩ | ೯ | ೧೩ | ೨೨ | ೪ | ೨ | ೬ | ೨ | ೩ | ೫ |
| ೨೧. ಲಿಂಗದಳ್ಳಿ | ೧ | ೪ | ೨ | ೬ | | | | ೨ | ೧ | ೩ | ೨ | ೧ | ೩ | | | | | | |
| ೨೨. ಮಮದಾಪೂರ | ೧೩ | ೪೮ | ೬೨ | ೧೧೦ | ೪ | ೬ | ೧೦ | ೧೭ | ೨೫ | ೪೨ | ೨೧ | ೨೨ | ೪೩ | ೩ | ೮ | ೧೧ | ೩ | ೧ | ೪ |
| ೨೩. ಮುರ್ಕಿ | ೮ | ೨೩ | ೨೫ | ೪೮ | ೪ | ೩ | ೭ | ೫ | ೯ | ೧೪ | ೧೧ | ೭ | ೧೮ | ೩ | ೨ | ೫ | ೧ | ೩ | ೪ |
| ೨೪. ನಾಗನಪಳ್ಳಿ | ೬ | ೧೨ | ೨೦ | ೩೨ | | ೨ | ೨ | ೪ | ೮ | ೧೨ | ೫ | ೬ | ೧೧ | ೨ | ೩ | ೫ | ೨ | | ೨ |
| ೨೫. ನಾಗಮಾರಪಳ್ಳಿ | ೪ | ೧೪ | ೧೨ | ೨೬ | | | | ೬ | ೫ | ೧೧ | ೩ | ೫ | ೮ | ೧ | ೧ | ೨ | ೪ | ೧ | ೫ |
| ೨೬. ನಾಗೂರ ಬಿ | ೩ | ೧೦ | ೭ | ೧೭ | | | | ೬ | ೩ | ೯ | ೩ | ೩ | ೬ | ೧ | ೧ | ೨ | | | |
| ೨೭. ಪಾಶಾಪೂರ | ೨ | ೪ | ೧೦ | ೧೪ | ೧ | ೧ | ೨ | ೧ | ೭ | ೮ | ೨ | ೨ | ೪ | | | | | | |
| ೨೮. ರಾಯಿಪಳ್ಳಿ | ೪ | ೨೦ | ೧೪ | ೩೪ | ೨ | ೧ | ೩ | ೭ | ೭ | ೧೪ | ೬ | ೬ | ೧೨ | ೧ | ೧ | ೨ | ೧ | ೧ | ೨ |
| ೨೯. ಸಂಗಮ | ೧೦ | ೩೩ | ೩೪ | ೬೭ | ೧ | ೧ | ೨ | ೧೦ | ೧೪ | ೨೪ | ೧೮ | ೧೨ | ೩೦ | ೨ | ೨ | ೪ | ೨ | ೫ | ೭ |
| ೩೦. ಸುಂಧಾಳ | ೧೧ | ೩೮ | ೪೬ | ೮೪ | ೪ | ೩ | ೭ | ೧೩ | ೧೭ | ೩೦ | ೧೬ | ೨೧ | ೩೭ | ೫ | ೨ | ೭ | | ೧ | ೧ |
| ೩೧. ಶೆಂಬೆಳ್ಳಿ | ೨೨ | ೬೬ | ೭೨ | ೧೩೮ | ೬ | ೧೨ | ೧೮ | ೧೨ | ೧೭ | ೨೯ | ೨೮ | ೨೯ | ೫೭ | ೧೨ | ೯ | ೨೧ | ೭ | ೩ | ೧೦ |
| ೩೨. ತುಳಜಾಪೂರ | ೧೪ | ೪೫ | ೩೬ | ೮೧ | ೫ | ೨ | ೭ | ೧೯ | ೧೭ | ೩೬ | ೧೭ | ೧೫ | ೩೨ | ೩ | ೨ | ೫ | ೧ | | ೧ |
| ೩೩. ವಡಗಾಂವ | ೧೭ | ೫೫ | ೪೯ | ೧೦೪ | | | | ೧೮ | ೧೫ | ೩೩ | ೨೪ | ೨೧ | ೪೫ | ೧೦ | ೧೩ | ೨೩ | ೩ | | ೩ |
| ೩೪. ಏಕಲಾರ | ೧೪ | ೫೩ | ೫೨ | ೧೦೫ | ೧ | ೧ | ೨ | ೧೭ | ೧೬ | ೩೩ | ೨೫ | ೨೨ | ೪೭ | ೮ | ೮ | ೧೬ | ೩ | ೧ | ೪ |
| ೩೫. ಯನಗುಂದಾ | ೬ | ೨೬ | ೩೦ | ೫೬ | ೧ | ೪ | ೫ | ೧೦ | ೧೦ | ೨೦ | ೧೧ | ೧೧ | ೨೨ | ೨ | ೩ | ೫ | ೩ | ೨ | ೩ |
| ಒಟ್ಟು | ೨೬೫ | ೯೦೯ | ೮೭೨ | ೧೭೭೯ | ೬೨ | ೬೭ | ೧೨೪ | ೨೯೬ | ೨೯೩ | ೫೮೧ | ೪೦೩ | ೩೬೭ | ೭೬೦ | ೧೩೮ | ೧೩೪ | ೨೫೮ | ೭೧ | ೫೮ | ೧೧೦ |

ಅಂಕಿಅಂಶಗಳು ೨. ಔರಾದ ತಾಲೂಕಿನ ಗ್ರಾಮವಾರು, ಜಂಗಮರ ಲಿಂಗವಾರು ಜನಸಂಖ್ಯೆ ಮತ್ತು ವೈವಾಹಿಕ ಸ್ಥಾನಮಾನ

| | ಜನಸಂಖ್ಯೆ | | | ವೈವಾಹಿಕ ಸ್ಥಾನಮಾನ ಅವಿವಾಹಿತರು | | | ವಿವಾಹಿತರು | | | ವಿಧುರರು,ವಿಧವೆಯರು | | | ಬೇರ್ಪಟ್ಟವರು | | |
|---|---|---|---|---|---|---|---|---|---|---|---|---|---|---|---|
| ಊರುಗಳು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| ೦೧ ಆಲೂರ | ೨ | ೫ | ೭ | ೧ | ೩ | ೪ | ೧ | ೧ | ೨ | | ೧ | ೧ | | | |
| ೦೨. ಆಲೂರ ಕೆ | ೨೧ | ೨೦ | ೪೧ | ೧೪ | ೯ | ೨೩ | ೭ | ೭ | ೧೪ | | ೪ | ೪ | | | |
| ೦೩. ಬಲ್ಲೂರ | ೧೩ | ೧೧ | ೨೪ | ೫ | ೧ | ೬ | ೮ | ೮ | ೧೬ | | ೧ | ೧ | | ೧ | ೧ |
| ೦೪. ಬರದಾಪೂರ | ೪ | ೩ | ೭ | ೨ | ೧ | ೩ | ೨ | ೨ | ೪ | | | | | | |
| ೦೫. ಬೆಲ್ದಾಳ | ೯ | ೧೦ | ೧೯ | ೩ | ೫ | ೮ | ೫ | ೫ | ೧೦ | ೧ | | ೧ | | | |
| ೦೬. ಬೇಲೂರ | ೧೨ | ೨೦ | ೩೨ | ೮ | ೧೦ | ೧೮ | ೪ | ೪ | ೮ | | ೪ | ೪ | | | |
| ೦೭. ಬೋರಾಳ | ೧೦ | ೮ | ೧೮ | ೬ | ೩ | ೯ | ೪ | ೫ | ೯ | | | | | | |
| ೦೮. ಚಿಕ್ಕಲಿ | ೩೬ | ೩೫ | ೭೧ | ೧೭ | ೧೫ | ೩೨ | ೧೯ | ೧೯ | ೩೮ | ೧ | | ೧ | | | |
| ೦೯. ಚಿಂತಾಕಿ | ೧೯ | ೧೧ | ೩೦ | ೧೨ | ೪ | ೧೬ | ೭ | ೭ | ೧೪ | | | | | | |
| ೧೦. ಧೂಪತಮಾಗಾಂವ | ೧೬ | ೧೩ | ೨೯ | ೧೦ | ೭ | ೧೭ | ೬ | ೬ | ೧೨ | | | | | | |
| ೧೧. ಗಡಿಕುಸುನೂರ | ೧೨ | ೧೬ | ೨೮ | ೬ | ೮ | ೧೪ | ೬ | ೬ | ೧೨ | | ೨ | ೨ | | | |
| ೧೨. ಹೆಡ್ಗಾಪೂರ | ೫೧ | ೩೬ | ೮೭ | ೨೯ | ೧೨ | ೪೧ | ೧೭ | ೧೭ | ೩೪ | ೨ | ೪ | ೬ | | | |
| ೧೩. ಹೊರಂಡಿ | ೧೭ | ೮ | ೨೫ | ೧೨ | ೧ | ೧೩ | ೫ | ೫ | ೧೦ | ೧ | ೧ | ೨ | | | |
| ೧೪. ಹೋಳಸಮುದ್ರ | ೩೯ | ೩೪ | ೭೩ | ೨೪ | ೧೫ | ೩೯ | ೧೫ | ೧೫ | ೩೦ | | ೪ | ೪ | | | |
| ೧೫. ಜೋನ್ನೆಕೇರಿ | ೩೬ | ೩೬ | ೭೨ | ೯ | ೭ | ೧೬ | ೨೭ | ೨೭ | ೫೪ | | ೨ | ೨ | | | |
| ೧೬. ಕರಂಜಿ | ೧೪ | ೧೪ | ೨೮ | ೭ | ೬ | ೧೩ | ೬ | ೬ | ೧೨ | ೧ | ೨ | ೩ | | | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
|---|---|---|---|---|---|---|---|---|---|---|---|---|---|---|---|
| ೧೭. ಕಾಶಂಪೂರ | ೩೫ | ೩೪ | ೬೯ | ೧೯ | ೧೬ | ೩೫ | ೧೬ | ೧೬ | ೩೨ | | ೨ | ೨ | | | |
| ೧೮. ಕೋಳೂರ | ೪೭ | ೪೧ | ೮೮ | ೩೧ | ೨೦ | ೫೧ | ೧೭ | ೧೭ | ೩೪ | | ೩ | ೩ | | | |
| ೧೯. ಕೌಡಗಾಂವ | ೩೪ | ೨೦ | ೫೪ | ೨೦ | ೯ | ೨೯ | ೧೨ | ೧೨ | ೨೪ | ೧ | | ೧ | | | |
| ೨೦. ಕೌಠಾ | ೨೮ | ೨೨ | ೫೦ | ೧೬ | ೭ | ೨೩ | ೧೨ | ೧೩ | ೨೫ | | ೨ | ೨ | | | |
| ೨೧. ಲಿಂಗದಳ್ಳಿ | ೪ | ೨ | ೬ | ೩ | ೧ | ೪ | ೧ | ೧ | ೨ | | | | | | |
| ೨೨. ಮಮದಾಪೂರ | ೪೮ | ೬೨ | ೧೧೦ | ೨೩ | ೩೧ | ೫೪ | ೨೫ | ೨೬ | ೫೧ | | ೫ | ೫ | | | |
| ೨೩. ಮುರ್ಕಿ | ೨೩ | ೨೫ | ೪೮ | ೧೫ | ೧೩ | ೨೮ | ೮ | ೮ | ೧೬ | ೧ | ೩ | ೪ | | | |
| ೨೪. ನಾಗನಪಳ್ಳಿ | ೧೨ | ೨೦ | ೩೨ | ೫ | ೧೦ | ೧೫ | ೭ | ೭ | ೧೪ | | ೩ | ೩ | | | |
| ೨೫. ನಾಗಮಾರಪಳ್ಳಿ | ೧೪ | ೧೨ | ೨೬ | ೬ | ೬ | ೧೨ | ೫ | ೬ | ೧೧ | ೨ | ೧ | ೩ | | | |
| ೨೬. ನಾಗೂರ ಬಿ | ೧೦ | ೭ | ೧೭ | ೬ | ೩ | ೯ | ೪ | ೪ | ೮ | | | | | | |
| ೨೭. ಪಾಶಾಪುರ | ೪ | ೧೦ | ೧೪ | ೨ | ೮ | ೧೦ | ೨ | ೨ | ೪ | | | | | | |
| ೨೮. ರಾಯಿಪಳ್ಳಿ | ೨೦ | ೧೪ | ೩೪ | ೧೦ | ೮ | ೧೮ | ೮ | ೮ | ೧೬ | | | | | | |
| ೨೯. ಸಂಗಮ | ೩೩ | ೩೪ | ೬೭ | ೨೦ | ೧೬ | ೩೬ | ೧೩ | ೧೩ | ೨೬ | | ೫ | ೫ | | | |
| ೩೦. ಸುಂಧಾಳ | ೩೮ | ೪೬ | ೮೪ | ೨೪ | ೨೬ | ೫೦ | ೧೫ | ೧೫ | ೩೦ | | ೩ | ೩ | | ೧ | ೧ |
| ೩೧. ಶೆಂಬೆಳ್ಳಿ | ೬೬ | ೭೨ | ೧೩೮ | ೨೭ | ೩೦ | ೫೭ | ೩೮ | ೩೮ | ೭೬ | | ೨ | ೨ | | | |
| ೩೨. ತುಳಜಾಪುರ | ೪೫ | ೩೬ | ೮೧ | ೨೯ | ೧೯ | ೪೮ | ೧೫ | ೧೫ | ೩೦ | | ೨ | ೨ | | ೧ | ೧ |
| ೩೩. ವಡಗಾಂವ | ೫೫ | ೪೯ | ೧೦೪ | ೩೦ | ೧೯ | ೪೯ | ೨೫ | ೨೬ | ೫೧ | | ೪ | ೪ | | | |
| ೩೪. ಏಕಲಾರ | ೫೩ | ೫೨ | ೧೦೫ | ೨೯ | ೧೯ | ೪೮ | ೨೨ | ೨೨ | ೪೪ | ೩ | ೭ | ೧೦ | | | |
| ೩೫. ಯನಗುಂಡಾ | ೨೬ | ೩೦ | ೫೬ | ೧೪ | ೧೪ | ೨೮ | ೧೨ | ೧೨ | ೨೪ | | ೪ | ೪ | | | |
| ಒಟ್ಟು | ೯೦೮ | ೮೭೧ | ೧೭೭೮ | ೪೯೯ | ೩೮೮ | ೮೮೩ | ೪೦೪ | ೪೧೦ | ೮೦೭ | ೨೪ | ೮೩ | ೯೭ | | ೧೮ | ೧೯ |

